# ಭಕ್ತಸ್ಥಲ

## (೧) (ಪಿಂಡಸ್ಥಲ)

೧ ಉದಕದೊಳಗೆ ಬೈಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತು.
ಸಸಿಯೊಳಗಣ ರಸದ ರುಚಿಯಂತಿದ್ದಿತು.
ನನೆಯೊಳಗಣ ಪರಿಮಳದಂತಿದ್ದಿತು.
ಕೂಡಲಸಂಗಮದೇವಾ, ಕನ್ನೆಯ ಸ್ನೇಹದಂತಿದ್ದಿತು.

ನೀರಿನಲ್ಲಿ ಅಡಗಿರುವ ವಡವಾಗ್ನಿಯಂತೆ, ಸಸಿಗಳಲ್ಲಿ ರುಚಿಕರವಾದ ರಸವು ಅಡಗಿ ಕೊಂಡಿರುವಂತೆ, ಮೊಗ್ಗೆಯ ಅಂತರಂಗದಲ್ಲಿ ಹುದುಗಿರುವ ಸುವಾಸನೆಯಂತೆ, ಕನ್ಯೆಯ ಹೃದಯಾಂತರಾಳದಲ್ಲಿರುವ ಪವಿತ್ರ ಪ್ರೇಮದಂತೆ ಕೂಡಲ ಸಂಗಮ ದೇವಾ ನೀನು ಭಕ್ತನ ಅಂತರಂಗದಲ್ಲಿ ಅಡಗಿ ಕೊಂಡಿರುವೆ.

## (೨) ಪಿಂಡಜ್ಞಾನ ಸ್ಥಲ

[illegible]ಳಿಯ ಕಣ್ ಕಾಣದಿಂದ ಮುನ್ನ ತ್ರಿಪುರಸಂಹಾರದಿಂದ ಮುನ್ನ,
[illegible]ರಂಜಿಗಳಿಂದ ಮುನ್ನ, ಉಮೆಯ ಕಲ್ಯಾಣದಿಂದ ಮುನ್ನ,
[illegible]ನ್ನ, ಮುನ್ನ, ಮುನ್ನ—
ಅಂದಿಂಗೆಳೆಯ ನೀನು: ಹಳೆಯ ನಾನು,
ಮಹಾದಾನಿ ಕೂಡಲ ಸಂಗಮದೇವಾ.

ಅನಾದಿ ಕಾಲದಿಂದಲೂ ನಾನು ನಿನ್ನ ಹಳಬನಾಗಿ, ಭಕ್ತನಾಗಿ, ಚಿರ ತರುಣನಾಗಿರುವ ನಿನ್ನ ಪೂಜೆ-ಸೇವೆ ಮಾಡುತ್ತ ಬಂದಿದ್ದೇನೆ; ಮಹಾ ದಾನಿ ಕೂಡಲ ಸಂಗಮದೇವಾ!

೩ ಅಯ್ಯಾ! ನೀನು ನಿರಾಕಾರವಾಗಿದ್ದಲ್ಲಿ
ನಾನು ಜ್ಞಾನನೆಂಬ ವಾಹನವಾಗಿದ್ದೆ, ಕಾಣಾ;
ಅಯ್ಯಾ! ನೀನು ನಾಟ್ಯಕ್ಕೆ ನಿಂದಲಿ
ನಾನುಚೈತನ್ಯನೆಂಬ ವಾಹನವಾಗಿದ್ದೆ, ಕಾಣಾ;
ಅಯ್ಯಾ! ನೀನು ಆಕಾರವಾಗಿದ್ದಲ್ಲಿ
ನಾನು ವೃಷಭನೆಂಬ ವಾಹನವಾಗಿದ್ದೆ, ಕಾಣಾ;
ಅಯ್ಯಾ! ನೀನೆನ್ನ ಭವವ ಕೊಂದಿಹೆನೆಂದು
ಜಂಗಮ ಲಾಂಛನವಾಗಿ ಬಂದೊಡೆ
ನಾನು ಭಕ್ತನೆಂಬವಾಹನವಾಗಿದ್ದೆ, ಕಾಣಾ;
ಕೂಡಲ ಸಂಗಮದೇವಾ.

ಹೇ! ಕೂಡಲ ಸಂಗಮ ದೇವಾ ನೀನು ನಿರಾಕಾರನಾಗಿರುವ
ನಾನು ಜ್ಞಾನಮಾರ್ಗದಿಂದ ನಿನ್ನನ್ನು ಆರಾಧಿಸಿದೆ; ನೀನು ನೃತ್ಯವಾ
ನಿಂತಿರುವಾಗ ನಾನು ನಿನ್ನ ಸ್ಫೂರ್ತಿಯ ವಾಹನನಾಗಿದ್ದೆ; ನೀನು ಸಾ
ರನಾಗಿ ನನ್ನಿದುರು ಬಂದಾಗ ನಾನು ನಂದಿಯಾಗಿ ನಿನ್ನ ಸೇವೆಗೈ
ಹೇ ದಯಾಘನನೇ, ನನ್ನನ್ನು ಭವಮುಕ್ತನನ್ನಾಗಿ ಮಾಡಿರುವೆನೆ
ನೀನು ತಿಳಿದು ಜಂಗಮ ಇಚ್ಛಾಸ್ವರೂಪಿಯಾಗಿ ನನಗೆ ತೋರಿಸಿಕೊಂ
ನಾನು ನಿನ್ನ ಭಕ್ತನಾಗಿ ಸದಾವಕಾಲ ನಿನ್ನ ಸೇವೆ ಮಾಡುವ ಸ್ವಾಮಿ
ನಾಗುವೆ—ಕೂಡಲ ಸಂಗಮ ದೇವಾ!

೪ ಅಯ್ಯಾ! ಏಳೇಳು ಜನ್ಮದಲ್ಲಿ ಶಿವಭಕ್ತನಾಗಿ
ಬಾರದಿರ್ದೊಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ,
ನಿಮ್ಮ ಪ್ರಸಾದಕ್ಕಲ್ಲದೆ ಬಾಯ್ದೆರೆಯೆನಯ್ಯಾ-
ಪ್ರಥಮ ಭವಾಂತರದಲ್ಲಿ ಶಿಲಾದನೆಂಬ
ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು
ನಿಮ್ಮ ಭೃತ್ಯನ ಮಾಡಿ ಎನ್ನನಿರಿಸಿ ಕೊಂಡಿದ್ದಿರಯ್ಯಾ;
ಎರಡನೆಯ ಭವಾಂತರದಲ್ಲಿ ಸ್ಕಂದನೆಂಬ

ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು
ನಿಮ್ಮ ಕಾರುಣ್ಯವ ಮಾಡಿಸಿಕೊಂಡಿದ್ದಿರಯ್ಯಾ;
ಮೂರನೆಯ ಭವಾಂತರದಲ್ಲಿ
ನೀಲ ಲೋಹಿತನೆಂಬ, ಗಣೇಶ್ವರನಮಾಡಿ ಹೆಸರಿಟ್ಟು ಕರೆದು
ನಿಮ್ಮ ಲೀಲಾವಿನೋದದಿಂದಿರಿಸಿಕೊಂಡಿದ್ದಿರಯ್ಯಾ;
ನಾಲ್ಕನೆಯ ಭವಾಂತರದಲ್ಲಿ ಮನೋಹರನೆಂಬ
ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು
ನಿಮ್ಮ ಮನಃಪ್ರೇರಕನಾಗಲೆಂದು ಇರಿಸಿಕೊಂಡಿದ್ದಿರಯ್ಯಾ;
ಐದನೆಯ ಭವಾಂತರದಲ್ಲಿ ಕಾಲಲೋಚನನೆಂಬ
ಗಣೇಶ್ವರನಮಾಡಿ ಹೆಸರಿಟ್ಟು ಕರೆದು
ಸರ್ವಕಾಲ ಸಂಸಾರಮಾಡಿಸುತ್ತಿದ್ದಿರಯ್ಯಾ;
ಆರನೆಯ ಭವಾಂತರದಲ್ಲಿ ವೃಷಭನೆಂಬ
ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು
ನಿಮಗೇರಲು ವಾಹನನಾಗಲೆಂದು ಇರಿಸಿಕೊಂಡಿದ್ದಿರಯ್ಯಾ;
ಏಳನೆಯ ಭವಾಂತರದಲ್ಲಿ ಬಸವನೆಂಬ
ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು
ನಿಮ್ಮ ಒಕ್ಕುದ ಮಿಕ್ಕುದಕ್ಕೆ
ಯೋಗ್ಯನಾಗಲೆಂದು ಇರಿಸಿಕೊಂಡಿದ್ದಿರಯ್ಯಾ;
ಇದು ಕಾರಣ ಕೂಡಲ ಸಂಗಮದೇವಾ
ನೀವು ಬರಿಸಿದ ಭವಾಂತರದಲ್ಲಿ ನಾನು ಬರುತಿರ್ದೆನಯ್ಯಾ.

ನಾನು ಜನ್ಮ ಜನ್ಮಾಂತರಗಳಲ್ಲಿ ಒಂದಿಲ್ಲೊಂದು ರೂಪದಿಂದ ನಿಮ್ಮ ...ೀವಕನಾಗಿ ನಿಮ್ಮ ಸೇವೆಯನ್ನು ಮಾಡುವ ಭಾಗ್ಯವಿತ್ತು ನನ್ನ ಮೇಲೆ ...ೃಪೆಮಾಡಿರುವೆ. ಇನ್ನು ಮುಂದಾದರೂ ನಾನು ಶಿವಭಕ್ತನಾಗಿಯೇ ...ಟ್ಟಬೇಕು. ಇಲ್ಲದಿದ್ದರೆ ನಿಮ್ಮ ಹಾಗೂ ನಿಮ್ಮ ಪ್ರಮಥರ ಆಣೆ! ...ಮ್ಮ ಪ್ರಸಾದವನ್ನು ಬಿಟ್ಟು ಬೇರೆಯಾವದಕ್ಕೂ ನಾನು ಆಶೆಮಾಡಲಾರೆ. ...ದುದರಿಂದಲೇ ನೀವು ಅನುಗ್ರಹಿಸಿದ ಜನ್ಮಗಳಲ್ಲಿ ಹುಟ್ಟಿ ಬಂದೆ. ...ೂಡಲ ಸಂಗಮ ದೇವಾ !!

೫ **ಅಯ್ಯಾ! ನಿಮ್ಮ ಶರಣನ ಮರ್ತ್ಯಕ್ಕೆ ತಂದೆಯಾಗಿ,**
**ನೆನೆನೆನೆದು ಸುಖಿಯಾಗಿ ಆನು ಬದುಕಿದೆನಯ್ಯಾ;**
**ಅದೇನು ಕಾರಣ ? ತಂದೆಯುಂದರಿದೆನಯ್ಯಾ;**
**ಎನ್ನ ಕಾರಣ ತಂದೆಯುಂದರಿದೆನಯ್ಯಾ;**
**ಅರಿದರಿದು ನಿಮ್ಮ ಶರಣನು ಆಚರಿಸುವ ಆಚರಣೆಯುಕಂಡು**
**ಆನು ಕಣ್ದೆರೆದೆನಯ್ಯಾ; ಕೂಡಲಸಂಗಮದೇವಾ.**

ಪ್ರಭು! ನೀವು ನಿಮ್ಮ ಶರಣರ ಭೂಮಿಗೆ ತಂದೆಯಾಗಿರುವಿರಿ; ನಿಮ್ಮನ್ನು ನಿರಂತರವಾಗಿ ಧ್ಯಾನಮಾಡಿ ನಾನು ಇಲ್ಲಿ ಬದುಕಿರುವೆ; ಸುಖಿಯಾಗಿರುವೆ; ನನ್ನ ಅಂತರಂಗದ ತಿಳಿವಳಿಕೆಯಿಂದ ನೀವೆ ಸಕಲರಿಗೂ ತಂದೆಯೆಂದು ತಿಳಿದೆ; ಮತ್ತು ನಿಮ್ಮ ಶರಣರು ಕಡು ನಿಷ್ಠೆಯಿಂದ ಆಚರಿಸುವ ಸದಾಚಾರಗಳನ್ನು ನನ್ನ ಜೀವನದಲ್ಲಿ ಅಳವಡಿಸಿಕೊಂಡು ನನ್ನ ಕಣ್ಣುಗಳನ್ನು ನಿಚ್ಚಳವಮಾಡಿಕೊಂಡೆ ಕೂಡಲ ಸಂಗಮ ದೇವಾ !

೬ **ಕರಿಘನ ಅಂಕುಶ ಕಿರಿದೆನ್ನಬಹುದೇ? ಬಾರದಯ್ಯಾ;**
**ಗಿರಿಘನ ವಜ್ರಕಿರಿದೆನ್ನಬಹುದೆ ? ಬಾರದಯ್ಯಾ;**
**ತಮಂಧ ಘನ ಜ್ಯೋತಿ ಕಿರಿದೆನ್ನಬಹುದೆ? ಬಾರದಯ್ಯಾ;**
**ಮರವು ಘನ ನಿಮ್ಮ ನೆನೆವ ಮನವ ಕಿರಿದೆನ್ನಬಹುದೇ ?**
**ಬಾರದಯ್ಯಾ; ಕೂಡಲ ಸಂಗಮದೇವಾ.**

ಅಂಕುಶವು ಸಣ್ಣದಿದ್ದರೂ ಬಲವುಳ್ಳ ಆನೆಯನ್ನು ಅಂಕಿತದಲ್ಲಿಡುತ್ತದೆ; ವಜ್ರಾಯುಧವು ಕಿರಿದಾಗಿದ್ದರೂ ಮಹಾ ಪರ್ವತವನ್ನು ಸೀಳಿಬಿಡುತ್ತದೆ; ಚಿಕ್ಕ ದೀಪ ಘೋರವಾದ ಅಂಧಃಕಾರವನ್ನು ನಾಶಮಾಡುತ್ತದೆ. ನಿಮ್ಮ ಧ್ಯಾನದಲ್ಲಿ ನಿರತವಾದ ಮನಸ್ಸು ಸಣ್ಣದಿದ್ದರೂ ಸಹಿತ ಮರವಿನಿಂದುಂಟಾದ ಮಹಾ ಮಾಯೆಯನ್ನು ಹೊಡೆದೋಡಿಸುತ್ತದೆ; ಕೂಡಲ ಸಂಗಮ ದೇವಾ.

## (೩) ಸಂಸಾರ ಹೇಯಸ್ಥಲ

೭ **ಭವ ಬಂಧನ ಭವಪಾಶವಾದ ಕಾರಣವೇನಯ್ಯಾ ?**
**ಹಿಂದಣ ಜನ್ಮದಲಿ ಲಿಂಗವ ಮರೆದನಾಗಿ**
**ಹಿಂದಣ ಸಿರಿಯಲಿ ಜಂಗಮವ ಜರೆದನಾಗಿ**
**ಅರಿದೀಸಂಸಾರವ ಹೊದ್ದಲೀವೆನೇ ಕೂಡಲ ಸಂಗಮದೇವಾ**

ಈ ಸಂಸಾರದಲ್ಲಿ ಸಿಕ್ಕು ತೊಳಲಾಡುತ್ತಿರುವ ಕಾರಣವೇನು? ಗುರುವೇ. ಹಿಂದಿನ ಜನ್ಮದಲಿ ಲಿಂಗ ಪೂಜೆ ಮರೆತುದಕ್ಕಾಗಿಯೊ, ಸಿರಿವಂತಿಕೆಯ ಸೊಕ್ಕಿನಲ್ಲಿ ಜಂಗಮರ ನಿಂದೆ ಮಾಡಿದುದಕ್ಕಾಗಿಯೋ, ಕಾರಣವನ್ನರಿತು ನಾನು ಇಂದು ಭವಸಾಗರದಿಂದ ಪಾರಾಗುವ ದಾರಿಯನ್ನು ನನಗೆ ತೋರಿಸಯ್ಯಾ ಕೂಡಲ ಸಂಗಮದೇವಾ !

೮ **ಸಂಸಾರ ಸಾಗರದ ತೆರೆಕೊಬ್ಬಿ**
**ಮುಖದ ಮೇಲೆ ಅಲೆಯುತ್ತಿದೆ.**
**ಸಂಸಾರ ಸಾಗರ ಉರದುದ್ದವೇ ? ಹೇಳಾ**
**ಸಂಸಾರ ಸಾಗರ ಕೊರಳುದ್ದವೆ ? ಹೇಳಾ**
**ಸಂಸಾರ ಸಾಗರ ಶಿರದುದ್ದವಾದ ಬಳಿಕ ಏನು**
**ಹೇಳುವೆನಯ್ಯಾ ?**
**ಅಯ್ಯಾ, ಅಯ್ಯಾ ಎನ್ನ ಹುಯ್ಯಲ ಕೇಳಯ್ಯಾ**
**ಕೂಡಲ ಸಂಗಮದೇವಾ, ನಾನೇವೆನಯ್ಯಾ.**

ಸಂಸಾರದ ತಾಪತ್ರಯಗಳು ಹೆಚ್ಚಿ ಸಾಗರದ ತೆರೆಗಳಂತೆ ಮೈಮೇಲೆ ಏರಿ ಬರತೊಡಗಿವೆ; ಹೇ ! ಕೂಡಲ ಸಂಗಮದೇವಾ, ನೀನೆ ಹೇಳು ಈ ಸಂಸಾರ ಸಾಗರದ ಆಳ ಎಷ್ಟೆಂಬುದನ್ನು; ಎದೆಯವರೆಗೆ ಇದೆಯೋ, ಕುತ್ತಿಗೆಯ ವರೆಗೆ ಇದೆಯೋ; ಸಂಸಾರದಲ್ಲಿ ಸಂಪೂರ್ಣವಾಗಿ ಮುಳುಗಿದ ನಂತರ ನಾನು ಏನೆಂದು ಹೇಳಲಿ ದೇವಾ ! ಹೇಗೆ ಮೊರೆಯಿಡಲಿ ಪ್ರಭುವೆ. ತಂದೆಯೆ ನನ್ನ ಗೋಳನ್ನು ಕೇಳಯ್ಯಾ.

೯ **ಚಂದ್ರಮನಂತೆ ಕಳೆಸವನಿಸಿತ್ತೆನಗೆ**
**ಸಂಸಾರವೆಂಬರಾಹು ಸರ್ವಗ್ರಾಸಿಯಾಗಿ ನುಂಗಿತ್ತೆನ್ನ**
**ಇಂದೆನ್ನ ದೇಹಕ್ಕೆ ಗ್ರಹಣವಾಯಿತು**
**ಇನ್ನೆಂದಿಗೆ ಮೋಕ್ಷವಹುದೋ ಕೂಡಲ ಸಂಗಮದೇವಾ.**

ಚಂದ್ರನಂತೆ ಸರ್ವಾಂಗಸುಂದರನಾಗಿ ಬೆಳೆದ ನನಗೆ ಮಾಯೆ ಮೋಹದ ಮುಸುಕು ಹಾಕಿ ನನ್ನನ್ನು ಬಂಧಿಸಿದಳು. ಚಂದ್ರನಿಗೆ ಗ್ರಹಣವಾಗಿ ದೇಹ ಕಾಂತಿ ಕುಂದಿ ಹೋಗುವಂತೆ -- ನನ್ನ ದೇಹವು ಸಂಸಾರ ವಿಕಾರದಿಂದ ಕಾಂತಿಹೀನವಾಗಿದೆ. ಆದರೆ ದೇವಾ, ಭವದಿಂದ ನನಗೆ ಎಂದಿಗೆ ಮೋಕ್ಷವಾಗುತ್ತದೆ -- ಕೂಡಲ ಸಂಗಮದೇವಾ !

೧೦ **ಇಲಿಗಡಹನೊಡ್ಡಿದಲ್ಲಿ ಇಪ್ಪಂತೆನ್ನ ಸಂಸಾರ**
**ತನು ಕೆಡುವನ್ನಕ್ಕ ಮಾಣದು.**
**ಹೆರರ ಬಾಧಿಸುವದನು ತನು ಕೆಡುವನ್ನಕ್ಕ ಮಾಣದು**
**ಹೆರರ ಛಿದ್ರಿಸುವದನು ತನು ಕೆಡುವನ್ನಕ್ಕ ಮಾಣದು**
**ಅಕಟಕಟಾ ಸಂಸಾರಕ್ಕೆ ಸತ್ತೆ, ಕೂಡಲ ಸಂಗಮದೇವಾ.**

ಬಲೆಯೊಳಗೆ ಸಿಕ್ಕ ಇಲಿಯಂತೆ ನನ್ನ ಸಂಸಾರ; ಈ ದೇಹ ನಾಶವಾಗುವವರೆಗೆ ಸಂಸಾರದ ಜಂಜಡಗಳು ನನ್ನನ್ನು ಬಿಡುವಂತಿಲ್ಲ; ನೆರೆಹೊರೆಯವರನ್ನು ಪೀಡಿಸಿ ಅವರಿಗೆ ಚಿತ್ರವಿಚಿತ್ರ ಹಿಂಸೆ ಕೊಡುವದು ಈ ಕಲುಷಿತ ಕಾಯ ಇರುವವರೆಗೆ, ಅಯ್ಯೋ ಕೂಡಲ ಸಂಗಮ ದೇವಾ ಇಂಥ ಸಂಸಾರಕ್ಕೆ ನಾನು ಬೇಸತ್ತೆ.

೧೧ **ಕಪ್ಪೆ ಸರ್ಪನ ನೆಳಲಲ್ಲಿ ಇಪ್ಪಂತೆನಗಾಯಿತಯ್ಯಾ**
**ಅಕಟಕಟಾ ಸಂಸಾರ ವೃಥಾಹೋಯಿತಲ್ಲಾ.**
**ಕರ್ತೃವೆ ಕೂಡಲಸಂಗಮ ದೇವಾ**
**ಇವ ತಪ್ಪಿಸಿ ಎನ್ನನು ರಕ್ಷಿಸಯ್ಯಾ.**

ಹಾವಿನ ನೆಳಲಲ್ಲಿ ಕುಳಿತಿರುವ ಕಪ್ಪೆಯ ಜೀವನದಂತೆ ನನ್ನ ಸಂಸಾರವೂ (ಜೀವನ) ಯಾವ ಪುರುಷಾರ್ಥವನ್ನು ಸಾಧಿಸದೆ ವ್ಯರ್ಥವಾಯಿತಲ್ಲ;

ಸೃಷ್ಟಿಕರ್ತನಾದ ಕೂಡಲ ಸಂಗಮ ದೇವಾ! ಈ ಭವಪಾಶಹರಿದು ನನ್ನನ್ನು ಕಾಪಾಡು.

೧೨ **ಶೂಲದ ಮೇಲಣ ವಿಭೋಗ ಏನಾದಡೇನು**
**ನಾನಾ ವರ್ಣದ ಸಂಸಾರ ಹಾವು ಹಾವಾಡಿಗನ ಸ್ನೇಹದಂತೆ.**
**ತನ್ನಾತ್ಮ ತನಗೆ ಹಗೆಯಾದ ಬಳಿಕ**
**ಬಿನ್ನಣವುಂಟೆ ಮಹಾದಾನಿ ಕೂಡಲ ಸಂಗಮದೇವಾ.**

ಶೂಲಕ್ಕೇರಿಸುವ ಮುನ್ನ ಸುಖದ ಸುಪ್ಪತ್ತಿಗೆಯ ನೀಡಿದರೂ ವ್ಯರ್ಥ; ಅನೇಕ ಸುಖ ದುಃಖಗಳಿಂದೊಡಗೂಡಿದ ಸಂಸಾರವು ಹಾವು ಹಾವಾಡಿಗನ ಗೆಳೆತನದಂತಿದೆ; ತನಗೆ ತಾನೇ ವೈರಿಯಾದರೆ ಜಾಣತನದ ಉಪಯೋಗ ವೇನು? ಮಹಾದಾನಿ ಕೂಡಲ ಸಂಗಮ ದೇವಾ ನೀವೆ ನನ್ನನ್ನು ಕಾಯಬೇಕು.

೧೩ **ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯಾ;**
**ಎನ್ನನು ಕಾಯಯ್ಯಾ, ಕಾಯಯ್ಯಾ.**
**ಹುರುಳಿಲ್ಲ, ಹುರುಳಿಲ್ಲ ಕೂಡಲ ಸಂಗಮದೇವಾ**
**ಶಿವಧೋ! ಶಿವಧೋ!! ಶಿವಧೋ!!!**

ಈ ಸಂಸಾರದಲ್ಲಿ ಎಳ್ಳಷ್ಟು ಅರ್ಥವಿಲ್ಲದಿದ್ದರೂ ಅದರ ಬಂಧನದಲ್ಲಿ ಸಿಕ್ಕು ಬಳಲುತ್ತಿರುವೆ; ಈ ಬಂಧನದಿಂದ ಮುಕ್ತನನ್ನಾಗಿ ಮಾಡಿ ನನ್ನನ್ನು ರಕ್ಷಿಸು ಕೂಡಲ ಸಂಗಮ ದೇವಾ!

೧೪ **ನಾನೊಂದು ನೆನೆದರೆ ತಾನೊಂದು ನೆನೆವುದು;**
**ನಾನಿತ್ತ ಲೆಳೆದರೆ ತಾನತ್ತ ಲೆಳೆವುದು,**
**ತಾ ಬೇರೆ ಎನ್ನನಳಲಿಸಿ ಕಾಡಿತ್ತು**
**ತಾ ಬೇರೆ ಎನ್ನ ಬಳಲಿಸಿಕಾಡಿತ್ತು**
**ಕೂಡಲ ಸಂಗನ ಕೂಡಿಹನೆಂದೊಡೆ**
**ತಾ ನೆನ್ನ ಮುಂಗುಗೆಡಿಸಿತ್ತು ಮಾಯೆ.**

ಆತ್ಮ ಒಳ್ಳೆಯದನ್ನು ನೆನೆದರೆ ಮಾಯೆ ಕೆಟ್ಟವಿಚಾರಗಳನ್ನು ನೆನೆಯುತ್ತದೆ; ಆತ್ಮ ಕೂಡಲ ಸಂಗಮನ ಕಡೆಗೆ ಆಕೃಷ್ಟನಾದರೆ ಮಾಯೆ ಮನಸ್ಸನ್ನು ಮೋಹದ ಕಡೆಗೆ ಎಳೆಯುತ್ತದೆ; ಈ ಸಂದಿಗ್ಧದಲ್ಲಿ ಮಾಯೆ ಆತ್ಮನನ್ನು ನಿರಂತರವಾಗಿ ದುಃಖಕ್ಕೆ ಈಡು ಮಾಡಿದೆ.

೧೫ **ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ**
**ಮೋಹಕ್ಕೆ ಮಗಳಾಗಿ ಹುಟ್ಟಿದಳು ಮಾಯೆ**
**ಕೂಟಕ್ಕೆ ಸ್ತ್ರೀಯಾಗಿ ಕೂಡಿದಳು ಮಾಯೆ**
**ಇದಾವ ಪರಿಯಲ್ಲಿ ಕಾಡಿತ್ತು ಮಾಯೆ**
**ಈ ಮಾಯೆಯ ಕಳೆವರೆ ಎನ್ನಳವಲ್ಲ: ನೀವೆ ಬಲ್ಲಿರಿ,**
**ಕೂಡಲ ಸಂಗಮ ದೇವಾ.**

ಮಾಯೆಯು ನನ್ನನ್ನು ಅನೇಕ ಪ್ರಕಾರಗಳಿಂದ ಬಂಧಿಸಿದೆ; ತಾಯಿಯಾಗಿ ಹಡೆದಳು; ಮಗಳಾಗಿ ವಾತ್ಸಲ್ಯವನ್ನುಂಟುಮಾಡಿದಳು, ಹೆಂಡತಿಯಾಗಿ ನನ್ನೊಡನೆ ಬೆರೆತಳು, ಅನೇಕ ವಿಧಗಳಿಂದ ಈ ಮಾಯೆ ಕಾಡಿಸುತಲಿದೆ; ಅದರಿಂದ ಪಾರಾಗುವ ಶಕ್ತಿನನಗಿಲ್ಲ; ತಿಳಿದವರಾದ ನೀವು ಕೂಡಲ ಸಂಗಮದೇವಾ ನನ್ನನ್ನು ಕಾಪಾಡಬೇಕು !

೧೬ **ಕೊಡೆವಿಡಿಯೆ ಕುದುರೆಯ ದೃಢವುಳ್ಳ ರಾವುತನೇರಿ**
**ಕೊಡೆ ಕೋಟಿ ಶೂರರು ಹನ್ನಿಬ್ಬರಯ್ಯಾ**
**ಚಂದ್ರಕಾಂತದ ಗಿರಿಯ ಗಜ ಬಂದು ಮೂದಲಿಸೆ**
**ಅರಿದು ಕೊಲುವಡೆ ರಿಪುಗಳ ಕಲಿತನವ ನೋಡಾ !**
**ಆನಿಗೆಯುಳಿದವಿದ—ಪುತ್ಥಳಿಯ ರೂಹಿನಂತಾಯಿತ್ತು**
**ಕೂಡಲ ಸಂಗಮದೇವಾ ನಿಮ್ಮ ಹೆಸರಿಲ್ಲದ ಹೆಸರು;**

ಚಕ್ರಾಧಿಪತ್ಯವು ದೊರೆತಾಗ ಪರಾಕ್ರಮಿಯಾದವನೇ ಕುದುರೆ ಸವಾರಿ ಮಾಡುತ್ತಾನೆ; ಅವನ ಸುತ್ತಲೂ ಮತ್ತೆ ಹನ್ನೆರಡು ಜನ ಶೂರ ಸರದಾರರು ಕೊಡೆ ಹಿಡಿದುಕೊಂಡು ನಿಲ್ಲುತ್ತಾರೆ; ಅಡವಿಯ ಮದ್ದಾನೆ

ಚಂದ್ರಕಾಂತ ಮಣಿಯು ಬಳಿ ಬಂದು ತನ್ನ ಪ್ರತಿ ಬಿಂಬವನ್ನು ಆ ಮಣಿಯಲ್ಲಿ ಕಂಡು ಆ ಛಾಯೆಯೊಂದಿಗೆ ಕಾದಾಡುತ್ತದೆ, ಆದರೆ ತೀವ್ರಮನೋವಿ ಎದುರಾಳಿಯನ್ನು ಕೊಲ್ಲಬೇಕೆಂದರೆ — ಆ ವೈರಿಯ ಪರಾಕ್ರಮ ನಮಗೆ ತಿಳಿಯುವದಿಲ್ಲ; ಹಾಗೆ ಸಂಸಾರದಲ್ಲಿ ನಿತ್ಯನೂ ಸತ್ಯನೂ ಆದ ಕೂಡಲ ಸಂಗಮ ದೇವರ ಅನಾಮಧೇಯನಾದ ಹೆಸರು ಬೂದಿಯೊಳಗೆ ಚಿತ್ರಿಸಿದ ಚಿತ್ರದಂತೆ ಕಾಣುತ್ತದೆ. !

೧೭ **ಇಂದಿಗೆಂತು ನಾಳಿಗೆಂತು ಎಂದು**
**ಬೆಂದೊಡಲ ಹೊರೆಯ ಹೋಯಿತ್ತೆನ್ನ ಸಂಸಾರ**
**ಈ ಸಂಸಾರದ ಹಿಂದೆ ನಾನಾಯೋನಿಯಲ್ಲಿ ಬಂದೆನೆಂಬ ಹೇಯವಿಲ್ಲ**
**ಮುಂದೆ ಮುಕ್ತಿಯಾಗಬೇಕೆಂಬ ಯುಕ್ತಿಯಿಲ್ಲ,**
**ಎಂದೆಂದೂ ಸದಾಶಿವನ ಕುಂದದೆ ನೆನೆಯಲೀಯದೆ**
**ಕೊಂದುದಯ್ಯಾ ಈ ಮಾಯೆ, ಕೂಡಲ ಸಂಗಮದೇವಾ.**

ನನ್ನ ಜೀವಮಾನವೆಲ್ಲ ಇಂದು ನಾಳೆ ಎಂಬ ಚಿಂತೆಯಲ್ಲಿ, ಹೊಟ್ಟೆ ಹೊರೆಯುವ ಕಷ್ಟದಲ್ಲಿ ಕಳೆದು ಹೋಯಿತು; ಹಿಂದೆ ನಾನಾ ಯೋನಿಗಳಲ್ಲಿ ಹುಟ್ಟಿ ಬಂದಿರುವೆನೆಂಬ ಹೇಯವಿಲ್ಲದಾಗಿದೆ; ಇನ್ನಾದರೂ ಸಂಸಾರದಿಂದ ಮುಕ್ತನಾಗಬೇಕೆಂಬ ವಿಚಾರವಿಲ್ಲ ನನಗೆ; ನಿತ್ಯ ಮಂಗಲದಾಯಕನಾದ ಪರಮೇಶ್ವರನನ್ನು ನೆನೆಯಲೂ ಈ ಮಾಯೆ ಬಿಡಲೊಲ್ಲದು: ನನ್ನನ್ನು ಹಾಳುಮಾಡಿದೆ ಈ ಮಾಯೆ; ಕಾಪಾಡು, ಕಾಪಾಡು ಕೂಡಲ ಸಂಗಮದೇವಾ !

೧೮ **ದಿಟ ಪುಟ್ಟಿ ಭಕ್ತಿ ಸಂಪುಟ ನೆಲೆಗೊಳ್ಳದು,**
**ಟವಕ ಟೆಂಬಕನಾಡಿಸುತ್ತಿದ್ದೀತಯ್ಯಾ ನಿನ್ನ ಮಾಯೆ**
**ಕೂಡಲ ಸಂಗಮಯ್ಯಾ ಹೊನ್ನು, ಹೆಣ್ಣು, ಮಣ್ಣು ತೋರಿ.**

ನನಗೆ ಜ್ಞಾನೋದಯವಾಗಿ ನಿನ್ನಲ್ಲಿ ಭಕ್ತಿ ಭಾವ ನೆಲೆಗೊಳ್ಳದ ಕಾರಣ ಈ ಮಾಯೆಯು ಹೊನ್ನು, ಹೆಣ್ಣು, ಮಣ್ಣುಗಳ ಆಸೆಯನ್ನು

ಮುಂದೆ ಮಾಡಿ ನನ್ನನ್ನು ಊರೂರು ತಿರುಗುವ ದಾಸಯ್ಯನಂತೆ ಕುಣಿಸು ತ್ತಲಿದೆ ಕೂಡಲ ಸಂಗಮದೇವಾ.

**೧೯ ಆಸತ್ತು ಅಳಲಿದೆನೆಂದರೆ ಮಾಣದು**
**ಬೇಸತ್ತು ಬಿದ್ದಿದ್ದೇನೆಂದರೆ ಮಾಣದು**
**ಏನೇನೆಂದರೂ ಮಾಣದು**
**ಕಾಯದ ಕರ್ಮದ ಫಲಭೋಗವು**
**ಕೂಡಲ ಸಂಗನ ಶರಣರು ಬಂದು**
**ಓಹೋ ಅಂಜದಿರೆಂದಡೆ ಆನು ಬದುಕುವೆನು.**

ಕಾಯ ಕರ್ಮ ಫಲಗಳು, ದುಃಖದಭಾರದಿಂದ ಬಳಲಿ ಬೇಸತ್ತು ಬಿದ್ದಿರುವೆನೆಂದೂ, ಏನೇನಾದರೂ ಸಬೂಬು ಹೇಳಿದರೂ ನನ್ನ ಬೆನ್ನಟ್ಟಿ ಬರುವದನ್ನು ಬಿಡದಾಗಿವೆ. ನನ್ನನ್ನು ಸಂರಕ್ಷಿಸಲು ಕೂಡಲ ಸಂಗನ ಶರಣರು ಬಂದು 'ಅಂಜದಿರು' ಎಂದು ಅಭಯನೀಡಿ ಬೆಂಗಾವಲಿಗೆ ನಿಂತರೆ ನಾನು ಬದುಕುವೆನು.

**೨೦ ಸಂಸಾರವೆಂಬ ಸರ್ಪ ಮುಟ್ಟಲು**
**ಪಂಚೇಂದ್ರಿಯವೆಂಬ ವಿಷಯ ವಿಷದಿಂದೆ**
**ಆನು ಮುಂದುಗೆಟ್ಟೆನಯ್ಯಾ, ಆನು ಹೊರಳಿ ಬೀಳುತ್ತಿದ್ದೇನಯ್ಯಾ,**
**"ಓಂ ನಮಃ ಶಿವಾಯ" ಎಂಬ ಮಂತ್ರವ ಜಪಿಸುತ್ತಿದ್ದೇನಯ್ಯಾ, ಕೂಡಲ ಸಂಗಮದೇವಾ.**

ಸಂಸಾರವೆಂಬ ಹಾವು ಕಚ್ಚಿತು; ಇಂದ್ರಿಯ ಸುಖವೆಂಬ ನಂಜು ಏರಿತು; ಹಾದಿಗೆಟ್ಟು ದುಃಖಿಸುತ್ತಿರುವೆ; ಆದರೂ ನಂಜು ಕಡಿಮೆಯಾಗಲೆಂದು 'ಓಂ ನಮಃ ಶಿವಾಯ' ಎಂದು ಆರು ಅಕ್ಷರದ ಮಂತ್ರಪಠಣಮಾಡುತ್ತಲಿದ್ದೇನೆ; ಕೂಡಲ ಸಂಗಮದೇವಾ.

**೨೧ ಅರಿಯದೆ ಜನನಿಯ ಜಠರದಲ್ಲಿ ಜನಿಸಿದೆ.**
**ಬಾರದ ಭವಂಗಳಲ್ಲಿ ಬರಿಸಿದೆ ತಂದೆ**

**ಹುಟ್ಟಿದ್ದೇ ತಪ್ಪಾಯಿತ್ತೆ, ಎಲೆ ಲಿಂಗವೆ**
**ಮುನ್ನ ಹುಟ್ಟಿದುದಕ್ಕೆ ಕೃಪೆಮಾಡು ಲಿಂಗವೆ**
**ಇನ್ನು ಹುಟ್ಟಿದೆನಾದರೆ; ಕೂಡಲ ಸಂಗಮ ದೇವಾ,**
**ನಿಮ್ಮಾಣೆ.**

ಏನೂ ಅರಿಯದ ನಾನು ತಾಯಿಯ ಗರ್ಭದಿಂದ ಜನ್ಮಧಾರಣೆ ಮಾಡಿದೆ. ಕೊಡಬಾರದ ಕಷ್ಟ-ಜನ್ಮಗಳಲ್ಲಿ ಜನಿಸಿದೆ; ಭೂಮಿಗೆ ಬಂದದ್ದೇ ತಪ್ಪಾಯಿತೆ? ಎಲೆ ಗುರುಲಿಂಗವೇ ಈಗ ಹುಟ್ಟಿ ಬಂದುದಕ್ಕೆ ಕರುಣೆ ತೋರು ಇನ್ನು ಮುಂದೆ ಜನ್ಮತಾಳಿದರೆ ನಿಮ್ಮಾಣೆ ಕೂಡಲ ಸಂಗಮದೇವಾ.

೨೨ **ಎಂದು ಸಂಸಾರ ದಂದುಗ ಹಿಂಗುವದೋ ಎಂದೋ**
**ಮನದಲ್ಲಿ ಪರಿಣಾಮವಹುದೆನಗೆಂದೋ ಎಂದೋ**
**ಕೂಡಲ ಸಂಗಮ ದೇವ ಇನ್ನೆಂದೋ ಪರಮ ಸಂತೋಷ**
**ವಹುದೆನಗೆ.**

ಸಂಸಾರ ಗೊಂದಲ ನೂರಿಯ ಮಾರಕ ಎಂದು ಕಡಿಮೆಯಾಗುವದು? ನನ್ನ ಮನೋಭಿತ್ತಿಯಲ್ಲಿ ಶಾಂತಿಯ ಬೆಳಕು ಎಂದು ಪರಿಣಾಮ ಬೀರುವದು? ಕೂಡಲ ಸಂಗಮದೇವಾ ಮುಕ್ತಿಯ ಮಹಾಯೋಗದ ಸಂತೋಷ ನನಗೆ ಎಂದು ಲಭಿಸುತ್ತದೆ?

೨೩ **ಲೇಸಕಂಡು ಮನದಲ್ಲಿ ಬಯಸಿ ಬಯಸಿ**
**ಆಶೆ ಮಾಡಿದರಿಲ್ಲ ಕಂಡಯ್ಯಾ**
**ತಾಳೆ ಮರಕ್ಕೆ ಕೈಯ ನೀಡಿ**
**ಮೇಲೆ ನೋಡಿ ಗೋಣು ನೊಂದುದಯ್ಯಾ**
**ಕೂಡಲ ಸಂಗಮ ದೇವಾ ಕೇಳಯ್ಯಾ**
**ನೀನೀವ ಕಾಲಕ್ಕಲ್ಲದಿಲ್ಲ ಕಂಡಯ್ಯಾ.**

ಚೆನ್ನಾದ ವಸ್ತುಗಳನ್ನು ಕಂಡು ಮನದಲ್ಲಿ ಬಯಸಿ ಆಶೆಮಾಡಿದರೆ ತಾಳೆ ಮರಕ್ಕೆ ಕೈ ನೀಡಿ ಮೇಲೆನೋಡಿ ಗೋಣು ನೋಯಿಸಿಕೊಂಡಂತೆ

ಏನೂ ಪ್ರಯೋಜನವಿಲ್ಲ. ಕೇಳು ಹುಚ್ಚು ಮನವೆ, ಕೂಡಲ ಸಂಗಮನು ಕೂಡಮಾಡಿದ ವೇಳೆಗೆ ಸರಿಯಾಗಿ ಎಲ್ಲವೂ ಲಭಿಸುತ್ತದೆ.

**೨೪ ಮುನ್ನ ಮಾಡಿದ ಪಾಪ ಬೆನ್ನಬಿಡದನ್ನಕ್ಕ**
**ಇನ್ನು ಬಯಸಿದರುಂಟೆ?**
**ಭಕ್ತಿಯುಳ್ಳವರ ನೋಡಿ ನೋಡಿ ಬಯಸಿದರುಂಟೆ?**
**ಕೂಡಲ ಸಂಗಮ ದೇವರಲ್ಲಿ ಮುನ್ನ ವರವ ಹಡಿಯದನ್ನಕ್ಕ?**

ಈ ಮೊದಲು ಮಾಡಿದ ಪಾಪ ಕಳೆಯಲಿಲ್ಲವೆಂದರಿತು ಈಗ ಶಿವ ಕರುಣೆಯನ್ನು ಬಯಸಿದರೆ ಸಿಕ್ಕುವದೆ? ಪೂರ್ವಜನ್ಮದಲ್ಲಿ ಕೂಡಲ ಸಂಗ ಮನಿಂದ ವರಪಡೆಯದೆ ಶಿವಭಕ್ತರನ್ನು ನೋಡಿ ಪ್ರಸಾದ ಮುಕ್ತಿಯನ್ನು ಬಯಸಿದರೆ ಸಾಧ್ಯವೆ.?

**೨೫ ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವದಯ್ಯಾ**
**ಚಂದ್ರ ಕುಂದೆ ಕುಂದುವದಯ್ಯಾ**
**ಚಂದ್ರಂಗೆ ರಾಹು ಅಡ್ಡಬಂದಲ್ಲಿ ಅಂಬುಧಿ ಬೊಬ್ಬಿಟ್ಟೀತೆ?**
**ಅಂಬುಧಿಯು ಮುನಿಯು ಅಪೋಷಣೆಗೊಂಬಲ್ಲಿ**
**ಚಂದ್ರಮ ನಡ್ಡಬಂದನೆ?**
**ಆರಿಗೆ ಆರೂ ಇಲ್ಲ; ಕೆಟ್ಟವಂಗೆ ಕಳೆಯಿಲ್ಲ**
**ಜಗದನಂಟ ನೀನೇ ದೇವ ಕೂಡಲ ಸಂಗಮ ಪ್ರಭು.**

"ಯಾರಿಗೆ ಯಾರಿಲ್ಲ ಎರವಿನ ಸಂಸಾರ" ಎಂದು ಪುರಂದರ ದಾಸರು ಹೇಳಿಕೊಂಡಂತೆ, ಚಂದ್ರೋದಯವಾದರೆ ಸಮುದ್ರ ಉಕ್ಕೇರುತ್ತದೆ! ಅವನು ಕಳೆಗುಂದಲು ಸಮುದ್ರವೂ ಕಳೆಗುಂದುತ್ತದೆ. ಆದರೆ ಚಂದ್ರನಿಗೆ ರಾಹು ಅಡ್ಡ ಬಂದರೆ ಅಂಬುಧಿಯೂ, ಮುನಿಯು ಅಂಬುಧಿಯನ್ನು ಅಪೋಷಣ ಮಾಡುವಾಗ್ಗೆ ಚಂದ್ರನೂ ಕಸಿಬಿಸಿಗೊಂಡು ಆತಂಕ ಪಡಿಸಲಿಲ್ಲ. ಯಾರಿಗೆಯಾರೂ ಸಮ್ಬಂಧವಿಲ್ಲದ ಪ್ರಪಂಚದಲ್ಲಿ ಕೆಟ್ಟವನಿಗೆ ಮಾತ್ರ ಸ್ಥಳ ವಿಲ್ಲ. ಜಗದೇಕೇಶ್ವರನಾದ ನೀನೇ ಗಂಡ ಕೂಡಲ ಸಂಗಮದೇವಾ.

೨೬ ಒಲೆ ಹೊತ್ತಿ ಉರಿದರೆ ನಿಲಬಹುದಲ್ಲದೆ
ಧರೆ ಹೊತ್ತಿ ಉರಿದೊಡೆ ನಿಲ್ಲಬಾರದು. ಏರಿ
ನೀರನುಂಬರೆ ಬೇಲಿಕೆಯನುಂಬರೆ ಬೇಲಿಕೆಯ ಮೇವರೆ
ನಾರಿ ತನ್ನ ಮನೆಯಲ್ಲಿ ಕಳವರೆ
ತಾಯಿ ಮೊಲೆವಾಲು ನಂಜಾಗಿಕೊಲುವರೆ
ಇನ್ನಾರಿಗೆ ದೂರುವೆ ಕೂಡಲ ಸಂಗಮ ದೇವಾ.

ಒಲೆಹೊತ್ತಿ ಉರಿದರೆ ಸಹಿಸಬಹುದು. ಜಗವೆಲ್ಲ ಬೆಂಕಿಯ ಬನವಾದರೆ ಎಲ್ಲಿ ನಿಲ್ಲುವದು; ಒಡ್ಡು ನೀರುಣ್ಣುವಂತಾದರೆ ಬೇಲಿ ಹೊಲಮೇಯುವಂತಾದರೆ ಗೃಹಿಣಿ ತನ್ನ ಮನೆ ಕಳವು ತಾನೇಮಾಡುವಂತಾದರೆ ತಾಯಿಯ ಹಾಲು ವಿಷವಾಗಿ ಪ ರಿ ಣ ಮಿ ಸಿ ಕೊಲ್ಲುವಂತಾದರೆ–ಹರಕರುಣೆ ತಪ್ಪಿದ ಮೇಲೆ ಇನ್ನಾರಿಗೆ ಮೊರೆಇಡಲಿ ಕೂಡಲ ಸಂಗಮ ದೇವಾ. (ಗುರು ಕರುಣೆ ತಪ್ಪಿದರೆ ನಿಲ್ಲಬಹುದು ಹರನ ಕರುಣೆ ತಪ್ಪಿದರೆ ಏನುಗತಿ)

೨೭ ಎನ್ನ ಗುಣಾವಾವಗುಣವ ಸಂಪಾದಿಸುವೆ ಅಯ್ಯಾ
ಪ್ರತಿಯೇ ಅಪ್ರತಿಮ ಮಹಿಮ ನಿಮಗಾಪ್ರತಿಯೆ
ಕೂಡಲ ಸಂಗಮ ದೇವ ನೀಮಾಡಲಾ ನಾ ಆದೆನು.

ನನ್ನ ಕರ್ಮಕ್ಕನುಸಾರವಾಗಿ ಗುಣ–ಅವಗುಣಗಳನ್ನು ಸೇಖರಿಸುವೆ. ಮಹಾಮಹಿಮನಾದ ನಿನಗೆ, ನಿರ್ಗುಣ ನಿರ್ವಿಕಾರನಾದ ನಿನಗಾರು ಸರಿ? ಕೂಡಲ ಸಂಗಮದೇವಾ ನಿನ್ನ ಕೃಪಾಕಟಾಕ್ಷದಿಂದ ನಾನು ಈ ಭವ ಜಯಿಸುವಂತಾದೆನು.

೨೮ ಬೆದಕದಿರು ಬೆದಕದಿರು ಬೆದಕದಿರು ಹುರುಳಿಲ್ಲ
ಚಿತ್ರರಟ್ಟೆಕಾಯಲ್ಲಿ ಮತ್ತೇನ ನರಸುವಿರಯ್ಯಾ?
ನಿಮ್ಮ ಉತ್ತಮಿಕೆಯನ್ನೆ ಪೂರೈಸುವದು ಕೂಡಲ ಸಂಗಮ
ದೇವಾ.

ನನ್ನ ಮನಸ್ಸನ್ನು ಕೆದರಿ ನೋಡಬೇಡಾ, ಅದರಲ್ಲಿ ಯಾವ ಹುರುಳಿಲ್ಲ; ಆದರೆ ಕಾಯಿಯೊಳಗೆ ಬೀಜವಿದ್ದಂತೆ ನನ್ನ ಚಿತ್ತದಲ್ಲಿ ನಿಮ್ಮ

ಉತ್ತಮಗುಣಗಳನ್ನು ಪೂರೈಸುವ ಶಕ್ತಿಯುತ ಬೀಜವು ರೂಪ ತಾಳಿದೆ; ಅದರಲ್ಲಿ ಮತ್ತೇನನ್ನು ಹುಡುಕುವಿರಿ? ಕೂಡಲ ಸಂಗಮದೇವಾ!

**೨೯ ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯಾ**
**ವಿಚಾರಿಸಿದರೆ ಹುರುಳಿಲ್ಲವಯ್ಯಾ**
**ಪ್ರಪಂಚದ ಡಂಬಿನಲ್ಲಿ ಎನಗೊಂದು ರೂಪುಮಾಡಿ**
**ನೀವಿರಿಸಿದಿರಿ ಕೂಡಲ ಸಂಗಮದೇವಾ.**

ನೋಡಲು ಸುಂದರವಾಗಿದ್ದು, ಒಳಗೆ ಹುಳುಗಳಿಂದ ತುಂಬಿದ ಅತ್ತಿಯ ಹಣ್ಣಿನಂತಿರುವ ನನ್ನ ಚಿತ್ತಕ್ಕೆ, ಡಾಂಭಿಕ ಪ್ರಪಂಚದಲ್ಲಿ ನನಗೊಂದು ರೂಪಕೊಟ್ಟು ಕೂಡಿಸಿರುವಿ ನೀನು ಕೂಡಲ ಸಂಗಮದೇವಾ.

**೩೦ ಎನ್ನ ನಡೆಯೊಂದು ಪರಿ ಎನ್ನ ನುಡಿಯೊಂದು ಪರಿ**
**ಎನ್ನೊಳಗೇನು ಶುದ್ಧವಿಲ್ಲ ನೋಡಯ್ಯಾ**
**ನುಡಿಗೆ ತಕ್ಕ ನಡೆಯ ಕಂಡರೆ**
**ಕೂಡಲ ಸಂಗಮ ತನ್ನೊಳಗಿರ್ಪನಯ್ಯಾ.**

ನನ್ನ ನಡೆನುಡಿಗಳು ತೀರ ಭಿನ್ನ ಭಿನ್ನ ರೀತಿಗಳಿಲ್ಲಿರುವ ಕಾರಣ ನನ್ನ ಅಂತರಂಗದಲ್ಲಿ ಎಳ್ಳಷ್ಟೂ ಶುದ್ಧತ್ವವಿಲ್ಲ. ನಡೆ–ನುಡಿಗಳು ಒಂದಾಗಿ ಶರಣರ ನಿಕಟವರ್ತಿಗಳಾದವರ ಹೃದಯದಲ್ಲಿಯೇ ಕೂಡಲ ಸಂಗಮನಿರುವನು.

**೩೧ ಮುಂಗಯ್ಯ ಕಂಕಣಕ್ಕೆ ಕನ್ನಡಿಯ ತೋರುವಂತೆ,**
**ಎನ್ನ ಮನವು ನಿಧಾನವನೊಲ್ಲದೆ ಜಲಗವುಚ್ಚಿತ್ತು ನೋಡಾ**
**ನಾಯಿಗೆ ನಾರಿವಾಣ ಒಕ್ಕುದೆ ಕೂಡಲ ಸಂಗಮದೇವಾ?**

ಮುಂಗೈಗೆ ಕಟ್ಟಿಕೊಂಡ ಕಂಕಣವನ್ನು ಕನ್ನಡಿ ಹಿಡಿದು ತೋರಿಸುವ ಮಂಕುತನದಂತೆ ನನ್ನ ಮನವು ಅಂತರಂಗದಲ್ಲಿ ಅಡಗಿನಿಂತ ಆತ್ಮಲಿಂಗನ ಭಕ್ತಿನಿಧಿಯನ್ನು ಮೆಚ್ಚದೆ — ಚಿನ್ನದ ಆಶೆಗೆ ಓಡಿ ಹೋಗುತ್ತದೆ. ಎಷ್ಟಾ

ದರೂ ನಾಯಿ ಜಾತಿಗೆ ಸೇರಿದ ಈ ಮನಸ್ಸಿಗೆ ಕೊಬ್ಬರಿ ಹಾಕಿ ಮಾಡಿದ ಸಕ್ಕರೆಯ ಅನ್ನ ರುಚಿಸುತ್ತದೆಯೇ ಕೂಡಲ ಸಂಗಮದೇವಾ.

೩೨ ಕೊಂಬೆಯ ಮೇಲಣ ಮರ್ಕಟನಂತೆ
ಲಂಘಿಸುವದೆನ್ನ ಮನವು
ನಿಂದಲ್ಲಿ ನಿಲ್ಲಲೀಯದೆನ್ನ ಮನವು
ಹೊಂದಿದಲ್ಲಿ ಹೊಂದಲೀಯದೆನ್ನ ಮನವು
ಕೂಡಲ ಸಂಗಮದೇವ ನಿಮ್ಮ ಚರಣ ಕಮಲದಲ್ಲಿ ಭ್ರಮರ
ನಾಗಿರಿಸು ನಿಮ್ಮ ಧರ್ಮ!

ಕೋತಿ ಮನಸ್ಸು ಅತ್ತಿತ್ತ ಹರಿದಾಡಿ ನನ್ನನ್ನು ನಿಂತಲ್ಲಿ ನಿಲ್ಲಲಾರದಂತೆ, ನನ್ನ ಧರ್ಮದಲ್ಲಿ ಸ್ಥಿರಬುದ್ಧಿಯಿಂದ ಕೂಡಿರಲು ಬಿಡದಂತೆ ಮಾಡುತ್ತಲಿದೆ. ಕೂಡಲ ಸಂಗಮದೇವ ನಿಮ್ಮ ಚರಣ ಕಮಲಗಳಲ್ಲಿ ನನ್ನನ್ನು ದುಂಬಿಯನ್ನಾಗಿರಿಸಿಕೊಳ್ಳುವದು ನಿಮ್ಮ ಚಿತ್ತ.

೩೩ ಮರವ ನೇರಿದ ಮರ್ಕಟನಂತೆ
ಹಲವು ಕೊಂಬೆಗೆ ಹಾರುತ್ತಲಿದ್ದೇನೆ
ಬೆಂದ ಮನವ ನಾನೆಂತು ನಂಬುವೆನಯ್ಯಾ
ಎಂತು ನೆಚ್ಚುವೆನಯ್ಯಾ ಎನ್ನ ತಂದೆ ಕೂಡಲ ಸಂಗಮ ದೇವ
ನಲ್ಲಿ ಬೆರೆದೆನೆಂದರೆ ಹೋಗಲೀಯದಯ್ಯಾ.

ಮರದ ಮೇಲಿನ ಮಂಗ ಕೊಂಬೆಯಿಂದ ಕೊಂಬೆಗೆ ಹಾರುವಂತೆ ನನ್ನ ಮನಸ್ಸು ಸಂಸಾರ ವೃಕ್ಷದಲ್ಲಿ ಜಿಗಿದಾಡುತ್ತಲಿದೆ. ಸಂಸಾರವಲ್ಲಿ ಸುಟ್ಟು ಸುಣ್ಣವಾದ, ಕೂಡಲಸಂಗಮನಲ್ಲಿ ತಾದಾತ್ಮ್ಯವಾಗಲು ಬಿಡದ ಈ ಮಂಗ ಮನಸ್ಸನ್ನು ಹೇಗೆ ನಂಬಲಿ ಗುರುವೆ.

೩೪ ಅಂದಣವ ನೇರಿದ ಸೊಣಗನಂತೆ
ಕಂಡಡೆ ಬಿಡದು ತನ್ನ ಮುನ್ನಿನ ಸ್ವಭಾವವನು
ಸುಡು ಸುಡು ಮನವಿದು ವಿಷಯಕ್ಕೆ ಹರಿವುದು

**ವ್ಯಥ ನಿಮ್ಮ ನೆನೆಯಲೀಯದು**
**ಎನ್ನೊಡೆಯ ಕೂಡಲ ಸಂಗಮದೇವಾ**
**ನಿಮ್ಮ ಚರಣವ ನೆನೆವಂತೆ ಕರುಣಿಸು**
**ಸೆರಗೊಡ್ಡಿ ಬೇಡುವೆ ನಿಮ್ಮ ಧರ್ಮ.**

ಸಿಂಹಾಸನದ ಮೇಲೆ ಕುಳಿತ ನಾಯಿ ಎಲಬು ಕಂಡೊಡನೆ ತನ್ನ ಹುಟ್ಟು ಸ್ವಭಾವಕ್ಕನುಗುಣವಾಗಿ ಅದನ್ನು ಕಚ್ಚಿ ತಿನ್ನುವಹಾಗೆ, ಕರ್ಪೂರ ರೂಪಿಯಾದ ಲಿಂಗಮೂರ್ತಿಯನ್ನು ಭಜಿಸಲು ಬಿಡದೆ, ವಿಷಯ ಸುಖಕ್ಕೆ ಸ್ವಾಧೀನವಾದ ಈ ಮನಸ್ಸನ್ನು ಸುಟ್ಟುಹಾಕು ! ಪರಮಗುರು ಕೂಡಲ ಸಂಗಮದೇವಾ ನಿನಗೆ ಅಂಗಲಾಚಿ ಬೇಡಿಕೊಳ್ಳುವೆ ನಿನ್ನ ನಾಮಸ್ಮರಣೆ ಮಾಡುವಂತೆ ಕೃಪೆಮಾಡು ನನಗೆ — ನಿಮ್ಮ ಧರ್ಮ.

೩೫ **ತುಪ್ಪದ ಸವಿಗೆ ಅಲಗನೆಕ್ಕುವ**
**ಸೊಣಗನಂತಾಯಿತೆನ್ನ ಬಾಳು**
**ಸಂಸಾರ ಸಂಗವ ಬಿಡದು ನೋಡೆನ್ನ ಮನವು**
**ಈ ನಾಯಿಯ ತನವ ಮಾಣಿಸು ಕೂಡಲ ಸಂಗಮ ದೇವಾ**
**ನಿಮ್ಮ ಧರ್ಮ.**

ತುಪ್ಪದ ಸವಿಗೆ ನಾಯಿ ಹರಿತವಾದ ಚೂರಿಯನ್ನು ನೆಕ್ಕುವಹಾಗೆ, ನನ್ನ ಜೀವ ಮನವೆಂಬ ಶ್ವಾನನ ದುರಾಶೆಯಿಂದಾಗಿ ಸಂಸಾರ ಸಂಗವ ಬಿಡದಾಗಿದೆ. ಈ ನಾಯಿ ಸ್ವಭಾವವನ್ನು ಬಿಡಿಸುವದು ಕೂಡಲ ಸಂಗಮ ದೇವಾ ನಿಮ್ಮ ಕರ್ತವ್ಯ.

೩೬ **ಒಂದು ಮೊಲಕ್ಕೆ ನಾಯಿಸೊಂಬತ್ತು ಬಿಟ್ಟಂತೆ**
**ಎನ್ನ ಬಿಡು ತನ್ನ ಬಿಡೆಂಬುದು ಕಾಯ ವಿಕಾರ**
**ಎನ್ನ ಬಿಡು ತನ್ನ ಬಿಡೆಂಬುದು ಮನೋವಿಕಾರ**
**ಕರಣೇಂದ್ರಿಯಗಳೆಂಬ ಸೊಣಗ ಮುಟ್ಟದ ಮುನ್ನ**
**ಎನ್ನಮನವ ನಿಮ್ಮನೆಯಿಸುವುದೆ ಕೂಡಲ ಸಂಗಮ ದೇವಾ?**

ಒಂದು ಮೊಲದ ಬೇಟೆಗೆ ಒಂಬತ್ತು ನಾಯಿಗಳನ್ನು ಬಿಡುವಹಾಗೆ, ಅಷ್ಟ ಕಾಯ ಕರ್ಮ ವಿಕಾರಗಳು— ಮತ್ತು ದುರ್ವ್ಯಸನವಾದ ಮನೋ ವಿಕಾರಗಳು ಆತ್ಮನನ್ನು ಬಿಡು ಎಂದು ಕೇಳಿದರೆ — ಬಿಡೆನೆಂದುತ್ತರಿಸುತ್ತವೆ. ಕರಣೇಂದ್ರಿಯಗಳೆಂಬ ನಾಯಿ ಆತ್ಮನನ್ನು ಮುಟ್ಟುವ ಮುನ್ನವೆ ನನ್ನ ಮನಸ್ಸು ನಿಮ್ಮಲ್ಲಿ ಅನುಬಂಧವಾಗುವಂತೆ ಮಾಡು ಕೂಡಲ ಸಂಗಮ ದೇವಾ!

**೩೭ ದಂದುಗ ಬಿಡದು ಮನದ ಸಂದೇಹ ಹಿಂಗದಾಗಿ:**
**ಮುಂದೆ ಲಿಂಗವ ಕಂಡಿಹೆನೆಂಬುದು ಹುಸಿ, ನೋಡಾ!**
**(?) ಬೆಂದ ಕರಣಾದಿಗಳು ಒಂದೆ ಪಥವನರಿಯವು:**
**ಎಂತು ಶಿವಪಥವೆನಗೆ ಸಾಧ್ಯವಪ್ಪುದಯ್ಯಾ ?**
**ಎನ್ನ ತಂದೆ, ಕೂಡಲ ಸಂಗಮದೇವಾ,**
**ನಿಮ್ಮ ಶರಣರ ಬಳಿವಿಡಿದರೆ**
**ಎನ್ನ ದಂದುಗ ಹಿಂಗುವುದು.**

ಮನಸ್ಸಿನ ಆಶೆ — ಆಕಾಂಕ್ಷೆಗಳು ತೀರದಾಗಿ ಸಂಸಾರ ಲಂಪಟ ಬಿಡದು. ಆದ ಕಾರಣ ನನಗೆ ಲಿಂಗ ಸಾಕ್ಷಾತ್ಕಾರವಾಗುವ ಮಾತು ಸುಳ್ಳು- ಸಂಸಾರದಲ್ಲಿ ಬೆಂದ ತನುಮನಾದಿಗಳು ಒಂದೇ ದಾರಿಯನ್ನರಿಯದಿರುವಾಗ ನನಗೆ ಶಿವ ಪಥದ ಸುಳಿಸಿಗುವದು ಹೇಗೆ ? ನನ್ನ ತಂದೆಯಾದ ಕೂಡಲ ಸಂಗಮ ದೇವನೆ ನಿಮ್ಮ ಶರಣರ ಸತ್ಸಂಗದಲ್ಲಿದ್ದರೆ ಮಾತ್ರ ನನ್ನ ಸಂಸಾರದ ಗೋಳು ತಪ್ಪುವದು.

**೩೮ ತನ್ನ ವಿಚಾರಿಸಲೊಲ್ಲದು:**
**ಇದಿರ ವಿಚಾರಿಸಹೋಹುದೀ ಮನವು!**
**ಏನುಮಾಡುವೆ ನೀಮನವನು ?**
**ಎಂತು ಮಾಡುವೆನೀ ಮನವನು ?**
**ಕೂಡಲ ಸಂಗಮ ದೇವನ ಶರಣರ**
**ನೆಚ್ಚದ, ಮೆಚ್ಚದ ಈ ಬೆಂದ ಮನವನು ಕಿಚ್ಚಿನೊಳಗಿರಿಸು.**

ಭವಪಾಶ ಹರಿಸುವ ಗುರುಲಿಂಗನ ವಿಚಾರ ಯೋಚಿಸುವದನ್ನು ಬಿಟ್ಟು-ತದ್ವಿರುದ್ಧವಾಗಿ ಹೇಯವಾದ ವಿಷಯಗಳನ್ನು ವಿಚಾರಿಸುತ್ತದೆ ಈ ಮನವು. ಈ ಮನಸ್ಸಿಗೆ ಯಾವ ಶಿಕ್ಷೆ? ಎಂತು ಬಾಗಿಸಬೇಕು ! ಕೂಡಲ ಸಂಗಮದೇವಾ ನಿನ್ನ ಶರಣರನ್ನು ನಂಬದ ಮತ್ತು ಪ್ರೀತಿಸದ ಈ ಮನಸ್ಸನ್ನು ಬೆಂಕಿಯಲ್ಲಿರಿಸು. ಇದೇ ತಕ್ಕ ಶಿಕ್ಷೆ.

**೩೯ ತನ್ನಿಚ್ಛೆಯ ನುಡಿದರೆ ನಚ್ಚುವದೀಮನವು**
**ಇದಿರಿಚ್ಛೆಯ ನುಡಿದರೆ ಮೆಚ್ಚದೀ ಮನವು**
**ಕೂಡಲ ಸಂಗನ ಶರಣರ ನೆಚ್ಚದ ಮೆಚ್ಚದ**
**ಬೆಂದ ಮನವ ಕಿಚ್ಚಿನೊಳಗಿಕ್ಕು.**

ತನ್ನ ಆಶೆಗನುಗುಣವಾಗಿ-ಅನುಕೂಲವಾಗಿ ಮಾತನಾಡಿದರೆ ಈ ಮನಸ್ಸಿಗೆ ನಂಬಿಗೆ ಯಾಗುತ್ತದೆ. ಆದರ ವಿರುದ್ಧ--ಅದಕ್ಕೆ ರುಚಿಸದ ವಿಷಯ ಬೋಧಿಸಿದರೆ ಅಪ್ರೀತಿಯನ್ನು ತೋರಿಸುತ್ತದೆ. ಇಂಥ ಹಾಗು ಕೂಡಲ ಸಂಗನ ಶರಣರನ್ನು ನಂಬದ - ಭಕ್ತಿಯಿಂದ ಕಾಣದ ಈ ಮನವನ್ನು ಉರಿಯುವ ಜ್ವಾಲೆಯಲ್ಲಿಡು.

**೪೦ ಸುಡಲೀ ಮನವೆನ್ನ ನುಡುಹನ ಮಾಡಿತ್ತು**
**ನಡೆವಲ್ಲಿ ನುಡಿವಲ್ಲಿ ಅಧಿಕನೆಂದೆನಿಸಿತ್ತು**
**ಬಿಡಗಿನ ಕೀಲಕಳೆದು ಕೆಡೆದ ಬಳಿಕ**
**ಕಡುಗೋಪಿ ಮಡದಿತಾ ಮುಟ್ಟಲಮ್ಮಳು**
**ಒಡಲ ನುರಿ ಕೊಂಬದು ಒಡವೆಯನರಸುಕೊಂಬ**
**ಕಡುಗೂರ್ಪ ಮಡದಿಯು ಮತ್ತೊಬ್ಬ ಚನ್ನಿಗಕೊಂಬ**
**ಮುನ್ನ ಮಾಡಿದ ಪಾಪ ಬೆನ್ನಬಿಡದನ್ನಕ್ಕ**
**ಇನ್ನು ಬಯಸಿದೊಡಳವೆ ಕೂಡಲ ಸಂಗಮ ದೇವಾ ?**

ಈ ಮನಸ್ಸು ಕೇವಲ ನನ್ನನ್ನು (ದೇಹ) ತನ್ನ ಪರಿಚಾರಕನನ್ನಾಗಿರಿಸಿಕೊಂಡು, ಹೋದಲ್ಲಿ-ಬಂದಲ್ಲಿ, ಮಾತನಾಡುವಲ್ಲಿ ತಾನೇ ಶ್ರೇಷ್ಠನೆಂದು

ಹೇಳುತ್ತಿತ್ತು. ಆದರೆ ಈ ಬೆಡಗಿನ ದೇಹ ಜೀವ ರಹಿತವಾಗಿ ಬಿದ್ದ ಮೇಲೆ ಆ ಕೂಪಿಷ್ಟ ಮಡದಿ ಈ ನಿರ್ಜೀವ ದೇಹವನ್ನು ಮುಟ್ಟಲು ಅಂಜುತ್ತಾಳೆ. ಹೊಟ್ಟೆಯ ತಾಪವನ್ನು ಕೊಂಡುಕೊಳ್ಳುವದಿಲ್ಲ; ಆಭರಣಗಳನ್ನು ಅರಸನು ತೆಗೆದುಕೊಳ್ಳುತ್ತಾನೆ; ಆದರೆ ಕೈಹಿಡಿದ ಹೆಂಡತಿಯನ್ನು ಮತೊಬ್ಬ ರಸಿಕ ಕರೆದುಕೊಂಡು ಹೋಗುತ್ತಾನೆ. ನಾನು ಸತ್ತ ಮೇಲೆ ಆಗಬೇಕಾದ ಪರಿಣಾಮಗಳಿವು; ಪೂರ್ವಜನ್ಮದ ಕರ್ಮಫಲಭೋಗ ಬಿಡದೇ ಇರುವಲ್ಲಿ ಇನ್ನೇನು ಬಯಸಿದರೆ ಏನಾಗುವದು. ಕೂಡಲ ಸಂಗಮ ದೇವಾ.

**೪೧ ವಚನದ ಹುಸಿ ನುಸಳಲೆಂತು ಮಾಣ್ಬುದೋ?**
**ಎನ್ನ ಮನದ ಮರ್ಕಟತನವೆಂತು ಮಾಣ್ಬುದೋ?**
**ಎನ್ನ ಹೃದಯಕಲ್ಮಿಷವೆಂತು ಮಾಣ್ಬುದೋ ?**
**ಎನ್ನ ಕಾಯವಿಕಾರಕ್ಕೆ ತರಿಸಲು ಹೋದೆನು**
**ಎನಗಿದು ವಿಧಿಯೋ ಕೂಡಲ ಸಂಗಮದೇವಾ.**

ಸುಳ್ಳು ಮಾತುಗಳು ಎಂದಿಗೆ ನಷ್ಟವಾಗಿ ನನ್ನ ಮನದ ಮಂಗಾಟತನ, ಹೃದಯ ಕಲ್ಮಿಷಗಳು (ಯಾವಾಗ) ನಾಶವಾಗುತ್ತವೆ ? ಈ ದೇಹವ ಮೇಲಿನ ಮೋಹವನ್ನು ಕತ್ತರಿಸಲು ಹೋದೆ ಕೂಡಲ ಸಂಗಮದೇವ ನನಗಿದು ವಿಧಿಯೆ?

**೪೨ ಅಂಗದ ನೋಟವು ಸಿಂಗದ ಗಾತ್ರವು**
**ಹಿಂಗದು ಮನದಲ್ಲಿ ನಾನಾವಿಕಾರವು**
**ಬಂದೆನೆಂದರಿಯಲಿಕ್ಕಿಲ್ಲವಾಗಿ ಸಂದೇಹ ಬಿಡದು**
**ಮುಂದು ಗಾಣದು ಲೋಕ ಬೆಂದ ಮಾಯಕ್ಕಂಜಿ**
**ನಾ ನಿಮ್ಮ ಮೊರೆಯ ಹೊಕ್ಕೆನು ಕೂಡಲ ಸಂಗಮದೇವಾ.**

ಸುಂದರ ಯುವತಿಯನ್ನು ಕಂಡು ಮನದ ನಾನಾ ವಿಕಾರವು ಹಿಂಗದು. ನಾನು ಹುಟ್ಟಿ ಬಂದದ್ದೇಕೆಂಬ ತಿಳಿವಿನ ಜ್ಞಾನವಿಲ್ಲದ್ದಕ್ಕಾಗಿ

ಸಂದೇಹ ಬಿಡದು. ಮಾಯೆಗಂಜಿದ ಕಾರಣ ಮೋಕ್ಷದ ದಾರಿ ಕಾಣದಾಗಿದೆ ಕೂಡಲ ಸಂಗಮದೇವಾ ನಾ ನಿನ್ನ ಮೊರೆಹೊಕ್ಕಿರುವೆ ಕಾಪಾಡು.

**೪೩ ವಿಕಳನಾದೆನು ಪಂಚೇಂದ್ರಿಯ ಧಾತುವಿನಿಂದ**
**ಮತಿಗೆಟ್ಟೆನು ಮನದ ವಿಕಾರದಿಂದ**
**ಧೃತಿಗೆಟ್ಟೆನು ಕಾಯವಿಕಾರದಿಂದ**
**ಶರಣು ಹೊಕ್ಕೆನು ಕೂಡಲ ಸಂಗಮದೇವಯ್ಯಾ.**

ಪಂಚೇಂದ್ರಿಯಗಳ ರಾಗ ವಿಲಾಸದಿಂದ ಕಾಂತಿಹೀನನಾದೆ; ಕುಹಕ ವಿಚಾರಗಳಿಂದ ಮತಿಗೆಟ್ಟೆ, ಕಾಯದುಷ್ಕೃತಿಗಳಿಂದ ದೃಢತೆಯನ್ನು ಕಳೆದುಕೊಂಡೆ, ನಾ ನಿನಗೆ ಶರಣುಬಂದಿರುವೆನು ರಕ್ಷಿಸು ಕೂಡಲ ಸಂಗಯ್ಯ.

**೪೪ ಮುನಿದೆಯಾದರೆ ಒಮ್ಮೆ ಜರೆದರೆ ಸಾಲದೆ**
**ಅಕಟಕಟಾ ಮದನಂಗೆ ಮಾರುಗೊಡುವರೆ**
**ಹಗೆಗೆ ಮಾರುಗೊಟ್ಟು ನಿಮ್ಮವರ ನೊಪ್ಪಿಸುವರೆ ಕೂಡಲ ಸಂಗಮದೇವಾ.**

ನಾನು ಸಂಸಾರ ಸಂಗರದಲ್ಲಿ ನಿನ್ನನ್ನು ಉಪೇಕ್ಷಿಸಿದ್ದಲ್ಲಿ ಒಮ್ಮೆ ನನಗೆ ಎಚ್ಚರಿಕೆಗೆಂದು ಕಡುತರವಾಗಿ ಶಿಕ್ಷಿಸಿದರೆ ಸಾಲದೆ; ಅಯ್ಯೋ ವೈರಾಗ್ಯದವೈರಿಯಾದ ಕಾಮದೇವನಿಗೆ ನನ್ನ ಬಲಿಗೊಟ್ಟು ನೀನು ನಿನ್ನವರನ್ನು ರಮಿಸುವೆಯಾ ಕೂಡಲ ಸಂಗಯ್ಯಾ.

**೪೫ ನಾನೊಬ್ಬನು ಸುಡುವರೈವರು**
**ಮೇಲೆ ಕಿಚ್ಚು ಘನ ನಿಲ್ಲಲು ಬಾರದು**
**ಕಾಡ ಬಸವನ ಹುಲಿ ಕೊಂಡೊಯ್ವರೆ**
**ಆರಯ್ಯಲಾಗದೆ ಕೂಡಲ ಸಂಗಮದೇವಾ.**

ನನ್ನ ಸುತ್ತಲೂ ಕಾಮನ ಪಂಚ ಬಾಣಗಳು ಮುತ್ತಿ ಸುಡುತ್ತಲಿವೆ. ಇಷ್ಟಲ್ಲದೆ ಈ ದೇಹ ಯೌವನ ಘಂತನಾಗಿ ಕೊಬ್ಬಿ, ನಿಂತಲ್ಲಿ ನಿಲ್ಲಲಾರದಾ

ಗಿದೆ. ಅಡವಿಯ ಗೂಳಿಯನ್ನು ಹುಲಿ ಮುರಿದುಕೊಂಡು ಹೋಗುವದನ್ನು ತಪ್ಪಿಸಿ ಜೋಪಾನ ಮಾಡಲಾಗದೆ ಕೂಡಲ ಸಂಗಮದೇವಾ?

**೪೬ ಆಶೆಯಾಮಿಷ, ತಾಮಸ, ಹುಸಿ, ವಿಷಯ,**
**ಕುಟಿಲ, ಕ್ರೋಧ, ಕ್ಷುದ್ರ, ಮಿಥ್ಯೆ**
**ಇವನೆನ್ನ ನಾಲಿಗೆಯ ಮೇಲಿಂದ ತೆಗೆದುಕಳೆಯಯ್ಯಾ**
**ಅದೇಕೆಂದರೆ ನಿಮ್ಮತ್ತ ಲೆನ್ನಬರಲೀಯವು**
**ಇದು ಕಾರಣ ಇವೆಲ್ಲವ ಕಳೆದು**
**ಎನ್ನ ನಿಮ್ಮಯ ಭಕ್ತನಮಾಡು ಕೂಡಲ ಸಂಗಮದೇವಾ.**

ಆಶೆ, ದುರಾಶೆ, ಸೊಕ್ಕು, ಸುಳ್ಳು, ವಿಷಯ, ಕುತಂತ್ರ, ಸಿಟ್ಟು, ಕೀಳು, ಮೊದಲಾದ ನುಡಿಗಳನ್ನು ನನ್ನ ನಾಲಿಗೆಯಿಂದ ದೂರ ಮಾಡಿ ನನ್ನನ್ನು ನಿನ್ನ ಭಕ್ತನನ್ನಾಗಿ ಮಾಡು ಕೂಡಲ ಸಂಗಮ ದೇವಾ. ಏಕೆಂದರೆ ಇವೆಲ್ಲವುಗಳು ನಿನ್ನ ಸಾನಿಧ್ಯ—ಸಖ್ಯಕ್ಕೆ ಬರಲು ಬಿಡಲೊಲ್ಲವು.

**೪೭ ಎಂತೋ ಶಿವ ಭಕ್ತಿಯ ನಾನು ನಮಿಸುವೆನಯ್ಯಾ ?**
**ಎಂತೋ ಶಿವಾಚಾರವೆನಗೆ ವೇದ್ಯವಪ್ಪುದಯ್ಯಾ ?**
**ಕಾಮ ಕ್ರೋಧ ಲೋಭ ಮೋಹದಿಂದ ಕಟ್ಟುವಡೆದೆನು**
**ಹಸಿವು ತೃಷೆ ವ್ಯಸನದಿಂದ ಕುದಿಯುತ್ತಿದ್ದೇನೆ**
**ಪಂಚೇಂದ್ರಿಯ ಸಪ್ತಧಾತು ಹರಿಹಂಚುಮಾಡಿ ಕಾಡು**
**ತ್ತಿಹುದಯ್ಯಾ**
**ಅಯ್ಯಾ ಅಯ್ಯಾ ಎನ್ನ ಹುಯ್ಯಲ ಕೇಳಯ್ಯಾ**
**ಕೂಡಲ ಸಂಗಮದೇವಾ ನಾನೇವೇನೆವೆನಯ್ಯಾ**

ಪಂಚಾಗ್ನಿಯ ಏಳು ವರ್ಣಗಳು ನನ್ನ ಹರಣವನ್ನು ಹರಿದು ಚೂರು ಚೂರುಮಾಡಿ ಕಷ್ಟಪಡಿಸುತ್ತಲಿವೆ: ಆದ್ದರಿಂದ ನನಗೆ ಶಿವಭಕ್ತಿಯ ಜ್ಞಾನ, ಶಿವಾಚಾರಗಳ ಜ್ಞಾನ ಹೇಗೆ ತಿಳಿಯಲು ಸಾಧ್ಯ? ನಾನು ಕಾಮ ಕ್ರೋಧ ಲೋಭ ಮೋಹಗಳನ್ನು ತೊರೆದು, ಸದಾ ನಿನ್ನ ಚಿಂತನ ನಿನ್ನನರಿಯುವ

ಜ್ಞಾನದ ಹಸಿವೆ ತೃಷೆ ಹೆಚ್ಚಿ ತಳಮಳಗೊಳ್ಳುತ್ತಿರುವೆ. ಹೀಗೆ ಎರಡು ಭಾವ ಮನೋವೃತ್ತಿಯಲ್ಲಿ ಸಿಕ್ಕ ನನ್ನ ಗೋಳು ಎಷ್ಟೆಂದು ಹೇಳಲಿ ಕೂಡಲ ಸಂಗಮ ದೇವಾ!

೪೮ **ಕಾಯ ವಿಕಾರ ಕಾಡಿಹುದಯ್ಯಾ**
**ಮನೋವಿಕಾರ ಕಾಡಿಹುದಯ್ಯಾ**
**ಇಂದ್ರಿಯ ವಿಕಾರ ಸುಳಿವುದಯ್ಯಾ**
**ಸುಳಿವಿನೊಳಗೆ ಸುಳಿಯುತ್ತಲಿದ್ದೇನೆ ಸಿಲುಕಿಸದಿರಯ್ಯಾ**
**ಅನ್ಯ ಚಿತ್ತವಿರಸದಿರಯ್ಯಾ ನಿಮ್ಮ ಚಿತ್ತವಿರಸಯ್ಯಾ**
**ಅನುಪಮ ಸುಖ ಸಾರಯ ಶರಣರಲ್ಲಿ**
**ಕೂಡಲ ಸಂಗಮ ದೇವಯ್ಯಾ**
**ಇದನೇ ಬೇಡುವೆನಯ್ಯಾ.**

ತನುವೆಂಬ ತಲ್ಪಕ್ಕೆ ಇಂದ್ರಿಯಗಳ ಇಚ್ಛೆ ಕೂಡಿ ಮನದ ವಿಕಾರಗಳು ರೂಹುಗೊಂಡು—ಸಂಸಾರ ಮಡುವಿನಲ್ಲಿ ನಾನು ಸುತ್ತುಹಾಕುತ್ತಲಿದ್ದೇನೆ. ಕೆಟ್ಟಬುದ್ಧಿಯ ಕೊಟ್ಟು ಸುಳುವಿನ ಸೆಳವಿಗೆ ನೂಕದಿರಯ್ಯಾ. ನಿನ್ನನ್ನೇ ಭಜಿಸುವ ಸುಬುದ್ಧಿ ಕೊಟ್ಟು ನಿನಗೆ ಅನುರೂಪರಾದ ಶಿವಶರಣರ ಸ್ವಾರಸ್ಯ ಸುಖ ಸಹವಾಸವನ್ನೇ ಬೇಡುವೆ ಕೂಡಲ ಸಂಗಮ ದೇವಾ.

೪೯ **ಬಂದಯೋನಿಯನರಿದು ಸಲಹೆನ್ನ ತಂದೆ**
**ಬೆಂದ ಮನವೆನ್ನ ಗತಿಗೆಡಿಸಿ ಕಾಡಿತ್ತು**
**ಬೆಂದ ಮನವೆನ್ನ ಮತಿ ಗೆಡಿಸಿ ಕಾಡಿತ್ತು**
**ಎನ್ನ ತಂದೆ ಕೂಡಲ ಸಂಗಮದೇವಾ**
**ಇವ ಮಾಣಿಸು ನಿಮ್ಮ ಧರ್ಮ.**

ಮನೋನ್ಮಾದ, ಆಮಿಷ, ಆವೇಗಗಳು ಮಿತಿಮೀರಿ ನನ್ನ ಬುದ್ಧಿ ಕೆಡಿಸಿವೆ. ನನ್ನ ದಾರಿ ತಪ್ಪಿಸಿವೆ; ಇವುಗಳನ್ನು ಕಳೆದು ನಾನು ಹುಟ್ಟಿ ಬಂದದ್ದನ್ನು ತಿಳಿಸಿಕೊಟ್ಟು ನನ್ನನ್ನು ಸಲಹುವದು ನಿಮ್ಮ ಧರ್ಮ ಕೂಡಲ ಸಂಗಮದೇವಾ.

೫೦ ಬೆಳೆ ಭೂಮಿಯೊಳೊಂದು ಪ್ರಳಯದ ಕಸಹುಟ್ಟಿ
ತಿಳಿಯಲೀಯದು, ಎಚ್ಚರಲೀಯದು
ಎನ್ನವಗುಣವೆಂಬ ಕಸವ ಕಿತ್ತು ಸಲುಹಯ್ಯಾ
ಲಿಂಗ ತಂದೆ ಸುಳಿದೆಗೆದು ಬೆಳೆವೆನು ಕೂಡಲಸಂಗಮದೇವಾ.

ಫಲವತ್ತಾದ ಭೂಮಿಯಲ್ಲಿ ಮಹಾಕಸ ಕಳಿಕೆ ಬೆಳೆದರೆ ಏನೂ ಉಪಯುಕ್ತವೆನಿಸಲಾರದು; ಹಾಗೆ ನಿನ್ನ ಕಾಣಬೇಕೆಂಬ ಜ್ಞಾನ ಬೆಳಕನ್ನು ತೋರದೆ, ನನ್ನನ್ನು ಎಚ್ಚರಿಸದೇ ಇದ್ದ ಈ ಅವಗುಣವೆಂಬ ಕಸಕಿತ್ತು ಸಲುಹಿ ಬೆಳಕು ನೀಡಿದರೆ ಮತ್ತೆ ಚಿಗುರಿ ಬೆಳೆದು ಪವಿತ್ರ ಜೀವನ ಸಾಗಿಸುವಂತಾಗುತ್ತದೆ. ಕೂಡಲ ಸಂಗಮ ದೇವಾ.

೫೧ ವಿಷಯವೆಂಬ ಹಸುರನೆನ್ನ
ಮುಂದೆ ತಂದು ಪಸರಿಸಿದೆ ಅಯ್ಯಾ
ಪಶುವೇನ ಬಲ್ಲುದು? ಹಸುರೆಂದೆಳಸುವದು
ವಿಷಯರಹಿತನ ಮಾಡಿ ಭಕ್ತಿರಸವ ತಣೀಯ ಮೇಯಿಸಿ
ಸುಬುದ್ಧಿ ಎಂಬ ಉದಕವನೆರೆದು
ನೋಡಿ ಸಲುಹಯ್ಯಾ ಕೂಡಲಸಂಗಮದೇವಾ.

ಪಶುವಿನ ಮುಂದೆ ಎಳೆಹಸಿರು ಹುಲ್ಲನ್ನು ಹಾಕಿದರೆ ತಿನ್ನುವಾಸೆಗೆ ಅದು ಓಡಿ ಬರುವಂತೆ ನನ್ನ ಮುಂದೆ ಸಂಸಾರ ಪ್ರಕೃತ ಸುಖ ವಿಷಯಗಳನ್ನು ಇಟ್ಟಿರುವಿ; ಇವುಗಳಿಂದ ನನ್ನನ್ನು ದೂರವಿಟ್ಟು ನಿನ್ನ ಭಕ್ತಿರಸವನ್ನು ಮನದಣೀಯೆ ಕುಡಿಸು. ಸುಜ್ಞಾನದ ಮಜ್ಜನ ಮಾಡಿಸಿ, ಕೃಪೆದೋರಿ ನಿನ್ನ ಕರುಣೆಯ ಕಂಪನನ್ನು ಜೋಪಾನ ಮಾಡು ಕೂಡಲ ಸಂಗಮದೇವಾ.

೫೨ ಕೆಸರಲ್ಲಿ ಬಿದ್ದ ಪಶುವಿನಂತೆ ಆನು
ದೆಸೆ ದೆಸೆಗೆ ಬಾಯಿಬಿಡುತ್ತಿದ್ದೇನಯ್ಯಾ
ಅಯ್ಯಾ ಆರಯ್ವರಿಲ್ಲ ಅಕಟಕಟಾ

**ಪಶುವೆಂದೆನ್ನ ಕೂಡಲಸಂಗಮದೇವಾ**
**ಕೊಂಬಹಿಡಿದೆತ್ತುವನ್ನಕ್ಕ.**

ಕೆಸರಿನಲ್ಲಿ ಸಿಗಬಿದ್ದ ಪ್ರಾಣಿ ಉಳಿಸಿರೆಂದು ಕೂಗುವಂದದಿ, ಸಂಸಾರ ಕೂಪದಲ್ಲಿ ಕುಸಿದು ದಿಕ್ಕೆಟ್ಟು ಅರಚಿಕೊಳ್ಳುತ್ತಿರುವೆ. ಉಳಿಸುವವರಾರೂ ಇಲ್ಲ. ಪಶುವಿನ ಕೊಂಬು ಹಿಡಿದು ಎತ್ತಿಕೊಳ್ಳುವಂತೆ ನನ್ನನ್ನು ಸಂಸಾರ ಕೂಪದಿಂದ ಎತ್ತಿ ಕಾಪಾಡು ಕಾಪಾಡು ಕೂಡಲಸಂಗಮದೇವಾ.

೫೩ **ಬಡ ಪಶು ಪಂಕದಲ್ಲಿ ಬಿದ್ದರೆ ಕಾಲು ಬಡಿಯುವದಲ್ಲದೆ**
**ಬೇರೆ ಗತಿಯುಂಟೆ?**
**ಶಿವ ಶಿವಾ ಹೋದೆಹೆ ಹೋದಹೆನಯ್ಯಾ**
**ನಿಮ್ಮ ಮನದತ್ತಲೆನ್ನ ತೆಗೆಯಯ್ಯಾ**
**ಪಶುವಾನು ಪಶುಪತಿ ನೀನು**
**ತುಡುಗುಣಿಯೆಂದು ಎನ್ನ ಹಿಡಿದು ಬಡಿಯದ ಮುನ್ನ**
**ಒಡೆಯ ನಿಮ್ಮ ಬಯ್ಯದಂತೆ ಮಾಡು ಕೂಡಲ ಸಂಗಮ ದೇವಾ.**

ಸಂಸಾರದ ಕೊಳಚಿ ಗುಂಡಿಯಲ್ಲಿ ಬಿದ್ದು ಸತ್ತೆ ಸತ್ತೆ. ಬಡಪ್ರಾಣಿ ಕೆಸರಿನಲ್ಲಿ ಬಿದ್ದರೆ ಒದ್ದಾಡುತ್ತದಲ್ಲದೆ ಬೇರೆ ದಾರಿಇಲ್ಲ. ಆದ ಕಾರಣ ನಿನ್ನ ಸಾನ್ನಿಧ್ಯದಲ್ಲಿ ನನ್ನನಿರಿಸು ನಾನು ಪಶುವಾದರೆ ನೀನು ಸಾಕಿ ಸಲಹುವ ಯಜಮಾನ; ನನ್ನ ಅವಿವೇಕ ವರ್ತನೆಗೆ ಬೇಸತ್ತು ಶಿವ ಶರಣರು ಕಳ್ಳ ಆಕಳೆಂದು ಹಿಡಿದು ಹೊಡೆಯದ ಮುನ್ನ ನಿನ್ನನ್ನು ಅವರು ಬಯ್ಯದಂತೆ ಮಾಡು ಕೂಡಲಸಂಗಯ್ಯಾ.

೫೪ **ಅಡವಿಯೊಳಗೆ ಹೊಲಬುಗೆಟ್ಟ ಪಶುವಿನಂತೆ**
**ಅಂಬೆ ಅಂಬೆ ಎಂದು ಕರೆಯುತಲಿದ್ದೇನೆ**
**ಅಂಬೆ ಅಂಬೆ ಎಂದು ಒರಲುತ್ತಲಿದ್ದೇನೆ**
**ಕೂಡಲ ಸಂಗಮದೇವಾ ಬಾಳೆಂಬನಕ್ಕ.**

ನಿಬಿಡಾರಣ್ಯದಲ್ಲಿ ದಾರಿ ತಪ್ಪಿದ ಪಶು 'ಅಂಬಾ' 'ಅಂಬಾ' ಎಂದು ಅಂಜಿ ಒದರುವಂತೆ ನಾನೂ ಪ್ರಪಂಚದಲ್ಲಿ ಪರಿಪೀಡಿತನಾಗಿ ಬುದ್ಧಿ ಮಂಕಾಗಿದೆ 'ಕರುಣಿಸು' 'ಕರುಣಿಸು' ಎಂದು ಹಂಬಲಿಸುತ್ತಿರುವೆ ಕೂಡಲ ಸಂಗಮದೇವಾ ನಿನ್ನ ಕಾರುಣ್ಯವ ಕರುಣಿಸು.

**೫೫ ಸಮುದ್ರದೊಳಗಣ ಸಿಂಪಿನಂತೆ ಬಾಯಿಬಿಡುತ್ತಿದ್ದೇನಯ್ಯಾ**
**ನೀವಲ್ಲದೆ ಮತ್ತಾರು ಎನ್ನ ನರಿವರಿಲ್ಲ ನೋಡಯ್ಯಾ**
**ಕೂಡಲ ಸಂಗಮದೇವಾ ನಿವಲ್ಲದೊಳಕೊಂಬರಿಲ್ಲಯ್ಯಾ.**

ಸಮುದ್ರದ ಅಲೆಗೆ ಸಿಂಪು ಬಾಯಿ ತೆರೆಯುವಂತೆ ಬಾಳ ಬೇಗೆಗೆ ಬೆಂದು ಬಾಯಿ ಬಿಡುತ್ತಿರುವೆ; ನನ್ನ ಕಷ್ಟವ ತಿಳಿಯುವವರಾರೂ ಇಲ್ಲ. ಕೂಡಲ ಸಂಗಮ ದೇವಾ ನೀವೆ ನನ್ನನ್ನು ಕೈಹಿಡಿದು ಉದ್ಧರಿಸು.

**೫೬ ಅಯ್ಯಾ ಅಯ್ಯಾ ಎಂದು ಕರೆವುತ್ತಲಿದ್ದೇನೆ**
**ಅಯ್ಯಾ ಅಯ್ಯಾ ಎಂದು ಒರಲುತ್ತಲಿದ್ದೇನೆ**
**ಓ ಎನ್ನಲಾಗದೆ ಅಯ್ಯಾ**
**ಆವಾಗಲೂ ನಿಮ್ಮ ಕರೆವುತ್ತಲಿದ್ದೇನೆ**
**ಮೌನವೆ ಕೂಡಲ ಸಂಗಮದೇವಾ.**

ಹಗಲಿರುಳೂ 'ಶಿವ' 'ಶಿವಾ' ಎಂದು ನಿನ್ನ ಹೆಸರಿಡಿದು ನಿಡಿದಾಗಿ ಪಾಡುತ್ತಲಿದ್ದೇನೆ ಓ ಎನ್ನಲಾಗದೆ ? ಮೌನವೇಕೆ ಕೂಡಲ ಸಂಗಮ ದೇವಾ.

**೫೭ ನೀ ಹುಟ್ಟಿಸಿದಲ್ಲಿ ಹುಟ್ಟದೆ ಎನ್ನವಶವೆ? ಅಯ್ಯಾ**
**ನೀ ಇರಿಸಿದಲ್ಲಿ ಇರದೆ ಎನ್ನವಶವೆ? ಅಯ್ಯಾ**
**ನೀ ಕೊಂದಲ್ಲಿ ಸಾಯದೆ ಎನ್ನವಶವೆ? ಅಯ್ಯಾ**
**ಅಕಟಕಟಾ ಎನ್ನವ ನೆನ್ನವ ಅನ್ನಿಸಯ್ಯಾ ಕೂಡಲ ಸಂಗಮ ದೇವಯ್ಯಾ.**

ನೀ ಹುಟ್ಟಿಸಿದಲ್ಲಿ, ಇಟ್ಟಲ್ಲಿ, ಮರಣ ತರಿಸಿದಲ್ಲಿ, ಹುಟ್ಟು, ಇರು

ವಿಕೆ, ಸಾವುಗಳು ಸಂಭವಿಸುತ್ತವೆಯೊ ಹೊರತು ನನ್ನ ಕೈಯಲ್ಲಿ ಏನೂ ಇಲ್ಲ. ಎಲ್ಲವೂ ನಿನ್ನ ಅಪ್ಪಣೆಯಂತೆ ನಡೆಯುತ್ತಿರುವಾಗ ನನ್ನದೆಂಬುದು ಯಾವುದೂ ಇಲ್ಲ. ಕೇವಲ ನಾನು ನಿನ್ನ ಅನುವರ್ತಿ, ನಿನ್ನ ಹೆ- ರದವ ಎಂದೆನಿಸುವಂತೆ ದಯದೋರು ಕೂಡಲ ಸಂಗಮ ದೇವಾ.

**೫೮ ಸರವಿಂಧ್ಯದೊಳಗೆನ್ನ ಹುಲುಗಿಳಿಯ ಮಾಡಿಸಲುಹಯ್ಯಾ**
**ಶಿವ ಶಿವಾ ಎಂದೋದಿಸಯ್ಯಾ**
**ಭಕ್ತಿ ಪಂಜರ ದೊಳಗಿಕ್ಕಿಸಲುಹು ಕೂಡಲ ಸಂಗಮದೇವಾ.**

ಮಹಾ ಕಾನನದಂತಿರುವ ಈ ಪ್ರಪಂಚದಲ್ಲಿ ನನ್ನನ್ನು ಒಂದು ಕ್ಷುದ್ರ ಗಿಳಿಯನ್ನಾಗಿರಿಸಿಕೊಂಡು ಶಿವ ಶಿವಾ ಎಂದು ಪಾಠ ಹೇಳಿಕೊಡು. ಭಕ್ತಿಯ ಕವಚ ತೊಡಿಸಿ ಮುಕ್ತಿಯ ಪಥದಲ್ಲಿ ನಡಿಸಿ ಕಾಪಾಡು ಕೂಡಲ ಸಂಗಮದೇವಾ.

**೫೯ ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯಾ ತಂದೆ**
**ಸುತ್ತ ಸುಳಿದು ನೋಡದಂತೆ ಅಂಧಕನ ಮಾಡಯ್ಯಾ ತಂದೆ**
**ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳಿಸದಂತಿರಿಸು**
**ಕೂಡಲ ಸಂಗಮದೇವಾ.**

"ಪಾಪೋಹಂ ಪಾಪೋಹಂ" ಎಂದು ಪಾಪದ ಪರಿ ಬಿಚ್ಚಲು ನಿನ್ನ ಪ್ರದಕ್ಷಿಣೆಯ ಹೊರತು ಬೇರೆ ಸ್ಥಳದಲ್ಲಿ ಚಲಿಸದಂತೆ ಮಾಡು, ನಿನ್ನ ಚಿನ್ಮಯ ಚಿತ್ತ ಮೂರ್ತಿಯ ಮೇಲೆ ನೆಟ್ಟ ನನ್ನ ನೋಟ ಕದಲದಂತೆ ಕೃಪೆಮಾಡು; ನಿನ್ನನಾಮೃತ ಸದಾ ಕಿವಿಯಲ್ಲಿ ಸುಳಿಯುವಂತೆ ಆಶೀರ್ವ ದಿಸು; ನನ್ನ ಭವಹರಿಯಲು ಶರಣರ ಪಾದ ಸೇವೆಯ ಭಾಗ್ಯವಂದನ್ನೇ ಕೊಡು ಕೂಡಲ ಸಂಗಮದೇವಾ.

**೬೦ ಎನ್ನ ವಾಮ ಕ್ಷೇಮ ನಿಮ್ಮದಯ್ಯಾ**
**ಎನ್ನ ಹಾನಿ ವೃದ್ಧಿ ನಿಮ್ಮದಯ್ಯಾ**
**ಎನ್ನ ಮಾನಾಪಮಾನ ನಿಮ್ಮದಯ್ಯಾ**
**ಬಳ್ಳಿಗೆ ಕಾಯಿ ದಿವ್ಯತ್ತೆ ಕೂಡಲ ಸಂಗಮದೇವಾ.**

ಬಳ್ಳಿಯು ಕಾಯಿ ಬಳ್ಳಿಗೆಂದಾದರೂ ಭಾರವಾಗುತ್ತದೆಯೋ? ಅದರ ಪರಿಪೋಷಣೆ ತಾಯಿ ಬಳ್ಳಿಮಾಡುವಂತೆ ನನ್ನ ಪ್ರೇಮ, ಕಲ್ಯಾಣ, ಕೀರ್ತಿ–ಅಪಕೀರ್ತಿ, ಹಾನಿ–ವೃದ್ಧಿಗಳೆಲ್ಲ ನಿನ್ನವೇ–ನಿನಗೇಸೇರಿರುತ್ತವೆ. ಕೂಡಲ ಸಂಗಮ ದೇವಾ.

**೬೧. ಸಟೆಯಿಲ್ಲದಂತೆ ಪ್ರಪಂಚು ಇಲ್ಲದಂತೆ ವೈಶ್ಯಕವಿಲ್ಲದಂತೆ**
**ನಡೆಸಯ್ಯಾ ಲಿಂಗ ತಂದೆ**
**ಒಂದು ನಿಮಿಷವಾದರೂ ನಿಮ್ಮ ಶರಣರ ಸಂಗದಲಿರಿಸಿಯ್ಯಾ**
**ಅನುಚಿತ ವೆರಿಸದಿರಯ್ಯಾ, ಹೊಲಬುಗೆಟ್ಟೆನಯ್ಯಾ ಕೂಡಲ**
**ಸಂಗಮದೇವಾ.**

ಸುಳ್ಳುತನ, ವಿಷಯಲಂಪಟತನ, ಮೋಸವಂಚಕತನ ಇವುಗಳಿಂದ ದೂರವಿರಿಸಿ ನನ್ನನ್ನು ನಡೆಸು ಲಿಂಗ ತಂದೆ. ಮೊದಲೇ ಮಾರ್ಗಲೆತು ನಿಂತ ನನ್ನ ಬುದ್ಧಿಯನ್ನು ಅಯೋಗ್ಯ ದಾರಿಯತ್ತದೂಡದೆ, ಒಂದು ನಿಮಿಷವಾದರೂ ನಿನ್ನ ಶರಣರ ಉತ್ತಮ ಸಂಗದಲ್ಲಿರಲು ಅವಕಾಶ ನೀಡು ಕೂಡಲ ಸಂಗಮದೇವಾ.

**೬೨. ಇವನಾರವ, ಇವನಾರವ ಇವನಾರವ ನೆಂದೆನಿಸದಿರಯ್ಯಾ**
**ಇವನಮ್ಮವ ಇವನಮ್ಮವ ಇವನಮ್ಮವನೆಂದೆನಿಸಯ್ಯಾ**
**ಕೂಡಲ ಸಂಗಮ ದೇವಾ ನಿಮ್ಮ ಮನೆಯ ಮಗನೆಂದೆನಿ**
**ಸಯ್ಯಾ**

ನಾನು ಬೇರೆ ನೀನು ಬೇರೆಂಬ ಎರಡು ಭಾವ ವ್ಯಕ್ತವಾಗುವಂತೆ ಮಾಡಬೇಡಾ. ನಾನು ನೀನು ಒಂದೇ ಎನ್ನುವದನ್ನು ಲೋಕದ ಅವಗಾಹನೆಗೆ ತಂದು ಕೊಡು–ನಾನು ನಿನ್ನ ಆತ್ಮ ಜ್ಯೋತಿಯ ಒಂದು ಕಿರಣ.

**೬೩. ಹುಟ್ಟೆಂದು ಲೋಕದಲ್ಲಿ ಹುಟ್ಟಿಸಿ,**
**ಇಳಿಯ ಬಿಟ್ಟೊಡೆ ನಿಮ್ಮ ನಗುವರಯ್ಯಾ.**

**ಶಿವ ಬಟ್ಟೆಯೊಳೆನನ್ನು ಇರಿಸಯ್ಯಾ, ಹರನೇ,**
**ಹೊಲಬು ಗೆಟ್ಟೆನು, ಬಟ್ಟೆಯು ತೋರಯ್ಯಾ!**
**ಹುಯ್ಯಲಿಟ್ಟೆನು:—'ಗುಣಂಗಳೂ ಕೇಳಿರಯ್ಯಾ,**
**ಕೂಡಲ ಸಂಗಮ ದೇವಯ್ಯನೆನ್ನ ಕಾಡಿಹನಯ್ಯಾ!'**

ನೀವೇ ಹುಟ್ಟೆಂದು ಹೇಳಿ ಇಂದು ನನ್ನನ್ನು ನಡು ನೀರಿನಲ್ಲಿ; ಸಂಸಾರದ ದುಃಖವನ್ನು ಅನುಭವಿಸೆಂದು ಕೈಬಿಟ್ಟರೆ ನೀವೆ ಅಪಹಾಸ್ಯಕ್ಕೆ ಗುರಿಯಾಗುವಿರಿ. ಕೂಡಲ ಸಂಗಮದೇವಾ! ಸಂಸಾರದಲ್ಲಿ ನೆಲೆಗೆಟ್ಟ ನನಗೆ ದಾರಿ ತೋರಿಸು; ಅಂಗಲಾಚಿ ಬೇಡುತ್ತಿರುವೆ; ಗಣಂಗಳೇ ನೀವೂ ಕೇಳಿರಿ ಈ ನನ್ನ ಗೋಳನ್ನು ಕೂಡಲ ಸಂಗಮ ದೇವರು ಈ ರೀತಿ ಕಾಪಾಡುತ್ತಲಿದ್ದಾನೆ ನನಗೆ;

೬೪. **ಅಕಟಕಟಾ! ಶಿವ, ನಿನಗಿನಿತು ಕರುಣವಿಲ್ಲಾ;**
**ಅಕಟಕಟಾ! ಶಿವ, ನಿನಗಿನಿತು ಕೃಪೆಯಿಲ್ಲಾ;**
**ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ, ಪರಲೋಕದೂರನ?**
**ಕೂಡಲ ಸಂಗಮದೇವಾ ಕೇಳಯ್ಯಾ,**
**ಎನಗಾಗಿ ಮತ್ತೊಂದು ತರುಮರ ನಿಲ್ಲವೇ?**

ಈ ಅವನಿಯಲ್ಲಿ ಹುಟ್ಟಿ ದುಃಖಿಯಾಗಿರುವೆ; ಇಹದ ವ್ಯಾಮೋಹಕ್ಕೊಳಗಾಗಿ ಪರಲೋಕಕ್ಕೆ ಬೇಡಾದವನಾಗಿರುವೆ; ಅಯ್ಯೋ ಶಿವನೆ ನಿನಗೆ ಎಳ್ಳಷ್ಟು ಕರುಣೆಯಿಲ್ಲ. ಇಂಥ ಮನುಷ್ಯ ಕುಲದಲ್ಲಿ ಹುಟ್ಟಿಸುವದಕ್ಕಿಂತ ಬೇಕಾದ ಗಿಡ-ಮರಗಳ ಜಾತಿಯಲ್ಲಿ ಹುಟ್ಟಿಸಬಾರದಾಗಿತ್ತೆ!

೬೫. **ನರಕೂರಂಬಿನಲೆಚ್ಚ, ಅವಂಗೊಲಿದೆಯಯ್ಯಾ;**
**ಅರಳಂಬಿನಲೆಚ್ಚ, ಕಾಮನನುರುಹಿದೆಯಯ್ಯಾ!**
**ಇರುಳು ಹಗಲೆನ್ನದೆ ಪ್ರಾಣಘಾತಕ ಮಾಡಿದ**
**ಬೇಡನ ಕೈಲಾಸ ಕೊಯ್ದೆಯಯ್ಯಾ;**
**ಎನ್ನನೇತಕ್ಕೊಲ್ಲೆ, ಕೂಡಲ ಸಂಗಮದೇವಾ?**

ಅರ್ಜುನನು ತೀಕ್ಷ್ಣವಾದ ಬಾಣದಿಂದ ನಿನ್ನನ್ನು ಹೊಡೆದರೂ

ಅವನಿಗೆ ಮೆಚ್ಚಿ ಒಂದು ವರವ ಕೊಟ್ಟೆ; ಕಾಮದೇವನು ಪುಷ್ಪಬಾಣದಿಂದ ಹೊಡೆದರೂ ಅವನ ಮೇಲೆ ಸಿಟ್ಟಾಗಿ ಅವನನ್ನು ಸುಟ್ಟುಹಾಕಿದಿ; ನಿತ್ಯವೂ ಬೇಟೆಯಾಡಿ ಪ್ರಾಣಿಗಳನ್ನು ಕೊಂದು ಹೊಟ್ಟೆ ಹೊರೆಯುವ ಕಟುಕ ಬೇಡರ ಕಣ್ಣಪ್ಪನನ್ನು ಕೈಲಾಸಕ್ಕೆ ಕರೆದುಕೊಂಡು ಹೋದಿ; ಆದರೆ ಕೂಡಲ ಸಂಗಮ ದೇವಾ, ನನ್ನನ್ನೇಕೆ ತಿರಸ್ಕರಿಸುವೆ?

**೬೬. ನೀ ನೊಲಿದರೆ ಕೊರಡು ಕೊನರುವದಯ್ಯಾ**
**ನೀ ನೊಲಿದರೆ ಬರಡು ಹಯನಹುದಯ್ಯಾ;**
**ನೀ ನೊಲಿದರೆ ಸಕಲ ಪಡಿಪದಾರ್ಥ ಇದಿರಲಿರ್ಪವು,**
**ಕೂಡಲ ಸಂಗಮ ದೇವಾ.**

ನಿನ್ನ ಕೃಪೆಯಾದರೆ ಒಣಗಿದ ಕಟ್ಟಿಗೆಯೂ ಕೂಡಾ ಚಿಗಿತು ಹೂ-ಕಾಯಿಗಳನ್ನು ಕೊಡುತ್ತದೆ; ನಿನ್ನ ಕರುಣೆಯಿಂದ ಬಂಜ ಆಕಳು ಕೂಡಾ ಹಾಲು ಕರೆಯುತ್ತದೆ; ನಿನ್ನ ದಯಾ ದೃಷ್ಟಿಯಿಂದ ವಿಷವು ಅಮೃತವಾಗುತ್ತದೆ; ನಿನ್ನ ಸಾಕ್ಷಾತ್ಕಾರದಿಂದ ಎಲ್ಲ ಪ್ರಕಾರದ ಮೃಷ್ಟಾನ್ನ-ಸುಖಗಳು ನನ್ನ ಎದುರಿಗೆ ಸಿದ್ಧವಾಗುತ್ತವೆ ಕೂಡಲ ಸಂಗಮ ದೇವಾ !

**೬೭. ಮೇರು ಗುಣವನರಸುವದೆ ಕಾಗೆಯಲಿ**
**ಪರುಷ ಗುಣವನರಸುವದೆ ಕಬ್ಬುನದಲ್ಲಿ**
**ಸಾಧುಗುಣವನರಸುವದೆ ಅವಗುಣಿಗಳಲ್ಲಿ**
**ಚಂದನ ಗುಣವನರಸುವದೆ ತರುಗಳಲ್ಲಿ**
**ಸರ್ವಗುಣ ಸಂಪನ್ನ ಲಿಂಗವೆ**
**ನೀ ನೆನ್ನಲ್ಲಿ ಅವಗುಣವನರಸುವರೆ**
**ಕೂಡಲ ಸಂಗಮದೇವಾ.**

ಯಾವ ಪ್ರಕಾರ, ಮೇರು ಪರ್ವತವು ಕಾಗೆಯನ್ನು ತುಚ್ಛೀಕರಿಸ್ಸುವದಿಲ್ಲವೊ ಪರುಷಮಣಿ ಕಬ್ಬಿಣದಲ್ಲಿ ಭೇದತೋರುವದಿಲ್ಲವೊ, ಸಾಧುಗಳು ಅವಗುಣಿಗಳನ್ನು ಸಹಿತ ದಯಾಪರರಾಗಿ ಕಾಣುವರೋ; ಗಂಧವೂ

ತನ್ನ ಸೌಗಂಧವನ್ನು ಏಕತ್ರವಾಗಿ ಬೀರುವಂತೆ, ಸರ್ವಗುಣಗಳಿಂದ ಪೂಜಿತನಾದ, ವಂದ್ಯನಾದ ಲಿಂಗವೇ ನನ್ನಲ್ಲಿ ದುರ್ಗುಣಗಳನ್ನು ಹುಡುಕುವದೆ? ನೀನು ಕೂಡಲ ಸಂಗಮದೇವಾ.

**೬೮. ಭವ ಭವದಲ್ಲೆನ್ನ ಮನವು ನೀವಲ್ಲದೆ**
**ಭವ ಭವದಲ್ಲೆನ್ನ ಮನವು ಸಿಲ್ಕದೆ?**
**ಭವ ರಾಟಳದೊಳು ತುಂಬದೆ? ಕೆಡಹದೆ?**
**ಭವರೋಗ ವೈದ್ಯನೀನು ಭವವಿರಹಿತ ನೀನು**
**ಅನಾಥಾರು ಕರುಣಿಸುವದು ಕೂಡಲ ಸಂಗಮದೇವಾ.**

ಜನ್ಮ ಜನ್ಮಾಂತರದಲ್ಲಿಯ ಸಂಸಾರದಲ್ಲಿಯು ನನ್ನಮನಸ್ಸೇ ನೀವು. ಹೀಗಿದ್ದರೂ ಜನ್ಮ ಜನ್ಮಾಂತರಗಳ ಬಂಧನದಲ್ಲಿ ನನ್ನಮನವು ಜಾರುತ್ತದೆ, ಸಂಸಾರ ಚಕ್ರದಲ್ಲಿ ತುಂಬುತ್ತದೆ, ಸಂಸಾರ ಸಂಗದಿಂದ ಕೆಡುತ್ತದೆ, ಈ ಹುಚ್ಚೆಂಬ ರೋಗಕ್ಕೆ ವೈದ್ಯನೀನು, ಜನನಮರಣಗಳಿಲ್ಲದವ ನೀನು; ಕೂಡಲ ಸಂಗಮದೇವಾ ನನ್ನ ಬಿನ್ನಹ ಕೇಳಿ ಕರುಣಿಸು.

**೬೯. ಆಶೆಯೆಂಬ ಪಾಶದಲ್ಲಿ ಭವ ಬಂಧನನಾಗಿರ್ದೆನಯ್ಯಾ**
**(?) ಸುಕೃತ ನಿಮ್ಮ ನೆನೆಯಲು ಎನಗೆ ತೆರಹಿಲ್ಲವಯ್ಯಾ**
**ಕರುಣಾಕರ, ಅಭಯಾಕರ ವರದಾನಿಕರುಣಿಸಯ್ಯಾ**
**ಸಂಸಾರ ಬಂಧನವನು ಮಾಣಿಸೆನಗೆ ಕೃಪೆಮಾಡಿ**
**ನಿಮ್ಮ ಶ್ರೀ ಪಾದಪದ್ಮದಲಿ ಭ್ರಮರನಾಗಿರಿಸು**
**ಭಕ್ತಜನ ಮನೋವಲ್ಲಭ ಕೂಡಲ ಸಂಗಮದೇವಾ**

ಆಶೆಯ ಪಾಶದಲ್ಲಿ ಬಿದ್ದು ಸಂಸಾರ ತೋಳಬಂಧನದಲ್ಲಿ ತೊಳಲಾಡುವ ನನಗೆ ನಾಮಸ್ಮರಣೆ ಮಾಡಲು ಬಿಡುವಿಲ್ಲ; ಕರುಣಸಾಗರ ಅಭಯವ ನೀಡಿ ಸಂಸಾರ ಬಂಧವಿಮುಕ್ತನನ್ನುಮಾಡು; ನಿನ್ನ ಪಾದಾರವಿಂದಲ್ಲಿ ಭ್ರಮರನಾಗಿರಲು ಕರುಣಿಸು; ಭಕ್ತಜನ ಮನೋವಲ್ಲಭ ಕೂಡಲ ಸಂಗಮದೇವಾ !

# ಗುರು ಕರುಣ ಸ್ಥಲವು

**೨೦. ಮಡಕೆಯ ಮಾಡುವರೇ ಮಣ್ಣೇ ಮೊದಲು**
**ತೊಡಿಗೆಯ ಮಾಡುವರೇ ಹೊನ್ನೇ ಮೊದಲು**
**ಶಿವಪಥವನರಿವಡೆ ಗುರು ಪಥವೆ ಮೊದಲು**
**ನಮ್ಮ ಕೂಡಲ ಸಂಗಮ ದೇವರ ನರಿವಡೆ**
**ಶರಣರ ಸಂಗವೇ ಮೊದಲು.**

"ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ" ಎಂದು ಹಾಡಿದ ಶರೀಫಸಾಹೇಬರ ನಿಜನುಡಿಯಂತೆ, ಗಡಿಗೆ, ತೊಡಿಗೆಗಳನ್ನು ಮಾಡುವದಕ್ಕೆ ಮಣ್ಣು, ಹೊನ್ನುಗಳು ಹೇಗೆ ಮುಖ್ಯವೋ ಹಾಗೆ ಶಿವಸಾಕ್ಷಾತ್ಕಾರವಾಗಬೇಕಾದರೆ ಗುರುವಿನ ಸಂಪೂರ್ಣ ಒಲುಮೆಮುಖ್ಯ; ಕೂಡಲ ಸಂಗಮನನ್ನು ತಿಳಿಯಬೇಕಾದರೆ ಶರಣರ ಸಹವಾಸ ಮುಖ್ಯವಾಗಿದೆ.

**೨೧ ನೋಡಿ ನೋಡಿ ಮಾಡುವ ನೇಮ ಸಲ್ಲವು ! ಸಲ್ಲವು;**
**ತನು ಉದ್ದೇಶ ಮನ ಉದ್ದೇಶವಾಗಿ ಮಾಡುವ ನೇಮ**
**ಸಲ್ಲವು ! ಸಲ್ಲವು;**
**ಗುರು ಪಥವ ಮೀರಿ ಮಾಡುವ ನೇಮ ಸಲ್ಲವು! ಸಲ್ಲವು;**
**ಕೂಡಲಸಂಗಮದೇವಯ್ಯ ಇವು ನಿಮ್ಮ ನಿಜದೊಳಗೆ ನಿಲ್ಲವು**
**ನಿಲ್ಲವು.**

ನಿರ್ಮಲ ಚಿತ್ತ ವಿಲ್ಲದೆ ವ್ರತನೇಮಗಳನ್ನು ಅರ್ಥಸಹಿತ ತಿಳಿಯದೆ ಪರರು ಮಾಡುವದನ್ನು ನೋಡಿ ಅನುಕರಣೆ ಮಾಡಿದರೆ, ದೇಹದ ಸುಖಕ್ಕಾಗಿ, ಮನೋಬಯಕೆಗಳು ಈಡೇರಬೇಕೆಂದು ವ್ರತನೇಮಗಳನ್ನು ಆಚರಿಸಿದರೆ, ಗುರು ತೋರಿದ ಮಾರ್ಗವನ್ನು ಬಿಟ್ಟು ಅನ್ಯಮಾರ್ಗಗಳಿಂದ ವ್ರತಾಚಾರಗಳನ್ನು ಮಾಡಿದರೆ, ಇವೆಲ್ಲವುಗಳು ಕೂಡಲ ಸಂಗಮದೇವರ ಸತ್ಕೃಪೆಯ ಜಲಧಾರೆಯಲ್ಲಿ ನಿಲ್ಲವು ನಿಲ್ಲವು. ಮತ್ತು ಗುರು ಲಿಂಗಕ್ಕೆ ಸಲ್ಲವು ಸಲ್ಲವು.

**೭೨ ಗುರುವಚನವಲ್ಲದೆ ಲಿಂಗವೆಂದೆನಿಸದು;**
**ಗುರುವಚನವಲ್ಲದೆ ನಿತ್ಯವೆಂದೆನಿಸದು:**
**ಗುರುವಚನವಲ್ಲದೆ ನೇಮವೆಂದೆನಿಸದು;**
**ತಲೆಯಿಲ್ಲದಟ್ಟಿಗೆ ಪಟ್ಟವ ಕಟ್ಟುವ ಉಭಯ ಭ್ರಷ್ಟರ**
**ಮೆಚ್ಚುವನೆ ನಮ್ಮ ಕೂಡಲಸಂಗಮದೇವ,**

ಲಿಂಗವಾಗಿ ಪೂಜಿಸಿಕೊಳ್ಳುವದು, ನಿತ್ಯವಾಗಿ ನಿರ್ಮಲ ಚಿತ್ತ ಚೇತನವಾಗಿ ನೆಲೆಸುವದು, ವ್ರತಾಚಾರಗಳೆಂದು ಮನ್ನಣೆ ಹೊಂದಿ ಅಂತರಂಗ ಶುದ್ಧಿಗೆ ಗಂಗೋದಕವಾಗುವದು ಗುರುವಿನ ಹಿತೋಪದೇಶ, ಲಿಂಗ ಜಂಗಮರ ಸಾಮರಸ್ಯವಾದ ಸ್ವರೂಪದರ್ಶನದಾದೇಶವಲ್ಲದೆ, ಪೇಟೆಯಲ್ಲಿ ಕಾಸಿಗೆ ಕೊಂಡು ತರುವ ಲಿಂಗ, ಸಂಸಾರದ ಸರಸ ಉದರ ಪೋಷಣೆಗೆ ಆಚರಿಸುವ ನೇಮಗಳು ಉಚ್ಚವೆಂದು ಪರಿಗಣಿಸಲು ಬಾರದು. ಜ್ಞಾನವಿಲ್ಲದ ಸಂಸ್ಕಾರ ವಿಲ್ಲದ ಮುಂಡಕ್ಕೆ ಸ್ವಾಮಿತ್ವದ ಪಟ್ಟಕಟ್ಟುವ ಈ ಉಭಯರನ್ನೂ (ಕಟ್ಟುವವ ಕಟ್ಟಿಸಿಕೊಳ್ಳುವವ) ಕೂಡಲ ಸಂಗಮದೇವನೆಂದಿಗೂ ಮೆಚ್ಚನು.

**೭೩ ಮುನ್ನಮಾಡಿದ ಪಾಪ ಹ್ಯಾಗೆ ಹಿಂಗುವದೆಂದು ಚಿಂತಿಸಬೇಡ**
**ಕಹಿಸೋರೆಯ ಕಾಯಿ ತಂದು ವಿಭೂತಿಯ ತುಂಬಿದರೆ**
**ಸಿಹಿಯಾಗದೆ ಮೂರು ದಿವಸಕ್ಕಯ್ಯಾ**
**ಹಲವು ಕಾಲ ಕೊಂದ ಸುನಗಾರನ ಕೈ ಕತ್ತಿಯಾದರೇನು**
**ಪರುಷ ಮುಟ್ಟಲಿಕೆ ಹೊನ್ನಾಗದೆ ಅಯ್ಯಾ**
**ಎನ್ನ ಲಲಾಟದಲ್ಲಿ ಶ್ರೀ ವಿಭೂತಿಯ ಬರೆಯಲಿಕ್ಕೆ**
**ಪಾಪ ಪಲ್ಲಟವಾಗದೆ ಕೂಡಲ ಸಂಗಮದೇವ.**

ಪೂರ್ವಜನ್ಮದಲ್ಲಿ ಮಾಡಿದ ಪಾಪ ಹೇಗೆ ದೂರವಾಗುವದೆಂಬ ಚಿಂತನೆಯೂ ಬೇಡ. ಕಹಿಯಾದ ಹಾಲಗುಂಬಳ ಕಾಯಿತಂದು ಭಸ್ಮವನ್ನು ಅದರ ಮೇಲೆ ಲೇಪಿಸಿದರೆ ಅದು ಸಿಹಿಯಾಗುವಂತೆ, ಅನೇಕ ಪ್ರಾಣಿಗಳನ್ನು ಕೊಂದು ರಕ್ತದರುಚಿ ಕಂಡ ಯೋಧನ ಕೈಗತ್ತಿಗೆ ಪರುಷಸ್ಪರ್ಶವಾಗಲು

ಅದು ಚಿನ್ನವಾಗುವಂತೆ ನನ್ನ ಹಣೆಯಲ್ಲಿ ಭಸ್ಮಧಾರಣೆ ಮಾಡಿದರೆ ಪಾಪ ವೆಲ್ಲ ಮಸಳಿಹೋಗದೆ ಕೂಡಲ ಸಂಗಮದೇವಾ ?

**೨೪ ನೀರಿಂಗೆ ನೈದಲೆ ಶೃಂಗಾರ, ಸಮುದ್ರಕ್ಕೆ ತೆರೆಯೆ ಶೃಂಗಾರ,**
**ನಾರಿಗೆ ಗುಣವೇ ಶೃಂಗಾರ, ಊರಿಗೆ ಆಗರವೇ ಶೃಂಗಾರ,**
**ಗಗನಕ್ಕೆ ಚಂದ್ರಮನೆ ಶೃಂಗಾರ, ನಮ್ಮ ಕೂಡಲ ಸಂಗನ**
**ಶರಣರಿಗೆ ನೊಸಲಲ್ಲಿ ವಿಭೂತಿಯೇ ಶೃಂಗಾರ.**

ಸರೋವರಕ್ಕೆ ಕಮಲ, ಅಂಬುಧಿಗೆ ಹೆದ್ದೆರೆಗಳು, ಗೃಹಣಿಗೆ ಪತೀ ವ್ರತಾ ಗುಣವು, ಊರಿಗೆ ಜನದಟ್ಟಣೆ, ಕತ್ತಲು ಕವಿದಾಕಾಶಕ್ಕೆ ಚಂದ್ರನು ಶೃಂಗಾರಾಭರಣವಾಗಿ ಶೋಭಿಸುವಂತೆ ಕೂಡಲ ಸಂಗನ ಶರಣರಿಗೆ ಹಣೆ ಯಲ್ಲಿ ಧಾಳವಾದ ಭಸ್ಮವೇ ಅನಮೌಲ್ಲವಾದ ಆಭರಣ.

## ಪಂಚಾಕ್ಷರಿಯ ಸ್ಥಲವು

**೨೫. ಕರಿ ಅಂಜುವದು ಅಂಕುಶಕ್ಕಯ್ಯಾ,**
**ಗಿರಿ ಅಂಜುವದು ಕುಲಿಶಕ್ಕಯ್ಯಾ,**
**ತಮಂಧ ಅಂಜುವದು ಜ್ಯೋತಿಗಯ್ಯಾ,**
**ಕಾನನವಂಜುವದು ಬೇಗೆಗಯ್ಯಾ,**
**ಪಂಚ ಮಹಾಪಾತಕ ವಂಜುವದು ಕೂಡಲ ಸಂಗನ**
**ನಾಮಕ್ಕಯ್ಯಾ**

ಆನೆಯ ಸೊಕ್ಕು ಮುರಿಯುವದು ಅಂಕುಶದಿಂದ, ಪರ್ವತವು ನಡ ಗುವದು ವಜ್ರ ಕುಠಾರಕ್ಕೆ, ಗಾಢವಾದ ಕತ್ತಲೆ ದೀಪ (ಬೆಳಕು) ಕ್ಕೆ ಅಂಜು ತ್ತದೆ. ಘೋರಾರಣ್ಯವು ಅಗ್ನಿಗೆ ಹೆದರುತ್ತದೆ; ಹಾಗೆಯೇ ಪಂಚ ಮಹಾಪಾ ಪವು, ಶಿವ ಷಡಕ್ಷರಿ ಮಂತ್ರ ಪಠಿಸಿದರೆ ನಾಶವಾಗುತ್ತದೆ. ಕೂಡಲ ಸಂಗ ಮನ ನಾಮದಬಲ ಮಹಿಮಾತೀತವಾದುದು.

**೨೬ ಜಪ ತಪ ನಿತ್ಯನೇಮ ನೆನಗೆ ಉಪದೇಶ,**
**ನಿಮ್ಮ ನಾಮ ನೆನಗೆ ಮಂತ್ರ**

**ಶಿವನಾಮವೆನಗೆ ತಂತ್ರ**
**ಕೂಡಲ ಸಂಗಮದೇವಯ್ಯಾ ಕೇಳಯ್ಯಾ**
**ನಿಮ್ಮ ನಾಮ ವೆನಗೆ ಕಾಮಧೇನು.**

ಶಿವಲಿಂಗ ಮೂರ್ತಿಯೆ, ನಿನ್ನನಾಮ ಭಜನೆ ನನಗೆ ಮಂತ್ರ, ಶಿವ ಪೂಜೆ ನನಗೆ ತಂತ್ರ (ಆಚಾರ), ಜಪ ತಪ ನೇಮನಿತ್ಯಗಳು ನನಗೆ ಹಿತೋಪದೇಶದಂತೆ, ಆದರೆ ಕೂಡಲಸಂಗಮದೇವ ನಿನ್ನ ನಾಮಸ್ಮರಣೆ, ಬಯಸಿದುದನ್ನೆಲ್ಲ ನೀಡುವ ಕಾಮಧೇನುವಾಗಿದೆ.

೭೭. **ಅಕಟಕಟಾ ಬೆಡಗು-ಬಿನ್ನಾಣವೆಂಬುದೇನು**
**"ಓಂ ನಮಃಶಿವಾಯ" ಎಂಬುವದೆ ಮಂತ್ರ**
**"ಓಂ ನಮಃಶಿವಾಯ" ಎಂಬುವದೆ ತಂತ್ರ**
**ನಮ್ಮ ಕೂಡಲ ಸಂಗನ ನೆನೆವುದೇ ಮಂತ್ರ.**

ಬಾಹ್ಯಾಡಂಬರಕ್ಕೆ ಒಪ್ಪುವಂತೆ ಭವ್ಯವಾಗಿ ಪೂಜಿಸುವದು ಹುರುಳಿಲ್ಲದ್ದು; "ಓಂ ನಮಃ ಶಿವಾಯ" ಎಂಬುದೇ ಸಕಲ ಮಂತ್ರ—ಆಚಾರವಾಗಿರುತ್ತದೆ; ಕೂಡಲ ಸಂಗಮದೇವಾ.

೭೮. **ವಶ್ಯವ ಬಲ್ಲೆಂಬೆಂದಿರಯ್ಯಾ**
**ಬುದ್ಧಿಯ ನರಿಯದ ಮನುಜರು ನೀವು ಕೇಳಿರಯ್ಯಾ**
**ವಶ್ಯವಾವುದೆಂದರಿಯದೆ ಮರುಳುಗೊಂಬಿರಯ್ಯಾ**
**ಎಲೆಗಾವಿಲ ಮನುಜರಿರಾ "ಓಂ ನಮಃಶಿವಾಯ" ಎಂಬ**
**ಮಂತ್ರ ಸರ್ವಜನವಶ್ಯ ಕೂಡಲ ಸಂಗಮದೇವಾ.**

ಬುದ್ಧಿಯಿಲ್ಲದ ಮಾನವರು ಮಣ್ಣು, ಹೊನ್ನು, ಮಣ್ಣುಗಳನ್ನು ತಮ್ಮ ವಶಮಾಡಿಕೊಳ್ಳುವದನ್ನು ಬಲ್ಲೆವೆಂದು ಹೇಳುತ್ತಾರೆ. ಯಾರು ಯಾರ ವಶದಲ್ಲಿ, ಪ್ರಭಾವದಲ್ಲಿದ್ದಾರೆಂಬುದನ್ನು ತಿಳಿಯದೆ ದಿಂಙ್ಮೂಢರಾಗುತ್ತಾರೆ. ಏ ಹುಚ್ಚ ಮನುಜರಿರಾ "ಓಂ ನಮಃ ಶಿವಾಯ" ಎಂಬ ದಿವ್ಯ ಮಂತ್ರ ಎಲ್ಲರಿಗೂ ದೊರಕುವ ಮಂತ್ರ ಕೂಡಲ ಸಂಗಮದೇವ

೭೯ **ಭವ ಬಂಧನ ದುರಿತಂಗಳ ಗೆಲುವಡೆ**
**"ಓಂ ನಮಃ ಶಿವಾಯ" ಶರಣೆಂದಡೆ ಸಾಲದೆ**
**ಹರ ಹರ ಶಂಕರ, ಶಿವ ಶಿವ ಶಂಕರ, ಜಯ ಜಯ ಶಂಕರ**
**ಶರಣೆನುತಿರ್ದೆನೆ**
**ಎನ್ನ ಪಾತಕ ಪರಿಹಾರ ಕೂಡಲಸಂಗಮದೇವ**
**ಶರಣೆನುತಿರ್ದೆನು**

ಸಂಸಾರ ಸಂಗದ ಸರ್ವ ಪಾಪಗಳನ್ನು ಗೆಲ್ಲಬೇಕಾದರೆ "ಓಂ ನಮಃ ಶಿವಾಯ" ಎಂಬ ಮಂತ್ರಕ್ಕೆ ಶರಣಾಗಬೇಕು. ನನ್ನ ಪಾಪ ಪರಿಹಾರಕ್ಕೆ "ಹರಹರ ಶಂಕರ" ಎಂದು ಉಚ್ಚರಿಸುತ್ತ ಕೂಡಲ ಸಂಗಮದೇವ ನಿನಗೆ ನಮಸ್ಕಾರಗಳನ್ನು ಸಲ್ಲಿಸುತ್ತಿದ್ದೇನೆ.

೮೦ **ಎನ್ನ ಮನದಲ್ಲಿ ಮತ್ತೊಂದನರಿಯೆನಯ್ಯಾ**
**"ಓಂ ನಮಃ ಶಿವಾಯ" "ಓಂ ನಮಃ ಶಿವಾಯ"**
**ಎನುತಿರ್ದೆನು**
**ಎನಗಿದೆ ಮಂತ್ರ, ಎನಗಿದೆ ತಂತ್ರ, ಎನಗಿದೆ ಜಪ**
**ಕೂಡಲಸಂಗಮದೇವ ನೀನೇ ಬಲ್ಲೆ ಎಲೆ ಲಿಂಗವೆ.**

"ಓಂ ನಮಃ ಶಿವಾಯ" ಎಂಬ ಮಹಾ ಬೆಳಕಿನ ಹೊರತು ಅನ್ಯ ಬೆಳಕು ನನ್ನ ಚಿದಾಕಾಶದಲ್ಲಿ ಬೆಳಗದು. ಮಂತ್ರ ತಂತ್ರ ಜಪವೆಂಬುದೆಲ್ಲ ನಿನ್ನ ಶಿವನಾಮಾವಳಿಯೆ— ಎಲ್ಲವನು ಬಲ್ಲ ಕೂಡಲ ಸಂಗಮದೇವ ನಿನ್ನ ಬಿಟ್ಟಿಲ್ಲ ನಾನು ಪರಲಿಂಗವೆ.

೮೧ **"ಓಂ ನಮಃ ಶಿವಾಯ" ಎಂಬ ಮಂತ್ರವ ಮೀರಲಮ್ಮದೆ**
**ನಿಂದವು ವೇದ**
**"ಓಂ ನಮಃ ಶಿವಾಯ" ಎಂಬ ಮಂತ್ರವ ಮೀರಲಮ್ಮದೆ**
**ನಿಂದವು ಶಾಸ್ತ್ರ**
**"ಓಂ ನಮಃ ಶಿವಾಯ" ಎಂಬ ಮಂತ್ರವ ಮೀರಲಮ್ಮದೆ**
**ನಿಂದವು ತರ್ಕ**

**ಭಯಂಕರ ಭ್ರಮೆಗೊಂಡಿತ್ತು ಮಂತ್ರ ತಂತ್ರ**
**ಶಿವನಂತುನರಿಯದೆ ಚಿಂತಿಸುತಿದ್ದಿತು ಲೋಕ**
**ಕೂಡಲ ಸಂಗಮದೇವಾ ಸ್ವಪಚನ ನೆನೆದರೆ ಜಾತಿಭೇದವ**
**ಮಾಡಲಮ್ಮವು**

ಚತುರ್ವೇದಗಳು, ಸಕಲ ಶಾಸ್ತ್ರಗಳು ಹಾಗೂ ತರ್ಕ ಶಾಸ್ತ್ರವೂ "ಓಂ ನಮಃ ಶಿವಾಯ" ಎಂಬ ಈ ಷಡಕ್ಷರ ಮಂತ್ರವನ್ನು ಮೀರಿಹೋಗಲಂಜಿ ಮೌನತಾಳುತ್ತವೆ. ಮಂತ್ರ ತಂತ್ರಗಳ ಉಚ್ಚಾಟನೆ ಯಲ್ಲಿ ಶಿವಪಥವ ನರಿಯದೆ ಲೋಕ ಚಿಂತಿಸುತ್ತಿತ್ತು. ಅಂತ್ಯಜರೆಂದು ಕರೆ ಯಲ್ಪಟ್ಟ ಮಾದರ ಚನ್ನಯ್ಯ ಡೋಹರ ರಾಮಯ್ಯ ಇವರನ್ನು ನೆನೆದರೆ ಕೂಡಲ ಸಂಗನು ಲಿಂಗ ಕುಲದಲ್ಲಿ ಜಾತಿಭೇದವನ್ನೆಣಿಸುವುದಿಲ್ಲ.

೮೨ **ಬಿಳಿಯ ಕರಿಕೆಯ ಕಣಗಿಲೆಲೆಯ ತೊರೆಯ ತಡಿಯ**
**ಮಳಲ ತಂದು ಗೌರಿಯ ನೋನುವ ಬನ್ನಿರೆ**
**ಚಿಕ್ಕ ಚಿಕ್ಕ ಮಕ್ಕಳೆಲ್ಲ ನೆರೆದು ಅನುಪಮದಾನಿ**
**ಕೂಡಲಸಂಗಮದೇವ ಗಂಡನಾಗಬೇಕೆಂದು.**

ಚಿಕ್ಕ ಚಿಕ್ಕ ಮಕ್ಕಳೆಲ್ಲ (ಕೊಡಗೂಸು ಇತ್ಯಾದಿ) ಸೇರಿ ಬಿಳಿ ಕರಿಕೆ, ಬಿಳಿ ಕಣಗಿಲಹೂವು, ಬಿಳಿ ಮಳಲು ತಂದು ಲಿಂಗವ ಮಾಡಿಕೊಂಡು ಗೌರಿಯ ಪೂಜೆ ಮಾಡಿ, ತಮಗೆಲ್ಲ ಅನುರೂಪನಾದ ಅಪಾರ ಕರುಣಿ ಯ ಕೂಡಲ ಸಂಗಮ ದೇವನು ಗಂಡನಾಗಬೇಕೆಂದು ಎಳೆಮನದೊ ಲುಮೆಯಿಂದ ಗೌರಿಯನ್ನು ಬೇಡಿದರು.

೮೩. **ಎಮ್ಮವರು ಬೆಸಗೊಂಡರೆ ಶುಭಲಗ್ನ ವೆನ್ನಿರಯ್ಯಾ**
**ರಾಶಿಕೂಟ ಋಣಾನುಬಂಧ ಉಂಟೆಂದು ಹೇಳಿರಯ್ಯಾ**
**ಚಂದ್ರ ಬಲ ತಾರಾ ಬಲ ಉಂಟೆಂದು ಹೇಳಿರಯ್ಯಾ**
**ನಾಳಿನದಿನಕ್ಕಿಂದಿನವೇ ಲೇಸೆಂದು ಹೇಳಿರಯ್ಯಾ**
**ಕೂಡಲ ಸಂಗಮದೇವರ ಪೂಜಿಸಿದ ಫಲ ನಿಮ್ಮದಯ್ಯಾ**

ಶಿವಶರಣರು ಬಂದು ಬೋಧಿಸಿದರೆ ಆ ಲಗ್ನ ಶುಭವೆಂದರಿಯಬೇಕು. ಋಣಾನುಬಂಧ, ರಾಶಿಕೂಟ, ಚಂದ್ರಬಲ—ತಾರಾಬಲ ಎಲ್ಲವೂ ಸರಿಯಾಗಿದೆ ಎಂದು ವಿಶ್ವಾಸ ವಿಡಬೇಕು. ನಾಳೆ ಎನ್ನುವದಕ್ಕಿಂತ ಇಂದೇ ಒಳ್ಳೆಯ ಮುಹೂರ್ತವೆಂದು ನುಡಿಯಬೇಕು. ಕೂಡಲ ಸಂಗಮದೇವ ನನ್ನು ಪೂಜಿಸಿದಕ್ಕೆ ತಕ್ಕ ಫಲ ಶರಣರ ಆಶೀರ್ವಾದ.

## ಲಿಂಗಧಾರಣ ಸ್ಥಳ

**೬೪. ಪಾತಕ ಶತಕೋಟಿಯನೊರಸಲು ಸಾಲದೇ ಒಂದು ಶಿವನಾಮ,**
**ಸಾಲದೇ ಒಂದು ಹರನಾಮ ಕೂಡಲ ಸಂಗಮದೇವ**
**ನಿಮ್ಮ ಉಂಡಿಗೆಯ ಪಶುವ ಮಾಡಿದೆಯಾಗಿ**

ನೂರು ಕೋಟಿ ಪಾಪಗಳನ್ನು ಕೊಚ್ಚಿಹಾಕಲು ಒಂದೇ ಒಂದು ಶಿವನಾಮ, ಹರನಾಮ ಸಾಕು. ಕೂಡಲ ಸಂಗಮದೇವ ನನಗೆ ಲಿಂಗಧಾರಣ ಮಾಡಿಸಿ, ಲಿಂಗ ಮುದ್ರೆಯೊತ್ತಿದ ಬಸವನಂತೆ, ನಿನ್ನ ಕಾಯಕದ ಕೋಲು ಹಿಡಿದುಕೊಂಡು, ಹೋಗುವ ನಂದಿಯನ್ನಾಗಿ ಮಾಡಿದೆ.

**೬೫ ಲಿಂಗದುಂಡಿಗೆಯ ಪಶುವಾನಯ್ಯಾ, ವೇಷಧಾರಿಯಾನು**
**ಉದರಪೋಷಕ ನಾನಯ್ಯಾ ಕೂಡಲ ಸಂಗನ ಶರಣರ**
**ಮನೆಯ ಸದ್ಧರ್ಮದ ಕಪಿಲೆನಾನಯ್ಯಾ**

ಲಿಂಗ ಮುದ್ರೆಯನ್ನು ಹಾಕಿಸಿಕೊಂಡ ಆಕಳು ನಾನು; ಕಾರುಣ್ಯದ ಪಶು ವಿನಂತೆ ಭಕ್ತನ ವೇಷ ಮಾಡಿಕೊಂಡು ಹೊಟ್ಟೆ ಹೊರೆಯುವ ಪ್ರಾಣಿ ನಾನು; ಅಲ್ಲದೆ ಕೂಡಲ ಸಂಗನ ಶರಣರ ಮನೆಯ ಪರೋಪಕಾರಿಜೀವಿಯಾದ ಆಕಳು ನಾನು.

**೬೬. ನಮಃ ಶಿವಾಯ ನಮಃಶಿವಾಯ**
**ನಮಃಶಿವಾಯ ಶರಣೆಂದಿತ್ತು**
**ಲಲಾಟ ಲಿಖಿತ ಬರೆದ ಬಳಿಕ ಫಲ್ಲಟವಮಾಡಬಾರದು**
**ಎನ್ನಉರದ ಉಂಡಿಗೆ ಶಿರದ ಅಕ್ಷರ**
**ಕೂಡಲ ಸಂಗಯ್ಯಾ ಶರಣೆಂದಿತ್ತು.**

ನಮಃ ಶಿವಾಯ ಎಂಬ ಪಂಚಾಕ್ಷರ ಮಂತ್ರದೊಂದಿಗೆ ನಾನು ಲಿಂಗಕ್ಕೆ ಶರಣೆನ್ನುವೆ; ಹಣೆಯ ಮೇಲೆ ಭಸ್ಮೋದ್ಧೂಲಿತದೊಂದಿಗೆ ಶಿವ ಪಂಚಾಕ್ಷರ ಮಂತ್ರವ ಬರೆದ ಮೇಲೆ ಅದನ್ನು ಅಳಿಸಬಾರದು; ನನ್ನ ಎದೆಯ ಮೇಲಿನ ಲಿಂಗವು, ಕೊರಳರುದ್ರಾಕ್ಷಿಯ ಮಣಿಯು ಕೂಡಲ ಸಂಗಮದೇವ ನಿನಗೆ ಶರಣೆಂದವು.

**೮೭. ಅಡ್ಡ ವಿಭೂತಿಯಿಲ್ಲದವರ ಮುಖ ಹೊಲ್ಲ,**
**ನೋಡಲಾಗದು.**
**ಲಿಂಗದೇವನಿಲ್ಲದ ಠಾವು ನರವಿಂಧ್ಯ, ಹೋಗಲಾಗದು.**
**ದೇವ ಭಕ್ತನಿಲ್ಲದ ಊರು ಸಿನೆ ಹಾಳು ಕೂಡಲ**
**ಸಂಗಮದೇವಾ.**

ಭಸ್ಮ ಹಚ್ಚದೇ ಇದ್ದ ಮುಖವು ಗೂಗೆಯ ಮುಖವು; ನೋಡಿದರೆ ಅಪಶಕುನ; ಲಿಂಗವಿಲ್ಲದ ಸ್ಥಳವು ನರಕ ಹೋಗಲಾಗದು. ದೇವ ಭಕ್ತರಿಲ್ಲದ ಊರು ದೆವ್ವ ಭೂತಗಳಿಂದ ಕೂಡಿದ ಹಾಳು ಕೂಡಲ ಸಂಗಮದೇವಾ.

**೮೮. ಅಡ್ಡ ತ್ರಿಪುಂಡ್ರದ ಮಣಿ ಮುಕುಟದ ವೇಷದ ಶರಣರ ಕಂಡರೆ**
**ನಂಬುವದೆನ್ನ ಮನವು ನಚ್ಚುವದೆನ್ನ ಮನವು**
**ಸಂದೇಹವಿಲ್ಲದೆ**
**ಇವಿಲ್ಲದವರ ಕಂಡರೆ ನಂಬೆ ಕೂಡಲ ಸಂಗಮದೇವಾ.**

ಸ್ಫುಟವಾಗಿ ಕಾಣುವ ಮೂರೆಳೆ ಭಸ್ಮಧರಿಸಿದ,ರುದ್ರಾಕ್ಷಿ ಮಾಲೆ ಧರಿಸಿದ ಶರಣರನ್ನು ಕಂಡರೆ ಪ್ರೀತಿಯ ಹೊನಲಾಗಿ, ವಿಶ್ವಾಸದ ಮರವಾಗಿ ಬೆಳೆದು ದೃಢವಾಗುತ್ತದೆ ನನ್ನ ಮನಸ್ಸು; ಇವುಗಳಿಲ್ಲದ (ಧರಿಸದ)ವರನ್ನು ಕಂಡರೆ ನಾನು ದೂರ ಸರಿಯುವೆ ಕೂಡಲ ಸಂಗಮದೇವ.

**೮೯. ಆರಾಧ್ಯ ಪ್ರಾಣಲಿಂಗವೆಂದರಿದು**
**ಪೂರ್ವ ಗುಣವಳಿದು, ಪುನರ್ಜಾತನಾದ ಬಳಿಕ**
**ಸಂಸಾರ ಬಂಧುಗಳೆನ್ನವರೆಂದೊಡೆ**
**ನಂಟ ಭಕ್ತಿ ನಾಯಿಕ ನರಕ**
**ಇಂತೆಂದುದು ಕೂಡಲ ಸಂಗನ ವಚನ**

ಪೂರ್ವಜನ್ಮದ ಎಲ್ಲ ಪಾಪಗಳೂ ಅಳಿದು ಪುನಃ ಹುಟ್ಟಬಂದಮೇಲೆ ಪ್ರಾಣಲಿಂಗವೇ ನನ್ನ ಆರಾಧ್ಯ (ದೈವದ)ದೇವರೆಂದು ಮನವರಿತ ಮೇಲೆ ಸಂಸಾರದಲ್ಲಿಯ ಬಂಧು - ಬಳಗವು ನನ್ನವರು ತನ್ನವರೆಂದು ವ್ಯಾಮೋಹ ಕ್ಕೊಳಗಾದರೆ ಅದು ಬೀಗರು ತೋರುವ ಡಾಂಭಿಕ ಭಕ್ತಿ—ಅದಕ್ಕೆ ಪ್ರತಿ ಫಲ ನರಕ ಎಂದು ಕೂಡಲ ಸಂಗಮನ ವಚನವು ಸಾರುತ್ತದೆ.

**೯೦. ತಾಳ ಮರದ ಕೆಳಗೊಂದು ಹಾಲಹರವಿರ್ದೊಡೆ**
**ಅದು ಹಾಲ ಹರವಿ ಎನ್ನರು, ಸುರೆಯ ಹರವಿ ಎಂಬರು**
**ಈ ಭಾವ ನಿಂದೆಯ ಮಾಣಿಸೋ ಕೂಡಲಸಂಗಮದೇವಾ**

ತಾಳೆಯ ಗಿಡದ ಬಳಿ ಹಾಲಿನ ಪಾತ್ರೆಯನ್ನಿಟ್ಟರೂ ಜನರು ಅದು ಸೆರೆಯ ಪಾತ್ರೆಯೆಂದೆ ತಿಳಿದು ದೂಷಣೆ ಮಾಡುತ್ತಾರೆ. ಈ ತರಹದ ದೂಷಣೆ ನನಗೆ ಮತ್ತು ಭಕ್ತರಿಗೆ ಬಾರದಂತೆ ಕರುಣಿಸು ಕೂಡಲ ಸಂಗಮ ದೇವಾ.

**೯೧. ಸುಪಥ ಮಂತ್ರದುಪದೇಶ ಕಲಿತು ಯುಕ್ತಿಗೆಟ್ಟು ನಡೆವಿರಯ್ಯಾ**
**'ತತ್ವಮಸಿ' ಎಂಬುದನರಿದು ಕೆತ್ತಲೆದೊಡೆವಿರಯ್ಯಾ**
**ವೇದ ವಿಪ್ರರ ವಿಚಾರಿಸಿ ನೋಡಲು**
**'ಉಪದೇಶ ಪರೀಕ್ಷೆ ನಾಯಕ ನರಕ' ಎಂದುದು**
**ಕೂಡಲ ಸಂಗನ ವಚನದ ಸೂಚನೆ.**

ಸನ್ಮಾರ್ಗದಲ್ಲಿ ಜೀವನ ಸಾಗಿಸಲಿಕ್ಕೆ ಮಂತ್ರದ ಉಪದೇಶ ಪಡೆದಿ ದ್ದರೂ ಕೂಡ ನೀತಿಗೆಟ್ಟು ಅಡ್ಡ ದಾರಿಯಲ್ಲಿ ನಡೆಯುತ್ತಿರುವಿರಿ; ವೇದಾ ಭ್ಯಾಸ ಮಾಡಿದ ಬ್ರಾಹ್ಮಣರಿಂದ "ಆ ಸತ್ಯವೇ ನೀನು'' ಅಂದರೆ ನೀನೇ ಪರಮಾತ್ಮನೆಂಬದನ್ನು ತಿಳಿದುಕೊಂಡರೂ ಕೂಪ ಮಂಡೂಕರಂತೆ ಹೆಡ್ಡರಾಗುತ್ತಿರುವಿರಿ; ಉಪದೇಶ ಮತ್ತು ಪರೀಕ್ಷೆಗಳೆಂಬುವು, ಆಚರಣೆ ಸರಿಯಾಗಿರದಿದ್ದರೆ, ನಿಮ್ಮನ್ನು ಮಹಾನರಕದಲ್ಲಿ ದೂಡುತ್ತವೆ-ಎಂದು ಕೂಡಲಸಂಗಮ ದೇವರ ನುಡಿ ಸಾರುತ್ತದೆ.

**೯೨. ಕುಂಬಳ ಕಾಯಿಗೆ ಕಬ್ಬುನದ ಕಟ್ಟು ಕೊಟ್ಟರೆ**
**ಕೊಳೆವುದಲ್ಲದೆ ಬಲುಹಾಗಬಲ್ಲುದೇ ?**
**ಅಳಿಮನದವರಿಗೆ ಶಿವದೀಕ್ಷೆಯ ಕೊಟ್ಟರೆ**
**ಭಕ್ತಿ ಎಂತಹುದೊ ? ಮುನ್ನಿನಂತೆ**
**ಕೂಡಲಸಂಗಯ್ಯಾ, ಮನಹೀನನ ಮೀಸಲಕಾಯ್ದಿರಿಸಿದಂತೆ!**

ಕುಂಬಳ ಕಾಯಿಗೆ ಕಬ್ಬಿಣದ ಆವರಣ ಹಾಕಿದರೆ ಅದು ಕೊಳೆತು ಹೋಗುತ್ತದೆಯೋ ವಿನಃ ಅದು ಬಲಿತು ದೊಡ್ಡದಾಗುವದಿಲ್ಲ; ಹಾಗೆ ಚಂಚಲ ಮನಸ್ಸಿನವನಿಗೆ ಶಿವದೀಕ್ಷೆಯನ್ನು ಕೊಟ್ಟರೆ ಅವನಲ್ಲಿ ಭಕ್ತಿರಸ ಹುಟ್ಟುವದು ಅಸಾಧ್ಯ; ಭಕ್ತಿ ಬೆಳೆಯುವದು ಅಂತರಂಗದ ಶಕ್ತಿಯಿಂದ, ಬರಿಯ ಬಾಹ್ಯ ದೀಕ್ಷೆಯಿಂದಲ್ಲ; ಕೂಡಲ ಸಂಗಮದೇವಾ ದುರ್ಬಲ ಮನಸಿನವನಿಂದ ಏನೂ ಸಾಧ್ಯವಿಲ್ಲ.

**೯೩. ಸೆಗಣಿಯ ಬೆನಕಂಗೆ ಸಂಪಗೆಯರಳಲ್ಲಿ ಪೂಜಿಸಿದರೆ**
**ರಂಜನೆಯಲ್ಲದೆ ಅದರ ಗಂಜಳ ಬಿಡದಣ್ಣ !**
**ಮಣ್ಣ ಪುತ್ಥಳಿಯ ಮಾಣದೆ ಜಲದಲ್ಲಿ ತೊಳೆದರೆ**
**ನಿಚ್ಚನಿಚ್ಚಕ್ಕೆ ಕೆಸರಹುದಲ್ಲದೆ ಅದರಚ್ಚುಗ ಬಿಡದಣ್ಣ !**
**ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟರೆ**
**ಕೆಟ್ಟವನೇಕೆ ಶಿವಭಕ್ತನಹನು, ಕೂಡಲಸಂಗಮದೇವಾ ?**

ಸಗಣೆಯಿಂದ ಗಣಪತಿಯನ್ನು ಮಾಡಿ ಸಂಪಿಗೆಯ ಹೂವಿನಿಂದ ಪೂಜಿಸಿದರೂ, ಸಗಣೆಯ ದುರ್ವಾಸನೆ ಹೋಗುವದಿಲ್ಲ; ಮಣ್ಣಿನಿಂದ ಶಿವಲಿಂಗವನ್ನು ಮಾಡಿ ನೀರೆರೆದು ಪೂಜಿಸಿದರೆ ಆ ಲಿಂಗವು ದಿನ ದಿನಕ್ಕೆ ಕೆಸರಾಗುತ್ತದೆ; ಮತ್ತು ಮಣ್ಣು ತನ್ನ ಕೆಸರಿನ ಗುಣವನ್ನು ಕಳೆದುಕೊಳ್ಳುವದಿಲ್ಲ; ಈ ಪ್ರಕಾರ ಸಂಸಾರದ ವಿಷಯ ಲಂಪಟಗಳಾದ ಮಾನವರಿಗೆ ಶಿವದೀಕ್ಷೆ ಕೊಟ್ಟರೆ ಆ ದುರ್ಜನರು ಎಂದಿಗೂ ಶಿವಭಕ್ತರಾಗಲಾರರು. ಕೂಡಲ ಸಂಗಮದೇವಾ !

೯೪. ಕಬ್ಬುನದ ಕೋಡಗನ ಪರುಷ ಮುಟ್ಟಲು
ಹೊನ್ನಾದರೇನು, ಮತ್ತೇನಾದರೇನು;
ತನ್ನ ಮುನ್ನಿನ ರೂಹ ಬಿಡದನ್ನಕ್ಕ—
ಕೂಡಲ ಸಂಗಮ ದೇವಾ
ನಿಮ್ಮ ನಂಬಿಯೂ ನಂಬದ ಡಂಭಕರಿಗಯ್ಯಾ?

ಕಬ್ಬಿಣದ ಕಪಿಗೆ ಪರುಷದ ಸ್ಪರ್ಶವಾಗಿ ಅದು ಬಂಗಾರವಾದರೇನು? ಅದರ ರೂಪ ಕಪಿರೂಪವೇ ಆಗಿರುತ್ತದೆ; ಕೂಡಲ ಸಂಗಮ ದೇವಾ ನಿಮ್ಮಲ್ಲಿರುವ ಭಕ್ತಿ-ನಂಬಿಕೆಗಳು ಕೇವಲ ಡಂಭಾಚಾರದವಾಗಿದ್ದರೆ ಅವರು ಶಿವದೀಕ್ಷೆ ಹೊಂದಿದ ಉಪಯೋಗವೇನು. ?

೯೫. ತನುವಿನಲ್ಲೊಂದಿಟ್ಟು ಮನದಲ್ಲೆರಡಿಟ್ಟರೆ,
ಬಲ್ಲ ನೊಲ್ಲನಯ್ಯಾ ಲಿಂಗವು; ಬಲ್ಲನೊಲ್ಲನಯ್ಯಾ.
ಪರರ ಚಿಂತೆಯ ನೊಲ್ಲ ನೊಲ್ಲ ಕೂಡಲ ಸಂಗಮದೇವ.

ತೋರುಗಾಣಿಕೆಗೆ ಮೈಮೇಲೆ ರುದ್ರಾಕ್ಷಿಮಾಲಾ, ಭಸ್ಮಧಾರಣೆ ಮಾಡಿಕೊಂಡು ಮನದಲ್ಲಿ ದುರ್ಬುದ್ಧಿ, ಮೋಸದ ವಿಚಾರಗಳನ್ನು ತುಂಬಿ ಕೊಡವರನ್ನು ಸರ್ವಜ್ಞನಾದ ಲಿಂಗನು ಮೆಚ್ಚನು; ಇಂಥ ಕುಕರ್ಮಿಗಳ ಹಿತಚಿಂತನೆಯನ್ನು ಲಿಂಗನು ಮಾಡನು; ಕೂಡಲ ಸಂಗನು ಅವರಿಗೆ ಮೋಕ್ಷದಯಪಾಲಿಸುವುದಿಲ್ಲ.

೯೬. ಒಳಗೆ ಕುಟಿಲ; ಹೊರಗೆ ವಿನಯುವಾಗಿ ಭಕ್ತರೆಂದೆನಿಸಿ
ಕೊಂಬುವರ, ಬಲ್ಲ ನೊಲ್ಲನಯ್ಯಾ ಲಿಂಗವು,
ಅವರು ಶಿವಪಥಕ್ಕೆ ಸಲ್ಲರು ಸಲ್ಲರಯ್ಯಾ
ಒಳ ಹೊರ ಗೊಂದಾಗದವರಿಗೆ ಅಳಿಯಾಸಿದೋರಿ,
ಬೀಸಾಡುವನವರ ಜಗದೀಶ ಕೂಡಲ ಸಂಗಮದೇವ.

ಅಂತರಂಗದಲ್ಲಿ ಕೆಟ್ಟ ವಿಚಾರಗಳನ್ನಿರಿಸಿಕೊಂಡು ಬಹಿರಂಗದಲ್ಲಿ ವಿನಯಸಂಪನ್ನ ಭಕ್ತರೆನಿಸಿಕೊಳ್ಳುವವರನ್ನು ತ್ರಿಕಾಲ

ಜ್ಞಾನಾದ ಲಿಂಗನು ಕರುಣಿಸಲಾರ. ಅವರು ಹರ ಕಾರುಣ್ಯ ಮಾರ್ಗಕ್ಕೆ ಅಯೋಗ್ಯರು. ಹೀಗೆ ಅಂತರಂಗ ಬಹಿರಂಗಗಳಲ್ಲಿ ಎರಡು ಪ್ರಕಾರ ಮುಖವಾಡು ಹಾಕಿಕೊಂಡು ಬಾಳುವವರಿಗೆ ಕೂಡಲಸಂಗಮ ದೇವರು ವಿಷಯಾಮಿಷದ ರುಚಿ ದೋರಿ ಅವರನ್ನು ಮೂಲೆಗುಂಪಾಗಿ ಮಾಡುವನು.

೯೭. **ಮನೆಯೊಳಗೆ ಮನೆಯೊಡೆಯ ನಿದ್ದಾನೋ ಇಲ್ಲವೊ?**
**ಹೊಸ್ತಲಲ್ಲಿ ಹುಲ್ಲುಹುಟ್ಟಿ ಮನೆಯೊಳಗೆ ರಜ ತುಂಬಿ,**
**ಮನೆಯೊಳಗೆ ಮನೆಯೊಡೆಯ ನಿದ್ದಾನೋ ಯಿಲ್ಲವೊ?**
**ತನುವಿನಲಿ ಹುಸಿ ತುಂಬಿ, ಮನದೊಳಗೆ ವಿಷ ತುಂಬಿ.**
**ಮನೆಯೊಳಗೆ ಮನೆಯೊಡೆಯನಿಲ್ಲ ಕೂಡಲ ಸಂಗಮದೇವ.**

ಮನೆಗೆ ಬೀಗ ಹಾಕಿದ್ದನ್ನು ಕಂಡು ಮನೆಯಲ್ಲಿ ಯಜಮಾನರು ಇಲ್ಲವೆಂಬ ಸಂಶಯ ಹುಟ್ಟಿ ಮನೆಯಂಗಳದಲ್ಲಿ ಹುಲ್ಲು ಹೊಲಸು ಬೆಳೆದದ್ದನ್ನು, ಮನೆಯಲ್ಲಿ ಕಸ, ಧೂಳ ತುಂಬಿದ್ದನ್ನು ಕಣ್ಣಾರ ಕಂಡ ಮೇಲೆ ಯಜಮಾನರಿಲ್ಲವೆಂದು ದೃಢವಾಗಿ ತಿಳಿಯುವ ದೃಷ್ಟಾಂತದಂತೆ ಡಾಂಭಿಕಾಚಾರಗಳನ್ನು ಪ್ರದರ್ಶಿಸಿ, ಹೃದಯದಲ್ಲಿ ಕುಹಕ ಕಾಪಟ್ಯಗಳನ್ನು ಮುಚ್ಚಿಟ್ಟುಕೊಂಡ ಭಕ್ತರ ಹೃನ್ಮನಗಳಲ್ಲಿ ಕೂಡಲಸಂಗನು ವಾಸಿಸುವದಿಲ್ಲ!

೯೮. **ಒಡೆತ್ತ ಬಲ್ಲದೋ ಅವಲಕ್ಕಿಯ ರುಚಿಯ?**
**ಕೋಡಗ ಬಲ್ಲದೆ ಶಳೆಮಂಚದ ಸುಖವ ?**
**ಕಾಗೆ ನಂದನ ಬನದೊಳಗಿರ್ದರೇನು,**
**ಕೋಗಿಲೆಯಾಗ ಬಲ್ಲದೆ? ಹೇಳಾ,**
**ಕೊಳನ ತಡಿಯಲ್ಲೊಂದು ಹೊರಸು ಕುಳ್ಳಿರ್ದಡೇನು,**
**ಕಳಹಂಸ ಯಾಗಬಲ್ಲದೆ ಕೂಡಲ ಸಂಗಮದೇವಾ.**

ಹುರಿಯುವ ಹಂಚು ಅವಲಕ್ಕಿಯ ಸವಿಯನ್ನು ಸವಿಯಲಾರದು; ಟಣಟಣಕುಣಿದಾಡುವ ಮಂಗಕ್ಕೆ ತೂಗುಮಂಚದ ಸುಖದರಿವಾಗಲಾರದು, ಕಾಗೆ ನಂದನವನದಲ್ಲಿದ್ದ ಮಾತ್ರಕ್ಕೆ ಕೋಗಿಲೆಯಾಗಲಾರದು; ತಿಳಿನೀರ ಸರೋವರದ ದಂಡೆಯಲ್ಲಿರುವ ಮೀನ ತಿನ್ನುವ

ಪಕ್ಷಿ ರಾಜಹಂಸವಾಗಲಾರದು; ಇವುಗಳ ಉದಾಹರಣೆಯಂತೆ, ಏಡ್ಸಾಂ ತರಂಗ, ಏಕಚಿತ್ತ, ಭವ್ಯಭಕ್ತಿಯಿಲ್ಲದೆ ಕೇವಲ ಮೇಲ್ಗಾಣಿಕೆಗೆ ಆಡಂಬರದ ಪೂಜೆ ಪುನಸ್ಕಾರಗಳಾಚರಣೆ ಮಾಡಿದರೆ ಕೂಡಲ ಸಂಗಮದೇವನು ಕೃಪಾಪ್ರಸಾದ ನೀಡುವದಿಲ್ಲ ಬೋರ್ಗಲ್ಲ ಮೇಲೆ ನೀರು ಸುರುಹಿದಂತಾಗುತ್ತದೆ.

**೯೯. ಎನಿಸು ಕಾಲ ಕಲ್ಲು ನೀರೊಳಗಿರ್ದರೇನು,**
**ನೆನೆದು ಮೃದುವಾಗ ಬಲ್ಲುದೆ?**
**ಎನಿಸು ಕಾಲ ನಿಮ್ಮ ಪೂಜಿಸಿ ಏನೆನಯ್ಯಾ,**
**ಮನದಲ್ಲಿ ದೃಢವಿಲ್ಲದನ್ನಕ್ಕ?**
**ನಿಧಾನವ ಕಾಯ್ದಿರ್ದ ಬೆಂತರನಂತೆ!**
**ಅದರ ವಿಧಿಯೆನಗಾಯಿತ್ತು, ಕೂಡಲ ಸಂಗಮದೇವ**

ಕಲ್ಲು ನೀರಿನಲ್ಲಿ ಬಹಳ ಕಾಲದವರೆಗಿದ್ದರೂ ಮಿದುವಾಗಲಾರದು. ಮನಸ್ಸಿನಲ್ಲಿ ಭಕ್ತಿಯಿಲ್ಲದೆ ನಿನ್ನನ್ನು ಎನಿತು ಕಾಲ ಪೂಜಿಸಿದರೂ ಉಪಯೋಗವಿಲ್ಲ; ಹೂಳಿಟ್ಟ ಧನವನ್ನು ಕಾಯುವ ಭೂತದಂತೆ ನನ್ನ ಬಾಳು, ಕೂಡಲಸಂಗಮದೇವಾ !

**೧೦೦ ಸಂತ ವಿದ್ದ ಮನೆಗೆ ಕೊಂತವ ತಂದಂತೆ.**
**ಇದನೆಂತು ಸೆಂತೈಸುವೆನು?**
**ಸಂತೆಯ ಗುಡಿಸಲ ಸೂಳಿಗೆ ಕೊಂತವಳವಡುವದೆ?**
**ಕೂಡಲ ಸಂಗಮದೇವರ ಮಹತ್ವ ಅರಿಗೆಯೂ ಅಳವಡದು.**

ಸುಖ ಶಾಂತಿಯಿಂದ ಬೆಳಗುವ ಮನೆಗೆ ಜಗಳದ ಮಾರಿಯ ತಂದ ಹಾಗೆ, ಕಾಮಾದಿ ಅರಿಷಡ್ವೈರಿಗಳ ಉಪಾಧಿಯನ್ನು ಹೇಗೆ ಸಹಿಸಲಿ. ಬಾಜಾರದ ಸೂಳಿಗೆ ಕಾಸಿಲ್ಲದೆ ಬಂದು ಜಗಳ ಕಾಯುವ ವಿಟರ-ರಸಿಕರ ಸ್ವಭಾವವನ್ನು ಮುನ್ನವೇ ತಿಳಿದುಕೊಳ್ಳುವದು ಸಾಧ್ಯವೆ? ಕೂಡಲ ಸಂಗನ ಮಹಿಮೆಯ ಪರಿ ಯಾರಿಗೂ ತಿಳಿಯದು, ತಿಳಿಯದು !

**೧೦೧ ಕೂಸನುಳ್ಳ ಸೂಳೆ ಧನದಾಸೆಗೆ ಒತ್ತೆಯ ಕೊಂಡರೆ**
**ಕೂಸಿಗಲ್ಲ ಬೋಜಗಂಗಲ್ಲ**
**ಕೂಸನೊಮ್ಮೆ ಸಂತೈಸುವಳು**
**ಭೋಜಗನೊಮ್ಮೆ ನೆರೆವಳು**
**ಧನದಾಸೆ ಬಿಡದು ಕೂಡಲ ಸಂಗಮ ದೇವಾ.**

ಹಣದ ಹುಚ್ಚು-ದುರಾಶೆ ಲೋಕದ ಮಾನಿಸರಿಗೆ ಬಿಡದು ಕೂಡಲ ಸಂಗಮದೇವ, ಹಸಗೂಸು ಮಗ್ಗಲಗಿಕ್ಕಿಕೊಂಡು ಹಣದಾಸಗೆ ಸೂಳೆ ವಿಟರನ್ನು ರಮಿಸಲು ಬರಮಾಡಿಕೊಂಡು, ಒಮ್ಮೆ ಹಸುಳೆಯನ್ನು ಮತ್ತೊಮ್ಮೆ ರಮಿಸಲು ಬಂದ ರಸಿಕನನ್ನು ಏಕ ಪ್ರಕಾರ ಸಮಾಧಾನ ಪಡಿಸುವಳು. ದುಡ್ಡಿನ ಮಾಯೆ ಮೀರಿ ನಿಂತಿದೆ!

**೧೦೨ ಎರದೆಲೆಯಂತೆ ಒಳಗೊಂದು ಹೊರಗೊಂದಾದರೆ ಮೆಚ್ಚು**
**ವನೇ ಶಿವನು?**
**ಜಾರದ ಭವಂಗಳಲ್ಲಿ ಬರಿಸುವನಲ್ಲದೆ ಮೆಚ್ಚುವನೇ ಹರನು?**
**ಅಘೋರ ನರಕವ ನುಣಿಸುವನಲ್ಲದೆ ಮೆಚ್ಚುವನೆ?**
**ಉಡುವಿನ ನಾಲಿಗೆಯಂತೆ ಎರಡಾದರೆ; ಕೂಡಲ ಸಂಗಯ್ಯ**
**ಮೆಚ್ಚುವನೆ?**

ಹೊರಭಾಗ ಬೆಳ್ಳಗೆ, ಒಳಭಾಗ ಕರಿದಾಗಿರುವ ಎಲೆಯಂತೆ, ವಿಭೂತಿ-ರುದ್ರಾಕ್ಷಿಗಳನ್ನು ಧರಿಸಿ ಬಡಿವಾರ ಮಾಡುತ್ತ ಹೃದಯದಲ್ಲಿ ಕಪಟದ ಕಡಿವಾಣಗಳನ್ನಿಟ್ಟುಕೊಂಡರೆ ಪರಶಿವನು ಮೆಚ್ಚುವದಿಲ್ಲ. ಅವರಿಗೆ ಭಯಂಕರ ನರಕದ ಸಂಕೋಲೆಗಳನ್ನು ತೊಡಿಸುವನು; ಹಾವಿನ ನಾಲಿಗೆಯಂತೆ ಎರಡು ನಾಲಿಗೆಯೊಂದಿಗೆ ಇಲ್ಲಿಯೊಂದು ಅಲ್ಲಿಯೊಂದಾಗಿ ಅರ್ಥವಿಹೀನ ಮಾತುಗಳಿಗೆ ಕೂಡಲ ಸಂಗನು ಅನುಗ್ರಹಿಸುವದಿಲ್ಲ.

**೧೦೩ ಭಕ್ತರ ಕಂಡರೆ ಬೋಳರಪ್ಪಿರಯ್ಯಾ**
**ಶ್ರವಣರ ಕಂಡರೆ ಬತ್ತಲೆ ಅಪ್ಪಿರಯ್ಯಾ**
**ಹಾರುವರ ಕಂಡರೆ ಹರಿನಾಮ ವೆಂಬಿರಯ್ಯಾ**

**ಅವರವರ ಕಂಡರೆ ಅವರವರಂತೆ**
**ಸೂಳೆಗೆ ಹುಟ್ಟಿದವರ ಎನಗೊಮ್ಮೆ ತೋರದಿರಯ್ಯಾ**
**ಕೂಡಲ ಸಂಗಮ ದೇವರ ಪೂಜಿಸಿ ಅನ್ಯದೈವಂಗಳಿಗೆರಗಿ**
**ಭಕ್ತರೆನಿಸಿಕೊಂಬ ಅಜ್ಞಾನಿಗಳ ನಾನೇನೆಂಬೆನಯ್ಯಾ.**

ಭಕ್ತರನ್ನು ಕಂಡೊಡನೆ ಕಡು ಮಮತೆಯಿಂದ ಆಲಿಂಗಿಸುವಿರಿ, ಜೈನ ಗುರುಗಳನ್ನು ಯತಿಗಳನ್ನು ದರ್ಶನವಾದೊಡನೆ ಬತ್ತಲೆ ಮೂರ್ತಿಯನ್ನೇ ಆಲಿಂಗಿಸುವಿರಿ. ಬ್ರಾಹ್ಮಣರನ್ನು ಕಂಡೊಡನೆಯೇ ಹರಿನಾಮ ಪಠಿಸುವಿರಿ. ಈ ಪ್ರಕಾರ ಹೊತ್ತು ಬಂದ ಹಾಗೆ ಕುಣಿಯುವ ತೊತ್ತಿನಂತಿರುವ, ಅಧರ್ಮಕ್ಕೆ ಹುಟ್ಟಿದವರನ್ನು ನನ್ನ ಕಣ್ಣಿಗೆ ಕಾಣದಂತೆ ಮಾಡು ಗುರುವೆ. ಅಷ್ಟಲ್ಲದೆ ಕೂಡಲಸಂಗಮ ದೇವನ ಪೂಜಿಸಿ ಶರಣರೆಂದೆನಿಸಿಕೊಂಡು ಪುನಃ ಅನೇಕ ದೇವರಿಗೆ ಕೈಮುಗಿಯುವವರಿಗೆ ಏನೆಂದು ಕರೆಯಬೇಕೆಂಬುದು ನನಗೆ ತಿಳಿಯದು; ಎಂದು ಬಸವಣ್ಣನವರು ಹೇಳುತ್ತಾರೆ.

**೧೦೪ ಗಂಡ ಶಿವಲಿಂಗದೇವರ ಭಕ್ತ**
**ಹೆಂಡತಿ ಮಾರಿಮಸಣಿಯ ಭಕ್ತೆ**
**ಗಂಡಕೊಂಬುದು ಪಾದೋದಕ ಪ್ರಸಾದ**
**ಹೆಂಡತಿ ಕೊಂಬುದು ಸುರೆ-ಮಾಂಸ**
**ಭಾಂಡ ಭಾಜನ ಶುದ್ಧವಿಲ್ಲದವರ ಭಕ್ತಿ;**
**ಹೆಂಡದ ಮಡಿಕೆಯ ಹೊರಗೆ ತೊಳೆದಂತೆ ಕೂಡಲ**
**ಸಂಗಮದೇವ.**

ದೇಹ ಮನಸ್ಸುಗಳು ನಿರ್ಮಲವಾಗಿ, ಪರಿಶುದ್ಧವಾಗಿ ಒಂದಕ್ಕೊಂದು ಅನುಪಮವಾಗಿರದ ಭಕ್ತಿ ಪೂಜೆಗಳು ಹೆಂಡದ ಗಡಿಗೆಯನ್ನು ಹೊರಗೆ ತೊಳೆದು ಸ್ವಚ್ಛ ಮಾಡಿಟ್ಟಂತೆಯೇ ಸರಿ. ತತ್ಕಾರಣ ಸತಿಪತಿಗಳು ಅನುದಾರ ಅನ್ಯೋನ್ಯವಾಗಿ ಶಿವಲಿಂಗ ಪೂಜೆ ಮಾಡಬೆ ಎತ್ತು ಏರಿಗೆ ಕೋಣ ಕೆರೆಗೆ ಎಳೆದಂತೆ ಮಾಡಿದರೆ ಎಲ್ಲವೂ ನಿರರ್ಥಕ.

೧೦೫ ಹಾವಾಡಿಗನು ಮೂಕೊರತೆಯು ತನ್ನ ಕೈಯಲ್ಲಿ ಹಾವು
ಮಗನ ಮದುವೆಗೆ ಶಕುನವ ನೋಡ ಹೋದಾಗ
ಇದಿರಲ್ಲೊಬ್ಬ ಮೂಕೊರತೆಯ ಹಾವಾಡಿಗನ ಕಂಡು
ಶಕುನ ಹೊಲ್ಲೆಂಬ ಚದುರನ ನೋಡಾ
ತನ್ನ ಸತಿ ಮೂಕೊರತೆ, ತನ್ನ ಕೈಯಲ್ಲಿ ಹಾವು
ತಾನು ಮೂಕೊರೆಯ
ತನ್ನ ಭಿನ್ನವನರಿಯದೆ ಅನ್ಯರನೆಂಬ
ಕುನ್ನಿಯ ನೇನೆಂಬೆ ಕೂಡಲ ಸಂಗಮ ದೇವ

ತನ್ನ ಎಲೆಯೊಳಗೆ ಕತ್ತೆ ಸತ್ತುಬಿದ್ದಾಗ ಬೇರೆಯವರ ಎಲೆಯೊಳಗಿನ ನೊಣ ಝಾಡಿಸಲು ಹೋದವನಂತೆ, ತನ್ನ ತಾನರಿಯದೆ ಪರರಿಗೆ ತಿಳಿಯ ಹೇಳುವ ತಿಳಿಗೇಡಿಯಂತೆ, ಹಾವಾಡಿಗನು ತನ್ನ ಹಾಗೂ ತನ್ನ ಸತಿಯ ಕುಂದು ಕೊರತೆಗಳನ್ನರಿಯದೆ, ಹಾದಿಯಲ್ಲಿ ಇದಿರಾದ ಮತ್ತೊಬ್ಬ ಹಾವಾಡಿಗನ ಮುಕ್ಕು ಮುರುಕುಗಳನ್ನೆಣಿಸಿ ಅಪಶಕುನವಾಯಿತೆಂದು ಗೋಳಿಟ್ಟು ಪರರನ್ನು ಹಳಿಯುವ ಈ ಮೂರ್ಖ ಕುನ್ನಿಗಳನ್ನು ಏನೆಂದು ಕರೆಯಲಿ ಕೂಡಲಸಂಗಮದೇವ.

೧೦೬ ಅಂಗದಿಚ್ಛೆಗೆ ಮದ್ಯಮಾಂಸವ ತಿಂಬುವರು
ಕಂಗಳಿಚ್ಛೆಗೆ ಪರವಧುವನೆರೆವರು
ಲಿಂಗಲಾಂಛನ ಧಾರಿಯಾದಲ್ಲಿ ಫಲವೇನು?
ಲಿಂಗ ಪಥವ ತಪ್ಪಿನಡೆವರು
ಜಂಗಮ ಮುಖದಿಂದ ನಿಂದೆ ಬಂದರೆ, ಕೊಂಡಮಾರಿಗೆ
ಹೋಹುದು ತಪ್ಪದು ಕೂಡಲ ಸಂಗಮದೇವ.

ಜಿಹ್ವಾ ಚಪಲತೆಗೆ ಮದ್ಯ ಮಾಂಸಗಳನ್ನು ಸೇವಿಸುತ್ತಾರೆ; ಕಣ್ಣ ಕಾಮನೆಗೆ ಪರಸ್ತ್ರೀಯ ಸಂಗ ಮಾಡುತ್ತಾರೆ. ಇಂಥವರು ಲಿಂಗ ಧರಿಸಿ ಪೂಜಿಸಿದರೂ ಏನು ಪ್ರಯೋಜನ? ಶಿವಪಥಕ್ಕೆ ಅಡ್ಡಾಗಿ ನಡೆದವರನ್ನು ಜಂಗಮರು ಖಂಡಿಸಿ ಅವರಿಗೆ ಶಾಪ ಕೊಟ್ಟರೆ, ಬಲಿ ಕೊಡಬೇಕೆಂದು

ಗೊತ್ತು ಮಾಡಿದ ವಧ್ಯ ಪ್ರಾಣಿಯಂತೆ ಇವರ ಸಾವು ನಿಶ್ಚಿತವಾಗಿದೆ. (ತಪ್ಪದು) ಕೂಡಲಸಂಗಮದೇವ.

೧೦೭ ಶಿವಜನ್ಮದಲ್ಲಿ ಹುಟ್ಟಿ ಲಿಂಗೈಕ್ಯರಾಗಿ
ತಮ್ಮಂಗದ ಮೇಲೆ ಲಿಂಗವಿರಲು
ಅನ್ಯರನೆ ಹಾಡಿ ಅನ್ಯರನೆ ಹೊಗಳಿ
ಅನ್ಯರ ವಚನವ ಕೊಂಡಾಡಲು
ಕರ್ಮ ಬಿಡದು ಭವಬಂಧನ
ಶ್ವಾನ ಯೋನಿಯಲಿ ಬಪ್ಪುದು ತಪ್ಪದು.
ಇದು ಕಾರಣ ಕೂಡಲ ಸಂಗಮದೇವ,
ನಿಮ್ಮನಂಬಿಯೂ ನಂಬದ ಡಂಭಕರಿಗೆ
ಮಳಲಗೋಡೆಯ ನಿಕ್ಕಿ ನೀರಲ್ಲಿ ತೊಳೆದಂತಾಯಿತ್ತು.

ಶಿವಭಕ್ತರ ಮನೆಯೊಳಗೆ ಹುಟ್ಟಿಬಂದು ಲಿಂಗದೊಳಗೆ ಏಕರೂಪವಾಗಿ, ದೇಹದೊಳಗೆ ಲಿಂಗಧಾರಣ ಮಾಡಿಕೊಂಡು, ಬೇರೆ ದೇವರನ್ನು ನೆನೆದು ಹಾಡಿ ಹೊಗಳಿದರೆ ಕರ್ಮ ವಿಮೋಚನೆ ಯಾಗದು; ಆದ ಕಾರಣ ಮನುಷ್ಯ ಜನ್ಮ ಹೋಗಿ ನಾಯಿಯ ಜನ್ಮ ಬರುವದನ್ನು ತಪ್ಪಿಸಲು ಸಾಧ್ಯವಿಲ್ಲ. ಹಾಗೆ ಡಾಂಭಿಕ ಭಕ್ತರು ನಿನ್ನಲ್ಲಿ ತೋರಿಕೆಯ ನಿಷ್ಠೆಯನ್ನು ತೋರಿಸುತ್ತಾರೆ; ಅವರ ಬಾಳುವೆಯು ಮಳಲ ಗೋಡೆಯನ್ನು ನೀರಿನಲ್ಲಿ ತೊಳೆದ ಹಾಗೆ ಇರುತ್ತದೆ, ಕೂಡಲ ಸಂಗಮದೇವಾ!

೧೦೮ ಅರ್ಥ ರೇಖೆ ಇದ್ದಲ್ಲಿ ಫಲವೇನು
ಆಯುಷ್ಯರೇಖೆ ಇಲ್ಲದನ್ನಕ್ಕ
ಹಂದೆಯ ಕೈಯಲ್ಲಿ ಚಂದ್ರಾಯುಧವಿದ್ದು ಫಲವೇನು ?
ಅಂಧಕನ ಕೈಯಲ್ಲಿ ದರ್ಪಣವಿದ್ದು ಫಲವೇನು
ಮರ್ಕಟನ ಕೈಯಲ್ಲಿ ಮಾಣಿಕ್ಯವಿದ್ದು ಫಲವೇನು
ನಮ್ಮ ಕೂಡಲ ಸಂಗನ ಶರಣರನರಿಯದವರ ಕೈಯಲ್ಲಿ
ಲಿಂಗ ವಿದ್ದು ಫಲವೇನು, ಶಿವಪಥವನರಿಯರಾಗಿ.

ಆಯುಷ್ಯವಿಲ್ಲದವನ ಕೈಯಲ್ಲಿ ಒಳ್ಳೆಯ ಧನರೇಷೆಯಿದ್ದರೂ ಪ್ರಯೋಜನವಿಲ್ಲ; ಹೇಡಿಯ ಕೈಯಲ್ಲಿ ಒಳ್ಳೆಯ ಖಡ್ಗವಿದ್ದರೆ ಏನು ಉಪಯೋಗ? ಹಾಗೆಯೇ ಕುರುಡನ ಕೈಯಲ್ಲಿ ಕನ್ನಡಿ, ಮಂಗನ ಕೈಯಲ್ಲಿ ಮಾಣಿಕ್ಯ ಇವು ನಿರುಪಯೋಗಿ! ಅದೇ ರೀತಿಯಿಂದ ಕೂಡಲ ಸಂಗಮನ ಭಕ್ತರನ್ನು ತಿಳಿಯದ ಮೂರ್ಖನ ಕೈಯಲ್ಲಿ ಲಿಂಗವಿದ್ದರೂ ಪ್ರಯೋಜನವಿಲ್ಲ.

**೧೦೯ ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ**
**ಲಿಂಗದ ಮೇಲೆ ನಿಷ್ಠೆಯಿಲ್ಲದ ಭಕ್ತ**
**ಇದ್ದರೇನೋ ಶಿವ ಶಿವಾ ಹೋದರೇನೋ**
**ಕೂಡಲ ಸಂಗಮ ದೇವಯ್ಯಾ**
**ಉಣದ ಆವಿಂಗೆ ಉಣ್ಣದ ಕರುವ ಬಿಟ್ಟಂತೆ.**

ಪತಿಯಲ್ಲಿ ಪ್ರೇಮ ಮಾಡದ ವಿರಮಿಸದ ಸತಿಯರೂ, ಲಿಂಗದಲ್ಲಿ ತಾದಾತ್ಮ್ಯ ಹೊಂದಿ ಶ್ರದ್ಧೆಯಿಡದ ಭಕ್ತರೂ ಜಗದಲ್ಲಿದ್ದರೂ ಬಿಟ್ಟರೂ ಸಮ. ಉಣಿಸದ ಆಕಳಿಗೆ ಉಣ್ಣದ ಕರುವ ಬಿಟ್ಟಂತೆ ಅವರ ಸಂಸಾರ ಕೂಡಲಸಂಗಮದೇವ.

**೧೧೦ ಅವಳ ವಚನ ಬೆಲ್ಲದಂತೆ ಹೃದಯದಲ್ಲಿರ್ಪುದು ನಂಜು ಕಂಡಯ್ಯಾ**
**ಕಂಗಳಲ್ಲೊಬ್ಬನ ಕರೆವಳು, ಮನದಲ್ಲೊಬ್ಬನ ನೆರೆವಳು**
**ಕೂಡಲ ಸಂಗಮ ದೇವಯ್ಯಾ ಕೇಳಯ್ಯಾ**
**ಮನಿಸ ಗಳ್ಳಿಯ ನಂಬದಿರಯ್ಯಾ.**

ಎದೆಯಲ್ಲಿ ವಿಷದಂತವ ಬಚ್ಚಿಟ್ಟು, ಸವಿ ಮಾತನಾಡಿ ಕಣ್ಣಸನ್ನೆಯಿಂದ ಒಬ್ಬನನ್ನು ಕರೆದು, ಮನದಲ್ಲಿ ಮಗುದೊಬ್ಬನ ಕನಸು ಕಾಣುವ ಸೂಳೆಯಂತೆ, ತೋರಿಕೆಗೆ ಆಚಾರದ ವೇಷ ಧಾರಣೆ ಮಾಡಿಕೊಂಡ ಮನಗಳ್ಳರನ್ನು ಕೂಡಲ ಸಂಗಮದೇವನು ಎಂದಿಗೂ ನಂಬುವದಿಲ್ಲ.

೧೧೧ ಹಾದರಕ್ಕೆ ಹೋದರೆ ಕಳ್ಳದಮ್ಮವಾಗಿತ್ತು,
ಹಾಳು ಗೋಡೆಗೆ ಹೋದರೆ ಚೇಳೂರಿತ್ತು,
ಅಬ್ಬರವ ಕೇಳಿ ತಳವಾರ ಉಟ್ಟ ಸೀರೆಯ ಸುಲಿದ,
ನಾಚಿ ಹೋದರೆ ಮನಿಯ ಗಂಡ ಬೆನ್ನ ಬಾರ ನೆತ್ತಿದ,
ಅರಸು ಕೂಡಲ ಸಂಗಮ ದೇವ ದಂಡವ ಕೊಂಡ.

ಕತ್ತಲಲ್ಲಿ ಮುಚ್ಚುಮರೆಯಲ್ಲಿ ಜಾರಿಣಿಯು ಪರಗಂಡಸಿನ ಕೂಟಕ್ಕೆ ಹೋದರೆ ಆ ಕಳ್ಳತನವು ಬೈಲಿಗೆ ಬಿದ್ದು ಬಬ್ಬಾಟವಾದಾಗ ಹಾಳ ಗೋಡೆ ಹಾರಿ ಹೋಗಬೇಕೆಂದರೆ ಅಲ್ಲಿ ಚೇಳು ಕಚ್ಚಿತು. ಈ ಗದ್ದಲ ಕೇಳಿ ತಳವಾರ (ಗಸ್ತು ತಿರುಗುವವ) ಮೈಮೇಲಿನ ಒಡವೆಗಳನ್ನು ಕಿತ್ತುಕೊಂಡನು. ಆ ಲಜ್ಜಾ ಲಲನೆಯು ಮನೆಗೆ ಬರಲು ಗಂಡ ಬಾರಕೋಲಿನಿಂದ ಬೆನ್ನಿಗೆ ಬಡಿದನು. ಆದರೆ ಗಂಡರ ಗಂಡನಾದ ಕೂಡಲ ಸಂಗನು ಪಾಪದ ಬೇಡಿಗಳನ್ನು ತೊಡಿಸಲು ಅಪ್ಪಣೆ ಕೊಡಿಸಿದನು.

೧೧೨ ಗರಿ ತೊರೆ ಗಂಡರೆಂಬವರ ಕಾಣೆ,
ನಿರಿ ಸೋಂಕಲು ಮುನಿಯಿಲ್ಲ ನೋಡಯ್ಯಾ,
ನಂಟತನವೇನವನ, ಬಂಟತನವೇನವನ ?
ಹುಲ್ಲಕಿಚ್ಚು ಹೊಲೆಯನ ಮೇಳಾಪ !
ಅಲ್ಲಿ ಹುರುಳಿಲ್ಲ ಕೂಡಲಸಂಗಮದೇವಾ.

ಬಾಣವು ಎದೆಗೆ ತಾಗಿ ನೆತ್ತರು ಸುಳಿ ಸುಳಿ ಸುರಿಯುತ್ತಿರಲು ಯುದ್ಧಕ್ಕಂಜಿ ಹಿಂದೋಡಿ ಬರುವ ವೀರರನ್ನು ನಾನೆಂದೂ ಕಂಡಿಲ್ಲ; ತಪಸ್ಸಿಗೆ ಕುಳಿತ ಮುನಿಗೆ ಸ್ತ್ರೀಯ ಸೀರೆಯ ನಿರಿ-ಸೆರಗು ಬಡೆಯಲು ಅವನು ರತಿ ಸುಖವ ಬಯಸುವನು. ಮುನಿಯ ಆ ಶರೀರ ಸಂಬಂಧ, ಅಂಜಿ ಓಡಿ ಬಂದ ಆ ವೀರನ ಧೀರತನ, ಹುಲ್ಲ ಬೆಂಕಿ, ಹೊಲೆಯನ ಗೆಳೆತನದಂತೆ ಕೆಲಸಕ್ಕೆ ಬಾರದವು ಕೂಡಲಸಂಗಮದೇವಾ.

೧೧೩ ಅಳಿಯುತ್ತ ಅಳಿಯುತ್ತ ಬಳಲುವರಲ್ಲದೆ,
ಕೊಳಗನೇನು ಬಳಲುವದೇ ?

**ನಡೆಯುತ್ತ ನಡೆಯುತ್ತ ಬಳಲುವರಲ್ಲದೆ**
**ಬಟ್ಟೆ ಬಳಲುವದೆ ?**
**ಶ್ರವವ ಮಾಡುತ್ತ ಮಾಡುತ್ತ ಬಳಲುವರಲ್ಲದೆ ?**
**ಕೋಲು ಬಳಲುವದೆ ?**
**ನಿಜವನರಿಯದ ಭಕ್ತ ಬಳಲುವನಲ್ಲದೆ**
**ಲಿಂಗ ಬಳಲುವದೆ ?**
**ಕೂಡಲಸಂಗಮದೇವಾ, ಅರಸರಿಯದ ಬಿಟ್ಟಿಯೋ**

ಧಾನ್ಯಗಳನ್ನು ಅಳತೆ ಮಾಡಿ ಮಾಡಿ ದಣಿವು ಅಳತೆ ಮಾಡುವವನಿಗೆ ಆಗುತ್ತದೆ. ಮಾಪಿಗೆ (ಕಾಲಪಾವು) ಆಯಾಸವಾಗುವದಿಲ್ಲ; ದಾರಿಕಾರನಿಗೆ ನಡೆದು ನಡೆದು ದಣಿವಾಗುತ್ತದೆ. ಆದರೆ ದಾರಿಗೆ ಬಳಲಿಕೆಯಾಗುವದಿಲ್ಲ. ಹೆಣ ಹೊರುವವರಿಗೆ ಆಯಾಸ ಕಷ್ಟವಾಗುತ್ತದೆ ವಿನಃ ಕೋಲುಗಳಿಗೆ (ಶಿಬಿಕೆ) ತೊಂದರೆಯಾಗುವದಿಲ್ಲ. ಈ ದೃಷ್ಟಾಂತಗಳಂತೆ ಸತ್ಯಾತ್ಮನಾದ ಲಿಂಗನ ಪರಿಜ್ಞಾನವಿಲ್ಲದ ಭಕ್ತರು ಬಹಳ ಹೆಣಗಿ ಕೊರಗಿ ನವೆಯುತ್ತಾರೆ ವಿನಃ ಲಿಂಗನೆಂದಿಗೂ ಬಳಲುವದಿಲ್ಲ. ಕೂಡಲಸಂಗಮದೇವಾ ಇವೆಲ್ಲ ಒಡೆಯನಿಗೆ ತಿಳಿಯದಂತೆ ನಡೆಯುವ ನಡುವಿನವರ ಪುಕ್ಕಟ ತೀಟೆಗಳು.

## ಭಕ್ತಸ್ಥಳ

## ಭಕ್ತ ಜ್ಞಾನಿ ಸ್ಥಲ

**೧೧೪ ಒಲೆಯ ಬೂದಿಯ ಬಿಲಿಯಲು ಬೇಡ,**
**ಒಲಿದಂತೆ ಹೂಸಿ ಕೊಂಡಿಪ್ಪದು**
**ಹೂಸಿ ಏನು ಫಲ ಮನದಲ್ಲಿ ಲೇಸಿಲ್ಲದನ್ನಕ್ಕ ?**
**ಒಂದನಾಡ ಹೋಗಿ ಒಂಬತ್ತನಾಡುವ**
**ಡಂಬಕರ ನೆಚ್ಚ ಕೂಡಲಸಂಗಮದೇವ.**

ಒಲೆಯ ಬೂದಿಯು ಒಲೆಯ ತುಂಬೆಲ್ಲ ಮೆತ್ತಿಕೊಂಡಂತೆ ಮನಸ್ಸಿನಲ್ಲಿ ಉತ್ತಮ ವಿಚಾರ– ಉತ್ತಮ ಹೇತುಗಳಿಲ್ಲದೆ ಮೈಗೆಲ್ಲ ಭಸ್ಮ ಬಳಿದುಕೊಂಡರೆ ಅಂತಹರನ್ನು ಯಾರೂ ಮರ್ಯಾದಿಸುವದಿಲ್ಲ. ಹೇಗೆ ಒಲೆಯ

ಬೂದಿಯನ್ನು ಕೊಂಡುಕೊಳ್ಳುವದಿಲ್ಲವೋ ಆ ತೆರ- ಬಡಿವಾರದ ಮಾತುಗಳನ್ನಾಡುವ ಈ ಮನುಜರನ್ನು ಕೂಡಲ ಸಂಗಮದೇವನು ಮೆಚ್ಚುವದಿಲ್ಲ.

**೧೧೫ ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ**
**ಹರದ ಕುಳ್ಳಿರ್ದ ನಮ್ಮ ಮಹದೇವ ಶೆಟ್ಟಿ**
**ಒಮ್ಮನವಾದರೆ ಒಡನೆ ನುಡಿವನು, ಇಮ್ಮನವಾದರೆ ನುಡಿಯನು;**
**ಕಾಣಿಯ ಸೋಲ, ಅರ್ಧಗಾಣಿಯ ಗೆಲ್ಲ;**
**ಜಾಣ ನೋಡವ್ವ ನಮ್ಮ ಕೂಡಲಸಂಗಮದೇವ.**

ಪ್ರಪಂಚದ ಮಾಯಾ ಮೋಹಗಳಾದಿ ಐಶ್ವರ್ಯಗಳ ಅಂಗಡಿಯನ್ನಿಟ್ಟು, ಭಕ್ತಿ-ಜ್ಞಾನಗಳನ್ನು ಅಳತೆಗಲ್ಲು ಮಾಡಿ, ಪಾಪ ಪುಣ್ಯಗಳನ್ನು ದಂಡಿಗೆ ಮಾಡಿಕೊಂಡು ವ್ಯಾಪಾರಸ್ಥನಾಗಿ ಕುಳಿತ ಮಹಾದೇವನು ಬಂದ ಗಿರಾಕಿಗಳೊಂದಿಗೆ ಏಕಚಿತ್ತನಿದ್ದಾಗ ಮಾತನಾಡಿಸುತ್ತಾನೆ. ಚಿತ್ತಚಂಚಲವಾದಾಗ ಮಾತನಾಡುವದಿಲ್ಲ. ನೈಪುಣ್ಯವಾದ ತೂಕದಲ್ಲಿ ಒಂದು ಗುಂಜಿಯೂ ಕಡಿಮೆಯಾಗದಂತೆ, ಭಕ್ತಿ-ಜ್ಞಾನದ ಕಲ್ಲುಗಳಿಂದ ತೂಗಿ ಅಂಥವರನ್ನು ದಯಾಪರನಾದ ಕೂಡಲ ಸಂಗಮ ದೇವನು ಮೆಚ್ಚಿ ಕರುಣಿಸಿ ಕಾಪಾಡುತ್ತಾನೆ. 

**೧೧೬ ನಂಬರು, ನೆಚ್ಚರು, ಬರಿದೆ ಕರೆವರು**
**ನಂಬಲರಿಯರೀ ಲೋಕದ ಮನುಜರು**
**ನಂಬಿ ಕರೆದೊಡೆ ಓ ಎನ್ನನೆ ಶಿವನು?**
**"ನಂಬದೆ-ನೆಚ್ಚದೆ ಬರಿದೆ ಕರೆವರ**
**ಕೊಂಬ ಮೆಟ್ಟಿ ಕೂಗೆಂ"ದ ನಮ್ಮ ಕೂಡಲಸಂಗಮದೇವ.**

ವಿಶ್ವಾಸ-ಪ್ರೇಮ ಅಕ್ಕರತೆ ತೋರದೆ, ನಂಬಿಕೆ ಇಡದೆ ಈ ಮನುಜರು ಶಿವನನ್ನು ಕೇವಲ ಸಂಕಟ ಕಾಲದಲ್ಲಿ ನೆನೆಯುತ್ತಾರೆ. ಭಕ್ತಿ-ವಿಶ್ವಾಸಪೂರ್ವಕ ಶಿವಚಿಂತನೆ ಮಾಡಿ ಕರೆದರೆ ದಯಾಮಯನಾದ ಶಿವನು ಅವರ ಆರ್ತನಾದಕ್ಕೆ ಓ ಎಂದೇ ಎನ್ನುತ್ತಾನೆ. ಅವಿಶ್ವಾಸ, ಪ್ರೇಮವಿಲ್ಲದೆ

ಕೂಗುವವರನ್ನು ಕೆಳಕ್ಕೆ ತುಳಿದು ಬಿಡು ಎಂದು ಕೂಡಲ ಸಂಗಮ ದೇವನು ನುಡಿಯುತ್ತಾನೆ.

**೧೧೭ ಹುತ್ತವ ಬಡಿದೊಡೆ ಹಾವು ಸಾಯಬಲ್ಲುದೆ ಅಯ್ಯಾ ?**
**ಅಘೋರ ತಪವ ಮಾಡಿದೊಡೇನು ?**
**ಅಂತರಂಗ ಆತ್ಮಶುದ್ಧಿಯಿಲ್ಲದವರನೆಂತು ನಂಬುವನಯ್ಯಾ ಕೂಡಲ ಸಂಗಮದೇವ ?**

"ಒಳಗೆ ಹೆಗ್ಗಣವಿಟ್ಟು ಮೇಲೆ ಗುದ್ದು ಬಡಿದಂತೆ'' ಅಂತರಂಗ ಬಹಿರಂಗಗಳು ಶುದ್ಧವಿಲ್ಲದೆ ಎಂತಹ ತಪಸ್ಸು ಮಾಡಿದರೂ ಅದು ನಿಷ್ಫಲ. ಆಚಾರ ಸಂಪನ್ನ, ಅಂತರಂಗ ನಿರ್ಮಲವಿಲ್ಲದವರನ್ನು ಕೂಡಲಸಂಗಮದೇವನು ಮೆಚ್ಚುವದಿಲ್ಲ.

**೧೧೮ ಕಾಮವೇಕೋ ಲಿಂಗಪ್ರೇಮಿವೆನಿಸುವಂಗೆ ?**
**ಕ್ರೋಧವೇಕೋ ಶರಣವೇದ್ಯವೆನಿಸುವಂಗೆ ?**
**ಲೋಭವೇಕೋ ಭಕ್ತಿಲಾಭವ ಬಯಸುವಂಗೆ ?**
**ಮೋಹವೇಕೋ ಪ್ರಸಾದವೇದ್ಯವೆನಿಸುವಂಗೆ ?**
**ಮದ ಮತ್ಸರವುಳ್ಳವಂಗೆ ಹೃದಯಶುದ್ಧವೆಲ್ಲಿಯದೋ ?**
**ಷಡುಳಿಗರಾದಲ್ಲಿಪ್ಪ ನಮ್ಮ ಕೂಡಲಸಂಗಮದೇವ !**

ಕಾಮ, ಕ್ರೋಧ, ಲೋಭ, ಮೋಹ ಮತ್ತು ಮದ ಮತ್ಸರಗಳು, ಲಿಂಗ ಸಂಗ ಪ್ರೇಮಿಗೆ, ಶರಣ ಗುಣ ಮಣಿ ಎಂದೆನಿಸಿ ಭಕ್ತಿ ಸಂಪದ ಇಚ್ಛಿಸಿ, ಪ್ರಸಾದ ಪಾದೋದಕಗಳನ್ನು ಅಮೋಘವೆಂದು ತಿಳಿದು ಸೇವಿಸುವವನಿಗೆ ಸೋಕಲಾರವು. ತ್ಯಾಗ ಸಂತೃಪ್ತರಾದವರ ಅಂತರಾತ್ಮನಲ್ಲಿ ಕೂಡಲ ಸಂಗಮದೇವನು ಸದಾ ಬೆಳಗುತ್ತಲಿರುತ್ತಾನೆ.

**೧೧೯ ಸಾರ ! ಸಜ್ಜನರ ಸಂಗವ ಮಾಡುವದು,**
**ದೂರ ! ದುರ್ಜನರ ಸಂಗ ಬೇಡವಯ್ಯಾ,**
**ಆವ ಹಾವಾದರೇನು ? ವಿಷವೊಂದೆ, ಅಂತವರ ಸಂಗ ಬೇಡವಯ್ಯಾ**

**ಅಂತರಂಗ ಶುದ್ಧವಿಲ್ಲದವರ ಸಂಗ,**
**ಸಿಂಗಿ, ಕಾಳಕೂಟ ವಿಷವೋ ಕೂಡಲಸಂಗಮದೇವ.**

'ಸಾಸಿರ ಹೊನ್ನು ಕೊಟ್ಟರೂ ದುರ್ಜನರ ಸಂಗ ಬೇಡ' ಎಂದು ಸರ್ವಜ್ಞ ಹೇಳಿದಂತೆ, ದುಷ್ಟರ ಸಂಗತಿ ಭಯಂಕರ ವಿಷದ ಹಾವಿನ ಗೆಳೆತನ ವಿದ್ದಹಾಗೆ; ಕಾರಣ ಹೃದಯ ತಿಳಿಯಿಲ್ಲದವರ ಸಹವಾಸವೂ ಹಾಗೆ; ಆದ್ದರಿಂದ ಸಜ್ಜನರ, ಸಾಧು ಸಂತರ ಶರಣರ ಸಂಗವ ಮಾಡಲು ಓಡಿ ಬಾ ಎಂದು ಬಸವಣ್ಣನವರು ಉಪದೇಶ ಮಾಡಿದ್ದಾರೆ

**೧೨೦ ಹಸಿದು ಎಕ್ಕೆಯ ಕಾಯ ಮೆಲಬಹುದೆ ?**
**ನೀರಡಿಸಿ ವಿಷವ ನೀಂಟಬಹುದೆ ?**
**ಸುಣ್ಣದ ತುಯ್ಯಲ ಬಣ್ಣ ಒಂದೇ ಎಂದರೆ**
**ನಂಟತನಕ್ಕೆ ಉಣ್ಣಬಹುದೆ ?**
**ಲಿಂಗ ಸಾರಾಯ ಸಜ್ಜನರಲ್ಲದವರ**
**ಕೂಡಲ ಸಂಗಮದೇವರೆಂತೊಲಿವನು ?**

ಹಸಿವೆಯ ಬಾಧೆ ತಾಳಲಾರದೆ, ಬಾಯಾರಿಕೆಯನ್ನು ಸಹಿಸದೆ, ಯಾರಾದರೂ ಎಕ್ಕೆಯ ಕಾಯಿ ತಿಂದು ವಿಷ ಕುಡಿಯುವದುಂಟೇ? ಸುಣ್ಣದ ಬಣ್ಣ ಪಾಯಸದ ಬಣ್ಣ ಒಂದೇ ಎಂದು ಬಡಿಸಿದರೆ ಅದನ್ನುಣ್ಣುತ್ತಾರೆಯೊ, ಹಾಗೆ, ಲಿಂಗದ ಮಹತ್ವ ನಿಜತತ್ವಗಳನ್ನರಿಯದವರನ್ನು ಸಾದೃಶ್ಯವಾದ ಉಪಮೆಗಳಂತೆ ಎಂದಿಗೂ ಕೂಡಲ ಸಂಗಮದೇವನು ಮನ್ನಿಸುವದಿಲ್ಲ.

**೧೨೧ ಎಲವದ ಮರಹೂತು ಫಲವಾದ ತೆರನಂತೆ,**
**ಸಿರಿಯಾದರೇನು ಶಿವಭಕ್ತಿಯಿಲ್ಲದನ್ನಕ್ಕ ?**
**ಫಲವಾದರೇನು ? ಹಾವು ಮೆಕ್ಕೆಯ ಕಾಯಿ,**
**ಕುಲವಿಲ್ಲದ ರೂಹು ಎಲ್ಲಿದ್ದರೇನು,**
**ಬಚ್ಚಲ ನೀರು ತಿಳಿದಲ್ಲಿ ಫಲವೇನು,**
**ಅವಗುಣಿಗಳ ಮೆಚ್ಚ ಕೂಡಲ ಸಂಗಮದೇವ.**

ಶಿವ ಭಕ್ತಿಯಿಲ್ಲದ ಮನುಜ ಸಿರಿವಂತನಾದಾಗ್ಯೂ ಅವನ ಬಾಳು-ಎಲವದ ಗಿಡದ ಹಣ್ಣು, ಹಾವು, ಕಹಿಸವುತೆಯ ಕಾಯಿಗಳಿದ್ದ ಹಾಗೆ; ಕಾರಣ ಕುಲ-ಮತಗಳ ಕಲಂಕವಿಲ್ಲದ ಆತ್ಮವು ಎಲ್ಲಿದ್ದರೂ ಅಷ್ಟೆ; ಬಚ್ಚಲ ನೀರು ತಿಳಿಯಾಗಿದೆ ಎಂದು ಯಾರಾದರೂ ಕುಡಿಯುವ ದುಂಟೇ? ಆ ಪ್ರಕಾರ ದುರ್ಗುಣಿಗಳನ್ನು ಕೂಡಲ ಸಂಗಮ ದೇವನು ಮೆಚ್ಚುವದಿಲ್ಲ.

**೧೨೨ ಬಚ್ಚಲ ನೀರು ತಿಳಿದರೇನು ? ಸಲ್ಲದ ಹೊನ್ನು**
**ಮತ್ತೆಲ್ಲಿದ್ದರೇನು ?**
**ಆಕಾಶದ ಮಾವಿನ ಫಲವೆಂದರೇನು ? ಕೊಯ್ಯಲಿಲ್ಲ,**
**ಮೆಲ್ಲಲಿಲ್ಲ;**
**ಕೂಡಲ ಸಂಗನ ಶರಣರ ಅನುಭಾವವಿಲ್ಲದವರು**
**ಎಲ್ಲಿದ್ದರೇನು ಎಂತಾದರೇನು ?**

ತಿಳಿಯಾಗಿದ್ದ ಬಚ್ಚಲನೀರೂ ಸದುಪಯೋಗವಾಗದ ಧನವೂ ಕೆಲಸಕ್ಕೆ ಬಾರದ ವಸ್ತುಗಳು; ಕಲ್ಪನಾಸಾಮ್ರಾಜ್ಯದ ಕಲ್ಪಿತ ಮಾವಿನ ಹಣ್ಣು ತಿನ್ನಲು ಬರುವದಿಲ್ಲ;ಅದರಂತೆ ಕೂಡಲ ಸಂಗನ ಶರಣರ ಅನುಭವಾಮೃತ ಸವಿಯದ ಮನುಜರಬಾಳು ಹುಲ್ಲು ಬೆಳೆದ ಹೊಲ.

**೧೨೩ ಗಿಳಿಯೋದಿ ಫಲವೇನು ?**
**ಬೆಕ್ಕು ಬಹುದ ಹೇಳಲರಿಯದು,**
**ಜಗವೆಲ್ಲ ಕಾಂಬ ಕಣ್ಣು,**
**ತನ್ನ ಕೊಂಬ ಕೊಯಿಲಿಯ ಕಾಣಲರಿಯದು**
**ಇದಿರ ಗುಣವ ಬಲ್ಲೆನೆಂಬರು**
**ತಮ್ಮ ಗುಣವನರಿಯರು, ಕೂಡಲಸಂಗಮದೇವ.**

ಗಿಳಿ ಮಾತು ಕಲಿತರೆ, ವೇದೋಕ್ತ ಮಂತ್ರಗಳನ್ನು ಕಲಿತರೆ, ಬೆಕ್ಕು ಬರುವದನ್ನು ಹೇಳಲು ಜ್ಞಾನವಿಲ್ಲದ ಕಾರಣ ಎಲ್ಲವೂ ವ್ಯರ್ಥ. ಜಗತ್ತನ್ನೆ ನೋಡುವೆನೆಂಬ ಹೆಮ್ಮೆಯುಳ್ಳ ಕಣ್ಣಿಗೆ ತನ್ನನ್ನು ಇರಿಯಲು ಬಂದ

ಚೋರಿಯನ್ನು ಕಾಣುವ ಶಕ್ತಿಯಿಲ್ಲ. ಪರರ ಇಂಗಿತಗೊತ್ತು ಎಂದು ಹೇಳುವ ವರಿಗೆ ತನ್ನ ಹೀನಗುಣಗಳನ್ನು ಗೊತ್ತುಮಾಡಿಕೊಳ್ಳುವ ಸಾಮರ್ಥ್ಯವಿಲ್ಲ, ತನ್ನ ತಾಸರಿಪಡಿಸಿ ಕೊಳ್ಳದವನ ಸಂಸಾರ ಹಗಲು ಹಾಳಭಾವಿಬಿದ್ದಂತೆ.

**೧೨೪ ಲೋಕದ ಡೊಂಕ ನೀವೇಕೆ ತಿದ್ದುವಿರಿ,**
**ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ,**
**ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ,**
**ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ ಕೂಡಲ ಸಂಗಮದೇವ.**

ಎರಡನೇಯವರ ಅವಗುಣಗಳನ್ನೆತ್ತಿಕೊಂಡು ಅವರ ನಿಂದೆಮಾಡು ವದಕ್ಕಿಂತ, ಅರಿಷಡ್ವೈರಿಗಳನ್ನು ಜಯಿಸಿ ನಿನ್ನ ತನುಮನಗಳನ್ನು ನಿನ್ನಾಂ ಕಿತದಲ್ಲಿರಿಸಿ ಕೊಳ್ಳುವದು ಬಲು ಶ್ರೇಷ್ಠ. ನೆರೆಮನೆಯವರ ದುಃಖಕಂಡು ಅವರಿಗೆ ಧೈರ್ಯಹೇಳುವ ಬದಲು ಬಧಿರರಾಗಿ ಅಳುವ ತಿಳಿಗೇಡಿಗಳನ್ನು ಕೂಡಲ ಸಂಗಮ ದೇವನು ಉದ್ಧರಿಸುವದಿಲ್ಲ.

**೧೨೫ ಏತ ತಲೆವಾಗಿದರೇನು ? ಗುರುಭಕ್ತನಾಗಬಲ್ಲುದೇ ?**
**ಇಕ್ಕಳ ಕೈ ಮುಗಿದರೇನು? ಭೃತ್ಯಾಚಾರಿಯಾಗಬಲ್ಲುದೆ?**
**ಗಿಳಿಯೋದಿದರೇನು ? ಲಿಂಗವೇದಿಯಾಗಬಲ್ಲುದೆ ?**
**ಕೂಡಲ ಸಂಗನ ಶರಣರು ಬಂದ ಬರವ ನಿಂದ ನಿಲ್ವ**
**ಅನಂಗ ಸಂಗಿಗಳೆತ್ತ ಬಲ್ಲರು ?**

"ಕಾಮಾತುರಾಣಾಂ ನ ಲಜ್ಜಾ ನ ಭಯಂ" ಎಂಬ ಸುಭಾಷಿತ ವಾಣಿ ಯಂತೆ,ಕಾಮಾಸಕ್ತರಾದವರು ಕೂಡಲ ಸಂಗಮದೇವನ ಶರಣರು ಯಾವ ರೂಪದಲ್ಲಿ ಬರುತ್ತಾರೆ, ಯಾವ ಪರಿಯಲ್ಲಿ ಅವರು ದರ್ಶನವೀಯುತ್ತಾರೆ ಎಂಬುದನ್ನೂ ಅವರಂತರಾಳದ ಬೆಳಕನ್ನು ತಿಳಿಯಲು ಸಾಧ್ಯವಿಲ್ಲ,ಹೇಗೆಂ ದರೆ, ಏತ (ಯಾತ) ತಲೆಬಾಗಿದರೆ ಗುರುಭಕ್ತನಾಗಲು ಸಾಧ್ಯವಿಲ್ಲ. ಇಕ್ಕ ಳದ ಎರಡು ತುದಿಗಳು ಕೂಡುತ್ತವೆಂದಾಕ್ಷಣಕ್ಕೆ ಅದು ನಂಬಿಗೆಯ ಸೇವಕ

ನಾಗುವದಿಲ್ಲ; ಗಿಳಿ ಪುರಾಣಗಳನ್ನೋದಿದರೂ, ಲಿಂಗ ಸತ್ಯವನ್ನು ತಿಳಿಯುವ ಜ್ಞಾನಿಯಾಗಲಾರದು. ಆದುದರಿಂದ ಶರಣರ ಮಹಿಮೆ ತಿಳಿಯದು

**೧೨೬ ಒಲವಿಲ್ಲದ ಪೂಜೆ, ನೇಹವಿಲ್ಲದ ಮಾಟ,**
**ಆ ಪೂಜೆಯು ಆ ಮಾಟವು**
**ಚಿತ್ರದ ರೂಹು ಕಾಣಿರಣ್ಣಾ;**
**ಚಿತ್ರದ ಕಬ್ಬು ಕಾಣಿರಣ್ಣಾ;**
**ಅಪ್ಪಿದರೆ ಸುಖವಿಲ್ಲ, ಮೆಲ್ಲಿದರೆ ರುಚಿಯಿಲ್ಲ**
**ಕೂಡಲ ಸಂಗಮದೇವ ನಿಜವಲ್ಲದವನ ಭಕ್ತಿ.**

ಜನಕ್ಕಂಜಿ ಇಲ್ಲವೆ ದೊಡ್ಡಿಸ್ತನಕ್ಕಾಗಿ ಅದರ ಪ್ರೇಮ ವಿಲ್ಲದೆ ಮಾಡಿದ ಪೂಜೆ, ಪುನಸ್ಕಾರಗಳು, ಮತ್ತು ಗೆಳೆತನವಿಲ್ಲದಕ್ಕರತೆ, ಡಾಂಭಿಕನ ಭಕ್ತಿ ಚಿತ್ರದಲ್ಲಿಯಗೊಂಬೆಯನ್ನು ಆಲಿಂಗಿಸಿದಂತೆ,ಚಿತ್ರದಲ್ಲಿಯ ಕಬ್ಬು ತಿಂದಂತೆ ಕೂಡಲ ಸಂಗಮದೇವ.

**೧೨೭ ಸ್ನೇಹ ತಪ್ಪಿದ ಠಾವಿನಲ್ಲಿ ಗುಣವನರಸುವರೆ ಅಯ್ಯಾ ?**
**ಹೂ ಬಾಡಿದಲ್ಲಿ ಪರಿಮಳವನರಸುವರೆ ಅಯ್ಯಾ ?**
**ಎನ್ನ ತಂದೆ ಕೂಡಲಸಂಗಮದೇವ**
**ತೊರೆಯಿಳಿದರೆ ಅಂಬಿಗಂಗೇನುಂಟು ?**

ಗೆಳೆತನ ಕಳೆದು ಹೋದಲ್ಲಿ ಯಾವ ಗುಣಾವಗುಣಗಳನ್ನು ಲೆಕ್ಕಿಸುವದಿಲ್ಲವೋ, ಹೂ ಬಾಡಿದ ಮೇಲೆ ಸುಗಂಧವನ್ನು ಬಯಸುವದಿಲ್ಲವೋ ಅದೇ ರೀತಿಯಾಗಿ ನಿನ್ನ ಕೃಪಾಛತ್ರದಿಂದ ದೂರನಾದ ಭಕ್ತನಿಗೆ ಮುಕ್ತಿಜ್ಞಾನ ದೊರೆಯುವದು ಅಸಾಧ್ಯ; ಅದು ನೆರೆಯಿಳಿದ ಹೊಳೆಯಿಂದ ಯಾವ ಜೀವನೋಪಾಯವನ್ನು ಕಾಣದ ಅಂಬಿಗನಂತೆ ಅವರ ಬಾಳು.

**೧೨೮ ಆಶೆಗೆ ಹುಟ್ಟಿದ ಪ್ರಾಣಿ ಆಶೆಯನು ಕಲಿತು**
**ಪುಣ್ಯಪದವಿಯ ಬಯಸಿದರೆ ಭವಮಾಲೆಯ ಬರವು ತಪ್ಪದು**
**ಬೇಡಲು ಹುಟ್ಟಿದ ಪ್ರಾಣಿಗೆ ಬೇಡಲು ವಿಧಿಯೆ,**

**ಸೂಳೆಗೆ ಹುಟ್ಟಿದ ಪ್ರಾಣಿಗೆ ನಿಜಗುಣ ಸಜ್ಜನ ಒಪ್ಪುದೆ?**
**ಲಿಂಗ ಉದಯ ಶರಣ ವಿಸ್ತಾರವು ಬಯಸಿದರೊಳವೆ**
**ಕೂಡಲಸಂಗಮದೇವ ?**

ಇನ್ನೂ ಬೇಕು ಇನ್ನೂ ಬೇಕೆಂಬ ದುರಾಶೆ ವರ್ಧಿಸಿಕೊಂಡು ಬಾಳುವವನು ತನಗೆ ಪುಣ್ಯ ಪಟ್ಟಬೇಕೆಂದು ಬಯಸಿದರೆ ಅವನಿಗೆ ಪುಣ್ಯದ ಬದಲು ಸಂಸಾರ ಸಂಕಟ ಮಾಲೆಗಳು ಹೆಚ್ಚುತ್ತವೆ. ತಿರಿದುಣ್ಣುವವನಿಗೆ ತಿರಿದುಣ್ಣುವ ದುರ್ಗತಿಯೇ ಲಭಿಸುತ್ತದೆ. ಒಂದೇ ಮನಸ್ಸು, ಶುದ್ಧ ಭಾವ, ಶ್ರದ್ಧೆಯಿಲ್ಲದ ಪ್ರಾಣಿಗೆ ಸತ್ಯ, ಸಾಧುತನಗಳು ಶೋಭಿಸುವದಿಲ್ಲ. ಲಿಂಗ ಪ್ರತ್ಯಕ್ಷ್ಯಿಕೆ, ವಿಸ್ತಾರವಾದ ಮನೋಭೂಮಿಯುಳ್ಳ ಶರಣರ ಹಂತಗಳು ಬೇಡಿದರೆ ದೊರೆಯುವ ವಸ್ತುಗಳೇ? ಕೂಡಲ ಸಂಗಮದೇವ.

**೧೨೯ ಹಬ್ಬಕ್ಕೆ ತಂದ ಹರಕೆಯ ಕುರಿ**
**ತೋರಣಕ್ಕೆ ತಂದ ತಳಿರ ಮೇಯಿತ್ತು**
**ಕೊಂದಹನೆಂಬುದನರಿಯದೆ**
**ಬೆಂದ ಒಡಲ ಹೊರೆಯ ಹೊಯಿತ್ತಲ್ಲದೆ**
**ಅಂದಂದೆ ಹುಟ್ಟಿತ್ತು ಅಂದಂದೆ ಹೊಂದಿತ್ತು**
**ಕೊಂದವರುಳಿದರೆ ಕೂಡಲ ಸಂಗಮದೇವ ?**

"ಜಾತಸ್ಯ ಮರಣಂ ಧೃವಂ" ಎಂಬ ಮಾತಿನಂತೆ, ಮಾರಿಗೆ ಬಲಿ ಕೊಡಲು ತಂದ ಕುರಿ ತನ್ನನ್ನು ಕೊಲ್ಲುವರೆಂಬುದನ್ನು ತಿಳಿಯದೆ ಹಂದರಕ್ಕೆ ಕಟ್ಟಿದ ತಳಿರನ್ನು ತಿಂದು ತನ್ನ ಒಡಲ ಉರಿಹಿಂಗಿಸಿಕೊಳ್ಳುವಂತೆ, ತಮ್ಮ ನಾಲಿಗೆಯ ರುಚಿಗಾಗಿ ಕುರಿಯನ್ನು (ಪ್ರಾಣಿ) ಕೊಂದು ತಿನ್ನುವ ಈ ಪ್ರಾಣಿಹಿಂಸಕರು ಚಿರಂಜೀವಿಗಳಾಗಿ ಬದುಕಬಲ್ಲರೆ ಕೂಡಲ ಸಂಗಮದೇವ?

**೧೩೦ ಹಾವಿನ ಬಾಯ ಕಪ್ಪೆ ಹಸಿದು ಹಾರುವ ನೊಣಕ್ಕೆ ಆಶೆ ಮಾಡುವಂತೆ,**

**ಸೂಲವನೇರುವ ಕಳ್ಳನು ಹಾಲು ತುಪ್ಪವ ಕುಡಿದು**
**ಮೇಲೇಸುಕಾಲ ಬದುಕುವನು ?**
**ಕೆಡುವಡಲ ನಚ್ಚಿ ಕಡು ಹುಸಿಯುನೆ ಹುಸಿದು ಒಡಲ ಹೊರೆವರ**
**ಕೂಡಲ ಸಂಗಮದೇವನವರನೊಲ್ಲ ಕಾಣಿರಣ್ಣಾ.**

"ಸುತ್ತಿ ಸುತ್ತಿ ಬರುತೀದಿ ಎನಗಾಗಿ ಮೇಲೊಬ್ಬ ಕುಳಿತಿಹನು ನಿನಗಾಗಿ" ಎಂದು ಮಳೆಹುಳ ಮೀನಕ್ಕೆ ಬಿನ್ನವಿಸಿದಂತೆ, ತಾಸಾಯಲು ಸಿದ್ಧನಾವ ಕಳ್ಳನು ಹಾಲು ತುಪ್ಪ ಕುಡಿದುಕೊಬ್ಬಿ ಎಷ್ಟು ದಿವಸ, ಎಷ್ಟುಘಳಿಗೆ ಬದುಕಲು ಅವಕಾಶವಿದೆ? ಹಾಗೆ ಕೆಟ್ಟಹೊಟ್ಟೆಯನ್ನು ನಂಬಿ ನಾವು ಅಜರಾಮರಾಗಿ ಉಳಿಯುತ್ತೇವೆಂದು ಭ್ರಮಿಸಿ ಸುಳ್ಳಿನ ಕಂತೆಯನ್ನು ಬಿಚ್ಚಿ ಉದರಂಭರಣ ಮಾಡುವವರಿಗೆ ಕೂಡಲ ಸಂಗಮದೇವನು ತನ್ನ ಪಾದಾರವಿಂದದಲ್ಲಿ ನಿಲ್ಲಲು ತಾಣ ಕೊಡುವದಿಲ್ಲ.

**೧೩೧ ಆರತವಡಗದು, ಕ್ರೋಧ ತೊಲಗದು,**
**ಕ್ರೂರ ಕುಭಾಷೆ ಕುಹಕ ಬಿಡದನ್ನಕ್ಕ,**
**ನೀನೆತ್ತ ಶಿವನೆತ್ತ ಹೋಗಯ್ಯಾ ಮರುಳೆ**
**ಭವರೋಗವೆಂಬ ತಿಮಿರ ತಿಳಿಯದನ್ನಕ್ಕ**
**ಕೂಡಲ ಸಂಗಯ್ಯನೆತ್ತ ನೀನೆತ್ತ ? ಮರುಳೆ**

ದುಷ್ಟನುಡಿ; ದುರುಳತನ ತೊಲಗದ ವಿನಃ ಆಶೆ, ಸಿಟ್ಟು, ವಂಚಕತನ ದೂರವಾಗಲಾರವು. ಸಂಸಾರದ,ದುಗುಡದ ಕಗ್ಗತ್ತಲೆಯ ಪರಿ ಹರಿಯದಹೊರತು ನಿನ್ನ ಮತ್ತು ಸಗುಣಾತ್ಮಶಿವನ ಸಂಬಂಧ ಯಾವರೀತಿಯಲ್ಲಿಯೂ ಸಾಧ್ಯವಿಲ್ಲ ಹುಚ್ಚಮಾನವಾ.

**೧೩೨ ಹಾವು ತಿಂದವರ ನುಳಿಸಬಹುದು**
**ಗರ ಹೊಡೆದವರ ನುಳಿಸಬಹುದು**
**ಸಿರಿಗರ ಹೊಡೆದವರ ನುಳಿಸಲು ಬಾರದು ನೋಡಯ್ಯಾ**
**ಬಡತನವೆಂಬ ಮಂತ್ರವಾದಿ ಹೋಗಲು**
**ಒಡನೆ ನುಡಿವರು ಕೂಡಲ ಸಂಗಮದೇವ.**

ಅತಿ ಘೋರವಾದ ಕಾಳಕೂಟ ವಿಷ ಕುಡಿದವರನ್ನೂ, ಹಾವು ತಿಂದವರನ್ನೂ ಉಳಿಸಲು ಪ್ರಯತ್ನಿಸಿ ಅವರ ಸಂಕಟ ದೂರಮಾಡಬಹುದು; ಆದರೆ ಮದದಿಂದ ಕೊಬ್ಬಿ ಉರಿಯುವ ಮನುಜರನ್ನು ಅವಸತಿಯಿಂದ ಕಾಪಾಡಲು ಶಕ್ಯವಿಲ್ಲ ಅವರಿಗೆ ಬಡತನ ಬಂದರೆ ಕೂಡಲೇ ಕೂಡಲ ಸಂಗಮ ದೇವನನ್ನು ಭಜಿಸುವರು, ಜನರೊಡನೆ ಬೆರೆದು ವಿನಯವಾಗಿ ನುಡಿಯುವರು.

**೧೩೩ ಅರೆಭಕ್ತರಾದವರ ನೆರೆಬೇಡ ಹೊರೆ ಬೇಡ,**
**ದಾರಿ ಸಂಗಡ ಬೇಡ, ದೂರ ನುಡಿಯಲು ಬೇಡ,**
**ಕೂಡಲ ಸಂಗನ ಶರಣರಲ್ಲಿ ಅಚ್ಚ ಲಿಂಗೈಕ್ಯಂಗೆ**
**ತೊತ್ತಾಗಿಹುದಯ್ಯಾ.**

ಅರ್ಧ ಮರ್ಧ ಭಕುತರಾಗಿ ಬಿಂಕದ ಕೊಂಬನ್ನು ಎತ್ತಿ ಮೆರೆವವರ ಸಹವಾಸ (ಸಂಬಂಧ) ಸಂರಕ್ಷಣೆ ನನಗೆ ಬೇಡ; ಪ್ರಯಾಣದ ಜೊತೆಗಾರರನ್ನಾಗಿ ಮಾಡಿಕೊಳ್ಳುವದಿಲ್ಲ; ಅತಿ ಸ್ನೇಹವಾಗಿ ಯಾವ ಮಾತುಗಳನ್ನು ಅವರೊಂದಿಗೆ ಆಡುವದಿಲ್ಲ. ಆದರೆ ಕೂಡಲ ಸಂಗನ ಶರಣರಲ್ಲಿ ವಿನೀತರಾಗಿ ಏಕೋಭಾವದಿಂದ ಕೂಡಿದವರ ಆಳಾಗುವೆನು.

**೧೩೪ ಸಾರ ಸಜ್ಜನರ ಸಂಗ ಲೇಸು ಕಂಡಯ್ಯಾ**
**ದೂರ ದುರ್ಜನರ ಸಂಗ ಭಂಗವಯ್ಯಾ**
**ಸಂಗವೆರಡುಂಟು, ಒಂದು ಬಿಡು, ಒಂದು ಹಿಡಿ**
**ಮಂಗಳ ಮೂರ್ತಿ ನಮ್ಮ ಕೂಡಲ ಸಂಗನ ಶರಣರ.**

ಸಾಂಬರ-ಸಾಧು ಸಂತರ ಕೂಟ ಮಧುರ ಮಧು ಮೆದ್ದಂತೆ. ಅನಾಚಾರಿಗಳ, ದುರುಹಂಕಾರಿಗಳ ಬಂಧುತ್ವ ಬೆಂದು ಬೇಗುದಿಗೊಳಿಸುವ ಕಾಡ್ಗಿಚ್ಚಿನಂತೆ; ಆದ್ದರಿಂದ ಸಕಲಕ್ಕೂ ಸರ್ವತ್ರದಲ್ಲಿಯೂ ಮಂಗಳರಾದ ಕೂಡಲ ಸಂಗಮ ದೇವನ ಶರಣರ ಸಂಗ ಹಾಲು ಸಕ್ಕರಿಯ ರುಚಿಸವಿದಂತೆ.

೧೩೫ **ಹೊಲೆಯ ಹೊಲಬಿಗನಾದರೆ**
**ಅವನ ಹೊರೆಯಲಿಪ್ಪುದು ಲೇಸು ಕಂಡಯ್ಯಾ**
**ಹೊಲಬುಗೆಡದೆ ಲಿಂಗ ಶರಣೆನ್ನಿರಯ್ಯಾ**
**ನಮ್ಮ ಕೂಡಲ ಸಂಗನ ಮಹಾಮನೆಯೊಳ್**
**ಮಾದಾರ ಚನ್ನಯ್ಯ ಹೊಲಬಿಗನಯ್ಯಾ**

ಹೊಲೆಯನು ಉತ್ತಮಾಚಾರವುಳ್ಳವನಾದರೆ ಅವನ ಸಾಮಿಪ್ಯದಲ್ಲಿದ್ದು ಅವನನ್ನು ಸತ್ಕರಿಸುವದು ಯೋಗ್ಯ. ಅನೀತಿಗೆಡದೆ-ಕುಕರ್ಮಿಗಳಾಗದೆ ಲಿಂಗಕ್ಕೆ ನಮಸ್ಕರಿಸಿರಿ. ಕೂಡಲ ಸಂಗನ ಶರಣರಲ್ಲಿ, ಪವಿತ್ರ ಶಿವಾಲಯದಲ್ಲಿ ಮಾದಾರ ಚನ್ನಯ್ಯನೊಬ್ಬನು ಸದಾಚಾರದ, ಸಬ್ಭಾವದ ಸುಕೃತದ ಮಗನಯ್ಯಾ.

೧೩೬ **ದೂಷಕನವನೊಬ್ಬ ದೇಶವ ಕೊಟ್ಟರೆ,**
**ಆಶೆ ಮಾಡಿ ಅವನ ಹೊರೆಯಲಿರಬೇಡ**
**ಮಾದರ ಶಿವಭಕ್ತನಾದರೆ ಆತನ ಹೊರೆಯಲಿ**
**ಭೃತ್ಯನಾಗಿರ್ಪುದು ಕರ ಲೇಸಯ್ಯಾ**
**ತೊತ್ತಾಗಿರ್ಪುದು ಕರ ಲೇಸಯ್ಯಾ**
**ಕಾಡ ಸೊಪ್ಪು ತಂದು ಓಡಿನಲ್ಲಿ ಹುರಿದಿಟ್ಟು**
**ಕೂಡಿ ಕೊಂಡಿಪ್ಪುದು ನಮ್ಮ ಕೂಡಲ ಸಂಗನ ಶರಣರ.**

ಅನಾಚಾರಿಯಾದ ಒಬ್ಬ ಮಾನವನು ಸಜಾತಿಯವನಿದ್ದು ಆಶ್ರಯ ಕೊಟ್ಟರೆ ಅದಕ್ಕೆ ಆಶೆಮಾಡಿ ಆ ಪಾಪಿಯ ರಕ್ಷಣೆಯಲ್ಲಿರುವದು ಬಲು ಹೀನ. ಮಾದಿಗನಾದರೂ ಚಿಂತೆಯಿಲ್ಲ ಅವನು ಶಿವಾಚಾರ ಸಂಪನ್ನ ಶಿವ ಭಕ್ತನಾದಲ್ಲಿ ಅವನ ಮನೆಯಾಳಾಗಿ ನಂಬಿಗೆಯ ನಾಯಾಗಿ ಕೃಪಾಪಾತ್ರದಲ್ಲಿರುವದು ಬಲು ಚನ್ನ. ಅದು ಅಡವಿಯ ಕೆಲಸಕ್ಕೆ ಬಾರದ ತಪ್ಪಲ ತಂದು ಹಂಚಿನಲ್ಲಿ ಹುರಿದು ಗುಚಿಕೊಟ್ಟ ಪದಾರ್ಥದಂತೆ; ಈ ದೇಹ ಶಿವ ಭಕ್ತನ ಸೇವೆ ಮಾಡಿ ಪಾಪರಹಿತವಾಗಿ ಕೂಡಲ ಸಂಗಮದೇವನ ಅಡಿಗಳ ಮೇಲಿನ ಹೂವಾಗಿ ಹೊಂದಿಕೊಂಡಿರುತ್ತದೆ.

**೧೩೭ ಪರುಷ ಮುಟ್ಟಿದ ಬಳಿಕ ಕಬ್ಬುನವಾಗದು, ನೋಡಾ;**
**ಲಿಂಗ ಮುಟ್ಟಿದ ಬಳಿಕ ಕುಚಿತ್ತಾಚಾರವಾಗದು,**
**ಕೂಡಲ ಸಂಗನ ಶರಣರು ಅನ್ಯವನರಿಯರಾಗಿ.**

ಯಾವರೀತಿಯಲ್ಲಿ ಪರುಷಮಣಿ ತಾಗಿದ ನಂತರ ಲೋಹದ ಆ ವಸ್ತು ಪುನಃ ಕಬ್ಬಿಣವಾಗುವದಿಲ್ಲವೊ ಅದೇ ರೀತಿಯಾಗಿ ದೇಹಕ್ಕೆ ಲಿಂಗ ಸಂಬಂಧವಾದ ಮೇಲೆ ಬುದ್ಧಿಗೆಟ್ಟು ದುರಾಚಾರಿಯಾಗುವದಿಲ್ಲ. ಏಕೆಂದರೆ ಶಿವಚಿಂತನೆ, ಲಿಂಗಾಲಿಂಗನದ ಸೊಗಸಿನ ಅನುಭವದ ವಿನಃ ಬೇರೇನೂ ಕೂಡಲ ಸಂಗನ ಶರಣರಿಗೆ ತಿಳಿಯದು.

**೧೩೮ ಪಟ್ಟವ ಕಟ್ಟಿದ ಬಳಿಕ ಲಕ್ಷಣವನರಸುವರೆ ?**
**ಲಿಂಗದೇವನ ಪೂಜಿಸಿ ಕುಲವನರಸುವರೇ, ಅಯ್ಯಾ,**
**ಕೂಡಲ ಸಂಗಮದೇವ " ಭಕ್ತಕಾಯ ಮಮಕಾಯ "**
**ವೆಂದನಾಗಿ.**

ರಾಜ ಕುವರನಿಗೆ ಪಟ್ಟ ಕಟ್ಟಿದ ಮೇಲೆ ಅವನಲ್ಲಿ ರಾಜನಾಗುವ ಲಕ್ಷಣಗಳು ಸರಿಯಾಗಿಲ್ಲವೆಂದು ಹೇಗೆ ದೋಷಗಳನ್ನೆಣಿಸುವದಿಲ್ಲವೊ ಅದರಂತೆ ನಿಜಗುಣಿಯಾದ ಲಿಂಗ ದೇವನನ್ನು ಆರಾಧಿಸಿ ಉಚ್ಚಕುಲ, ನೀಚಕುಲ, ಹಿರಿಯ ಕಿರಿಯ ಎಂದು ಭಕ್ತರಲ್ಲಿ ಭೇದವ ತೋರುವದು ಅತಿ ನಿಂದ್ಯವಾದದ್ದು; ಏಕೆಂದರೆ ಭಕ್ತನ ದೇಹವೆಂದರೇನೆ 'ನನ್ನ' ದೇಹವೆಂದು ಕೂಡಲ ಸಂಗಮ ದೇವನು ಹೇಳುತ್ತಾನೆ.

**೧೩೯ ದೇವಲೋಕ ಮರ್ತ್ಯಲೋಕವೆಂಬುದು ಬೇರೆ ಮತ್ತುಂಟೆ ?**
**ಈ ಲೋಕದೊಳಗೇ ಮತ್ತೆ ಅನಂತ ಲೋಕ !**
**ಶಿವಲೋಕ ಶಿವಾಚಾರವಯ್ಯಾ**
**ಭಕ್ತನಿರ್ದ ಠಾವೇ ದೇವಲೋಕ,**
**ಭಕ್ತನಂಗಳವೇ ವಾರಣಾಶಿ;**
**ಕಾಯಕವೇ ಕೈಲಾಸ !**
**ಇದು ಸತ್ಯ ಕೂಡಲ ಸಂಗಮದೇವಾ.**

ನಾಕ ನರಕ ವೆಂಬುದೂ, ದೇವಲೋಕ ಮರ್ತ್ಯಲೋಕವೆಂಬುದೂ ಬೇರೆಯಿಲ್ಲ. ಈ ಒಂದು ಲೋಕದಲ್ಲಿಯೇ ಅನೇಕ ಲೋಕಗಳನ್ನು ಕಲ್ಪಿಸಿಕೊಂಡಿರುವದು ಭ್ರಮೆ ಶಿವ ತತ್ವಗಳನ್ನು ರೂಢಿಸಿಕೊಂಡು ನಡೆವುದೇ ಶಿವಲೋಕ; ಭಕ್ತನು ನಿಂತ ನೆಲವೇ ದೇವಲೋಕ; ಭಕ್ತನ ಮನೆಯಂಗಳವೇ ವಿಷ್ಣುಲೋಕ; ನಿತ್ಯ ದೇಹದಂಡನೆ ಮಾಡಿ ದುಡಿದು ಹರ ಕೊಟ್ಟಿದ್ದನ್ನು ಜಂಗಮನಿಗೆ ಉಣಿಸಿ ಉಳಿದದ್ದನ್ನು ಊಟಮಾಡುವದೇ ಕೈಲಾಸ; ಇದೆಲ್ಲವೂ ಸತ್ಯ ಕೂಡಲ ಸಂಗಮದೇವ.

**೧೪೦ ಕಟ್ಟಿದಿರಿನಲ್ಲಿ ಶಿವಭಕ್ತನ ಕಂಡು, ದೃಷ್ಟಿಯಾರೆ ಶರಣೊಂದೆಡೆ**
**ಹುಟ್ಟೇಳು ಜನ್ಮದ ಪಾಪ ಬಿಟ್ಟು ಹಿಂಗುವದು, ನೋಡಾ;**
**ಮುಟ್ಟಿ ಚರಣಕೆರಗಿದೊಡೆ ತನುವೊಪ್ಪಿದಂತೆ ಅಹುದು,**
**ಪರುಷ ಮುಟ್ಟಿದಂತೆ !**
**ಕರ್ತೃ ಕೂಡಲ ಸಂಗನ ಶರಣರ ಸಂಗವು**
**ಮತ್ತೆ ಭವ ಮಾಲೆಗೆ ಹೊದ್ದಲೀಯದು, ನೋಡಾ.**

ದಾರಿ ನಡೆದು ಹೋಗುವಾಗ ಎದುರಿಗೆ ಶಿವ ಭಕ್ತನನ್ನು ಕಂಡು ನಜರಿನಿಂದಲೇ (ನೋಟದಿಂದ) ನಮಸ್ಕರಿಸಿದ ಮಾತ್ರಕ್ಕೆ ಏಳು ಜನ್ಮಗಳ ಪಾಪ ನಾಶವಾಗುತ್ತದೆ. ಪಾದ ಮುಟ್ಟಿ ನಮಸ್ಕರಿಸಿದರೆ ಕಬ್ಬಿಣಕ್ಕೆ ಪರುಷಮಣಿಯ ಸಂಗವಾದಂತೆ, ದೇಹವು ಪವಿತ್ರವಾಗಿ ಕಾಂತಿಮಯವಾಗುತ್ತದೆ; ಸಕಲಕ್ಕೊಡೆಯನಾದ ಕೂಡಲ ಸಂಗನ ಶರಣರ ಸ್ನೇಹ ಸಂಸಾರ ಸಾಗರ ದಾಟಲು ಡೋಣಿಯಾಗುತ್ತದೆ.

**೧೪೧ ಆರಾರ ಸಂಗ ವೇನೇನ ಮಾಡದಯ್ಯಾ;**
**ಕೀಡಿ ಕುಂಡಲಿಗನಾಗದೆ ಅಯ್ಯಾ ?**
**ಚಂದನದ ಸನ್ನಿಧಿಯಲಿ ಪರಿಮಳ ತಾಗಿ**
**ಬೇವು ಬೊಬ್ಬುಳಿ ತರೆಯು ಗಂಧಂಗಳಾಗವೆ?**
**ನಮ್ಮ ಕೂಡಲ ಸಂಗನ ಶರಣರ ಸನ್ನಿಧಿಯಿಂದ**
**ಕರ್ಮ ನಿರ್ಮಳವಾಗದಿಹುದೆ ?**

ಯಾರ ಯಾರ ಸ್ನೇಹವೂ ಏನೇನು ಮಾಡಲಿಕ್ಕಿಲ್ಲ! ಕೋರಿಹುಳ, ಹಲವು ದಿನಗಳ ನಂತರ ಪಾತರಗಿತ್ತಿ ಯಾಗುತ್ತದೆ, ಚಂದನಗಿಡದ ನಿರಂತರ ಸಹವಾಸದ ಫಲವಾಗಿ ಬೇವಿನಮರದ ತುಂಡು ಕೂಡಾ ಉತ್ತಮ ಸುವಾಸಿಕ ಗಂಧವಾಗುತ್ತದೆ. ಈ ಪ್ರಕಾರ ಶರಣರ ಸಮೀಪ ವರ್ತಿಗ ಳಾಗುವದರಿಂದ ಪಾಪದ ಪೆಳೆ ಸುಗಂಧ ಸುರಗೆಯ ಬಳ್ಳಿಯಾಗಿ ಪರಿಣ ಮಿಸುತ್ತದೆ.

**೧೪೨ ಎಂತಹನಾದರೇನು, ಲಿಂಗ ಮುಟ್ಟಿದವನೇ ಕೀಳು ಜಾತಿ,**
**ಕುಲವಹುದು ತಪ್ಪದು ಲಿಂಗ ಮುಟ್ಟಲೊಡನೆ,**
**ಹೊನ್ನಹುದು ತಪ್ಪದು ಪರುಷ ಮುಟ್ಟಲೊಡನೆ;**
**ಕೂಡಲ ಸಂಗಮದೇವನೊಲ್ಲ ಸರ್ವ ಸಂದೇಹಿಗಳ.**

ಯಾವ ಪಂಥದವನಾದರೇನು, ಹಿರಿಯನಾದರೇನು, ಕಿರಿಯನಾದ ರೇನು, ಲಿಂಗ ಸಂಪರ್ಕವಿಲ್ಲದವನೇ (ಲಿಂಗ ಧರಿಸಿದವ) ಕೀಳು ಜಾತಿಯವ. ಕುಲವು ಶಿವ ಕುಲವಾಗಿಯೇ ಉಳಿಯುತ್ತದೆ—ಲಿಂಗ ಬಂಧನವಾದೊ ಡನೆ; ಚಿನ್ನವು ಪರುಷಮಣಿಯ ಸ್ಪರ್ಶವಾದರೂ ಚಿನ್ನವಾಗಿಯೇ ಉಳಿ ಯುತ್ತದೆ. ಆದರೆ ಸಂಶಯ ಸಂದೇಹದ ಹುತ್ತದೊಳಗಿದ್ದವರನ್ನು ಕೂಡಲ ಸಂಗಮ ದೇವನು ಶಿವಾಲಯದಲ್ಲಿ ಬರಮಾಡಿಕೊಳ್ಳುವದಿಲ್ಲ.

**೧೪೩ ಓದಿದರೇನು, ಕೇಳಿದರೇನು ಶಿವಪಥವನರಿಯುದನ್ನಕ್ಕ ?**
**ಓದಿತ್ತು ಕಾಣಿರೊ ಶುಕನು ಶಿವಪಥವನರಿಯುದನ್ನಕ್ಕ !**
**ಓದಿದ ಫಲವು ಮಾದಾರ ಚನ್ನಯ್ಯಂಗಾಯಿತ್ತು**
**ಕೂಡಲ ಸಂಗಮದೇವಾ.**

ಶಿವಾನುಭವದ ಜ್ಞಾನಾಮೃತ ಉಣ್ಣದವರು ಶಾಸ್ತ್ರ ಓದಿದರೆ, ಪುರಾಣ ಕೇಳಿದರೆ ಗುಡ್ಡಕ್ಕೆ ಕಲ್ಲು ಹೊತ್ತಂತೆ. ಅವರ ಓದು ಗಿಳಿಯ ಪಾಠಿನಂತೆ. ಶಾಸ್ತ್ರಗಳನ್ನು ಪುರಾಣಗಳನ್ನು ಓದಿ ಒರೆಗಲ್ಲಿಗೆ ತಿಕ್ಕಿದ ಫಲ ಮಾದಾರ ಚನ್ನಯ್ಯನಿಗೆ ಪೂರ್ಣವಾಗಿ ದೊರೆಯಿತು; ಕೂಡಲ ಸಂಗಮದೇವಾ.

೧೪೪ ಹಾವಿನ ಡೊಂಕು ಹುತ್ತಕ್ಕೆ ಸಸಿನ,
ನದಿಯ ಡೊಂಕು ಸಮುದ್ರಕ್ಕೆ ಸಸಿನ,
ನಮ್ಮ ಕೂಡಲ ಸಂಗನ ಶರಣರ ಡೊಂಕು ಲಿಂಗಕ್ಕೆ ಸಸಿನ

ಹಾವಿನ ಸುತ್ತುಗಳು ಹುತ್ತದಲ್ಲಿ ಸರಿಯಾದಂತೆ; ನದಿಯ ಬಳಸುವಿಕೆ, ಸುತ್ತಿ ಸುತ್ತಿ ಹರಿಯುವಿಕೆ ಸಮುದ್ರದಲ್ಲಿ ಸರಿಹೋಗುವಂತೆ, ಶರಣರ ಕುಂದು ಕೊರತೆಗಳು ಲಿಂಗಸಂಗದಲ್ಲಿ ತಿದ್ದಿ ಸರಿಯಾಗುತ್ತವೆ.

೧೪೫ ಭಕ್ತನ ಮುಖ ದರ್ಪಣದಲ್ಲಿ ಲಿಂಗವ ಕಾಣಬಹುದು
ಭಕ್ತದೇಹಿಕ ದೇವ; ಅನಿಮಿಷನಾಗಿ
ಕೂಡಲ ಸಂಗಮದೇವ
ಭಕ್ತನ ನುಡಿಯ ನಡುವೆ ರಾಶಿಯಾಗಿರ್ಪ.

ನಿರ್ಮಲ ಚಿತ್ತನಾದ ಭಕ್ತನ ಮುಖಕನ್ನಡಿಯಲ್ಲಿ ಲಿಂಗದ ತೇಜ, ಪ್ರಕಾಶಗಳನ್ನು ಕಾಣುತ್ತೇವೆ. ದೇವರು ಭಕ್ತನ ದೇಹದಲ್ಲಿ ಯಾವಾಗಲೂ ಕೃಪಾಸಾಗರನಾಗಿ ಅರತರಂಗದಲ್ಲಿ ನೆಲೆಸಿರುತ್ತಾನೆ; ಆ ಭಕ್ತನ ವಚನಶಕ್ತಿಯ ರಾಶಿಯಾಗಿ ಕೂಡಲ ಸಂಗನು ದೇವನು ಬೆಳಗುತ್ತಾನೆ.

೧೪೬ ಭಕ್ತಿ ಎಂತಹುದಯ್ಯಾ ? ದಾಸಯ್ಯ ಮಾಡಿದಂತಹುದಯ್ಯಾ,
ಭಕ್ತಿ ಎಂತಹುದಯ್ಯಾ? ಸಿರಿಯಾಳ ಮಾಡಿದಂತಹುದಯ್ಯಾ,
ಭಕ್ತಿ ಎಂತಹುದಯ್ಯಾ ? ನಮ್ಮ ಸಿಂಧು ಬಲ್ಲಾಳ ಮಾಡಿದಂತಹುದಯ್ಯಾ,
ಭಕ್ತಿ ಎಂತಹುದಯ್ಯಾ ಕೂಡಲ ಸಂಗಮದೇವಾ.
ನೀ ಬಾಣನ ಬಾಗಿಲ ಕಾಯ್ದಂತಹುದಯ್ಯಾ.

ಎಲ್ಲವನ್ನೂ ಬಿಟ್ಟು ಕೊಟ್ಟು, ನಿನ್ನ ದಾಸಾನುದಾಸನಾಗಿದ್ದ ದೇವರ ದಾಸಿಮಯ್ಯನ ಭಕ್ತಿ; ಶಿವಾರೋಗಣೆಗೆ ತನ್ನ ಮಗನ ದೇಹವನ್ನೇ ಪಾಕಮಾಡಿ ಅರ್ಪಿಸಿದ ಸಿರಿಯಾಳನ ಭಕ್ತಿ; ಫಲಾಪೇಕ್ಷೆಯಿಲ್ಲದೆ ನಿಮ್ಮ

ಹೆಸರಿನಲಿ ದಾನಧರ್ಮವಮಾಡಿ ಜಂಗಮ ಭಕ್ತನಾದ ಸಿಂಧು ಬಲ್ಲಾಳನ ಭಕ್ತಿ; ಭಕ್ತಿಯು, ಕೂಡಲ ಸಂಗಮ ದೇವ, ನೀನು ಜಾಣನ ಮನೆ ಬಾಗಿಲನ್ನು ಕಾಯ್ದುಂತಹುದು ಇರಬೇಕು!

೧೪೭ ಮುನ್ನಿನವರು ಹೋದ ದಾರಿ ಭಯ ಕಾಣಿರಣ್ಣಾ !
ಬಲ್ಲಾಳನ ವಧುವಿನೊಡನೆ ಸರಸವಾಡಿದಂದಿಂದ ಭಯ ಕಾಣಿರಣ್ಣಾ !
ಸಿರಿಯಾಳನ ಮಗನ ಬೇಡಿದಂದಿಂದ ಭಯ ಕಾಣಿರಣ್ಣಾ!
ದಾಸನ ವಸ್ತ್ರವ ಸೆಳೆದಂದಿಂದ ಭಯ ಕಾಣಿರಣ್ಣಾ !
ಅಘಟಿತ ಘಟಿತರು ವಿಪರೀತ ಚರಿತರು
ಕೂಡಲ ಸಂಗನ ಶರಣರು ನಡೆದ ದಾರಿ ಭಯ ಕಾಣಿರಣ್ಣಾ!!

ಪೂರ್ವಾಚಾರರು ನಡೆದ ದಾರಿಯಲ್ಲಿ ನಡೆವುದು ಮಹಾ ಕಠಿಣ. ಏಕೇಶ್ವರನು, ಅನೇಕ ಅವತಾರಗಳಲ್ಲಿ ಅವತರಿಸಿ, ಭಕ್ತರ ಭಕ್ತಿಯನ್ನು ಪರೀಕ್ಷಿಸಲು, ಬಲ್ಲಾಳನ ಹೆಂಡತಿಯೊಡನೆ ಕೂಡಿದ್ದು, ಸಿರಿಯಾಳನ ಮಗನ ಎಳೆಮಾಂಸದ ಆಹಾರ ತನಗೆ ಉಣಬಡಿಸಬೇಕೆಂದು ಬೇಡಿದ್ದು. ಜೇಡರ ದಾಸೀಮಯ್ಯನ ಅನನ್ಯ ಭಕ್ತಿಯನ್ನರಿಯಲು ವಸ್ತ್ರಹರಣ ಮಾಡಿಸಿದ್ದು; ಈಪ್ರಕಾರ ಏನು ಬೇಕಾದ್ದು ಮಾಡಬಲ್ಲ, ಲೋಕ ವಿಪರೀತರಾಗಿ ನಡೆಯುಬಲ್ಲ ಗುರುವಿನ ದಾರಿ, ಮತ್ತು ಕೂಡಲ ಸಂಗಮ ದೇವನ ಶರಣರು ತುಳಿದ ಮಾರ್ಗಭಯಾನಕವಾದದ್ದು.

೧೪೮ ದೇವನೊಳ್ಳಿದನೆಂದು ಮುಯ್ಯಾನಲು ಬೇಡಾ!
ಕರಕಟಿ ಕಾಡಿದನೊಳಿದನೆ?
ಅಳಿಸುವ ನಗಿಸುವನೊಳ್ಳಿದನೆ?
ಬೆಚ್ಚದೆ ಬೆದರದೆ ತೊತ್ತುತನವ ಮಾಡಲು
ತನ್ನನೀವ ಕೂಡಲ ಸಂಗಮದೇವ.

ದೇವರು ಒಳ್ಳೆಯುವನೆಂದು, ಸಜ್ಜನನೆಂದು ಆನಂದಿಸಬೇಡ. ಸಹಿಸಲಸಾಧ್ಯ ಕಷ್ಟಗಳನ್ನು ಕೊಟ್ಟುಕಾಡುವವನು, ಅಳಿಸುವವನು ನಗಿಸುವ

ವನು ಒಳ್ಳೆಯುವನೆ? ಆದರೆ ಯಾವ ದುಃಖಕ್ಕೂ, ಕಷ್ಟಕ್ಕೂ ಹೌಹಾರದೆ, ಅಂಜದೆ ಲೋಕಕಲ್ಯಾಣಕ್ಕಾಗಿ, ಭಕ್ತರ ಉದ್ಧಾರಕ್ಕಾಗಿ ಕೂಡಲ ಸಂಗಮ ದೇವನು ಆಳಾಗಿ ಬರುತ್ತಾನೆ.

**೧೪೯ ನೆರೆ ನಂಬೋ ನೆರೆ ನಂಬೋ ಧರ ಧರ್ಮವಿಲ್ಲದೆ ಸಾಮ ವೇದಿಗಳಂತೆ,**
**ನೆರೆ ನಂಬೋ ನೆರೆ ನಂಬೋ ದಾಸ ದುಗ್ಗಳೆಯಂತೆ,**
**ನೆರೆ ನಂಬೋ ನೆರೆ ನಂಬೋ ಸಿರಿಯಾಳ ಚಂಗಳೆಯಂತೆ**
**ನೆರೆ ನಂಬೋ ನೆರೆ ನಂಬೋ ಸಿಂಧು ಬಲ್ಲಾಳನಂತೆ,**
**ನಂಬಿಯೊಡಡೆ ತನ್ನನೀವ ಕೂಡಲಸಂಗಮದೇವ.**

ನಾನೇ ದೊಡ್ಡವನು; ಶ್ರೇಷ್ಠನೆಂಬ ಅಹಂಕಾರವಿಲ್ಲದ ಸಾಮ ವೇದ ಬಲ್ಲವರಂತೆ ದೇವರನ್ನು ಬಲವಾಗಿ ನಂಬು; ದಾಸದುಗ್ಗಳೆಯಂತೆ, ಸಿರಿಯಾಳ ಚಂಗಳೆಯಂತೆ, ಸಿಂಧುಬಲ್ಲಾಳನಂತೆ ಸರ್ವಸ್ವವೂ ನೀನೇ ದೇವಾ ಎಂಬ ನಮ್ರವಾದ ಅನ್ಯೋನ್ಯಪ್ರೀತಿ ಇಡು. ಈ ತೆರನಾಗಿ ನಂಬಿದ್ದೇ ಆದರೆ ಕೂಡಲ ಸಂಗಮದೇವನು ತಾನೇ ಸ್ವತಃ ಭಕ್ತನಲ್ಲಿಗೆ ಬರುತ್ತಾನೆ; ಭಕ್ತನ ದಾಸ ನಾಗುತ್ತಾನೆ.

**೧೫೦ ಬಲ್ಲಿದರೊಡನೆ ಬವರವಾದರೆ ಗೆಲಲುಂಟು ಸೋಲಲುಂಟು,**
**ಕಳ್ಳನೊಡನೆ ಭಾಷೆ ಪೂರಾಯ (ವೆ), ಅಯ್ಯಾ ?**
**ನಮ್ಮ ಕೂಡಲ ಸಂಗನ ಶರಣರಿಗೆ ಮಾಡಿ ಮಾಡಿ**
**ಧನ ಸವೆದು ಬಡವಾದರೆ**
**ಆ ಭಕ್ತನು ಆ ಲಿಂಗಕ್ಕೆ ಪೂಜೆಯುಹನು.**

ಜಾಣರೊಂದಿಗೆ ಮಾತಿನಯುದ್ಧವಾದರೆ ಗೆಲ್ಲುವದುಂಟು ಸೋಲುವದುಂಟು. ಕಳ್ಳಸುಳ್ಳರ ಜೊತೆಗೆ ಮಾತು ಎಂದಾದರೂ ಪೂರ್ಣ ನಿಜವಾದವುಗಳಿರು ತ್ತವೆಯೇ? ಶರಣರ ಆ ತಿಥ್ಯ ಮಾಡಿ ಮಾಡಿ ದುಡ್ಡು ತೀರಿ ಬಡವನಾದರೆ ಆ ಭಕ್ತನು ಪರಲಿಂಗ ಮೂರ್ತಿಯ ಕಾರುಣ್ಯಕ್ಕೆ ತಕ್ಕವನು.

**೧೫೧ ಗಿರಿಗಳ ಮೇಲೆ ಹಲವು ತರುಮರಾದಿಗಳಿದ್ದು**
**ಗಿರಿಗಂಧದ ಸನ್ನಿಧಿಯಲು ಪರಿಮಳವಾಗವೆ ?**
**ಲಿಂಗವಂತನ ಸನ್ನಿಧಿಯಿಂದ ಹಿಂದಣ ದುಸ್ಸಂಗ ಕೆಡೆವುದು**
**ಕೂಡಲ ಸಂಗಮ ದೇವಯ್ಯಾ**
**ಸಿರಿಯಾಳನ ಸಾರ್ದ ನರರೆಲ್ಲ ಸುರರಾಗರೆ ?**

ಪರ್ವತಗಳ ಮೇಲೆ ದಟ್ಟ ಮರಗಳ ಮಧ್ಯೆ ಒಂದು ಸಿರಿಗಂಧದ ಗಿಡ ವಿದ್ದರೆ ಅವರ ಪರಿಮಳಯುಕ್ತ ಗಾಳಿಯಿಂದ ಎಲ್ಲ ತರುಮರಗಳೂ ಸೌರಭ ವೀಯುತ್ತವೆ. ಹಾಗೆಯೇ ದಯಾಪರನಾದ ಲಿಂಗನ ಸರ್ವಪಾಪ ನಾಸಿ ನಿಯಾದ ಜ್ಞಾನ ಗಂಗೆಯಲ್ಲಿ ಸ್ನಾನಮಾಡಿದ ಶರಣರ ಸತ್ಸಂಗದಿಂದ ಹಿಂದಿನ ಜನ್ಮದ ಎಲ್ಲ ಅನಿಷ್ಟವೂ ಅಳಿಯುವದು. ಎಲ್ಲ ಮಾನವ ಪ್ರಾಣಿಗಳು ಸಿರಿಯಾಳನ ಭಕ್ತಿಮಾರ್ಗದಲ್ಲಿ ಚಲಿಸಿದರೆ ಅಮರರಾ ಗುತ್ತಾರೆ.

**೧೫೨ ಪರುಷದ ಹೊರೆಯಲ್ಲಿ ಕಬ್ಬುನವಿರ್ದು ಹೊನ್ನಾಯತ್ತು ನೋಡಿರೆ,**
**ಅವ್ವಾ ಚೆಂಗಳೇ, ನೀನಿದ್ದೇಳು ಕೇರಿಯವರು**
**ಲಿಂಗದ ನೋಂಪಿಯ ನೋಂತರೆ ? ಹೇಳಾ,**
**ಕೂಡಲ ಸಂಗಮ ದೇವಂಗೆ**
**ಚೀಲಾಳನೆಂಬ ಬಾಯಿನವ ನಿಕ್ಕಿದರೆ ? ಹೇಳಾ.**

ಪರುಷಮಣಿಯ ಸಂಸ್ಕಾರದಿಂದ ಕಬ್ಬಿಣ ಬಂಗಾರ ವಾಯಿತೆಂಬುದು ಸಿದ್ಧಾಂತ. ಆದರೆ ತಾಯಿ ಚೆಂಗಳೆ ನೀನು ವಾಸವಾಗಿದ್ದ ಊರವರು ಶಿವಾಚಾರ ವ್ರತ ಪರಿಪಾಲನೆ ಮಾಡಿದರೆ? ಇಲ್ಲ. ಕೂಡಲಿ ಸಂಗಮ ದೇವರಿಗೆ ಚೀಲಾಳನೆಂಬ ಬಾಲಕನ ಶಿರಹರಿದು ಪಕ್ವಾನ್ನಮಾಡಿ ಉಣ ಬಡಿಸಿದರೆ? ಇಲ್ಲ. ಭಕ್ತಿಯ ಲವಲೇಶವಿಲ್ಲದವರು ಎಲ್ಲಿದ್ದರೂ ಅಷ್ಟೆ.

**೧೫೩ ಗೀತವ ಬಲ್ಲಾತ ಜಾಣನಲ್ಲ, ಮಾತ ಬಲ್ಲಾತ ಜಾಣನಲ್ಲ,**
**ಜಾಣನು, ಜಾಣನು, ಆತ ಜಾಣನು; ಲಿಂಗವ ನೆರೆ ನಂಬಿದಾತ,**

**ಜಾಣನು ಜಂಗಮಕ್ಕೆ ಸವೆಸುವಾತ,**
**ಆತ ಜಾಣನು, ಜವನ ಬಾಯಲು ಬಾಲವ ಕೊಯ್ದು**
**ಹೋದಾತ;**
**ಆತ ಜಾಣನು; ನಮ್ಮ ಕೂಡಲ ಸಂಗನ ಶರಣನು !**

ಗೀತೆಯನ್ನು ಪಠಿಸುವವನು, ಮಾತಿನ ಚಾಪಲ್ಯ ಚುರುಕು ತೋರಿಸುವವನು ಜಾಣನಲ್ಲ. ಪರಶಿವಲಿಂಗನ ಅನಂತ ಶಕ್ತಿಯಲ್ಲಿ ವಿಶ್ವಾಸವಿಟ್ಟವನೇ ಜಾಣ; ಜಂಗಮಾರ್ಚನೆಗೆ ತನುಮನಧನಗಳನ್ನು ಸಮರ್ಪಿಸುವವನೇ ಕಡುಜಾಣ. ಮರವನ್ನು ಗೆದ್ದವನೇ ಜಾಣ. ಕೂಡಲ ಸಂಗನ ಶರಣನೊಬ್ಬನೇ ಜಾಣ.

**೧೫೪ ಲೇಸೆನಿಸಿಕೊಂಡು ಐದು ದಿನ ಬದುಕಿದರೇನು ?**
**ಲೇಸೆನಿಸಿಕೊಂಡು ನಾಲ್ಕು ದಿನ ಬದುಕಿದರೇನು ?**
**ಲೇಸೆನಿಸಿಕೊಂಡು ಮೂರು ದಿನ ಬದುಕಿದರೇನು ?**
**ಲೇಸೆನಿಸಿಕೊಂಡು ಎರಡು ದಿನ ಬದುಕಿದರೇನು ?**
**(ಶ್ಲೋಕ)- ಜೀವಿತಂ ಶಿವ ಭಕ್ತಾನಾಂ । ವರ ಪಂಚ ದಿನಾನಿ ಚ ॥**
**ನಾಜ ಕಲ್ಪ ಸಹಸ್ರಂ ತು । ಭಕ್ತಿ ಹೀನಂ ತು ಶಂಕರೀ ॥**
**ಎಂಬುದಾಗಿ ಕೂಡಲ ಸಂಗನ ಶರಣರ ವಚನದಲ್ಲಿ**
**ಲೇಸೆನಿಸಿಕೊಂಡು ಒಂದು ದಿನ ಬದುಕಿದರೇನೊ ?**

ಶಿವಭಕ್ತರು ಕೇವಲ ಪೂರ್ಣವಾದ, ಅಮೌಲ್ಯವಾದ, ಕೀರ್ತಿಯುತವಾದ ಐದೇ ಐದುದಿನ ಬದುಕಿದ್ದರೂ ಅವರು ಅಮರರು. ಭಕ್ತಿಹೀನರು ಸಹಸ್ರಾರಾರು ವರುಷ ಬಾಳಿದರೂ ಹದ್ದು ಬಾಳಿದಂತೆ. ಕಾರಣ ಕೂಡಲ ಸಂಗಮ ದೇವನ ಶರಣರಿಂದ ಉತ್ತಮರೆಂದೆನಿಸಿಕೊಂಡು ಒಂದೇ ಒಂದು ದಿನ ಬಾಳಿ ಬದುಕುವದು ಶ್ರೇಯಸ್ಕರ.

**೧೫೫ ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ;**
**ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ;**

**ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ;**
**ಕೂಡಲ ಸಂಗಮದೇವಾ.**

ನಿಪುಣ ಕಲಾವಿದನಾದ ಬ್ರಹ್ಮದೇವನ ಕಮ್ಮಾರಸಾಲೆಯೆಂದು ಹೆಸರುಗೊಂಡ ಭೂಲೋಕದಲ್ಲಿ ಉತ್ತಮರು, ಯೋಗ್ಯರೆಂದೆನಿಸಿಕೊಂಡವರು ಪರಲೋಕಕ್ಕೂ ಯೋಗ್ಯರಾಗುತ್ತಾರೆ. ಇಲ್ಲಿ ಬೇಡವಾದವರು; ಪಾಪಿಗಳು ಪರಲೋಕಕ್ಕೂ ಬೇಡವಾಗುತ್ತಾರೆ.

**೧೫೬ ಶಿವಚಿಂತೆ ಶಿವಜ್ಞಾನವಿಲ್ಲದ ಮನುಜರು**
**ಸಗಣಕ್ಕೆ ಸಾಸಿರ ಹುಳು ಹುಟ್ಟವೆ, ದೇವಾ ?**
**ಕಾಡಮೃಗವೊಂದಾಗಿರಲಾಗದೆ, ದೇವಾ ?**
**ಊರಮೃಗವೊಂದಾಗಿರಲಾಗದೆ, ಹರನೇ ?**
**ನಮ್ಮ ಕೂಡಲ ಸಂಗನ ಶರಣರಿಲ್ಲದ ಊರು, ದೇಶ—**
**ವನವಾಸ, ನರವಿಂಧ್ಯ ಕಾಣಿರಣ್ಣಾ !**

ಶಿವ ಚಿಂತೆ, ಶಿವ ಜ್ಞಾನವಿಲ್ಲದ ಮನುಷ್ಯರು, ಸೆಗಣಿಯೊಳಗಿನ ಹುಳ, ಕೀಟಕಗಳು ಹುಟ್ಟಿ ಸಾಯುವ ಹಾಗೆ ಇರುತ್ತಾರೆ;ಅಡವಿಯ ಉಪದ್ರ ದುಷ್ಟ ಪ್ರಾಣಿಯಾಗಿ, ಊರ ಹೆಮ್ಮಾರಿಯಾಗಿ, ಕಾಡುವ ನರಪ್ರಾಣಿಯಾಗಿ ಬಾಳುತ್ತಾರೆ. ಆದಕಾರಣ ಶರಣರಿಲ್ಲದ ಊರು ನಿರ್ಜನ ಪ್ರದೇಶವಿದ್ದಂತೆ, ಘೋರ ನರಕ ವಿದ್ದಂತೆ.

**೧೫೭ ಹೊತ್ತಾರೆ ಎದ್ದು ಶಿವಲಿಂಗದೇವನ**
**ದೃಷ್ಟಿಯಾರೆ ನೋಡದವನ ಸಂಸಾರವೇನವನ ?**
**ಬಾಳುವೆಣನ ಬೀಳುವೆಣನ ಸಂಸಾರವೇನವನ ?**
**ನಡೆವೆಣನ ನುಡಿವೆಣನ ಸಂಸಾರವೇನವನ ?**
**ಕರ್ತೃ ಕೂಡಲ ಸಂಗಮದೇವಾ,**
**ನಿಮ್ಮ ತೊತ್ತುಗೆಲಸವ ಮಾಡದವನ ಸಂಸಾರವೇಸವನ ?**

ನಸುಕಿನಲ್ಲಿ ಎದ್ದು ಶಿವಲಿಂಗ ದೇವನನ್ನು ಕಣ್ಣುತುಂಬ ನೋಡದವನ ಬಾಳುವೆ ಜೀವನ್ಮೃತನ ಸಂಸಾರದಂತೆ; ಭೂತಗಳ ಪ್ರಪಂಚದಂತೆ;

ತ್ರೈಲೋಕೇಶ್ವರನಾದ ಕೂಡಲ ಸಂಗಮ ದೇವನ ಆಳಾಗಿ ದುಡಿಯದವನ ಜನ್ಮ ನಿರರ್ಥಕ.

**೧೫೮ ವ್ಯಾಧನೊಂದು ಮೊಲನ ತಂದರೆ ಸಲುವ ಹಾಗಕ್ಕೆ**
**ಬಿಲಿವರಯ್ಯಾ;**
**ನೆಲನಾಳ್ವನ ಹೆಣನೆಂದರೆ ಒಂದಡಕೆಗೆ ಕೊಂಬರಿಲ್ಲಾ,**
**ನೋಡಯ್ಯಾ;**
**ಮೊಲನಿಂದ ಕಡು ಕಷ್ಟ ನರಸ ಬಾಳುವೆ!**
**ಸಲೆ ನಂಬೋ ನಮ್ಮ ಕೂಡಲ ಸಂಗಮದೇವನ.**

ಬೇಡನು ಒಂದು ಮೊಲ ಹಿಡಿದು ತಂದರೆ ದುಡ್ಡು ಕೊಟ್ಟು ಕೊಳ್ಳುತ್ತಾರೆ. ಆದರೆ ಅದೇ ಅರಸನ ಹೆಣವನ್ನು ಒಂದು ಅಡಕಿ ಹೋಳಿಗೂ ಕೊಳ್ಳುವದಿಲ್ಲ. ಮೊಲದಕಿಂತಲೂ ಕನಿಷ್ಟ ಈ ಮನುಷ್ಯ ಜನ್ಮ; ಅದ್ದರಿಂದ ಮಾನವನೇ ಗಟ್ಟಿಮುಟ್ಟಾಗಿ ಕೂಡಲ ಸಂಗಮ ದೇವನನ್ನು ನಂಬು.

**೧೫೯ ಉತ್ಪತ್ತಿ ಶುಕ್ಲ-ಶೋಣಿತದಿಂದಾದ ಲಜ್ಜೆಸಾಲದೆ?**
**ಮತ್ತೆ ದುರಿತಂಗಳ ಹೊರುವ ಹೆಗ್ಗತನವೇಕಯ್ಯಾ?**
**ಮೃತ್ಯುವಿನ ಬಾಯಿಗೆ ತುತ್ತಾಗಲೇಕೆ?**
**ಒತ್ತೊತ್ತೆಯ ಜನನವ ಗೆಲುವೊಡೆ ಕರ್ತನ ಪೂಜಿಸು**
**ನಮ್ಮ ಕೂಡಲ ಸಂಗಮದೇವನ.**

ಸಂಸಾರ ಸಂಗ್ರಾಮದಲ್ಲಿ ರಕ್ತ ವೀರ್ಯಾದಿಗಳಿಂದುಂಟಾದ ಪಾಪಗಳು ಸಾಲವೆ? ಮತ್ತೇಕೆ ಈ ಸಂಸಾರ ಸಂಕಟಗಳನ್ನು ಹೊರುವ ಆಶೆ? ಆ ಹೇಡಿತನವೇಕೆ? ಬಾರಿ ಬಾರಿಗೆ ಮೃತ್ಯುವಿನ ತುತ್ತಿಗೆ ಆಹುತಿಯಾಗುವದಕ್ಕಿಂತ ಜನನವನ್ನು ಜಯಿಸ ಬೇಕಾದರೆ ಮುಕ್ತಿಯ ಮೌಕ್ತಿಕವಾದ ಕೂಡಲ ಸಂಗಮದೇವನನ್ನು ಪೂಜಿಸು.

**೧೬೦ ಮನವೇ ಸರ್ಪ, ತನುವೇ ಹೇಳಿಗೆ:**
**ಹಾವಿನೊಡತಣ ಹುದುವಾಳಿಗೆ;**

**ಇನ್ನಾವಾಗ ಕೊಂದಹುದೆಂದರಿಯೆ;**
**ನಿನ್ನಾವಾಗ ತಿಂದಹುದೆಂದರಿಯೆ;**
**ನಿಚ್ಚಕ್ಕೆ ನಿಮ್ಮ ಪೂಜಿಸಬಲ್ಲೊಡೆ**
**ಅದೇ ಗಾರುಡ, ಕೂಡಲ ಸಂಗಮದೇವಾ.**

ಮನಸ್ಸು ಕಾಳಸರ್ಪವಾಗಿ ದೇಹವೇ ಅದರ ಬುಟ್ಟಿಯಾಗಿದ್ದು ಅದರ ಸಂಗಡ ಕೂಡಿ ಬಾಳುವ ಹಾವುಗಾರನಂತೆ ಈ ಜೀವನ; ಇದನ್ನು ಕರ್ಕೊಟಕನು ಯಾವಾಗ ಕೊಂದು ತಿನ್ನುತ್ತದೆಯೋ ನಾನರಿಯೆ. ಆದರೆ ಕೂಡಲ ಸಂಗಮ ದೇವಾ ಯಾವಾಗಲೂ ನಿನ್ನನ್ನು ಪೂಜಿಸುತ್ತಿದ್ದರೆ ಅದೇ ಹಾವಿನ ಮಂತ್ರವಾಗಿ ಪರಿಣಮಿಸುತ್ತದೆ. ಸಂಸಾರ ಮುಕ್ತಿಗೆ ಪರುಷ ವಾಗುತ್ತದೆ.

**೧೬೧ ನೆರೆ ಕೆನ್ನೆಗೆ, ತೆರೆ ಗಲ್ಲಕೆ ಶರೀರ ಗೂಡುವೋಗದ ಮುನ್ನ,**
**ಹಲ್ಲುಹೋಗಿ, ಬೆನ್ನುಬಾಗಿ, ಅನ್ಯರಿಗೆ ಹಂಗಾಗದ ಮುನ್ನ,**
**ಕಾಲ ಮೇಲೆ ಕೈಯನೂರಿ ಕೋಲಹಿಡಿಯದ ಮುನ್ನ,**
**ಮುಪ್ಪಿಂದೊಪ್ಪಳಿಯದ ಮುನ್ನ, ಮೃತ್ಯು ಮುಟ್ಟದ ಮುನ್ನ,**
**ಪೂಜಿಸು ನಮ್ಮ ಕೂಡಲ ಸಂಗಮದೇವನ.**

ಕೂದಲು ಬಿಳಿದಾಗಿ, ಗಲ್ಲ ಗುಳಿಬಿದ್ದು ದೇಹ ನಾಶವಾಗುವ ಮುಂಚೆಗೆ, ಹಲ್ಲು ಬಿದ್ದು ಬೆನ್ನುಬಾಗಿ ಪರರಿಗೆ ಬೇಸರವಾಗುವ ಮುಂಚೆಗೆ; ಬಲಹೀನನಾಗಿ ಕೋಲುಹಿಡಿದು ಓಡಾಡುವ ಮುಂಚೆಗೆ; ಮುಪ್ಪು ಬಂದು ದೇಹದೆಣ್ಣೆ ತೀರಿ ಬತ್ತಿಕರಕಾಗುವ ಮತ್ತು ಸಾವು ಕೈಚಾಚದ ಮುಂಚೆಗೆ, ಕೂಡಲ ಸಂಗಮ ದೇವನ ಭಜಿಸಿ ಪೂಜಿಸಿ ಸಾಯುಜ್ಯಪದಗಳಿಸು.

**೧೬೨ ನೀರ ಬೊಬ್ಬುಳಿಕೆಗೆ ಕಬ್ಬುನದ ಕಟ್ಟ ಕೊಟ್ಟು**
**ಸುರಕ್ಷಿತವ ಮಾಡುವ ಭರವ ನೋಡಾ !**

ಮಹಾದಾನಿ ಕೂಡಲ ಸಂಗಮದೇವನ ಪೂಜಿಸಿ
ಬದುಕುವೋ ಕಾಯುವ ನಿಶ್ಚಯಿಸದೆ.

ನೀರಿನ ಒತ್ತಡವನ್ನು ತಡೆಯಲು ಕಬ್ಬಿಣದ ಕಟ್ಟು ಹಾಕಿ ತಡೆಯುವ ಪ್ರಯತ್ನದಂತೆ ಅನಿತ್ಯವಾದ ದೇಹದ ಬೆಡಗು ನಂಬದೆ ಕೂಡಲ ಸಂಗಮದೇವನ ಪೂಜಿಸಿ ಮುಕ್ತಿಗೆ ದಾರಿ ಮಾಡಿಕೊಳ್ಳು.

**೧೬೩ ಹಂಜರ ಬಲ್ಲಿತ್ತೆಂದು, ಅಂಜದೆ ಓದುವ ಗಿಳಿಯೇ**
**ಎಂದೆಂದೂ ಅಳಿಯೆನೆಂದು ಗುಡಿಗಟ್ಟಿದೆಯಲ್ಲಾ;**
**ನಿನ್ನ ಮನದಲ್ಲಿ-**
**ಮಾಯಾ ಮಂಜರ ಕೊಲುವರೆ ನಿನ್ನ ಹಂಜದ ಕಾವುದೆ.**
**ಕೂಡಲ ಸಂಗಮ ದೇವನಲ್ಲದೆ?**

ಭದ್ರವಾದ ಪಂಜರವಿದೆಂದು ತಿಳಿದು ಮಾತನಾಡುವ ಗಿಳಿಯಹಾಗೆ ಚಿರಂಜೀವಿ ಎಂದು ತಿಳಿದು ಮನದಲ್ಲಿ ವಿಷಯಾಸಕ್ತವಾದ ಗೋಪುರಗಳನ್ನು ಕಟ್ಟಿದೆ. ಆ ಮಾಯಾಂಗನೆಯು ನಿನ್ನನ್ನು ಕೊಲ್ಲುವಾಗ ಆ ಮೋಹಕ್ಕೆ ಕಾರಣವಾದ ದೇಹವು ಉಳಿಸಲು ಬರುತ್ತದೆಯೆ? ಆಗ ನಿನ್ನನ್ನುಳಿಸಲು ಬರುವವರು ಕೂಡಲ ಸಂಗಮನಲ್ಲದೆ ಮತ್ತಾರೂ ಅಲ್ಲ.

**೧೬೪ ಸಂಸಾರವೆಂಬುದೊಂದು ಗಾಳಿಯ ಸೊಡರು,**
**ಸಿರಿ ಯೆಂಬುದೊಂದು ಸಂತೆಯ ಮಂದಿ ಕಂಡಯ್ಯಾ!**
**ಇದ ನೆಚ್ಚಿ ಕೆಡಬೇಡ-ಸಿರಿಯೆಂಬುದ!**
**ಮರೆಯದೆ ಪೂಜಿಸು ನಮ್ಮ ಕೂಡಲ ಸಂಗಮದೇವನ.**

ಭೂತದ ಗಾಳಿಯ ಸೋಂಕಿನಂತಿರುವ ಸಂಸಾರವನ್ನೂ, ಸಂತೆಯಲ್ಲಿ ನೆರೆದ ಜನಸಂದಣಿಯಂತೆ ಇರುವ ಚಂಚಲ ದ್ರವ್ಯವನ್ನೂ ಪ್ರೀತಿಸಿ ಕೆಡಬೇಡ. ಯಾವ ಕಾಲಕ್ಕೂ ಮರೆಯದಲೆ ಕೂಡಲ ಸಂಗಮ ದೇವನನ್ನು ಪೂಜಿಸಿ ಪುನೀತನಾಗು.

**೧೬೫ ಎಲೆ ಎಲೆ ಮಾನವಾ ಅಳಿಯಾಶೆ ಬೇಡವೋ**
**ಕಾಳ ಬೆಳದಿಂಗಳು ಸಿರಿ ಸ್ಥಿರವಲ್ಲ.**
**ಕೇಡಿಲ್ಲದ ಪದವಿ; ಕೂಡಲ ಸಂಗಮ ದೇವನ**
**ಮರೆಯದೇ ಪೂಜಿಸೋ**

ಎಲೆ ಮಾನವಾ ದುರಾಶೆ ಬೇಡ. ಬಡತನಸಿರಿತನಗಳು ಕಡೆತನ ಕಲ್ಲ. ಜನನ ಮರಣರಹಿತವಾದ ಮುಕ್ತಿವರವಿಗಾಗಿ ತಪ್ಪದಲೇ ಕೂಡಲ ಸಂಗಮ ದೇವನನ್ನು ಆರಾಧಿಸು. ಅವನ ಪ್ರಸಾದ ತೀರ್ಥಗಳನ್ನು ಸೇವಿಸು.

**೧೬೬ ಎಂತಕ್ಕೆ! ಎಂತಕ್ಕೆ! ಹಡೆದ ಕಾಯ ಬೀಯುವಾಗದ**
**ಮುನ್ನ ಅಟ್ಟುಣ್ಣುವೋ!**
**ಬೆರಣಿಯುಳ್ಳಲ್ಲಿ ಹೊತ್ತು ಹೋಗದ ಮುನ್ನ ಅಟ್ಟು**
**ಣ್ಣುವೋ!**
**ಮರಳಿ ಭವಕ್ಕೆ ಬಹೆ:— ಬಾರದಿಹೆ;**
**ಕರ್ತೃ ಕೂಡಲ ಸಂಗಂಗೆ ಶರಣೆನ್ನುವೋ!**

ಎಂತಹದಾದರೂ ಆಗಲಿ ನೀ ಪಡೆದುಕೊಂಡ ಈ ದೇಹ ಸವೆಯುವ ದಕ್ಕೆ ಮುಂಚೆ ಪುಣ್ಯ ಕೃತಿಗಳನ್ನು ಮಾಡಿ ನಿತ್ಯ ಸುಖಿಯಾಗು. ಕುಳ್ಳು (ಕುರುಳು)ಕೆಂಡವಾರಿ ಬೂದಿಯಾಗುವದಕ್ಕೆ ಮುಂಚೆ ಹೊತ್ತು ಕಳೆಯದಲೆ ಅಡಿಗೆ ಮಾಡಿ ಊಟ ಮಾಡು. ಪುನಃ ಪುನಃ ಭವಚಕ್ರದ ನೊಗಕ್ಕೆ ಹೆಗಲು ಕೊಡುವದನ್ನು ತಪ್ಪಿಸಿಕೊಳ್ಳಲು ಒಡೆಯ ಕೂಡಲ ಸಂಗಮ ದೇವಂಗೆ ದಿನವೂ ಮೊರೆಹೋಗು.

**೧೬೭ ಶಕುನವೆಂದೆಂಬೆ, ಅವಶಕುನವೆಂದೆಂಬೆ—**
**ನಿಮ್ಮವರು ಅಳಲಿಕೆ ಅಂದೇಕೆ ಬಂದೆ?**
**ನಿಮ್ಮವರು ಅಳಲಿಕೆ ಇಂದೇಕೆ ಹೋದೆ?**
**ನೀ ಹೋ ಹಾಗಳಕ್ಕೆ ! ನೀ ಬಾ ಹಾಗಳಕ್ಕೆ !**
**ಅಕ್ಕೆ ಬಾರಾದ ಮುನ್ನ ಪೂಜಿಸು ಕೂಡಲ ಸಂಗಮದೇವನ.**

ಪ್ರತಿ ಮಾತಿಗೂ, ಪ್ರತಿ ಹೆಜ್ಜೆಗೂ ಶಕುನ-ಅವಶಕುನವೆಂದು ಅನುಮಾನಿಸುವನೀನು ನಿನ್ನವರದುಃಖಕ್ಕೆ ಕಾರಣನಾಗಿ ಆ ದಿನ ಬಿಟ್ಟೇಕೆ ಬಂದೆ? ಇಂದು ಅವರಿಗೆ ದುಃಖ ಕೊಡಲು ಮತ್ತೇಕೆ ಹೋದೆ? ನೀ ಎಲ್ಲಿಂದ ಹೋಗುವೆಯೋ ಪುನಃ ಅದೇ ಜಗಕ್ಕೆ ಬಾ. ಆದರೆ ಕಷ್ಟಗಳು ಮುತ್ತುವದಕ್ಕೆ ಮುಂಚೆ ಕೂಡಲ ಸಂಗಮ ದೇವನ ಕೀರ್ತನೆ ಹಾಡಿ ಜಗದ ಹಂಗುಕಳೆ.

**೧೬೮ ನಿಮಿಷದ ನಿಮಿಷಂಬೋ ಕ್ಷಣದೊಳಗರ್ಧಂ ಬೋ!**
**ಕಣ್ಣು ಮುಚ್ಚಿ ಬಿಚ್ಚುವೈಸು ಬೇಗಂ ಬೋ;**
**ಸಂಸಾರದಾಗಂಬೋ! ಸಂಸಾರದ ಹೋಗುಂ ಬೋ!**
**ಸಂಸಾರದೊಪ್ಪಂ ಬೋ!**
**ಕೂಡಲ ಸಂಗಮದೇವಾ,**
**ನೀ ಮಾಡಿದ ಮಾಯೆಾಂ ಬೋ, ಅಬ್ರಚ್ಛಾಯೆ ಬೋ!!**

ಇದು ಮೋಡಿಕಾರನ ಪ್ರಪಂಚ ಇದ್ದಂತೆ. ಎಲ್ಲವೂ ಕಣ್ಣು ಮುಚ್ಚಿ ಕಣ್ಣು ತೆರೆಯುವದರೊಳಗಾಗಿ ಮುಗಿದೇ ಹೋಗುತ್ತದೆ. ಸಂಸಾರದ ಹುಟ್ಟು-ಸಾವುಗಳು, ಅದರ ಬೆಡಗು-ಸುಖದುಃಖಗಳು ಅರ್ಧನಿಮಿಷದಲ್ಲಿ ಮುಗಿದೇಹೋಗುತ್ತವೆ. ಕೂಡಲ ಸಂಗಮ ದೇವನೇ ನೀ ಹುಟ್ಟಿಸಿದ ಮಾಯೆಯಾದರೂ ಆಕಾಶದಲ್ಲಿ ಮೋಡಗಳು ಕವಿದು ಅರೆನಿಮಿಷದಲ್ಲಿ ಚದುರಿ ಹೋದಂತೆ ಪ್ರಪಂಚದ ನಾಟಕವೂ ಇರುತ್ತದೆ.

**೧೬೯ ಹರನೀವ ಕಾಲಕ್ಕೆ ಸಿರಿಯು ಚೆನ್ನತ ಬರ್ಕು**
**ಹರಿದು ಹೆದ್ದೊರೆಯೆ ಕೆರೆ ತುಂಬಿದಂತಯ್ಯಾ!**
**ನೆರೆಯದ ವಸ್ತು ನೆರೆವುದು ನೋಡಯ್ಯಾ;**
**ಅರಸು ಪರಿವಾರ ಕೈವಾರ ನೋಡಯ್ಯಾ!**
**ಪರಮ ನಿರಂಜನನೆ ಮರೆದ ಕಾಲಕ್ಕೆ ತುಂಬಿದ ಹರವಿಯ**
**ಕಲ್ಲು ಕೊಂಡಂತೆ, ಕೂಡಲ ಸಂಗಮದೇವಾ!**

ಹರಕರುಣೋದಯವಾದ ಸಮಯದಲ್ಲಿ ಲಕ್ಷ್ಮಿಯು ಬೆನ್ನಗುಂಟ ಹರಿದು ಬಂದು ಅಪಾರವಾದ ಕೆರೆ ತುಂಬಿ ತುಳುಕಿದಂತಾಗುತ್ತದೆ. ಇಲ್ಲದ ಐಶ್ವರ್ಯವು ಕೂಡಿಬೀಳುತ್ತದೆ. ಅ ರ ಸ ನ ಸುಖ ಹಸ್ತಗತವಾಗುತ್ತದೆ. ಆದರೆ ಅದೇ ಪರಮ ನಿರಂಜನನು ಮುನಿದಕಾಲಕ್ಕೆ ಎಲ್ಲವೂ ಕಲ್ಲು ಇದ್ದಲಿ ಮಣ್ಣು ತುಂಬಿದ ಪಾತ್ರೆಗಳಾಗುತ್ತವೆ.

**೧೭೦ ಹೊಯ್ದರೆ ಹೊಯ್ಗಳು ಕೈಯ ಮೇಲೆ;**
**ಬಯ್ದರೆ ಬಯ್ಗಳು ಕಯ್ಯ ಮೇಲೆ!**
**ಹಿಂದಣ ಜನನ ವೇನಾದೊಡಾಗಲಿ—**
**ಇಂದಿನ ಭೋಗವು ಕಯ್ಯ ಮೇಲೆ!**
**ಕೂಡಲ ಸಂಗಮ ದೇವಯ್ಯಾ,**
**ನಿಮ್ಮ ಪೂಜಿಸಿಹ ಫಲ ಕಯ್ಯ ಮೇಲೆ!**

ಕಳೆದ ಜನ್ಮ ಯಾವ ಜೀವದಲ್ಲಿ ಹುಟ್ಟಿದರೂ ಅದು ಈಗ ಕಾಣದ್ದು; ಏನಾದ ಭಾಗ್ಯವೂ ಅಷ್ಟೆ. ಆದರೆ ಇಂದು ಉಪಭೋಗಿಸುವ ಸಂಸಾರವು ಕಣ್ಣಿಗೆ ಕಾಣುತ್ತದೆ. ಪಾಪ-ಪುಣ್ಯಗಳ ತಾರ ತಮ್ಯ ಬುದ್ಧಿಗೆ ಗೋಚರವಾಗುತ್ತದೆ. ಪಾಪಕ್ಕೆ ಪ್ರತಿಫಲ ಇಲ್ಲಿಯೇ ಆ ಗಳಿಗೆಗೇ ದೊರೆಯುತ್ತದೆ. ನಿನ್ನನ್ನು ಪೂಜೆಮಾಡಿದ ಫಲವೂ ಆ ಕ್ಷಣದಲ್ಲಿಯೇ ಕಾಮಧೇನುವಾಗುತ್ತದೆ. ಕೂಡಲ ಸಂಗಮದೇವಾ.

**ಆದ್ಯರ ವಚನ ಪರುಷ ಕಂಡಣ್ಣಾ;**
**ಸದಾ ಶಿವನೆಂಬ ಲಿಂಗವ ನೆರೆನಬುವದು;**
**ನಂಬಲೊಡನೆ ನೀ ವಿಜಯಿ ಕಂಡಣ್ಣಾ.**
**ಅಧರಕ್ಕೆ ಕಹಿ, ಉದರಕ್ಕೆ ಸಿಹಿ;**
**ಕೂಡಲ ಸಂಗನ ಶರಣರ ವಚನ ಜೇನಸವಿದಂತೆ.**

"ನಂಬಿ ಕೆಟ್ಟವರಿಲ್ಲ ಕೂಡಿ ಕೊರಗಿದವರಿಲ್ಲ" ಎಂಬ ಗಾದೆಯ ಮಾತಿನಂತೆ ಪೂರ್ವಾಚಾರ್ಯರ ಹಿತನುಡಿಗಳು ಪರುಷಮಣಿ. ಸಾಂಬ ಸದಾಶಿವನನ್ನು ಮನಮುಟ್ಟಿ ನಂಬಿದ ಮರುಗಳಿಗೆಯಲ್ಲಿಯೇ ನೀವು

ಭವದ ಭವಹರಿದು ವಿಜಯಿಯಾಗುತ್ತಿ. ಆದರೆ ಶರಣರ ಮಾರ್ಗ ಹಿತೋಪದೇಶಗಳು ಅನುಸರಿಸಲು ಕಠಿಣವಾಗಿದ್ದರೂ, ಅವು ಜ್ಞಾನಜ್ಯೋತಿಯಾಗಿ ಕಗ್ಗತ್ತಲೆಯ ಕಂಟಕವನ್ನು ದೂರ ಮಾಡುತ್ತವೆ.

**೧೭೨ ಹೊತ್ತಾರೆ ಎದ್ದು ಅಗಛವಣಿ ಪತ್ರೆಯ ತಂದು**
**ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ.**
**ಹೊತ್ತು ಹೋದ ಬಳಿಕ ನಿನ್ನನಾರು ಬಲ್ಲರು?**
**ಹೊತ್ತು ಹೋಗದ ಮುನ್ನ ಮೃತ್ಯು ಮೊಯ್ಯದ ಮುನ್ನ**
**ತೊತ್ತು ಗೆಲಸವ ಮಾಡು ಕೂಡಲ ಸಂಗಮದೇವನ.**

ಮುಂಜಾವಿನಲ್ಲಿ ಎದ್ದು ಸ್ನಾನಾದಿಗಳನ್ನು ತೀರಿಸಿಕೊಂಡು, ಪವಿತ್ರ ಗಂಗೆಯನ್ನು ಪುಷ್ಪಪತ್ರೆಗಳನ್ನು ಎತ್ತಿ ತಂದು ಆಯುಷ್ಯ ಕ್ಷಯಿಸುವದಕ್ಕೆ ಮೊದಲೇ ಘನಮಹಿಮ ಲಿಂಗವನ್ನು ಪೂಜೆಮಾಡು. ಆಯುಷ್ಯ ತೀರಿದ ಮೇಲೆ ನಿನ್ನನ್ನು ಯಾರೂ ತನ್ನವನೆಂದು ಕರೆಯುವದಿಲ್ಲ. ಕಾರಣ ಬದುಕು ಬಿದ್ದು ಹೋಗುವದಕ್ಕೆ ಮುಂಚೆಯೇ ಕೂಡಲ ಸಂಗಮ ದೇವನ ಮನೆಯ ಆಳಾಗಿ ದುಡಿ.

**೧೭೩ ಅಚ್ಚುಗವೇಕಯ್ಯಾ ಸಂಸಾರದೊಳಗೆ?**
**ನಿಚ್ಚ ನಿಚ್ಚ ಶಿವರಾತ್ರಿಯ ಮಾಡುವುದು;**
**ಬೇಗ ಬೇಗ ಅರ್ಚನೆ ಪೂಜೆಯ ಮಾಡುವದು,**
**ಕೂಡಲ ಸಂಗನ ಕೊಡುವದು.**

ಸಂಸಾರದ ಬಗೆಗೆ ಪ್ರೀತಿ ವ್ಯಾಮೋಹಗಳೇಕೆ? ದಿನದಿನವೂ ಶೈವಾರಾಧನೆ, ಶಿವೋಪಾಸನೆ ತಪ್ಪದೇ ಮಾಡಿ ಪೂಜೆಯ ಪ್ರತಿಫಲವಾಗಿ ಕೂಡಲ ಸಂಗಮದೇವನಲ್ಲಿ ಐಕ್ಯತೆ ಹೊಂದುವದು ಧರ್ಮ.

**೧೭೪ ಅಂದು ಇಂದು ಮತ್ತೊಂದೆನಬೇಡ.**
**ದಿನವಿಂದೇ 'ಶಿವ ಶರಣೆಂ'ಬವಂಗೆ,**
**ದಿನವಿಂದೇ 'ಹರಶರಣೆಂ'ಬವಂಗೆ;**
**ದಿನವಿಂದೇ ನಮ್ಮ ಕೂಡಲ ಸಂಗನ ಮಾಣದೆ ನೆನೆವಂಗೆ.**

ಇಂದು ನಾಳೆ-ಆಗ ಈಗ ಎಂದು ಕಾಲಹರಣ ಮಾಡದೆ; ಶಿವಧ್ಯಾನ, ಹರನ ಸ್ಮರಣೆ ಮಾಡಿ ಭವ ಕೋಟಲೆ ಕಿತ್ತೊಗೆ; ಕೂಡಲ ಸಂಗಮದೇವ ನನ್ನು ಮರೆಯದೇ ಭಜಿಸುವವನಿಗೆ ಎಲ್ಲ ದಿನಗಳೂ ಸುದಿನಗಳು.

**೧೭೫ ಅಷ್ಟ ವಿಧಾರ್ಚನೆ-ಷೋಡಶೋಪಚಾರವ ಮಾಡುವದು;**
**ಮಾಡಿದ ಪೂಜೆಯು ನೋಡುವುದಯ್ಯಾ.**
**ಶಿವ ತತ್ವ ಗೀತವ ಪಾಡುವುದು;**
**ಶಿವನ ಮುಂದೆ ನಲಿದಾಡುವುದಯ್ಯಾ.**
**ಭಕ್ತಿ ಸಂಭಾಷಣೆಯು ಮಾಡುವುದು;**
**ನಮ್ಮ ಕೂಡಲ ಸಂಗಯ್ಯನ ಕೂಡುವುದು.**

ಎಂಟು ಪ್ರಕಾರದ ಪೂಜೆ ಮಾಡಿದ ನಂತರ ಹದಿನಾರು ಪ್ರಕಾರದಲ್ಲಿ ಹೂವು ಪತ್ರಿಗಳಿಂದ ಅಲಂಕರಿಸಿ ಆ ದಿವ್ಯ ತೇಜೋಮಯನಾದ ಹರನ ಮೂರ್ತಿಯನ್ನು ನೇತ್ರಬಿಂದುವಾಗಿರಿಸಿಕೊಂಡು ಸುಖ ಪಡೆಯಬೇಕು. ಶಿವಗೀತೆಗಳನ್ನು ಹಾಡಿ ಶಂಭೋ ಶಂಕರನ ಮುಂದೆ ಭಾವಪೂರ್ಣವಾಗಿ ನೃತ್ಯವಾಡಬೇಕು ಭಕ್ತಿಗೆ ಭರಪೂರು ಬಂದಾಗ ಉಮಾಪತಿಯೊಂದಿಗೆ ಸೂಚ್ಯವಾಗಿ ಸಂಭಾಷಣೆ ಮಾಡಿ ಕೂಡಲಸಂಗಮದೇವನಲ್ಲಿ ಜೀವೈಕ್ಯವಾಗುವದು ಸತ್ಯ.

**೧೭೬ ಆಳಿಗೊಂಡಹರೆಂದು ಅಂಜಲದೇಕೆ?**
**ನಾಸ್ತಿಕ ವಾಡಿಹರೆಂದು ನಾಚಲದೇಕೆ?**
**ಆರಾದೊಡಾಗಲಿ ಶ್ರೀ ಮಹಾದೇವಂಗೆ ಶರಣೆನ್ನಿ-**
**ಏನೂ ಅರಿಯನೆಂದು ಮೌನಗೊಂಡಿರ ಬೇಡ;**
**ಕೂಡಲ ಸಂಗಮದೇವರ ಮುಂದೆ ದಂದಣ ದತ್ತಣ ಎನ್ನಿ.**

ಲೋಕದ ಜನರು ಸಿಟ್ಟಾಗಿರುವರೆಂದು ಹೆದರುವದೇಕೆ? ನಾಸ್ತಿಕನೆಂದು ನಿಂದಿಸಿದರೆ ನಾಚಲೇಕೆ? ನಾಸ್ತಿಕನೇ ಇರಲಿ ಆಸ್ತಿಕನೇ ಇರಲಿ ಯಾರಾದರೂ ಸರಿಯೆ. ಮಹದೇವನಿಗೆ ನಮಸ್ಕರಿಸಿರಿ. ಏನೂ ತಿಳಿಯ

ದೆಂದು ಮೂಕರಾಗಬೇಡಿರಿ. ಕೂಡಲಸಂಗಮದೇವನ ಸಾಕ್ಷಿಯಾಗಿ 'ಶಿವ' ಎಂಬ ಎರಡಕ್ಷರ ನುಡಿದರೆ ಸಾಕು.

**೧೭೭ ಸುಪ್ರಭಾತ ಸಮಯದಲ್ಲಿ ಅರ್ತಿಯಲ್ಲಿ ಲಿಂಗವ ನೆನೆದರೆ**
**ತಪ್ಪುವವು ಅಪಮೃತ್ಯು ಕಾಲ ಕರ್ಮಂಗಳಯ್ಯಾ!**
**ದೇವ ಪೂಜೆಯು ಮಾಟ ದುರಿತ ಬಂಧನದೋಟ!**
**ಶಂಭು ನಿಮ್ಮಯ ನೋಟ ಹಿಂಗದ ಕಣ್-ಬೇಟ!**
**ಸದಾಸನ್ನಿಹಿತನಾಗಿ ಶರಣೆಂಬುವುದು.**
**ಜಂಗಮಾರ್ಚನೆಯು ಮಾಟ ಕೂಡಲ ಸಂಗನಕೂಟ!**

ಉಷಃಕಾಲದ ಪ್ರಶಾಂತ ಸಮಯದಲ್ಲಿ ಸುಚಿತ್ತದಿಂದ ಅಕ್ಕರತೆಯಿಂದ ಭವ ಭಂಗ ಲಿಂಗವನ್ನು ಕೊಂಡಾಡಿದರೆ ಎಲ್ಲ ಕಂಟಕಗಳೂ ದೂರವಾಗಿ ದೀರ್ಘಾಯುವಾಗುತ್ತಾನೆ. ದೇವರ ಪೂಜೆ ಮಾಡುವದರಿಂದ ಸಕಲ ಪಾಪಗಳೂ ದೂರಾಗುತ್ತವೆ. ಭಕ್ತವತ್ಸಲನಾದ ಸಾಂಬಮೂರ್ತಿಯ ನೋಟ ಕಣ್ಣಿಗೆ ಹಬ್ಬದೂಟ. ಜಂಗಮರ ಪಾದಪೂಜೆ ಮಾಡುವದರಿಂದ ಕೂಡಲ ಸಂಗನ ಪದತಲದಲ್ಲಿ ನೆಲೆಸುವ ಸೌಭಾಗ್ಯ ಸಿಗುತ್ತದೆ.

**೧೭೮ ಅಂಕ ಕಳನೇರಿ ಕೈಮರೆದಿರ್ದೊಡೆ,**
**ಮಾರಂಕ ಬಂದಿರಿವುದ ಮಾಣ್ಬನೇ?**
**ನಿಮ್ಮ ನೆನೆಹ ಮತಿ ಮರೆದಿರ್ದೊಡೆ,**
**ಪಾಪ ತನುವನಂಡೆಲೆವುದ ಮಾಣ್ಬುದೆ?**
**ಕೂಡಲ ಸಂಗಯ್ಯನ ನೆನೆದರೆ,**
**ಪಾಪ ಉರಿಗೊಡ್ಡಿದರಗಿನಂತೆ ಕರಗುವದಯ್ಯಾ.**

ಸೈನಿಕನು ರಣರಂಗದಲ್ಲಿ ಕೈ ಮುಚ್ಚಿಕೊಂಡು-ತನ್ನ ಕೈಚಳಕ ತೋರದಿದ್ದರೆ, ವೈರಿ ಅವನನ್ನು ಕೊಲ್ಲುವದನ್ನು ಬಿಡುವದಿಲ್ಲ. ಹಾಗೆ ದೇವರನ್ನು ನೆನೆವ ಬುದ್ಧಿ ದೇವರ ನಾಮವನ್ನು ಮರೆತರೆ ಪಾಪಗಳು ಮುತ್ತಿ ಈ ದೇಹ ಪೀಡಿಸುವದನ್ನು ಬಿಡುವದಿಲ್ಲ. ಆದ್ದರಿಂದ ಕೂಡಲ ಸಂಗಯ್ಯನ ನಾಮವ ಹಾಡಿದರೆ ಪಾಪವು ಉರಿಗೆ ಹಿಡಿದ ಅರಗಿನಂತೆ ಕರಗಿ ಹೋಗುತ್ತದೆ.

**೧೭೯ ಆಡಿಹರಯ್ಯಾ ಹಾಡಿಹರಯ್ಯಾ ಮನ ಬಂದ ಪರಿಯಲಿ!**
**ಶಿವ ಶರಣರ ಮುಂದೆ ಆ(ಡಿ)ರಯ್ಯಾ ಹಾ(ಡಿ)ರಯ್ಯಾ!**
**ಕೋಡಂಗಿ ಯಾಟವನಾಡಿದ ಭಕ್ತಂಗೆ ಬೇಡಿತನೀವ**
**ನಮ್ಮ ಕೂಡಲ ಸಂಗಮದೇವ.**

ದೇವರು ಕೊಟ್ಟ ಕಂಠ ಸ್ವರದಿಂದ, ಮನಕ್ಕೆ ತಿಳಿದ ಹಾಗೆ ದೇವರ ಭಜನೆಯನ್ನು ಶಿವಶರಣರ ಮುಂದೆ ಹಾಡಿ ಕುಣಿದಾಡಿದ ಭಕ್ತನಿಗೆ ಬೇಡಿದ್ದನ್ನೆಲ್ಲ ಕೊಡುತ್ತಾನೆ ಕೂಡಲ ಸಂಗಮದೇವನು.

**೧೮೦ ಹೊಲಬುಗೊಂಡರಸ ಬೇಡ, ಬಿಲಿತು ತರಬೇಡ;**
**ಒಲಿದೊಮ್ಮೆ 'ಶಿವಶರಣೆ' ನ್ನಿರಯ್ಯಾ**
**ಒಂದು ಸೊಲ್ಲಿಂಗೆ ಮುಕ್ತಿ ಸಿದ್ಧಿ,**
**ಕೂಡಲ ಸಂಗಮದೇವ ಭಕ್ತಿಲಂಪಟನಾಗಿ.**

ದಾರಿ ಬಿಟ್ಟು ದಾರಿ ಹುಡುಕಬೇಡ. ದುಡ್ಡುಕೊಟ್ಟು ದೇವರಿಗೆಂದು ಯಾವುದನ್ನೂ ತರಬೇಡ. ಮನಃಪೂರ್ವಕವಾಗಿ ಒಂದು ಸಲ ಕರುಣಾಕರನಾದ ಗಂಗಾಧರನಿಗೆ ನಮಸ್ಕಾರ ಮಾಡು. "ಶಿವ" ಎಂಬ ಒಂದು ನುಡಿಗೆ ಮುಕ್ತಿಪಥ ಪಡೆಯುವಿ. ಕೂಡಲ ಸಂಗಮ ದೇವನು ಭಕ್ತಿಗೆ ಬಾಯಿ ಬಿಡುತ್ತಾನೆ.

**೧೮೧ ನಾದಪ್ರಿಯ ಶಿವನೆಂಬರು-ನಾದ ಪ್ರಿಯ ಶಿವನಲ್ಲಯ್ಯಾ;**
**ವೇದ ಪ್ರಿಯ ಶಿವನೆಂಬರು-ವೇದ ಪ್ರಿಯ ಶಿವನಲ್ಲಯ್ಯಾ;**
**ನಾದವ ಮಾಡಿದ ರಾವಳಂಗೆ ಅರೆಯಾಯುಷ್ಯವಾಯಿತ್ತು;**
**ವೇದವ ನೋಡಿದ ಬ್ರಹ್ಮನ ಶಿರ ಹೋಯಿತ್ತು!**
**ನಾದ ಪ್ರಿಯನೂ ಅಲ್ಲ, ವೇದ ಪ್ರಿಯನೂ ಅಲ್ಲ,**
**ಭಕ್ತಿ ಪ್ರಿಯ ನಮ್ಮ ಕೂಡಲ ಸಂಗಮದೇವ.**

ಗೌರೀವರ ವಲ್ಲಭ ಹರನು ನಾದಪ್ರಿಯನೂ ವೇದಪ್ರಿಯನೂ ಎಂಬುದು ಮಿಥ್ಯ. ಸುಳ್ಳು ಧ್ವನಿಯನ್ನು ಮಾಡಿಸಿ ಸೀತೆಯನ್ನು ಅಪಹರಿಸಿದ

ರಾವಣನಿಗೆ ಅರ್ಧ ಆಯುಷ್ಯ ಕಡಿಮೆಯಾಯ್ತು. ವೇದಪಾರಂಗತನಾದ ಬ್ರಹ್ಮದೇವನು ತನ್ನ ಸೃಷ್ಟಿಯಿಂದ ಜನಿಸಿದ ಸರಸ್ವತಿಯನ್ನೇ ಮದುವೆಯಾದ ಕಾರಣ ಅವನ ತಲೆ ಹರಿಯಿತು. ಆದರೆ ಕೂಡಲ ಸಂಗಮದೇವನು ಕೇವಲ ಭಕ್ತಿಪ್ರಿಯನಾಗಿದ್ದಾನೆ.

**೧೮೨ ಹಸಿವಾದೊಡುಂಬುದನು, ಸತಿಯ ಸಂಭೋಗವನು**
**ಆನಾಗಿ ನೀ ಮಾಡೆಂಬವರುಂಟೆ?**
**ಮಾಡುವುದು, ಮಾಡುವುದು ಮನಮುಟ್ಟಿ.**
**ಮಾಡುವುದು ಮಾಡುವುದು ತನುಮುಟ್ಟಿ.**
**ತನು ಮುಟ್ಟಿ ಮನ ಮುಟ್ಟದಿರ್ದಡೆ**
**ಕೂಡಲ ಸಂಗಮದೇವನೇತರಲ್ಲಿಯೂ ಮೆಚ್ಚ!**

ಹಸಿವೆಯಾದಾಗ ಮತ್ತು ಸತಿಯ ರತಿಸಂಭೋಗವನ್ನು ತಾನು ಊಟ ಮಾಡದೆ, ಭೋಗಿಸದೆ ಎರಡನೇಯವರಿಂದ ಮಾಡಿಸಬಹುದೆ ? ಅದೇ ತೆರನಾಗಿ ಲಿಂಗಪೂಜೆ, ದೇವರ ಪೂಜೆಯನ್ನು ತಾನು ಸ್ವತಃ ತನ್ನ ಕೈಗಳಿಂದ ಮನಃಪೂರ್ವಕವಾಗಿ ಪೂಜಿಸಬೇಕು. ಪೂಜೆಗೆ ಅವಶ್ಯವಾದ ಶುದ್ಧ ಮನಸ್ಸು ಏಕಚಿತ್ತವಿಲ್ಲದಿದ್ದರೆ ಕೂಡಲ ಸಂಗಮ ದೇವನು ಅದನ್ನು ಮನ್ನಿಸುವದಿಲ್ಲ.

**೧೮೩ ತನ್ನಾಶ್ರಯದ ರತಿಸುಖವನು, ತಾನುಂಬಊಟವನು**
**ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ?**
**ತನ್ನ ಲಿಂಗಕ್ಕೆ ಮಾಡುವ ನಿತ್ಯ ನೇಮವ ತಾವಮಾಡ**
**ಬೇಕಲ್ಲದೆ**
**ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ?**
**ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ,**
**ನಿಮ್ಮನೆತ್ತಬಲ್ಲರು ಕೂಡಲ ಸಂಗಮದೇವಾ?**

ತನ್ನ ಉಪಭೋಗ್ಯದ ಸೊತ್ತನ್ನು, ಊಟವನ್ನು ಬೇರೆಯವರಿಗೆ ಸುಖಿಸಲು ಕೊಡುತ್ತಾರೆಯೆ ? ಆ ಪ್ರಕಾರ ತನ್ನ ಆರಾಧ್ಯ ಮಂಗಲ

ಮೂರ್ತಿ ಲಿಂಗದೇವನ ಪೂಜೆಯನ್ನು ನಿತ್ಯ ನೇಮಗಳನ್ನು ತಾನೇ ಮಾಡಬೇಕು. ಹೇ! ಕೂಡಲ ಸಂಗಮದೇವಾ ಈ ಬಡಪಾಯಿಗಳು ತೋರುಗಾಣಿಕೆಗೆ ಮಾಡುತ್ತಾರೆ ಹೊರತು ನಿನ್ನ ರೂಪು ತಿಳಿಯುವ ಸಾಮರ್ಥ್ಯವಿಲ್ಲ ಅವುಗಳಿಗೆ.

**೧೮೪ ಬಂಡಿತುಂಬಿದ ಪತ್ರೆಯು ತಂದು ಕಂಡಕಂಡಲ್ಲಿ**
**ಮಜ್ಜನಕ್ಕೆರೆವಿರಿ,**
**ತಾಪತ್ರಯುವ ಕಳೆದು ಪೂಜಿಸಿ; ತಾಪತ್ರಯುವ**
**ಲಿಂಗನೊಲ್ಲ,**
**ಕೂಡಲ ಸಂಗಮ ದೇವ ಬರಿಯುದಕದಲ್ಲಿ ನೆನೆವನೆ?**

ಅಗ್ಗವಾಗಿ, ವೆಗ್ಗಳವಾಗಿ ದೊರೆಯುವ ಪತ್ರೆಯು ತಂದು ನೆಮ್ಮದಿಯಿಲ್ಲದ ಮನಸ್ಸಿನಿಂದ ನೀರೆರೆದು ಪೂಜಿಸಿದರೆ, ಆ ಸಂಕಟದ ಪೂಜೆಯನ್ನು ಲಿಂಗನು ಮೆಚ್ಚಿಕೊಳ್ಳುವದಿಲ್ಲ. ನಿರಾಳ ನಿರ್ಭೀತ ನಿರಾಲಸ್ಯ ಮನಸ್ಸಿನಿಂದ ಪೂಜಿಸು. ಕೇವಲ ನೀರಿನಿಂದ ಪೂಜೆ ಮಾಡಿಸಿಕೊಳ್ಳುವದಿಲ್ಲ ಕೂಡಲ ಸಂಗಮದೇವನು.

**೧೮೫ ಭಕ್ತನಾಗಿ ಲಿಂಗ ಜಂಗಮುವ ಪೂಜಿಸಬೇಕು.**
**ಭಕ್ತನಾಗಿ ತನ್ನ ತಾ ಪೂಜಿಸಿಕೊಂಬುದು ಎಂತಯ್ಯಾ?**
**ಸ್ವಾಮಿ-ಭೃತ್ಯಸಂಬಂಧವು ಎಂತಯ್ಯಾ ಪೂರೈಸುವದು?**
**ಕೂಡಲ ಸಂಗಮ ದೇವಾ, ಕಣ್ಣಕಟ್ಟಿ ಕನ್ನಡಿಯು**
**ತೋರುವಂತೆ!**

ಭಕ್ತನಾಗಿದ್ದವನು ಲಿಂಗ ಜಂಗಮರ ಸೇವೆ ಮಾಡಬೇಕಲ್ಲದೆ ತಾನೇ ತನ್ನ ಪೂಜೆಯನ್ನು ಜನರಿಂದ ಮಾಡಿಸಿಕೊಳ್ಳಬಾರದು? ಹೀಗಾದರೆ ಆಳು-ಒಡೆಯರ ಸಂಬಂಧವು ಏನೆಂದು ತಿಳಿಯಬೇಕು? ಹೇಗೆ ವಿಂಗಡಿಸಬೇಕು? ಅದು ಕಣ್ಣಿಗೆ ಅರಿಬೆ ಬಿಗಿದು ಮುಂದೆ ಕನ್ನಡಿ ಹಿಡಿದು ಮುಖ ನೋಡಿಕೋ ಎಂದು ಹೇಳಿದ ಅಪಹಾಸ್ಯದ ಮಾತಿನಂತೆ ಕೂಡಲ ಸಂಗಮದೇವಾ.

೧೮೬ ಭೂಮಿಯೊಳಗೆ ನಿಧಾನ ವಿದ್ದುದ ಅಂಜನವುಳ್ಳವರು ತೋರಿರಯ್ಯಾ.
ಅಂಜಲು ಬೇಡಕಂಡಾ; ಮನದಲ್ಲಿ ಸಂದೇಹವ ಮಾಡದಿರಾ.
ಜಂಗಮದೊಳಗೆ ಲಿಂಗಯ್ಯ ನಿದ್ದಾನೆಂದು ನಂಬಿಗೆಯುಳ್ಳರೆ
ತೋರುವ ಕೂಡಲ ಸಂಗಯ್ಯ.

ಭೂದೇವಿಯ ಗರ್ಭದಲ್ಲಿ ಹುದುಗಿದ ದ್ರವ್ಯವನ್ನು ತಿಳಿದವರು ಅಂಜದೆ ಮನದಲ್ಲಿ ಸಂಶಯ ಪಡದೆ ತೋರಿಸಬೇಕು. ಈ ರೀತಿ ಜಂಗಮನಲ್ಲಿ ಲಿಂಗವು ಐಕ್ಯವಾಗಿದೆಂದು ನಂಬಿಗೆಯುಳ್ಳವರಿಗೆ ಮಾತ್ರ ಕೂಡಲ ಸಂಗಮ ದೇವನು ದರ್ಶನವೀಯುತ್ತಾನೆ.

೧೮೭ ಕನ್ನಡಿಯ ನೋಡುವ ಅಣ್ಣಗಳಿರಾ ಜಂಗಮನ ನೋಡಿರೇ;
ಜಂಗಮನೊಳಗೆ ಲಿಂಗಯ್ಯ ಸನ್ನಿಹಿತನಾಗಿರ್ಪ.
'ಸ್ಥಾವರ ಜಂಗಮ ಒಂದೇ' ಎಂದುದು ಕೂಡಲ ಸಂಗನ ವಚನ.

ಕನ್ನಡಿಯಲ್ಲಿ ನಿಮ್ಮ ಪ್ರತಿಬಿಂಬವನ್ನು ಕಂಡು ಹಿಗ್ಗುವ ಹುಚ್ಚಣ್ಣಗಳಿರಾ ಜಂಗಮನ ಕಾಯ ಕಾಂತಿಯಲ್ಲಿ, ಆಚಾರವುಳ್ಳ ಆತ್ಮದಲ್ಲಿ, ನೀತಿಯಲ್ಲಿ ಒಡಮೂಡಿ ನಿಂತ ಲಿಂಗವನ್ನು ನೋಡಿರಿ; ಚರ-ಸ್ಥಿರಗಳೆರಡೂ ಒಂದೇ ಎಂದು ಕೂಡಲ ಸಂಗಮ ದೇವನ ವಾಣಿ ಹೇಳುತ್ತದೆ.

೧೮೮ ಗೀತವ ಹಾಡಿದೊಡೇನು ಶಾಸ್ತ್ರ-ಪುರಾಣವ ಕೇಳಿದೊಡೇನು?
ವೇದ ವೇದಾಂತವನೋದಿದೊಡೇನು?
ಮನವೊಲಿದು ಲಿಂಗ-ಜಂಗಮವ ಪೂಜಿಸಲರಿಯದವರು
ಎಲ್ಲರಲಿ ಅನುಭಾವಿಯಾದೊಡೇನು?
ಭಕ್ತಿಯಿಲ್ಲದವರ ನೊಲ್ಲ ಕೂಡಲ ಸಂಗಮದೇವ.

ಗೀತೆ, ಆರುಶಾಸ್ತ್ರ-ಹದಿನೆಂಟು ಪುರಾಣ, ವೇದೋಪನಿಷತ್ತುಗಳನ್ನೆಲ್ಲ ಓದಿ ಏಕೋಭಾವದಿಂದ ಈಶ್ವರನನ್ನು, ಲಿಂಗ-ಜಂಗಮರನ್ನು ಪೂಜೆ ಮಾಡದವರು ಅನುಭಾವಿಯೆಂದು ಜನಮೆಚ್ಚಿಕೆ ಪಡೆದರೆ, ಭಕ್ತಿಯಿಲ್ಲದ ಅವನನ್ನು ಕೂಡಲ ಸಂಗಮ ದೇವನು ಎಂದೆಂದಿಗೂ ಮೆಚ್ಚ.

**೧೮೯ ಲಿಂಗವ ಪೂಜಿಸಿದ ಬಳಿಕ ಜಂಗಮಕ್ಕಂಜಲೇ ಬೇಕು.**
**ದಕ್ಷ ನುಂಗಿದಂತೆ ಬೆರೆತು ಕೊಂಡಿರ ಬೇಡ.**
**ಬೀಗಿ ಬೆಳೆದ ಗೊನೆವಾಳೆಯಂತೆ ಬಾಗಿಕೊಂಡಿದ್ದಡೆ**
**ಬೇಡಿದ ಪದವಿಯ ನೀವ ಕೂಡಲ ಸಂಗಮದೇವ.**

ಸಕಲಾತ್ಮನಾದ ಲಿಂಗವನ್ನು ಪೂಜಿಸಿದ ಮೇಲೆ ಅನುರೂಪನಾದ ಜಂಗಮನಿಗೆ ಹೆದರಿ ನಡೆಯಲೇ ಬೇಕು. ಶಿರಬಾಗಲೇ ಬೇಕು. ಸೊಕ್ಕಿ ಬೆಳೆದ ಬಾಳೆಯ ಗೊನೆ ಬಾಗಿದಂತೆ ತಾಗಿ ಬಾಗಿ ನಡೆವವರಿಗೆ ಬೇಡಿದ್ದನ್ನು ಕೂಡಲ ಸಂಗಮ ದೇವನು ನೀಡುತ್ತಾನೆ.

**೧೯೦ ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು;**
**ಮರ್ಮವನರಿಯದ ಮಾಟ ಸಯಿದಾನದ ಕೇಡು!**
**ಬಂದ ಸಮಯೋಚಿತವನರಿಯದಿದ್ದರೆ**
**ನಿಂದಿರಲೊಲ್ಲ ಕೂಡಲ ಸಂಗಮದೇವ.**

ಅಹಂಕಾರ, ಗರ್ವದಿಂದ ತೋರಿದ ಭಕ್ತಿ ಪಾಪ ಸಂಪಾದನೆಗೆ ಮೂಲ. ದ್ವೇಷಾಸೂಯೆಗಳನ್ನು ಮಾಡದೆ ಹೆರರಿಗೆ ಉಪಕಾರ ಮಾಡಿದು ನಿನಗೆ ಮುಂದೆ ಕೇಡುಗಳು ಬಾರದಂತೆ ಕೊಟ್ಟ ದಾನವೆಂದು ತಿಳಿ; ಜಂಗಿಮರು ಬಂದ ವೇಳೆಯ ಮಹತ್ವವನ್ನರಿಯದದ್ದಿರೆ ಅಲ್ಲಿ ಕೂಡಲ ಸಂಗಮ ದೇವನು ಒಂದು ಕ್ಷಣ ಸಹ ನಿಲ್ಲುವದಿಲ್ಲ.

**೧೯೧ ದ್ವೈತಾದ್ವೈತವನೋದಿ ಏನು ಮಾಡುವಿರಯ್ಯಾ**
**ನಮ್ಮ ಶರಣರಿಗುರಿಗರಗಾಗಿ ಕರಗದನ್ನಕ್ಕ?**

**ಸ್ಥಾವರ ಜಂಗಮವೊಂದೆ ಎಂದು ನಂಬದನ್ನಕ್ಕ?**
**ಕೂಡಲ ಸಂಗಮದೇವಾ, ಬರಿಯ ಮಾತಿನ ಮಾಲೆಯ**
**ಲೇನಹುದು?**

ದ್ವೈತ ಅದ್ವೈತ ತತ್ವಗಳ ವಿಚಾರ ಮಾಡುವದರಿಂದ ಯಾವ ಫಲ ಪ್ರಾಪ್ತಿಯಾಗುತ್ತದೆ? ಎಲ್ಲಿಯ ವರೆಗೆ ಚರ-ಸ್ಥಿರಗಳೆರಡೂ ಸಗುಣ ರೂಪಗಳೆಂದು ತಿಳಿಯದ ವಿನಃ ಮತ್ತು ಶಿವ ಶರಣರ ತಿಳಿವೆಂಬ ಅಗ್ನಿಗೆ ಅರಗಾಗಿ ಕರಗದೆ ಬರಿಯ ತತ್ವದ ಮಾತುಗಳ ಮಳೆಗರೆಯುವದರಿಂದ ಏನೂ ಉಪಯೋಗವಿಲ್ಲ.

**೧೯೨ ಲಾಂಛನ ಹೊರಗೆ ಬಂದಿರಲು, ಒಳಗೆ ಲಿಂಗಾರ್ಚನೆ**
**ಎಂತಯ್ಯಾ?**
**ಮುಖದಲ್ಲಿ ಕಟ್ಟಿದ ಕನ್ನಡಿ, ಮೂಗಿನ ಮೇಲಣ ಕತ್ತಿ!**
**ಸಮಯಾಚಾರವೆಂತುಂಟಯ್ಯಾ?**
**ಕೂಡಲ ಸಂಗಮ ದೇವಯ್ಯ ಮೂಗ ಕೊಯ್ಯದೆ**
**ಮಾಣ್ಬನೆ? ಹೇಳಯ್ಯಾ.**

ಲಿಂಗವೇ ಜಂಗಮ ರೂಪದಲ್ಲಿ ಮನೆಗೆ ಊಟಕ್ಕೆ ಬಂದಿರಲು, ದೇವರ ಮನೆಯೊಳಗಿನ ಲಿಂಗಕ್ಕೆ ಪೂಜೆ ಮಾಡುವದು ಸರಿಯೆ? ಸ್ಪಷ್ಟವಾಗಿ ಮುಕುರದಲ್ಲಿ ತೋರುತ್ತಿರುವ ಮುಖದ ಚಹರೆಯಂತೆ, ಮೂಗಿನ ಮೇಲೆ ತೂಗು ಹಾಕಿದ ಅಸಿಯಂತೆ ಸತ್ಯ ಸಿದ್ಧಾಂತವಿದ್ದರೂ ಸಮಯಾನುಸಾರ ನಡೆಯದಿದ್ದರೆ ಕೂಡಲಸಂಗಮ ದೇವನು ಚಿರದುಃಖಿಯನ್ನಾಗಿ ಮಾಡುವನು.

**೧೯೩ ಆಡುತ್ತ ಹಾಡುತ್ತ ಭಕ್ತಿಯ ಮಾಡಬಹುದು ಲಿಂಗಕ್ಕೆ;**
**ಅದು ಬೇಡದು, ಬೆಸಗೊಳ್ಳದು—**
**ತಂದೊಮ್ಮೆ ನೀಡಬಹುದು.**
**ಕಾಡುವ ಬೇಡುವ ಜಂಗಮ ಬಂದರೆ,**
**ನೀಡಲು ಬಾರದು ಕೂಡಲ ಸಂಗಮ ದೇವ.**

ಮಹಾ ಮೌನಿಯಾದ ಮಹೇಶ್ವರ ಲಿಂಗ ಪೂಜೆಯನ್ನು ಯಥಾಶಕ್ತಿ ಮಾಡಬಹುದು. ಅದು ನನಗೆ ಆ ವಸ್ತು ಬೇಕು, ಈ ಮಿಷ್ಟಾನ್ನ ಬೇಕೆಂದು ಬೇಡದೆ ಭಕ್ತನ ಮನೋಭಿಷ್ಟಗಳನ್ನರಿತು ತೃಪ್ತಿಯಾಗಿ ಭಕ್ತನಿಗೆ ಸುಖಸಂಪತ್ತು ಕೊಡುತ್ತದೆ. ಆದರೆ ಏನು ಕೊಟ್ಟರೂ ಎಷ್ಟು ಕೊಟ್ಟರೂ ಆಶೆಯ ಅಂಕುಶದಿಂದ ಭಕ್ತನ ಹೃದಯವನ್ನು ಪೀಡಿಸಿ ದಣಿಸುವ ಜಂಗಮನು ಬಂದರೆ ಅವನಿಗೆ ಭಿಕ್ಷೆ ಹಾಕದೇ ಕಳಿಸುವದೇ ಸರ್ವಶ್ರೇಷ್ಠ.

**೧೯೪ ಕಲ್ಲನಾಗರ ಕಂಡರೆ ಹಾಲನೆರೆಯೆಂಬರು;**
**ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯಾ!**
**ಉಂಬ ಜಂಗಮ ಬಂದರೆ ನಡೆಯೆಂಬರು;**
**ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ!**
**ನಮ್ಮ ಕೂಡಲ ಸಂಗನ ಶರಣರ ಕಂಡುದಾಶೀನವ ಮಾಡಿದರೆ**
**ಕಲ್ಲ ತಾಗಿದ ಮಿಟ್ಟಿಯಂತಪ್ಪರಯ್ಯಾ.**

ಎರಡು ಮನ, ಎರಡು ಮಾತು, ಎರಡು ಆತ್ಮ, ಎರಡು ಅರ್ಥ, ಎರಡು ದೃಷ್ಟಿಗಳ ದ್ವಂದ್ವದಲ್ಲಿ, ಏಕನಿಷ್ಠೆ, ಏಕಭಾವ, ಏಕಾತ್ಮ, ಏಕಾರ್ಥ, ಐಕ್ಯಾರ್ಥ, ದೃಷ್ಟಿಗಳನ್ನು ಮರೆತು ಜೀವಾಜೀವ, ಚೇತನಾಚೇತನಗಳಲ್ಲಿ ಭೇದ ಮಾಡುವದು ಪರಮ ಅದ್ವೈತಕ್ಕೆ ಸಲ್ಲದ ಮಾತು. ಕಲ್ಲನಾಗರ ಪೂಜಿಸಿ ಹಾಲು ಸುರಿದರೆ ಅದು ಬಲಗೊಂಡು ಹರಿದಾಡಬಹುದೆ ? ಉಣ್ಣದ ಲಿಂಗಕ್ಕೆ ಪಂಚ ಪರಮಾನ್ನ ಮಾಡಿ ನೈವೇದ್ಯ ಮಾಡಿದರೆ, ಅದರ ವಾಸನೆಯನ್ನು ಕೂಡಾ ಸವಿಯದು ಆ ಲಿಂಗ. ಕಾರಣ ಪರಮಾತ್ಮನೇ ಜೀವರೂಪದಲ್ಲಿ ನಾನಾ ಬಗೆಯ ದೇಹಧಾರಣೆ ಮಾಡಿ ಜಗವೆಲ್ಲ ತುಂಬಿರುವಾಗ, ಪ್ರಾಣಿದಯಾಪರನಾಗಿದ್ದ ಸಂತರನ್ನು ಶರಣರನ್ನು, ಇತರ ಪ್ರಾಣಿಗಳನ್ನು ಲಿಂಗರೂಪವೆಂದರಿತು ಪೂಜಿಸಿ ಆರೋಗಣೆ ಮಾಡಬೇಕು.

**೧೯೫ ನಾಗಂಗೆ ಹೊಸತನಿಕ್ಕಿಹೆ ನೆಂಬರು;**
**ನಾಗ ಬಂದರೆ ಕೋಲ ಕಳೆದುಕೊಂಬರಯ್ಯಾ!**
**ಆಗದಯ್ಯಾ 'ಜಂಗಮ ಲಿಂಗವೆಂ'ಬ ಶಬ್ದವಾಗದಯ್ಯಾ**
**ಕೂಡಲ ಸಂಗಮ ದೇವರಲ್ಲಿ ಸಿಂಧು ಬಲ್ಲಾಳಂಗಲ್ಲ**
**ದಾಗದಯ್ಯಾ!**

ನಾಗೇಶ್ವರನ ನೈವೇದ್ಯಕ್ಕೆಂದು ಮೀಸಲು ತೆಗೆದಿಟ್ಟಿದೆ ಎಂದು ಹೇಳುವ ನಾಗಭಕ್ತರು ನಾಗನು ಹರಿದು ಬಂದರೆ ತಮ್ಮ ಧೈರ್ಯವನ್ನೆಲ್ಲ ಕಳೆದುಕೊಳ್ಳುತ್ತಾರೆ. ಹಾಗೆಯೇ ಸಿಂಧು ಬಲ್ಲಾಳನೊಬ್ಬನ ಹೊರ್ತು ಮಿಕ್ಕೆಲ್ಲ ಜನರು ಲಿಂಗ ಜಂಗಮವೆಂದರೆ ಅಂಜಿ ಗದಗದ ನಡುಗಿ ಸಾಯು ತ್ತಾರೆ. ಇವರೆಲ್ಲ ಕಿರುಪೆಡು ಭಕ್ತರು.

**೧೯೬ ಎರೆದರೆ ನೆನೆಯದು, ಮರೆದರೆ ಬಾಡದು**
**ಹುರುಳಿಲ್ಲ ಲಿಂಗಾರ್ಚನೆ!**
**ಕೂಡಲ ಸಂಗಮ ದೇವಯ್ಯಾ,**
**ಜಂಗಮಕ್ಕೆರೆದರೆ ಸ್ಥಾವರ ನೆನೆಯಿತ್ತು!**

ಆಕಳಿಗೆ ಹೆಚ್ಚು ತಿನಿಸು ತಿನ್ನಿಸಿದರೆ ಹಾಲು ಹೆಚ್ಚು ಕೊಡುತ್ತದೆ. ಹಾಗೆ ಜಂಗಮರ, ಶರಣರ ಸೇವೆ ಮಾಡದೆ, ಅವರ ಮನಸ್ಸು ಸಂತುಷ್ಟ ಗೊಳಿಸದೆ ಬರಿ ಲಿಂಗ ಪೂಜೆಯಿಂದೇನೂ ಫಲವಿಲ್ಲ. ಲಿಂಗಕ್ಕೆರೆದರೆ ಅದು ಮೃದುವಾಗಲಾರದು. ಬಿಟ್ಟರೆ ಒಣಗಲಾರದು. ಕಾರಣ ಲಿಂಗ ಸಂಭೂ ತರಾದ ಜಂಗಮರ ಪೂಜೆಯೇ ಶಿವಪೂಜೆ.

**೧೯೭ ಅಗ್ನಿಯಾಧಾರದಲ್ಲಿ ಕಬ್ಬುನ ನೀರುಂಬುದಯ್ಯಾ;**
**ಭೂಮಿಯಾಧಾರದಲ್ಲಿ ವೃಕ್ಷ ನೀರುಂಬುದಯ್ಯಾ;**
**ಜಂಗಮನಾಪ್ಯಾಯನವಾದರೆ ಲಿಂಗಸಂತುಷ್ಟಿಯ**
**ಹುದಯ್ಯಾ;**
**(ಶ್ಲೋಕ) ವೃಕ್ಷಸ್ಯವದನಂ ಭೂಮಿಃ| ಸ್ಥಾವರಸ್ಯ ಜಂಗಮಃ**
**ಅಹಂ ತುಷ್ಟೋಽಸ್ಮ್ಯಮಾದೇವಿ|| ಉಭಯೋರ್ಲಿಂಗ**
**ಜಂಗಮಂ (?)**

**ಇದು ಕಾರಣ ಕೂಡಲ ಸಂಗಮದೇವರಲ್ಲಿ**
**ಜಂಗಮ ನಾಪ್ಯಾಯನವಾದರೆ ಲಿಂಗಸಂತುಷ್ಟಿ.**

ಅಗ್ನಿಯ ಸಹಾಯದಿಂದ ಕಬ್ಬಿಣ ನೀರು ಕುಡಿಯುತ್ತದೆ. ಭೂಮಿಯ ಮುಖಾಂತರ ಗಿಡ ಮರ ಸಸ್ಯಗಳು ನೀರು ಕುಡಿಯುತ್ತವೆ. ಆದ್ದರಿಂದ ಗಿಡ ಮರ ಸಸ್ಯಗಳಿಗೆ ಬಾಯಿ ಭೂಮಿ ಹೇಗೋ, ಹಾಗೆ ಲಿಂಗಕ್ಕೆ ಬಾಯಿ ಜಂಗಮ. ನಾನು ಲಿಂಗ ಜಂಗಮರೀರ್ವರಲ್ಲಿಯೂ ತುಷ್ಟನಾಗುತ್ತೇನೆಂದು ಗಿರಿಜಾರಮಣನು ಉಮಾದೇವಿಗೆ ಹೇಳುತ್ತಾನೆ. ಕಾರಣ ಕೂಡಲ ಸಂಗಮ ದೇವನ ಸೇವೆಯಲ್ಲಿ ಜಂಗಮ ತೃಪ್ತಿಹೊಂದಿದರೆ ಸುಸ್ಥಿರ ಸಗುಣ ಲಿಂಗವು ಪ್ರೀತಿ ರಸವನ್ನು ಹರಿಸುತ್ತದೆ.

೧೯೮ **ಭಾಂಡವ ತುಂಬಿದ ಬಳಿಕ ಸುಂಕವ ತೆತ್ತಲ್ಲದೆ**
**ವಿರಹಿತ ಹೋಗಬಾರದು.**
**ಕಳ್ಳನಾಣ್ಯ ಸುಲುಗೆಗೆ ಸಲ್ಲದು; ಕಳ್ಳನಾಣ್ಯವ**
**ಸಲ್ಲಲೀಯರಯ್ಯಾ !**
**ಭಕ್ತಿಯೆಂಬ ಭಾಂಡಕ್ಕೆ ಜಂಗಮವೇ ಸುಂಕಿಗ,**
**ಕೂಡಲ ಸಂಗಮದೇವಾ,**

ಸರಕು, ಮಾಲು ಹೇರಿಕೊಂಡು ಸಂತೆಗೆ ಹೋದರೆ ಸುಂಕ(ಜಕಾತಿ) ಕೊಡದೆ ಮೋಸ ಮಾಡಿ ಹೋಗಬಾರದು. ಕಳವು ಮಾಡಿ ತಂದ ದ್ರವ್ಯವು ಕೊಳ್ಳೆ ಹೊಡೆಯುವದಕ್ಕೆ ಅತಿ ಹೀನವಾದದ್ದು. ಆದ್ದರಿಂದ ಭಕ್ತಿಯ ಬುತ್ತಿಯ ಗಂಟು ಹೊತ್ತೊಯ್ಯುವ ಶಿವಭಕ್ತರು ಜಂಗಮನಿಗೆ ಉಣಿಸದೇ ಸಂತೋಷ ಪಡಿಸದೆ ಹೋಗಕೂಡದು.

೧೯೯ **ಮಾಡಿ ನೀಡಿ ಲಿಂಗವ ಪೂಜಿಸಿಹೆನೆಂಬವರು ನೀವೆಲ್ಲ**
**ಕೇಳಿರಣ್ಣಾ**
**ಹಾಗದ ಕೆರಹ ಹೊರಗೆ ಕಳೆದು**
**ದೇಗುಲಕ್ಕೆ ಹೋಗಿ ನಮಸ್ಕಾರವ ಮಾಡುವನಂತೆ—**
**ತನ್ನ ಕೆರಹಿನ ಧ್ಯಾನವಲ್ಲದೆ ದೇವರ ಧ್ಯಾನವಿಲ್ಲಾ !**

**ಧನವನಿರಿಸಿದಿರಾ, ಇರಿಸಿದರೆ ಭವ ಬಪ್ಪುದು! ತಪ್ಪದು!**
**ಕೂಡಲ ಸಂಗನ ಶರಣರಿಗೆ ಸವೆಸಲೇ ಬೇಕು.**

ಸಹಸ್ರ ನಾಮಾವಳಿಯೊಂದಿಗೆ ಸಹಸ್ರ ಬಿಲ್ವ ಏರಿಸಿ, ನಾನಾ ಬಗೆಯ ಫಲ ಪುಷ್ಪಆರೋಗಣಿಯೊಂದಿಗೆ ವೈಭವದ ಪೂಜೆಯನ್ನು ಲಿಂಗಕ್ಕೆ ಮಾಡಿದೆವೆಂದು ಜಂಬ ಹೇಳುವ ಲೋಕದ ಅಣ್ಣಗಳಿರಾ, ಕಾಸಿಗೆ ಕೊಂಡ ಕೆರವು (ಜೋಡು) ಗಳನ್ನು ಗುಡಿಯ ಹೊರಗೆ ಇಟ್ಟು ಒಳಗೆ ಬಂದು ದೇವರಿಗೆ ಕೈ ಮುಗಿಯುವಾಗ ಚಿತ್ತಸ್ಖಲನವಾಗಿ ಧ್ಯಾನವೆಲ್ಲ ಕಾಸಿನ ಕೆರವಿನ ಮೇಲೆಯೇ ಇರುತ್ತದೆ. ತೋರಿಕೆಗೆ ಮಾತ್ರ ಕೈಮುಗಿದು ತಿರುಗುವ ನರನಂತೆ ನಿಮ್ಮ ಹಾಡು. ಕಾರಣ ದುಡ್ಡು ಸಂಪಾದಿಸಿ ಕೂಡಿಡಬೇಡ. ಕೂಡಿಟ್ಟದ್ದೇ ಆದರೆ ಸಂಕಟಗಳು ಬರುವದು ತಪ್ಪುವದಿಲ್ಲ. ಕಾರಣ ಸತ್ಕಾರ್ಯಗಳಿಗೆ ಶರಣರ ಚರಣ ಸೇವೆಗೆ ವ್ಯಯ ಮಾಡು.

**೨೦೦ ಉಂಡುದು ಬಂದಿತ್ತೆಂಬ ಸಂದೇಹಿ ಮಾನವಾ, ನೀ ಕೇಳಾ,**
**ಉಂಡುದೇನಾಯಿತ್ತೆಂಬುದ ನಿನ್ನ ನೀ ತಿಳಿದು ನೋಡಾ;**
**ಉಂಡುದು ಆಗಳೆ ಆಪ್ಯಾನವಾಗಿತ್ತು.**
**ಆ ಉಂಡುದನುಣಬಂದ ಹಂದಿಯ ಬಾಳುವೆಯವರ ಕಂಡು**
**ಅನು ಮರುಗುವೆನಯ್ಯಾ, ಕೂಡಲ ಸಂಗಮದೇವಾ.**

ನಾವು ಊಟ ಮಾಡಿದ ಪಂಚ ಪರಮಾನ್ನ ಪುನಃ ಮರಳಿ ಪಡೆಯುತ್ತೇವೆಂದು ಸಂಶಯಗ್ರಸ್ತನಾದ ಮನುಷ್ಯ ಪ್ರಾಣಿಯೇ ಅದು ಏನಾಗಿ ಹೋಗಿದೆಂಬುದನ್ನು ಸ್ವಲ್ಪ ನಿನ್ನನ್ನು ನೀನೇ ವಿಚಾರಮಾಡಿ ನೋಡಿಕೊ; ಆ ಅನ್ನ ಆ ಘಳಿಗೆಗೆ ಜೀರ್ಣವಾಗಿ ಚರಟವಾಗಿದೆ. ಹೇ ದಯಾನಿಧೆ ಕೂಡಲ ಸಂಗಮದೇವಾ, ಹೊಲಸು ತಿನ್ನುವ ಹಂದಿಯ ಹಾಗೆ ಹೊಟ್ಟೆ ಹೊರೆಯಲು ಪರರ ಎಂಜಲಿಗೆ ಕೈ ನೀಡುವ ತಿಳಿಗೇಡಿಗಳನ್ನು ಕಣ್ಣಾರೆ ಕಂಡು ದುಃಖಿಸುತ್ತಿದ್ದೇನೆ.

೨೦೧ ಆಯುಷ್ಯವುಂಟು, ಪ್ರಳಯವಿಲ್ಲೆಂದು ಅರ್ಥವ ಮಡು
ಗುವಿರಿ;
ಆಯುಷ್ಯವು ತೀರಿ ಪ್ರಳಯವು ಬಂದರೆ ಅರ್ಥವ
ನುಂಬುವರಿಲ್ಲಾ.
ನೆಲನನಗಿದು ಮಡುಗದಿರಾ! ನೆಲನುಂಗಿದೊಡುಗುಳುವುದೆ?
ಕಣ್ಣನಲ್ಲಿ ನೋಡಿ,ಮಣ್ಣನಲ್ಲಿ ನೆರಹಿ,ಉಣ್ಣದೆ ಹೋಗದಿರಾ!
ನಿನ್ನ ಮಡದಿಗಿರಲೆಂದರೆ ಮಡದಿಯು ಕೃತಕ ಬೇರೆ
ನಿನ್ನೊಡಲು ಕೆಡೆಯಲು ಮತ್ತೊಬ್ಬನಲ್ಲಿಗಡಕದೆ ಮಾಣ್ಬಳೆ?
ಹೆರರಿಗಿಕ್ಕಿ ಹೆಗ್ಗುರಿಯಾಗಿ ಕೆಡಬೇಡಾ!
ಕೂಡಲ ಸಂಗನ ಶರಣರಿಗೊಡನೆ ಸವೆಸುವುದು.

ಬಹುದಿನ ಬಾಳುವೆವೆಂದು ಕಲ್ಪಿಸಿಕೊಂಡು ಸಾವಿನ ಸಂಕಟ ಸುಡ ದೆಂದು ನಂಬಿ ಮಣ್ಣನಲ್ಲಿ ದುಡ್ಡು ಹೂಳಿಡುತ್ತೀರಿ. ಬಾಳಿಗೆ ಬಲೆ ಹಾಕಿ ಯಮರಾಯ ಬೇಟೆಯಾಡಿದರೆ,ಆ ದುಡ್ಡು ದ್ರವ್ಯಉಪಭೋಗಿಸಲು ಯಾರೂ ಇಲ್ಲ. ಆದ ಕಾರಣ ಕಣ್ಣಿನಿಂದ ನೋಡಿ ಸುಖಬಟ್ಟು ಉಣ್ಣದೆ ಬಾಯಿಗೆ ಮಣ್ಣು ಹಾಕಿಕೊಂಡು ದ್ರವ್ಯ ಹೂಳಿಡುವ ವ್ಯಾಪಾರ ವೆಸಗಬೇಡ; ನೀನು ನಿನ್ನ ಹೆಂಡತಿಗಾಗಿ ದುಡ್ಡು ಸಂಗ್ರಹಿಸಿಟ್ಟರೆ ಅವಳು ನಿನ್ನ ಹೆಸರು ಕೆಡಿಸಲು ಬೇರೊಬ್ಬ ಪುರುಷನೊಂದಿಗೆ ಕೂಡಿಕೊಳ್ಳದಿರಳು; ಆದ್ದರಿಂದ ಅಂತಹ ಮಹಾ ಪಾತಕಕ್ಕೆ ಗುರಿಯಾಗಬೇಡಾ. ಶರಣರ ಗುಣದೀಪದ ತುಪ್ಪಕ್ಕೆ ದ್ರವ್ಯ ವೆಚ್ಚ ಮಾಡು.

೨೦೨ ತನು-ಮನ-ಧನವ ಹಿಂದಿಕ್ಕಿಕೊಂಡು ಮಾತಿನ ಬಣಬೆಯ,
ಒಳಲೊಟ್ಟೆಯ ನುಡಿವರೂ ನೀವೆಲ್ಲಾ ಕೇಳಿರೇ,
ತಲೆಹಿಲ್ಲದ ಕೋಲು ಹೊಳ್ಳು ಹಾರುವುದಲ್ಲದೆ ಗುರಿಯ
ತಾಗಬಲ್ಲುದೆ ?
ಮಾಯಾ ಪಾಶ ಹಿಂಗಿ ಮನದ ಗಂಟು ಬಿಡದನ್ನಕ್ಕ
ಕೂಡಲ ಸಂಗಮನೆಂತೊಲಿವನಯ್ಯಾ ?

ತನು, ಮನ, ಧನಗಳಿಂದ ತ್ರಿಕರಣಪೂರ್ವಕ ಭಕ್ತಿಪುರಸ್ಸರವಾಗಿ ಪೂಜಿಸದೇ ಕೇವಲ ಮಾತಿನ ಹಂದರವನ್ನು ತತ್ವದ ಕಂಬಗಳ ಮೇಲೆ ಹೊರಿಸಿದರೆ, ತುದಿಯಿಲ್ಲದ (ತಳ ಸಮನಿಲ್ಲದ) ಕೋಲಿನಿಂದ ಹೊಡೆದರೆ ಏಟು ತಪ್ಪಿ ಹುಳು ಬದುಕುವ ಹಾಗಾಗುತ್ತದೆ. ಆದ್ದರಿಂದ ಮಾಯೆಯ ಸೊಗಡು ಸರಿದ ಮೇಲೆಯೇ ಕೂಡಲ ಸಂಗಮ ದೇವನು ಕರುಣಿಸುತ್ತಾನೆ.

**೨೦೩ ತನು-ಮನ-ಧನವೆಂಬ ಮೂರು ಕತ್ತಿಯಿವೆ ಸಲೆ ಮೂಗಿನ ಮೇಲಯ್ಯಾ**
**ಲಿಂಗ ಜಂಗಮಕ್ಕೆ ಮಾಡಿಹೆನೆಂಬವಂಗೆ !**
**ಇದು ಕಾರಣ ಕೂಡಲ ಸಂಗನ ಶರಣರಿಗೆ ಅಂಜಲೇಬೇಕು.**

ಕೊಬ್ಬಿ ಕೋರೆಯಾದ ದೇಹ, ಮೊನೆಯಾಗಿ ಮಿಂಚುವ ಮನಸ್ಸು, ಧಗಧಗಿಸಿ ಧೃತಿಗೆಡಿಸುವ ಧನ ಇವು ಮನುಷ್ಯನ ಅವನತಿಗೆ ಕಾರಣವಾದ ಆಯುಧಗಳು. ಕಾರಣ ಇವೆಲ್ಲವುಗಳನ್ನೂ ತೊರೆದು ಪಾವನ ತೊರೆಯಾಗಿ ಹರಿದು ಬಂದ ಜಂಗಮ ಶರಣರಿಗೆ ತಲೆಬಾಗಿ ನಡೆಯಲೇ ಬೇಕು.

**೨೦೪ ಸರ್ವಭೂತಾತ್ಮನೆಂಬ ಮಾತಿನ ಮಾತಿನಲ್ಲಿ ಹೋಗದು;**
**ತನು-ಮನ-ಧನವ ಗುರುಲಿಂಗ ಜಂಗಮಕ್ಕೆ ಸವೆಸಲೇಬೇಕು.**
**ಇದು ಕಾರಣ ಕೂಡಲ ಸಂಗನ ಶರಣರಿಗೆ ಅಂಜಲೇಬೇಕು.**

ಪರಮಾತ್ಮನು ಎಲ್ಲ ಜೀವಿಗಳಲ್ಲಿಯೂ ನೆಲೆಸಿದ್ದಾನೆಂದು ಬರಿ ಮಾತಿನಿಂದ ತಿಳಿಸಲಾಗದು. ಅದನ್ನು ತಿಳಿದುಕೊಳ್ಳಲು ಶ್ರಮಪಡಬೇಕು; ಮನಸ್ಸನ್ನು ಕೈದು ಮಾಡಿ ಹರಚಿಂತನೆಯಲ್ಲಿ ತೇಲಿ ಬಿಡಬೇಕು; ಬೆವರಿಳಿಸಿ ದುಡಿದ ಹಣವನ್ನು ಮೋಕ್ಷದ ಹಂಬಲದ ಹಣತೆಯಲ್ಲಿ ಸುರಿದು ಲಿಂಗ ಜಂಗಮರ ಸಂತರ್ಪಣೆಗೆ ಸಲ್ಲಿಸಬೇಕು. ಈ ತೆರ ವರ್ತಿಸುವ ಕೂಡಲ ಸಂಗನ ಶರಣರಿಗೆ ಅಡ್ಡ ಬೀಳಬೇಕು.

**೨೦೫ ಹಲವು ಮಣಿಯ ಕಟ್ಟಿ, ಕುಣಿ ಕುಣಿದಾಡಿ,**
**ಹಲವು ಪರಿಯಲಿ ವಿಭೂತಿಯ ಹೂಸಿ,**

**ಗಣಾಡಂಬರದ ನಡುವೆ ನಲಿ ನಲಿದಾಡಿ,**
**ಉಂಡು, ತಾಂಬುಲಗೊಂಡು, ಹೋಹುದಲ್ಲಾ !**
**ತನು-ಮನ-ಧನವ ಸಮರ್ಪಿಸದವರ**
**ಕೂಡಲ ಸಂಗಮದೇವರೆಂತೊಲಿವನಯ್ಯಾ.**

ಹೊರಗಿನ ಆಡಂಬರಕ್ಕಾಗಿ ನಾನಾ ಪ್ರಕಾರಗಳಿಂದ ಭಸ್ಮ ಹೆಚ್ಚಿಕೊಂಡು ರುದ್ರಾಕ್ಷಿಯ ಮಾಲೆ ತುಳಸೀಮಾಲೆ, ಜಪದ ಮಾಲೆ ಹೀಗೆ ಅನೇಕ ಮಣಿ ಮಾಲೆಗಳನ್ನು ಧರಿಸಿ ಹಿಂಬಾಲಿಗರ ಮಧ್ಯೆ ಮೆರೆದು ಊಟ ಮಾಡಿ ವೀಳ್ಯೆ ತಿಂದು ಅಟ್ಟಹಾಸದ ನಗೆ ಬೀರಿ ಹೋಗುವದು ಭಕ್ತಿಯಲ್ಲ. ಅವನು ಶಿವಭಕ್ತನಲ್ಲ. ತನು ಮನ ಧನಗಳನ್ನು ಸರ್ವೇಶ್ವರನ ಸನ್ನಿಧಾನಕ್ಕೆ ತಿಳಿಮನದಿಂದ ಸಮರ್ಪಿಸದಿದ್ದರೆ ಕೂಡಲ ಸಂಗಮದೇವನು ಮೆಚ್ಚುವದಿಲ್ಲ,

**೨೦೬ ತನುವ ಕೊಟ್ಟು ಗುರುವನೊಲಿಸಬೇಕು;**
**ಮನವ ಕೊಟ್ಟು ಲಿಂಗವನೊಲಿಸಬೇಕು;**
**ಧನವ ಕೊಟ್ಟು ಜಂಗಮವನೊಲಿಸಬೇಕು;**
**ಈ ತ್ರಿವಿಧವ ಹೊರಗು ಮಾಡಿ,**
**ಹರೆಯ ಹೊಯಿಸಿ, ಕುರುಹ ಪೂಜಿಸುವರ ಮೆಚ್ಚ**
**ಕೂಡಲ ಸಂಗಮದೇವ.**

ಗುರು ಸೇವೆಗೆ ದೇಹದಂಡನೆ ಮಾಡಿ ಗುರುವಿನ ಪ್ರೀತಿ ಸಂಪಾದಿಸಬೇಕು. ಏಕಾಗ್ರ ಚಿತ್ತದಿಂದ ಮನ ಕುಸುಮವನ್ನು ಲಿಂಗ ಪೂಜೆಗೆ ಅರ್ಪಿಸಿ ಲಿಂಗದರ್ಶನಲಾಭಹೊಂದಬೇಕು. ಜಂಗಮಾಚಾರಕ್ಕಾಗಿ, ಜಂಗಮ ಹಿಗ್ಗಿ ಹಿರಿದಾಗಲು ದುಡ್ಡು ವ್ಯಯ ಮಾಡಿ ಜಂಗಮ ಪ್ರಸಾದಕ್ಕೆ ಪಾತ್ರರಾಗಬೇಕು, ಈ ಮೂರು ಬಗೆಯ ಪೂಜೆ ಮರೆತು ಕೇವಲ ಕಂಚು ಹಿತ್ತಾಳೆ,ಕಲ್ಲುಗಳಿಂದ ಮಾಡಿದ ಪ್ರತಿಮೆಗಳನ್ನು ಪೂಜಿಸುವವರನ್ನು ಕೂಡಲ ಸಂಗಮ ದೇವನು ಅನುಗ್ರಹಿಸುವದಿಲ್ಲ.

**೨೦೭ ಆಡಿದರೇನೊ, ಹಾಡಿದರೇನೊ, ಓದಿದರೇನೊ-**
**ತ್ರಿವಿಧ ದಾಸೋಹವಿಲ್ಲದನ್ನಕ್ಕ ?**

**ಆಡದೆ ನವಿಲು? ಹಾಡದೆ ತಂತಿ? ಓದದೆ ಗಿಳಿ ?**
**ಭಕ್ತಿಯಿಲ್ಲದವರನೊಲ್ಲ ಕೂಡಲಸಂಗಮದೇವ.**

ತನು ಮನ ಧನಗಳನ್ನು ಸಂಪೂರ್ಣವಾಗಿ ಗುರು ಪೂಜೆಗೆ, ಸಂತ್ಯ ಲಿಂಗನ ಸಾಕ್ಷಾತ್ಕಾರಕ್ಕೆ ಜಂಗಮ-ಗಣಂಗಳ ಊಟಕ್ಕೆಮೀಸಲಿಟ್ಟು ವ್ಯಯ ಮಾಡದೆ, ಕುಣಿದಾಡಿದರೆ, ಹಾಡಿದರೆ, ಪುರಾಣ-ಶಾಸ್ತ್ರಓದಿದರೆ ಅದು ನವಿಲುಕುಣಿದಂತೆ ತಂತಿಹಾಡಿದಂತೆ, ಗಿಳಿ ಓದಿದಂತೆ; ಬುದ್ಧಿಯಿಲ್ಲದ, ಅರ್ಥವರಿಯದ ಬಾಳು ನಡೆಸುವ ಭಕ್ತಿಹೀನರನ್ನು ಕೂಡಲ ಸಂಗಮ ದೇವನು ತನ್ನ ಮನೆಯ ಬಾಗಿಲಿಗೆ ಬರಗೂಡುವದಿಲ್ಲ.

**೨೦೮ ಶಾಸ್ತ್ರ ಘನವೆಂಬೆನೆ ? ಕರ್ಮವ ಭಜಿಸುತ್ತಿದೆ !**
**ವೇದ ಘನವೆಂಬೆನೆ ? ಪ್ರಾಣಿವಧೆಯ ಹೇಳುತ್ತಿದೆ !**
**ಸ್ಮೃತಿ ಘನವೆಂಬೆನೆ ? ಮುಂದಿಟ್ಟರಸುತ್ತಿದೆ !**
**ಅಲ್ಲೆಲ್ಲಿಯೂ ನೀವಿಲ್ಲದ ಕಾರಣ, ತ್ರಿವಿಧದಾಸೋಹದಲ್ಲಲ್ಲದೆ**
**ಕಾಣಬಾರದು ಕೂಡಲ ಸಂಗಮ ದೇವನ !**

ಶಾಸ್ತ್ರಗಳು,ವೇದಗಳು,ಸ್ಮೃತಿಗಳು ಕಾಯ-ಕರ್ಮ,ಯಜ್ಞ-ಯಾಗ, ಜೀವ-ಜಡ ಚೇತನ-ಅಚೇತನಗಳೆಂದು ಭಿನ್ನತೆಹೂಡಿ ಜುಲುಮೆಯ ಒಲ ವನ್ನು ಅಜ್ಞರ ಮೇಲೆ ಹೇರಿಸುತ್ತವೆ. ಸರಳವೂ ಸರ್ವರ ಸಂಕಲ್ಪಸಿದ್ಧಿಗೆ ಸನ್ಮಾರ್ಗವೂ ಆದ ಮೂರು ತರಹದ ದಾಸೋಹದಲ್ಲಿ ಕೂಡಲ ಸಂಗಮ ದೇವನಿಗೆ ಪ್ರೀತಿಹೆಚ್ಚು. ಕಾರಣ ಅತಿಥಿಸತ್ಕಾರಕ್ಕೆ ನಿನ್ನ ಸಕಲೈಶ್ವರ್ಯ ವನ್ನೂ ದಾನಮಾಡು.

**೨೦೯ ವೇದದಂತುಟಲ್ಲ, ಶಾಸ್ತ್ರದಂತುಟಲ್ಲ**
**ಗೀತವಾತಿನಂತುಟಲ್ಲ ಕೇಳಯ್ಯಾ.**
**ಮಾತಿನ ಮಾಲೆಯ ಕವುಳ ಗೋಲ ಶ್ರವದಲ್ಲಿ ಸತ್ತವರೊಳರೆ ಅಯ್ಯಾ?**
**ದಿಟದಲಗಿನ ಕಾಳೆಗವಿತ್ತಲಿದ್ದುದೇ**
**ಕೂಡಲ ಸಂಗನ ಶರಣರು ಬಂದಲ್ಲಿ !**

ಆಚಾರವ ಹೇಳುತ್ತ ಮಾತಿನಿಂದ ಮಾತಿಗೆ ಜಿಗಿದು ತತ್ವಾರ್ಥ ತಿಳಿಯದೆ- ವೇದ, ಶಾಸ್ತ್ರಗಳ, ಗೀತೆಯ ಉಪದೇಶನುಡಿಗಳ ಕಗ್ಗೊಲೆಮಾಡಿ ಥಾವತಿಮಾಡಿಕೊಂಡು ಸತ್ತವರೆಲ್ಲರೂ ಉತ್ತಮರೆ? ಅಲ್ಲ. ಶಿವಶರಣರು ಬಂದು ನಿಂತಲ್ಲಿ ಖಡ್ಗಹಿಡಿದು ಅವರಮೇಲೆ ಯುದ್ಧಮಾಡಹೋಗುವದು ಧರ್ಮವೆ?

**೨೧೦ ಮಾತಿನ ಮಾತಿನಲ್ಲಪ್ಪುದೇ ಭಕ್ತಿ ?**
**ಮಾಡಿ ತನು ಸವೆಯದನ್ನಕ್ಕ, ಮನ ಸವೆಯದನ್ನಕ್ಕ,**
**ಧನ ಸವೆಯದನ್ನಕ್ಕ ಅಪ್ಪುದೆ ಭಕ್ತಿ ?**
**ಕೂಡಲ ಸಂಗಮದೇವ, ಎಲುದೊರೆ ಸರಸವಾಡುವನು,**
**ಸೈರಿಸದನ್ನಕ್ಕ ಅಪ್ಪುದೆ ಭಕ್ತಿ ?**

'ಶಿವ, ಶಿವ, ಹರ, ಹರ, ಎಲ್ಲದೂ ನಿನ್ನದೆ' ಎಂಬ ಮಾತಿನ ಮೇಲೋಗರದಿಂದ ಭಕ್ತಿಬಾರದು. ಕಾಯದಣಿಯಬೇಕು; ಮನಸ್ಸು ಕಾಮನೆಗಳನ್ನು ಬಿಟ್ಟು ತಿಳಿಯಾಗಬೇಕು; ಸಿರಿಯಲ್ಲ ಸವೆಯಬೇಕು- ಗುರು,ಲಿಂಗ, ಜಂಗಮರ ಪೂಜೆಗೆ, ಆರಾಧನೆಗೆ. ನಿಷ್ಕಾಮ ಕರ್ಮವೆ ಭಕ್ತಿ. ಮೈಯೊಳಗೆ ಎಲುವುಗಳಿರುವವರೆಗೂ ಕೂಡಲ ಸಂಗಮನು ಭಕ್ತನಿಗೆ ಕಷ್ಟ ಕೊಟ್ಟು ಸೇವೆ ಪಡೆಯುವನು. ತಾಳಲು ಪ್ರಸನ್ನಚಿತ್ತವಿದ್ದರೆ ಅದು ಭಕ್ತಿ. ತ್ರಿಕರ್ಣಪೂರ್ವಕ ಮಾಡಿದ ಜಂಗಮದಾಸೋಹವೇ ಭಕ್ತಿಸಾರ.

**೨೧೧ ಹಾವಸೆಗಲ್ಲ ಮೆಟ್ಟಿ ಹರಿದು ಗೊತ್ತ ಮುಟ್ಟಬಾರದಯ್ಯಾ,**
**ನುಡಿಯಂತೆ ನಡೆಯಲು ಬಾರದಯ್ಯಾ,**
**ಕೂಡಲ ಸಂಗನ ಶರಣರ ಭಕ್ತಿ ಭಾಳ ಬಾಯಿ ಧಾರೆ !**

ನೀರಲ್ಲಿ ಹಾವಸಿ ಬೆಳೆದ ಕಲ್ಲಮೇಲೆ ಕಾಲಿಟ್ಟು ತುಳಿದು ನಮ್ಮ ಗುರಿ ಮುಟ್ಟುವದು ಅಸಾಧ್ಯ. ಮಾತು ಕೊಟ್ಟಂತೆ ನಡೆದು ಜಯಶೀಲರಾಗುವದು ತುಂಬ ಕಷ್ಟ. ಆದ್ದರಿಂದ ವೀರಖಡ್ಗದ ಹರಿತದಂತೆ ಇರುವ ಶರಣರ ಭಕ್ತಿಪ್ರಭಾವದೊಂದಿಗೆ ಹುಚ್ಚುಚ್ಚು ಬಡಿಯುವದು ಸಂಕಟಕ್ಕೆ ಕಾರಣ.

೨೧೨ ಭಕ್ತಿಯೆಂಬುದ ಮಾಡಬಾರದು;
ಕರಗಸದಂತೆ ಹೋಗುತ್ತ ಕೊಯ್ವುದು ಬರುತ್ತ ಕೊಯ್ವುದು!
ಘಟಸರ್ಪನಲ್ಲಿ ಕೈದುಡುಕಿದರೆ ಹಿಡಿವುದ ಮಾಣ್ಬುದೆ?
ಕೂಡಲಸಂಗಮದೇವಾ ?

ಭಕ್ತಿಯನ್ನು ಮಾಡಬೇಕಾದರೆ ಜಾಗರೂಕತೆಯಿಂದಲೂ ಪರಿಶುದ್ಧ ಮನಸ್ಸಿನಿಂದಲೂ ನಿರ್ವಂಚನೆಯಿಂದಲೂ ಮಾಡಬೇಕು. ಇಲ್ಲದಿದ್ದರೆ ಅದು ಕರಗಸದಂತೆ ನೂಲು ನೂಲಿಗೆ ಸಂಕಟ ಕೊಡುತ್ತದೆ. ಘಟಸ ರ್ಪನ ಬಾಯಲ್ಲಿ ಕೈಯಿಟ್ಟರೆ ಅದು ಕಡಿಯದೆ ಬಿಡುತ್ತದೆಯೋ-ಹಾಗಿದೆ ಕೂಡಲ ಸಂಗಮದೇವನ ಭಕ್ತಿ.

೨೧೩ ಹಲವು ಕಾಲ ಧಾವತಿಗೊಂಡು ಒಟ್ಟಿದ ಹಿದಿರೆಯು
ಒಂದು ಮಿಡುಕುರಲ್ಲಿ ಬೇವಂತೆ,
ಸಲೆ ನೆಲೆ ಸನ್ನಿಹಿತನಾಗಿರ್ಪ ಶರಣರ ಭಕ್ತಿ
ಒಂದನಾಯತದಿಂದೆ ಕೆಡುವುದು;
ಸ್ವಧರ್ಮದಲ್ಲಿ ಗಳಿಸಿದ ಪಿತನ ಧನವ
ಅಧರ್ಮದಲ್ಲಿ ಕೆಡಿಸುವ ಸುತನಂತೆ-
ಶಿವನ ಸೊಮ್ಮ ಶಿವಂಗೆ ಮಾಡದೆ, ಅನ್ಯಕ್ಕೆ ಮಾಡಿದೊಡೆ,
ತನ್ನ ಭಕ್ತಿ ತನ್ನನೇ ಕೆಡಿಸುವದು,
ಕೂಡಲ ಸಂಗಮ ದೇವಾ.

ಅತಿ ಬಳಲಿ ತೊಳಲಿ ಒಟ್ಟಿದ ಬಣವೆ (ಹುಲ್ಲು) ಒಂದೇ ಒಂದು ಬೆಂಕಿಯ ಕಿಡಿಗೆ ಸುಟ್ಟು ಭಸ್ಮವಾಗುವಂತೆ, ಒಂದೇ ಒಂದು ಹೀನ ಕಾರ್ಯ ದಿಂದ ಭಕ್ತಿರಸ ಕೆಟ್ಟು ಹೋಗಿ ಶರಣರ ಅವಕೃಪೆಗೆ ಪಾತ್ರರಾಗಬೇಕಾ ಗುತ್ತದೆ. ಸದಾಚಾರದಿಂದ ಸಂಪಾದಿಸಿದ ದ್ರವ್ಯವು ದುಷ್ಟಮಗನ ಕೈಯಲ್ಲಿ ದುರಾಚಾರಕ್ಕೆ ವ್ಯಯವಾಗುವಂತೆ ಶಿವ ಕೊಟ್ಟಿರುವ ಈ ಸಂಪತ್ತು-ದೇಹ- ಮನಗಳು ಶಿವನಿಗೇ ಅರ್ಪಿತವಾಗಬೇಕಲ್ಲದೆ ಬೇರಾವ ಕಾರ್ಯಕ್ಕೂ ಮೀಸ ಲಿರಿಸಲಾಗದು. ಹಾಗೆ ಮಾಡದಿದ್ದಲ್ಲಿ ಭಕ್ತಿಯೇ ಬೆಂಕಿಯಾಗಿ ಅವನನ್ನು ಸುಡುತ್ತದೆ.

**೨೧೪ ನಚ್ಚಿದೆನೆಂದರೆ, ಮಚ್ಚಿದೆನೆಂದರೆ ಸಲೆಮಾರುವೋದೆನೆಂದರೆ**
**ತನುವನಲ್ಲಾಡಿಸಿ ನೋಡುವೆ ನೀನು,**
**ಮನವನಲ್ಲಾಡಿಸಿ ನೋಡುವೆ ನೀನು,**
**ಧನವನಲ್ಲಾಡಿಸಿ ನೋಡುವೆ ನೀನು,**
**ಇದಕ್ಕೆಲ್ಲ ಅಂಜದಿದ್ದರೆ ಭಕ್ತಿಕಂಪಿತ ನಮ್ಮ ಕೂಡಲ**
**ಸಂಗಮದೇವ !**

ದೇವನಲ್ಲಿ ವಿಶ್ವಾಸವಿಟ್ಟು ಪ್ರೀತಿ ಮಾಡಿ ತನ್ಮಯನಾಗಿ ಚಿನ್ಮಯ ಲಿಂಗವನ್ನು ನಾನು ಮೋಹಿಸಿದರೆ, ಆ ಲಿಂಗವು ನನ್ನ ದೇಹಕ್ಕೆ ಅನೇಕ ತೊಂದರೆ ಕೊಟ್ಟು ಬಳಲಿಸಿ ಪರೀಕ್ಷಿಸುತ್ತದೆ. ಮನಸ್ಸಿಗೆ ವಿಷಯಾಮಿಷಗಳ, ಧನದ ಆಶೆಹಚ್ಚಿ ಪರೀಕ್ಷಿಸಿ ನೋಡುತ್ತದೆ. ಈ ಎಲ್ಲ ತೊಂದರೆಗಳಿಗೂ ಅಂಜದಿದ್ದರೆ ಆ ಧೃಢಭಕ್ತಿಗೆ ಕೂಡಲ ಸಂಗಮದೇವನೇ ನಡುಗುತ್ತಾನೆ.

**೨೧೫ ಕೌಳುಗೋಲ ಹಿಡಿದು ಶ್ರಮವ ಮಾಡಬಹುದಲ್ಲದೆ**
**ಕಳನೇರಿ ಕಾದುವುದರಿದು ನೋಡಾ.**
**ಬಣ್ಣವಿಟ್ಟು ನುಡಿದಲ್ಲಿ ಫಲವೇನು ?**
**ಚಿನ್ನಿಗೆಯ್ಕ ನಾಡುವನಂತೆ !**
**ಬಂದ ಸಮಯವನರಿತು ಇದ್ದುದ ವಂಚಿಸದಿದ್ದಡೆ,**
**ಕೂಡಲ ಸಂಗಮದೇವನೊಲಿದು ಸಲಹುವ.**

ಗುದ್ದಲಿ ಹಿಡಿದು ನೆಲ ಕಡಿದು ದೇಹ ಶ್ರಮಮಾಡಿ ದುಡಿದು ಜನರನ್ನು ಸಲಹಬಹುದಲ್ಲದೆ ಸರ್ವನಾಶೀ ಯುದ್ಧದಲ್ಲಿ ಕತ್ತಿ ಹಿಡಿದು ಕಾದಾಡುವುದರಿಂದ ಏನು ಪ್ರಯೋಜನವೆಂಬುದನ್ನು ವಿಚಾರ ಮಾಡಿ ನೋಡು. ಅಕ್ಕಸಾಲಿಗನ ನಯವಾದ ಮೃದುವಾದ ಕುತಂತ್ರದ ಮಾತುಗಳಂತೆ ಬಣ್ಣದ ಮಾತುಗಳನ್ನಾಡುವದರಿಂದ ಏನೂ ಪ್ರಯೋಜನವಿಲ್ಲ. ಶಿವಶರಣರು ಜಂಗಮರು ಬಂದ ಹೊತ್ತು ಗೊತ್ತುಗಳನ್ನು ನೋಡಿ ಮನೆಯಲ್ಲಿದ್ದುದರಲ್ಲಿಯೇ ವಂಚನೆ ಮಾಡದೆ ಕೋರಾಣ ಮಾಡಿದರೆ ಕೂಡಲ ಸಂಗಮದೇವನು ಬಹು ಪ್ರೀತಿಯಿಂದ ಅವರನ್ನು ಸಲಹುತ್ತಾನೆ.

**೨೧೬ ಧನಕ್ಕೆ ಮನವನೊಡ್ಡಿದರೇನು ? ಮನಕ್ಕೆ ಧನವನೊಡ್ಡಿ ದರೇನು ?**
**ತನು-ಮನ-ಧನವ ಮೀರಿ ಮಾತಾಡಬಲ್ಲರೆ,**
**ಆತ ನಿಸ್ಸೀಮನು; ಆತ ನಿಜೈಕ್ಯನು,**
**ತನು-ಮನ-ಧನವನುವಾದರೆ ಕೂಡಲಸಂಗಮದೇವನೊಲಿವ**

ತನು-ಮನ-ಧನಗಳನ್ನು ಪರಿಪೂರ್ಣವಾಗಿ ತ್ಯಾಗ ಮಾಡಿ ನುಡಿಯು ವವನೇ ನಿಸ್ಸೀಮ ಭಕ್ತ-ಅವನೇ ನಿಜವಾಗಿ ಐಕ್ಯಹೊಂದುವವನು. ಆದ್ದ ರಿಂದ ಈ ಮೂರು ಆಶೆಗಳ ಮೂಲಿಕೆಯನ್ನು ಕತ್ತರಿಸಿ ಬಿಸುಟಿದವನಿಗೆ ಕೂಡಲ ಸಂಗಮ ದೇವನು ಒಲಿಯುತ್ತಾನೆ.

**೨೧೭ ಅರ್ಥ ಪ್ರಾಣಾಭಿಮಾನದಲ್ಲಿ ವಂಚನೆಯಿಲ್ಲದ ಭಕ್ತಿ ಸಮಯಾಚಾರ.**
**ಜಂಗಮವೇ ಲಿಂಗವೆಂಬುದಕ್ಕೆ ಏನು ಗುಣ**
**ಮನದ ಲಂಪಟತನ ಹಿಂಗದಾಗಿ ?**
**ಒಡೆಯರ ಬರವಿಂಗೆ ಕುನ್ನಿ ಬಾಲ ಬಡಿದರೆ**
**ವೆಚ್ಚವೇನು ಹತ್ತುವದು ಕೂಡಲ ಸಂಗಮದೇವಾ ?**

ದುಡ್ಡಿಗಾಗಿ, ಪ್ರಾಣಕ್ಕಾಗಿ ವ್ಯರ್ಥದುರಭಿಮಾನ ಮಾಡದಿದ್ದರೆ,ಮೋಸ ಮಾಡದಿದ್ದರೆ ಅದುವೆ ಸಮಯಾಚಾರ ಭಕ್ತಿ. ವಿಷಯದ ಸುಖದಾಸೆ ಬಿಡ ದಿದ್ದರೆ ಜಂಗಮ ಲಿಂಗದಲ್ಲಿ ಸಮಭಾವ ತಳೆಯುವದು ಹೇಗೆ? ಸಾಕಿದ ಯಜಮಾನನ ಬರವಿನ ಸುಳುಹು ಹಿಡಿದು ಬಾಲಬಡಿಯುವ ಕುನ್ನಿಯಂತೆ ಈ ನರರ ಪಾಡಾಗುತ್ತದೆ.

**೨೧೮ ಹಸಿದು ಬಂದ ಗಂಡನಿಗೆ ಉಣಲಿಕ್ಕದೆ**
**ಬಡವಾದನೆಂದು ಮರಗುವ ಸತಿಯ ಸ್ನೇಹದಂತೆ**
**ಬಂದುದನರಿಯಳು ಇದ್ದುದ ಸವಿಸಳು !**
**ದುಃಖವಿಲ್ಲದ ಅಕ್ಕೆ ಹಗರಣಿಗನ ತೆರನಂತೆ !**
**ಕೂಡಲಸಂಗಮದೇವಾ.**

ಹಸಿದು ಬಂದ ಗಂಡನಿಗೆ ಹೊತ್ತಿಗೆ ಸರಿಯಾಗಿ ಮನೆಯಲ್ಲಿದ್ದುದನ್ನು ಅಡಿಗೆಮಾಡಿ ಊಟಮಾಡಿಸದೆ, ನನ್ನ ಗಂಡ ಸೊರಗಿ ಸಾಯಲಾಗಿದ್ದಾನೆಂದು ದುಃಖಪಡದೆ ಮಮತೆಯ ಮಾತುಗಳನ್ನಾಡುವ ಹಗರಣ ಗಿತ್ತಿಅವಳು ಕೂಡಲ ಸಂಗಮದೇವಾ.

**೨೧೯ ಉದಯದ ಮಾಗಿಯ ಬಿಸಿಲು ಅಂಗಕ್ಕೆ ಹಿತವಾಯಿತ್ತು**
**ಮಧ್ಯಾಹ್ನದ ಬಿಸಿಲು ಅಂಗಕ್ಕೆ ಕರ ಕಠಿಣವಾಗಿತ್ತು.**
**ಮೊದಲಲ್ಲಿ ಲಿಂಗ ಭಕ್ತಿ ಹಿತವಾಯಿತ್ತು:**
**ಕಡೆಯಲ್ಲಿ ಜಂಗಮ ಭಕ್ತಿ ಕಠಿಣವಾಯಿತ್ತು.**
**ಇದು ಕಾರಣ ಕೂಡಲ ಸಂಗಮದೇವನವರ ಬಲ್ಲನಾಗಿ**
**ಒಲ್ಲನಯ್ಯಾ.**

ಮಾಗಿಯ ಕಾಲದಲ್ಲಿ ಬೆಳಗಿನ ಎಳೆಬಿಸಿಲು ದೇಹಕ್ಕೆ ಹಿತವಾಗಿದ್ದರೆ ಮಧ್ಯಾಹ್ನದಲ್ಲಿ ಅದೇ ಬಿಸಿಲು ದೇಹವನ್ನು ಸುಡುತ್ತದೆ. ಹೀಗೆ ಲಿಂಗ ಪೂಜೆಮಾಡುವುದು ಮೊದಲು ಮೋಜಿನ ಸರಸವಾಟವಾದರೆ ಜಂಗಮಾರ್ಚನೆ ಜಂಗಮರಿಗೆ ದಾಸೋಹ ಮಾಡಿಸುವದು ಕಡೆಗೆ ತೊಂದರೆಯಾಗಿ ಪರಿಣಮಿಸುತ್ತದೆನ್ನುತ್ತಾರೆ. ಇದನ್ನೆಲ್ಲ ತಿಳಿದ ಕೂಡಲ ಸಂಗಮದೇವನು ಅಂಥ ಕುಲಗೇಡಿ ಭಕ್ತರನ್ನು ಮೆಚ್ಚುವದಿಲ್ಲ.

**೨೨೦ ಬರಬರ ಭಕ್ತಿಯುರೆಯೂಯಿತ್ತು, ಕಾಣಿರಣ್ಣಾ;**
**ಮೊದಲ ದಿನ ಹಣೆಮುಟ್ಟೆ ಮರುದಿನ ಕೈಯಮುಟ್ಟೆ**
**ಮೂರೆಂಬ ದಿನಕ್ಕೆ ತೂಕಡಿಕೆ ಕಾಣಿರಣ್ಣಾ !**
**ಹಿಡಿದುದ ಬಿಡದಿದ್ದರೆ ಕಡೆಗೆ ಚಾಚುವ;**
**ಅಲ್ಲದಿದ್ದರೆ; ನಡುನೀರಲ್ಲದ್ದುವ ನಮ್ಮ ಕೂಡಲ**
**ಸಂಗಮದೇವ.**

ಮೂರೇ ಮೂರು ದಿನಗಳಲ್ಲಿ ಇವರ ಭಕ್ತಿ ಭಾರವಾಗಿ ತೂಕಡಿಸುವ ಭಂಡ ಭಕ್ತರನ್ನು ಕೂಡಲ ಸಂಗಮದೇವನು ನಡು ನೀರಿನಲ್ಲಿ ಮುಳಗಿ ಸೆಬ್ಬಿಸುತ್ತಾನೆ.

**೨೨೧ ಬಿದಿಗಲಂದಣವಕ್ಕು, ಬಿದಿರೆ ಸತ್ತಿಗೆಯುಕ್ಕು;**
**ಬಿದಿರಲ್ಲಿ ಗುಡಿಯುು ಗೂಡಾರವಕ್ಕು;**
**ಬಿದಿರಲ್ಲಿ ಸಕಲ ಸಂಪದವೆಲ್ಲವು!**
**ಬಿದಿರದವರ ಮೆಚ್ಚ ನಮ್ಮ ಕೂಡಲ ಸಂಗಮದೇವ.**

ಸಕಲ ಸೌಭಾಗ್ಯವೂ ಆದ ಬಿದಿರಿನ ಸೌಂದರ್ಯವನ್ನು ಹೇಳಲಾಸಲ್ಲ. ಬಿದಿರಿನಿಂದ ಗುಡಿ ಕಟ್ಟುತ್ತಾರೆ, ಬಿದಿರಿನಿಂದ ವಾಸಿಸಲು ಮನೆ ಕಟ್ಟುತ್ತಾರೆ, ಬಿದಿರು ಛತ್ರಿಯಾಗಿ ನೆರಳು ಕೊಡುತ್ತದೆ. ಬಿದಿರಿನಂತೆ ಭಕ್ತಿಯಿಂದ ಬಾಗದ ಮನುಜರನ್ನು ಕೂಡಲ ಸಂಗಮದೇವನು ಮೆಚ್ಚಿಕೊಳ್ಳುವದಿಲ್ಲ.

**೨೨೨ ಉಬಾಗಳಿಲ್ಲೆನ್ನ, ಉಡುವಾಗಳಿಲ್ಲೆನ್ನ,**
**ಬಂಧುಗಳು ಬಂದಾಗಳಿಲ್ಲೆನ್ನ;**
**ಲಿಂಗಕ್ಕೆ ಇಲ್ಲೆಂಬ, ಜಂಗಮಕ್ಕೆ ಇಲ್ಲೆಂಬ,**
**ಬಂದ ಪುರಾತರಿಗೆ ಇಲ್ಲೆಂಬ!**
**ಸಾವಾಗ ದೇಹವ ದೇಗುಲಕ್ಕೊಯ್ಯೆಂಬ!**
**ದೇವರಿಗೆ ಹೆಣ ಬಿಟ್ಟಿ ಹೇಳಿತ್ತೆ! ಕೂಡಲ ಸಂಗಮದೇವಾ!!**

ತಾನು ಉಣ್ಣುವಾಗ, ಉಡುವಾಗ, ಬಂಧುಗಳು ಮನೆಗೆ ಬಂದಾಗ, ಯಾವದಕ್ಕೂ ಇಲ್ಲವೆನ್ನದೆ ಎಲ್ಲವನ್ನೂ ಸುರಳೀತ ಸಾಗಿಸಿಕೊಂಡು ಹೋಗುತ್ತಾನೆ. ಆದರೆ ಲಿಂಗ ಪೂಜೆಗೆ, ಜಂಗಮ ಭೋಜನಕ್ಕೆ, ಪುರಾತರ ಪ್ರಸನ್ನತೆಗೆ ದುಡ್ಡಿಲ್ಲ, ಅನ್ನವಿಲ್ಲ ಎಂದು ಹೇಳಿದ ಆ ನರನು ಸಾಯುವಾಗ ದೇವಸ್ಥಾನಕ್ಕೆ ಕರೆದುಕೊಂಡು ಹೋಗಿರೆಂದು ಅಂಗಲಾಚಿ ಬೇಡಿಕೊಳ್ಳುತ್ತಾನೆ. ಆ ಹೆಣಕ್ಕೆ ದೇವರು ಬಿಟ್ಟಿಯ ಕೆಲಸ ಹೇಳುತ್ತಾನೆಯೆ? ಕೂಡಲ ಸಂಗಮದೇವಾ.

**೨೨೩ ಪಾಪಿಯ ಧನ ಪ್ರಾಯಶ್ಚಿತ್ತಕಲ್ಲದೆ ಸತ್ ಪಾತ್ರಕ್ಕೆ ಸಲ್ಲದಯ್ಯಾ!**
**ನಾಯ ಹಾಲು ನಾಯಿಗಲ್ಲದೆ ಪಂಚಾಮೃತಕ್ಕೆ ಸಲ್ಲದಯ್ಯಾ!**

**ನಮ್ಮ ಕೂಡಲ ಸಂಗನ ಶರಣರಿಗಲ್ಲದೆ**
**ಮಾಡುವ ಅರ್ಥ ವ್ಯರ್ಥ ಕಂಡಯ್ಯಾ !**

ಪಾಪ ಕರ್ಮಗಳಿಂದ ಗಳಿಸಿದ ಸಂಪತ್ತು ಪಾಪ ದೋಷಗಳನ್ನು ತೊಳೆದು ಕೊಳ್ಳುವದಕ್ಕಾಗಿಯೇ ವೆಚ್ಚವಾಗುತ್ತದೆ ವಿನಃ ಆ ದ್ರವ್ಯ ದೇವ ಪೂಜೆಗೆ ಅನ್ನದಾನಕ್ಕೆ ಅಯೋಗ್ಯವಾದದ್ದು. ನಾಯಿಯ ಮೊಲೆ ಹಾಲು ನಾಯಿಕುನ್ನಿಗಳಿಗಷ್ಟೇ ಹಿತವಾಗಿರುತ್ತದಲ್ಲದೆ ದೇವರ ಪಂಚಾಮೃತ ಅಭಿಷೇಕಕ್ಕೆ ಹೇಗೆ ದೋಷಯುಕ್ತವಾದದ್ದೋ ಹಾಗೆ ಕೂಡಲ ಸಂಗಮದೇವನ ಶರಣರ ಪಾದ ಪೂಜೆಗೆ ವ್ಯಯವಾಗದೆ ಅನ್ಯವಿಷಯಸುಖಕ್ಕೆ ದುಂದು ಮಾಡಿದರೆ ಆ ದುಡ್ಡು ಯಾತಕ್ಕೂ ಬಾರದ್ದು.

**೨೨೪ ಬಲಿಯ ಭೂಮಿ, ಕರ್ಣನ ಕವಚ, ಖಚರನ ಅಸ್ತಿ,**
**ಶಿಬಿಯ ಮಾಂಸ ವೃಥಾ ಹೋಯಿತ್ತಲ್ಲಾ !**
**(ಶ್ಲೋಕ) ಶಿವಭಕ್ತಿ ಮತಿಕ್ರಮ್ಯ! ಯದ್ ದಾನಂಚ ವಿಧೀಯತೇ**
**ನಿಷ್ಫಲಂತು ಭವೇದ್ ದಾನಂ| ರೌರವಂ ನರಕಂ ವ್ರಜೇತ್**
**ಇಂತೆಂದುದಾಗಿ, ಕೂಡಲ ಸಂಗನ ಶರಣರ ನರಿಯದೆ**
**ಕೀರ್ತಿ ವಾರ್ತೆಗೆ ಮಾಡಿದವನ ಧನವು ವೃಥಾ ಹೋಯಿತ್ತಲ್ಲಾ !**

ಬಲಿ ಚಕ್ರವರ್ತಿಯ ಭೂದಾನ, ಕರ್ಣನ ಕವಚಕುಂಡಲಗಳದಾನ, ಖೇಚರನ ಸಿರಿ ಸಂಪತ್ತು ಮತ್ತು ಶಿಬಿಚಕ್ರವರ್ತಿಯ ಮಾಂಸದಾನ ಯಾವ ಉಪಯೋಗಕ್ಕೂ ಬಾರದೆ, ಯಾರನ್ನೂ ತೃಪ್ತಿಪಡಿಸದೆ ಹಾಳಾಯಿತು. ಶಿವಭಕ್ತಿಯನ್ನು ಬಿಟ್ಟು ದಾನವ ಮಾಡಿದರೆ ಅದಕ್ಕೆ ಎಂಥ ಫಲವೂ ದೊರೆಯಲಾರದು. ಅಲ್ಲದೆ ರೌರವ ನರಕ ಪ್ರಾಪ್ತಿಯಾಗುತ್ತದೆ. ಆದ್ದರಿಂದ ಹೆಸರು ಗಳಿಸಬೇಕೆಂದು ಮಾಡಿದ ದಾನಕ್ಕೆ ಘೋರ ನರಕವೇ ಸಿಗುತ್ತದೆ.

೨೨೫ ಹತ್ತು ಮತ್ತರದ ಭೂಮಿ, ಬತ್ತುವ ಹಯನು,
ನಂದಾದೀವಿಗೆಯ
ನಡೆಸಿಹೆವೆಂಬವರ ಮುಖವ ನೋಡಲಾಗದು,
ಅವರ ನುಡಿಯ ಕೇಳಲಾಗದು.
ಅಂಡಜ, ಸ್ವೇದಜ, ಉದ್ಭಿಜ, ಜರಾಯುಜರೆಂಬ
ಪ್ರಾಣಿಗಳಿಗೆ
ಭವಿತವ್ಯ ಕೊಟ್ಟವರಾರೋ !
ಒಡೆಯರಿಗೆ ಉಂಡಲಿಗೆಯ ಮುರಿದಿಕ್ಕಿದಂತೆ
"ಎನ್ನಿಂದಲೆ ಆಯಿತ್ತು, ಎನ್ನಿಂದಲೆ ಹೋಯಿತ್ತು"
ಎಂಬುವನ ಬಾಯಲ್ಲಿ ಮೆಟ್ಟ ಹುಡಿಯ ಹೊಯ್ಯದೆ
ಮಾಣ್ಬನೆ
ಕೂಡಲ ಸಂಗಮದೇವ?

ಹತ್ತು ಕೋಲಳತೆಯ ಜಮೀನಿಟ್ಟುಕೊಂಡು ಮತ್ತು ಬೇಗನೆ ಹಯನು ಒಣಗುವ ಎಮ್ಮೆ ಕಟ್ಟಿಕೊಂಡು ದೇವರ ಮುಂದೆ ನಂದಾದೀಪ ಇಟ್ಟಿದ್ದೇವೆಂದು ಬಡಾಯಿ ಕೊಚ್ಚುವ ಜನರ ಮುಖ ನೋಡಬಾರದು. ಅವರ ಮಾತು ಕಿವಿಯಿಂದ ಕೇಳಬಾರದು. ತತ್ತಿಯಿಂದ ಹುಟ್ಟುವ, ಬೆವರಿನಿಂದ ಹುಟ್ಟುವ, ಹಾಗೂ ಸಸ್ಯರೂಪದಲ್ಲಿ ಬೆಳೆಯುವ ಜೀವರುಗಳಗೆ ಸುಸ್ಥಿತಿ ಸುಗತಿ ಕೊಟ್ಟವರಾರು? ಎಲ್ಲವೂ ನನ್ನಿಂದಲೇ ಆಗುತ್ತದೆ, ಸಾಗುತ್ತದೆಂಬವನ ಬಾಯೊಳಗೆ ಕೂಡಲಸಂಗಮನು ಮಣ್ಣು ಹಾಕದೆ ಬಿಡುವನೆ?

೨೨೬ ಅನವರತ ಮಾಡಿಹೆನೆಂದು ಉಪ್ಪರ ಗುಡಿಯ
ಕಟ್ಟಿಮಾಡುವ
ಭಕ್ತನ ಮನೆಯದು ಅಂದಣಗಿತ್ತಿಯ ಮನೆ !
ಸರ್ವಜೀವದಯಾಪಾರಿಯೆಂದು ಭೂತದಯಕ್ಕಿಕ್ಕು
ವವನ ಮನೆ
ಸಯಿಧಾನದ ಕೇಡು !

**ಸೂಳೆಯ ಮಗ ಮಾಳವ ಮಾಡಿದರೆ**
**ತಾಯಹೆಸರಾಯಿತ್ತಲ್ಲದೆ**
**ತಂದೆಯ ಹೆಸರಿಲ್ಲಾ, ಕೂಡಲ ಸಂಗಮದೇವಾ!**

ಯಾವಾಗಲೂ ಪರಲಿಂಗನ ಧ್ಯಾನದಲ್ಲಿಯೇ ನಿರತನಾಗಿಹೆನೆಂದು ತೋರಲು ಅತಿ ಎತ್ತರದಲ್ಲಿ ಗುಡಿ (ನಿಶಾನೆ) ಕಟ್ಟಿಸಿಕೊಂಡಿರುವ ಭಕ್ತನ ಮನೆ ಅದು ಸೂಳೆಯ ಮನೆ ಇದ್ದ ಹಾಗೆ. ಎಲ್ಲ ಜೀವಿಗಳಿಗೆ ದಯದೋರಬೇಕೆಂದು ಮನಗಂಡು ವಾಸನಾ ಭೂತಗಳಿಗೆ ಅನ್ನದಾನ ಮಾಡುವವನ; ಗೃಹ ಶಾಂತಿಗೆ ಕೇಡು ತರುತ್ತದೆ. ಇದೆಲ್ಲವೂ ಸೂಳೆಯ ಮಗನು ಶ್ರಾದ್ಧ ಮಾಡಿದರೆ ಅದು ತಾಯಿಯ ಹೆಸರಾಗುತ್ತದೆಯೇ ವಿನಃ ತಂದೆಯ ಹೆಸರಿಲ್ಲದಂತಾದ ವಿಚಾರ ಕೂಡಲ ಸಂಗಮದೇವಾ.

**೨೩೭ ಕಾಲಾಗ್ನಿರುದ್ರನ ನೋಳಾಪವನರಿಯದವರು**
**ಕಾಳು ಬೇಳೆಯೆನುತಿಪ್ಪರಯ್ಯಾ.**
**ಕಾನನದಡವಿಯಲ್ಲಿ ಕಿಚ್ಚುಬಾಳುವೆಯಾಗಿ ಮಿಕ್ಕೊಡೆ**
**ಒರಲುವ ಬಳ್ಳುವಿನಂತಪ್ಪರಯ್ಯಾ ಮನುಜರು**
**ನರವಿಂಧ್ಯದೊಳಗೆ.**
**ತತ್ಕಾಲ ಪ್ರೇಮವನರಿಯದೆ ವಿಭವಕ್ಕೆ**
**ಮಾಡಿದವನ ಭಕ್ತಿ**
**ಇರುಳು ಸತ್ತಿಗೆಯ ಹಿಡಿಸಿಕೊಂಡಂತೆ!**
**ಕೂಡಲ ಸಂಗಮದೇವಾ.**

ಪ್ರಳಯ ಕಾಲದ ರುದ್ರನ ಕೂಟದ ಪ್ರಕೋಪಾಗ್ನಿಯ ನೃತ್ಯವನ್ನು ತಿಳಿಯದವರು ಸುಟ್ಟು ತೊಳಲುವರು. ಅಡವಿಯ ಬೆಂಕಿ ಹೆಚ್ಚಿ ಇಡೀ ಅರಣ್ಯವನ್ನೆಲ್ಲ ಪಸರಿಸಿದಾಗ ಮಧ್ಯೆ ಸಿಕ್ಕು ಸಾಯುವ ಸಂಕಟಕ್ಕೆ ಚೀರುವ ನರಿ ಮೊಲಗಳಂತೆ ಆ ಹುಲು ಮನುಜರು ನರಕದಲ್ಲಿ ಬಿದ್ದು ನರಳುತ್ತಾರೆ. ಕಾಲಕ್ಕೆ ಸರಿಯಾಗಿ ಪ್ರೇಮದ ಮಹತ್ವನರಿಯದೆ ಹಣಕ್ಕಾಗಿ ಮೋಹಿಸುವ

ವನ ಪ್ರೇಮಭಕ್ತಿ ರಾತ್ರಿಯಲ್ಲಿ ಛತ್ರಿ ಹಿಡಿಸಿಕೊಂಡು ಹೋದಂತೆ ಕೂಡಲ ಸಂಗಮದೇವಾ.

**೨೨೮ ಹರಸಿ ಮಾಡುವುದು ಹರಕೆಯ ದಂಡ;**
**ನೆರಹಿ ಮಾಡುವುದು ಡಂಭಿನ ಭಕ್ತಿ.**
**ಹರಸಬೇಡ, ನೆರಹಬೇಡ,**
**ಬಂದ ಭರವನರಿದರೆ ಕೂಡಿ ಕೊಂಡಿಪ್ಪ**
**ನಮ್ಮ ಕೂಡಲ ಸಂಗಮದೇವ.**

ಮನದಾಸೆ ಈಡೇರಲೆಂದು ಬಯಸಿ ಪೂಜೆ ಮಾಡುವದು ಹರಕೆ ಹೊತ್ತದ್ದಕ್ಕೆ ತೆರುವ ದಂಡ; ಜನರನ್ನು ಕೂಡಿಸಿ ಅತಿ ಗದ್ದಲದಿಂದ ಪೂಜೆ ಮಾಡುವದು ಡಂಭಾಚಾರದ ಭಕ್ತಿ; ಆದ್ದರಿಂದ ಬಯಸದೆ; ಜನರನ್ನು ಕಲೆ ಹಾಕದೆ, ಸಮದೃಷ್ಟಿಯಿಂದ ಬಂದ ಪ್ರಸಂಗಗಳನ್ನು ಕುರಿತು ವಿಚಾರ ಮಾಡಿ ತಿಳಿದುಕೊಂಡು ನಡೆದರೆ; ಪೂಜೆ ಮಾಡಿದರೆ ಕೂಡಲ ಸಂಗಮ ದೇವನು ಅವರ ಮಿತ್ರನಾಗುತ್ತಾನೆ.

**೨೨೯ ಹಡೆದೊಡವೆ-ವಸ್ತುವನು ವೃಷಭಕ್ತರಿಗಲ್ಲದೆ**
**ಕಡ ಬಡ್ಡಿಯ ಕೊಡಲಾಗದು.**
**ಬಂದರೊಂದು ಲೇಸು, ಬಾರದಿದ್ದರೆರಡು ಲೇಸು !**
**ಅಲ್ಲಿದ್ದರೆಯೂ ಲಿಂಗಕ್ಕೆ ಬೋನ, ಇಲ್ಲಿದ್ದರೆಯೂ**
**ಲಿಂಗಕ್ಕೆ ಬೋನ.**
**ಲಿಂಗದೊಡವೆ ಲಿಂಗಕ್ಕೆ ಸಾರಿತ್ತಾಗಿ**
**ಬಂದಿತ್ತೆಂಬ ಪರಿಣಾಮವಿಲ್ಲ, ಬಾರದೆಂಬ ದುಃಖವಿಲ್ಲ.**
**ಇದು ಕಾರಣ, ಕೂಡಲ ಸಂಗಮದೇವಾ,**
**ನಿಮ್ಮ ಶರಣರಿಗಲ್ಲದೆ ಕಡ ಬಡ್ಡಿಯ ಕೊಡಲಾಗದು.**

ಶಿವಾನುಗ್ರಹದಿಂದ ಪಡೆದ ಆಭರಣ, ದುಡ್ಡು ವಸ್ತುಗಳನ್ನು ಹರ ಭಕ್ತರನ್ನುಳಿದ ಅನ್ಯ ಜನರಿಗೆ ಎರವಾಗಿ-ಬಡ್ಡಿಗೆ ಕೊಡಬಾರದು. ಹರ ಭಕ್ತರಿಗೆ ಕೊಟ್ಟದ್ದು ಬಂದರೂ ಬಾರದಿದ್ದರೂ ಸಮ. ಅದು ಶಿವಾರ್ಪಿತ.

ಕಾರಣ ಪಾಪ ಪುಣ್ಯಗಳ ಬಾಧೆಯಿಲ್ಲದೆ ನಿಶ್ಚಿಂತರಾಗಿ ಬಾಳಲು ಒಂದೇ ಹಾದಿ- ಅದು ಶರಣರ ದಾಸೋಹಕ್ಕೆ ದ್ರವ್ಯದ ಸದುಪಯೋಗವಾದರೆ ಸಾಧ್ಯ.

**೨೩೦ ಓಡಲಾರದ ಮೃಗವು ಸೊಣಗಂಗೆ ಮಾಂಸವ ಕೊಡುವಂತೆ-**
**ಮಾಡಲಾಗದು ಭಕ್ತನು, ಕೇಳಲಾಗದು ಜಂಗಮ.**
**ಹಿರಿಯರು ನರಮಾಂಸವ ಭುಂಜಿಸುವರೆ?**
**ತನುವುಕ್ಕಿ ಮನವುಕ್ಕಿ ಮಾಡಬೇಕು ಭಕ್ತಿಯ,**
**ಮಾಡಿಸಿಕೊಳ್ಳಬೇಕು ಜಂಗಮ, ಕೂಡಲ ಸಂಗಮದೇವಾ·**

ನಿತ್ರಾಣವಾದ ಚಿಗರೆಯು ಓಡಲಾರದೆ ನಾಯಿಯ ಬಾಯಿಗೆ ತುತ್ತಾಗುವ ಹಾಗೆ ಭಕ್ತನು ಎಂದಿಗೂ ರಣಹೇಡಿಯಾಗಬಾರದು; ಜಂಗಮನು ಹೇಡಿಯ ಮೇಲೆ ಕೈಮಾಡಿ ಕಾಡಿ ಸುಲಿಯುವ ಸುಲಿಗೆಗಾರನಾಗಬಾರದು. ದೊಡ್ಡವರು ಎಂದಾದರೂ ಹೀನಾಚಾರ ಮಾಡುತ್ತಾರೆಯೆ? ಅಂತಃಪ್ರೇರಣೆ ಉಕ್ಕಿ ಹರಿದು ಭಕ್ತನು ಜಂಗಮದಾಸೋಹ ಮಾಡಿಸಬೇಕು. ಅದನ್ನು ಪ್ರಫುಲ್ಲ ಮನಸ್ಸಿನಿಂದ ಜಂಗಮನು ಸ್ವೀಕರಿಸಬೇಕು.

**೨೩೧ ಬಂದುದ ಕೈಕೊಳ್ಳಬಲ್ಲರೆ ಅದು ನೇಮ;**
**ಇದ್ದುದ ವಂಚನೆ ಮಾಡದಿದ್ದರೆ ಅದು ನೇಮ;**
**ನಡೆದು ತಪ್ಪದಿದ್ದರೆ ನೇಮ, ನುಡಿದು ಹುಸಿಯದಿದ್ದರೆ ನೇಮ.**
**ನಮ್ಮ ಕೂಡಲ ಸಂಗನ ಶರಣರು ಬಂದರೆ**
**ಒಡೆಯರಿಗೊಡವೆಯ ನೊಪ್ಪಿಸುವುದೇ ನೇಮ.**

ಕಾರ್ಯಗಳಲ್ಲಿ ಬಂದ ಕಷ್ಟಗಳನ್ನು ಎದುರಿಸಿ ಕಾರ್ಯವನ್ನು ಸಾಗಿಸಿಕೊಂಡು ಹೋಗುವ ಜಾಣತನವೇ ನೇಮ. ಜಂಗಮರು ಬಂದಾಗ ಮನೆಯಲ್ಲಿದ್ದ ಅಡಿಗೆಯನ್ನು ನಿರ್ವಂಚನೆಯಿಂದ ಉಣಬಡಿಸುವದೇ ನೇಮ. ಮಾತು ಕೊಟ್ಟು ಮರೆಯದಿದ್ದರೆ, ಒಂದು ತತ್ವವನ್ನನುಸರಿಸಿ ನಡೆದು ಬೇರೊಂದು ತತ್ವಕ್ಕೆ ಮನ ಕೊಡದಿದ್ದರೆ ಅದು ನೇಮ. ಕಾರಣ ಶರಣರು ಬಂದಾಗ ಅವರ ಸೇವೆಗೆ ಈ ದೇಹ ಒಪ್ಪಿಸುವದೇ ಒಂದು ವ್ರತ.

೨೩೨ ಹಾಲ ನೇಮ, ಹಾಲ ಕೆನೆಯ ನೇಮ;
ಕೆನೆತಪ್ಪಿದ ಬಳಿಕ ಕಿಚ್ಚಡಿಯ ನೇಮ;
ಬೆಣ್ಣೆಯ ನೇಮ, ಬೆಲ್ಲದ ನೇಮ!
ಅಂಬಲಿಯ ನೇಮದವರನಾರನೂ ಕಾಣೆ.
ಕೂಡಲ ಸಂಗನ ಶರಣರಲ್ಲಿ
ಅಂಬಲಿಯ ನೇಮದಾತ ಮಾದಾರ ಚನ್ನಯ್ಯ.

ಪರಿಪರಿ ಪಕ್ವಾನ್ನಗಳನ್ನು ದೇವರಿಗೆ ನೈವೇದ್ಯ ಮಾಡಿಸುವ ಬಾಯ ಚಪಲತೆಯ ನೇಮ ಮಾಡುತ್ತಾರೆ. ಆದರೆ ಅನಂತ ಕಾಲವೂ ಅನಗಾಲವೂ ಅಂಗ ರಕ್ಷಣೆ ಮಾಡುವ ಅಂಬಲಿಯ ನೈವೇದ್ಯದ ನೇಮವನ್ನು ಮಾದಾರ ಚನ್ನಯ್ಯನ ಹೊರತು ಯಾರೂ ಮಾಡುವದಿಲ್ಲ. ಅವನದೇ ಶ್ರೇಷ್ಠ ನೇಮ.

೨೩೩ ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ;
ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ!
ಮಾಡುವ ನೀಡುವ ನಿಜಗುಣವುಳ್ಳರೆ
ಕೂಡಿ ಕೊಂಬ ನಮ್ಮ ಕೂಡಲ ಸಂಗಮದೇವ.

ಕುಹಕ ಮನಸ್ಸಿನಿಂದ ನಿರುತ್ಸಾಹದಿಂದ ಸೇವೆ ಮಾಡಿ, ಕೈಯಲ್ಲಿ ಅಮೃತ ಹಿಡಿದು ಹೃದಯದಲ್ಲಿ ವಿಷ ತುಂಬಿಕೊಂಡು ಜಂಗಮರಿಗೆ ದಾಸೋಹ ಮಾಡಿಸಿ ಈ ಜನರು ಕೆಟ್ಟರು. ಸೇವೆ ಮಾಡಬೇಕೆಂಬ ಉತ್ಸಾಹ, ಉಣಿಸಬೇಕೆಂಬ ಸತ್ಯಾಪೇಕ್ಷೆ ಇದ್ದರೆ ಅವರ ಸ್ನೇಹಿತನಾಗಿ ಬರುತ್ತಾನೆ ಕೂಡಲ ಸಂಗಮ ದೇವನು.

೨೩೪ ಮಾಡಿದೆನೆಂಬುದು ಮನದಲ್ಲಿ ಹೊಳೆದರೆ
ಏಡಿಸಿ ಕಾಡಿತ್ತು ಶಿವನ ಡಂಗುರ!
ಮಾಡಿದೆನೆನ್ನದಿರಾ ಲಿಂಗಕ್ಕೆ, ಮಾಡಿದೆನೆನ್ನದಿರಾ ಜಂಗಮಕ್ಕೆ.
ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ,
ಬೇಡಿದ್ದನೀವ ಕೂಡಲ ಸಂಗಮದೇವ.

ದಾನ ಧರ್ಮ ಮಾಡಿದೆವೆಂಬ ಭಾವನೆ ಮನದಲ್ಲಿ ಬಂದರೆ ಸಾಕು, ಪುಣ್ಯವೆಲ್ಲ ನಾಶವಾಗಿ ಪಾಪದ ಪಂಜು ಬೆನ್ನುಹತ್ತಿ ಕಾಡಿಸುತ್ತದೆ. ಕಾರಣ ಲಿಂಗಕ್ಕೆ ಪೂಜೆ ಮಾಡಿದೆ, ಜಂಗಮರಿಗೆ ಆರೋಗಣೆ ಮಾಡಿಸಿದೆ ಎಂದು ಕನಸು ಮನಸಿನಲ್ಲಿಯೂ ಅನ್ನಬೇಡ. ನಿರ್ಮಲ ಚಿತ್ತದಿಂದ ಲಿಂಗಾರ್ಚನೆ ಜಂಗಮಾರ್ಚನೆ ಮಾಡಿದವರಿಗೆ ಕೂಡಲ ಸಂಗಮ ದೇವರು ಅವರು ಬೇಡಿದ್ದನ್ನೆಲ್ಲ ಕೊಡುತ್ತಾನೆ.

**೨೩೫ ಕಳ ಬೇಡ, ಕೊಲಬೇಡ; ಹುಸಿಯ ನುಡಿಯಲು ಬೇಡ;**
**ಮುನಿಯ ಬೇಡ ಅನ್ಯರಿಗೆ ಅಸಹ್ಯಪಡಬೇಡ;**
**ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ.**
**ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ,**
**ಇದೇ ನಮ್ಮ ಕೂಡಲ ಸಂಗಮದೇವರ ನೊಲಿಸುವ ಪರಿ!**

ಯುದ್ಧಮಾಡಿ ಹತ್ಯಾಕಾಂಡ ಮಾಡಬೇಡ; ಸುಳ್ಳು ನುಡಿದು ಮೋಸಗಳನ್ನು ಮಾಡಬೇಡ; ಎರಡನೇಯವರ ಮೇಲೆ ಸಿಟ್ಟಾಗಬೇಡಾ; ಬಡವರನ್ನು ಕಂಡು ಮುಖ ತಿರುವಬೇಡ; ಸಿರಿವಂತರನ್ನು ಕಂಡು ಹೊಟ್ಟೆಕಿಚ್ಚು ಮಾಡಬೇಡ. ನಿನ್ನನ್ನು ನೀನೇ ಹೊಗಳಿಕೊಂಡು ವಿರೋಧಿಗಳನ್ನು ಕಂಡು ತಾತ್ಸಾರ–ನಿಂದೆ ಮಾಡಬೇಡ. ಹೀಗೆ ಮಾಡದಿರುವದೇ ಅಂತರಂಗ ಸ್ವಚ್ಛವಾಗಲು ದಾರಿ. ಅದುವೇ ಸಮಾಜ ಸುಧಾರಿಸುವ ರೀತಿ. ಈ ಕಾರ್ಯವೇ ಕೂಡಲ ಸಂಗಮ ದೇವನನ್ನು ಒಲಿಸಿಕೊಳ್ಳುವ ಹಾದಿ.

**೨೩೬ ಕೆಡೆ ನಡೆಯದೆ, ಕೆಡೆ ನುಡಿಯದೆ, ಅನ್ಯರ**
**ಪ್ರತಿಪಾದಿಸದಿದ್ದರೆ,**
**ಏನ ಮಾಡನಯ್ಯಾ ಲಿಂಗವು, ಏನ ಕೊಡನಯ್ಯಾ ತಾನು?**
**ಏನ ಬೇಡಿದುದ ನೀವನಾಗಿ ನಂಬಿಗೆಯುಳ್ಳ ಶಿವಭಕ್ತಂಗೆ,**
**ಇದೇ ದಿಬ್ಯ ಕೂಡಲ ಸಂಗಮದೇವಾ.**

ಕೆಟ್ಟ ರೀತಿಯಲ್ಲಿ ನಡೆಯದೆ, ಹೊಲಸು ಮಾತುಗಳನ್ನಾಡದೆ ಮತು ಪರರ ಪಕ್ಷ ಕಟ್ಟಿಕೊಂಡು ವಾದ ಹಾಕದಿದ್ದರೆ ಕರುಣಾಮಣಿಯಾದ್ದ

ಲಿಂಗವು ಭಕ್ತರ ಆಳಾಗಿ ದುಡಿಯುತ್ತಾನೆ. ಭಕ್ತರ ಸುಖಕ್ಕಾಗಿ ಕಲ್ಯಾಣಕ್ಕಾಗಿ ಸ್ವರ್ಗವನ್ನೇ ಕಲ್ಪಿಸಿ ಕೊಡುತ್ತಾನೆ. ಇದುವೇ ಶಿವಭಕ್ತರನ್ನು ವರೆಹಚ್ಚಿ ನೋಡುವ ರೀತಿ ಕೂಡಲ ಸಂಗಮ ದೇವಾ.

**೨೩೭ ಸ್ವಾಮಿ ಭೃತ್ಯ ಸಂಬಂಧಕ್ಕೆ ಆವುದು ಪರ ವೆಂದರೆ;**
**ದಿಟವ ನುಡಿವುದು, ನುಡಿದಂತೆ ನಡೆವುದು.**
**ನುಡಿದು ಹುಸಿವ, ನಡೆದು ತಪ್ಪುವ**
**ಪ್ರಪಂಚಿಯು ನೊಲ್ಲ ಕೂಡಲ ಸಂಗಮದೇವ!**

ಯಜಮಾನ ಮತ್ತು ಸೇವಕನ ಸಂಬಂಧ ನಿಕಟವಾಗಿ ಬೆಳೆದು ತಂದೆ ಮಗನ ಭಾವ ಬೆಳೆಯಬೇಕಾದರೆ ಸತ್ಯವನ್ನು ಹೇಳುವದು, ಖರೆ ಮಾತನಾಡುವದು, ಆಡಿದಂತೆ ಕೆಲಸ ಮಾಡಿ ತೋರಿಸುವದು. ಆದರೆ ಮಾತು ಕೊಟ್ಟು ಸುಳ್ಳು ಬೀಳುವ, ನಡೆದು ತಿರುಗಿ ಬೀಳುವಂಥಾ ಬೆಂದ ಬಾಗರನ್ನು ಕೂಡಲ ಸಂಗಮ ದೇವನು ಮನ್ನಿಸುವದಿಲ್ಲ.

**೨೩೮ ಸತ್ಯವುಳ್ಳ ಭಂಡವ ತುಂಬುವುದಯ್ಯಾ!**
**ಸಯಿಧಾನ ಸಯಿಧಾನವಯ್ಯಾ!**
**ಮನದಾರೆವಟ್ಟಲು!**
**ಕೂಡಲ ಸಂಗನ ಶರಣರು ಹಿಡಿಯದ ಭಂಡವನು**
**ಆರಾದೊಡಾಗಲಿ ಹೋಗಲೀಯರಯ್ಯಾ.**

ಕೂಡಲ ಸಂಗಮ ದೇವನ ಶರಣರು ಕೃಪೆಮಾಡಿ ಮುಟ್ಟದ ದೇಹವು ಆಳುವ ಅರಸನದೇ ಇರಲಿ, ಬಡ ನರ ಪ್ರಾಣಿಯದೇ ಇರಲಿ ಅದಕ್ಕೆ ಮೋಕ್ಷವಿಲ್ಲ. ಆದ್ದರಿಂದ ಸತ್ಯಾತ್ಮ ಲಿಂಗವು ಮನೋಭೂಮಿಕೆಯಲ್ಲಿ ತೊಳಗಿ ಬೆಳಗಿ ಹೃದಯದಲ್ಲಿ ನೆಲೆ ಮಾಡಿ ದೇಹ ಪವಿತ್ರಗೊಳಿಸುವದೇ ಮೋಕ್ಷಕ್ಕೆ ಮಾರ್ಗ ಕಂಡೆಯಾ. ಕಾರಣ ಆ ಲಿಂಗವನ್ನು ಒಲಿಸಿಕೋ.

**೨೩೯ ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿಭೋ!**
**ಸತ್ಯವ ನುಡಿವುದೇ ದೇವಲೋಕ; ಮಿಥ್ಯವ ನುಡಿವುದೇ ಮರ್ತ್ಯಲೋಕ;**
**ಆಚಾರವೇ ಸ್ವರ್ಗ, ಅನಾಚಾರವೇ ನರಕ**
**ಕೂಡಲ ಸಂಗಮದೇವಾ ನೀವೇ ಪ್ರಮಾಣು.**

ದೇವಲೋಕ ಭೂಲೋಕ ಎಂದು ಎರಡು ಬೇರೆಬೇರೆ ಲೋಕಗಳಿಲ್ಲ. ಸತ್ಯ ಮಾತನಾಡುವದೇ ದೇವಲೋಕ. ಸುಳ್ಳು ಹೇಳುವದು ಮರ್ತ್ಯ ಲೋಕ. ಸದಾಚಾರ ಸಂಪನ್ನನಾಗಿರುವ ನೆಲವೇ ಸ್ವರ್ಗ, ದುರಾಚಾರಿ ದುರಹಂಕಾರಿಯಾಗಿ ತುಳಿವ ನೆಲವೆ ನರಕ. ಈ ಮಾತು ನಿಜವೆನ್ನುವ ದಕ್ಕೆ ಕೂಡಲ ಸಂಗಮ ದೇವನೆ ಸಾಕ್ಷಿ.

**೨೪೦ ಪುಣ್ಯಪಾಪವೆಂಬುವು ತಮ್ಮಿಷ್ಟ ಕಂಡಿರೇ;**
**'ಅಯ್ಯಾ, ಎಂದರೆ ಸ್ವರ್ಗ; 'ಎಲವೋ ಎಂದರೆ ನರಕ;**
**"ದೇವಾ, ಭಕ್ತಜಯಾ ಜೀಯಾ" ಎಂಬ ನುಡಿಯೊಳಗೆ**
**ಕೈಲಾಸ ವಿದ್ದುದೇ, ಕೂಡಲ ಸಂಗಮದೇವಾ.**

ಪುಣ್ಯ ಮತ್ತು ಪಾಪಗಳೆಂಬುವು ತಮ್ಮ ಇಚ್ಛೆಗನುಸರಿಸಿ ನಡೆಯು ತ್ತವೆಯೇ ವಿನಃ ನಮ್ಮ ಬಯಕೆಯ ಬಾಳೆಯಾಗುವದಿಲ್ಲ. ನಯ ಭಯ ವಿನೀತನಾಗಿ ನುಡಿವವನ ಗುಡಿಸಲು ಸ್ವರ್ಗ. ದರ್ಪ, ಜುಲುಮೆ, ದುಷ್ಟ ನಡೆನುಡಿಗಳಾಡಿಕೊಂಡಿರುವ ಮಹಲು ಮಹಡಿಗಳು ನರಕ. "ದೇವಾ ಭಕ್ತ ಜಯಾ ಜೀಯಾ'' ಎಂಬುವ ಮಾತಿನಲ್ಲಿ ಕೈಲಾಸದ ಅಮೃತತ್ವದ ಸಿರಿ ತುಂಬಿದೆ;ಕೂಡಲ ಸಂಗಮ ದೇವಾ.

**೨೪೧ "ಏನು ಬಂದಿರಿ ಹದುಳವಿದ್ದರೆ?" ಎಂದರೆ**
**ನಿಮ್ಮ ಮೈಸಿರಿ ಹಾರಿಹೋಹುದೆ?**
**"ಕುಳ್ಳಿರೆಂ"ದರೆ ನೆಲ ಕುಳಿಹೋಹುದೆ?**
**ಒಡನೆ ನುಡಿದರೆ ಶಿರ-ಹೊಟ್ಟೆಯೊಡೆವುದೆ?**

**ಕೊಡಲಿಲ್ಲದಿದ್ದರೊಂದು ಗುಣವಿಲ್ಲದಿರ್ದಡೆ,**
**ಕೆಡಹಿ ಮೂಗ ಕೊಯ್ಯದೆ ಮಾಬ್ಬನೆ ಕೂಡಲ**
**ಸಂಗಮದೇವನು ?**

ಮನೆಗೆ ಬಂದ ಜಂಗಮರೇ ಆಗಲಿ ಶರಣರೇ ಆಗಲಿ ಬೇರೆ ಯಾರೆ ಆಗಲಿ ಅವರಿಗೆ "ಏನು ಎಲ್ಲಿಂದ ಬಂದಿರಿ ಎಲ್ಲಾ ಕ್ಷೇಮವೆ" ಎಂದು ಕೇಳಿದರೆ ನಿಮ್ಮ ಕಿಮ್ಮತ್ತು ಕಡಿಮೆಯಾಗುತ್ತದೆಯೇ? ಕುಳಿತುಕೊಳ್ಳಿರೆಂದು ಹೇಳಿದರೆ ನೆಲ ಹಾಳು? ಬೀಳುತ್ತದೆಯೆ? ಕೂಡಲೆ ಬಂದ ಅತಿಥಿಗಳೊಡನೆ ಮಾತಾಡಿದರೆ ನಿಮ್ಮ ತಲೆ-ಒಡಲು ಸಿಡಿದು ಹೋಗುತ್ತದಲ್ಲವೆ. ಹೋಗಲಿ ಏನೂ ಕೊಡದಿದ್ದರೂ ಚಿಂತೆಯಿಲ್ಲ ಒಂದು ಉತ್ತಮ ಮಾತನ್ನಾಡದಿದ್ದರೆ ಅವರ ಮೂಗು ಕೊಯ್ಯದೇ ಬಿಡುವದಿಲ್ಲ ಕೂಡಲಸಂಗಮದೇವನು.

**೨೪೨ ಸಂಸಾರದಲ್ಲಿ ಹುಟ್ಟಿ ಮತ್ತೊಂದ ಬಯಸಲೇಕಯ್ಯಾ?**
**ನಗುವುದು, ನಡಿವುದು ಶಿವಭಕ್ತರೊಡನೆ.**
**ಸುಮ್ಮಾನ ಹಮ್ಮು ಬಿಮ್ಮಾಗಿರಲೇಕಯ್ಯಾ?**
**(ಶ್ಲೋಕ) ಅಭ್ಯಾಸಸ್ಯ ವಿಹೀನಸ್ಯ । ತಸ್ಯಜನ್ಮ**
**ನಿರರ್ಥಕಂ ।**
**ಗುರೋರಪಿ ಸಮಂ ಹಾಸ್ಯಂ । ಕರ್ತವ್ಯಂ ಕುಟಿಲಂವಿನಾ॥**
**ನಮ್ಮ ಕೂಡಲ ಸಂಗನ ಶರಣರೊಡನೆ**
**ಮನದೆರೆದು ಮಾತನಾಡುವುದಯ್ಯಾ.**

ಶಿವ ಜನ್ಮದಲ್ಲಿ ಶಿವ ಪ್ರಪಂಚದಲ್ಲಿ ಹುಟ್ಟಿಬಂದ ಕಾರಣ ಅನ್ಯವಿಷಯ ಗಳನ್ನೇಕೆ ಅಪೇಕ್ಷೆ ಮಾಡಲಿ. ಸರಸವಾಡುವದು-ನುಡಿಯುವದು ಎಲ್ಲವೂ ಶಿವಭಕ್ತರ ಸಂಗಡವೇ. ಆತ್ಮನನ್ನು ಕುರಿತು ವಿಚಾರ ಮಾಡದವನ ಜೀವನ ವ್ಯರ್ಥ; ಕರ್ತವ್ಯದಲ್ಲಿ ಒಟ್ಟು, ಕುಟಿಲತನ ವಿಲ್ಲದ ಹಾಸ್ಯವನ್ನು ಗುರುಗಳೊಂದಿಗೂ ಸಹ ಮಾಡಬಹುದು. ಆದ್ದರಿಂದ ಕೂಡಲ ಸಂಗಮದೇವನ ಶರಣ ಹತ್ತಿರ ಬಿಚ್ಚುಮನದಿಂದ ಮಾತನಾಡುವದೆ ಒಂದು ಸೌಭಾಗ್ಯ.

೨೪೩ ಭಕ್ತಿಯೆಂಬ ನಿಧಾನವ ಸಾಧಿಸುವರೆ,
ಶಿವಪ್ರೇಮವೆಂಬ ಅಂಜನವ ನೆಚ್ಚಿಕೊಂಬುದು.
ಭಕ್ತನಾದವಂಗೆ ಇದೆ ಪಥವಾಗಿರಬೇಕು.
ನಮ್ಮ ಕೂಡಲ ಸಂಗನ ಶರಣರ ಭಾವಗಜ
ವೈದ್ಯನಯ್ಯಾ.

ಭಕ್ತಿಯೆಂಬ ಹೂಳಿಟ್ಟ ಧನವನ್ನು ವಶಮಾಡಿಕೊಳ್ಳಬೇಕಾದರೆ ಶಿವನ ಪ್ರೇಮವು ಅಂಜನವೆಂದರಿತು ವಿಶ್ವಾಸ ವಿಡಬೇಕು. ಭಕ್ತನಾದವಗೆ ಇದುವೇ ಮಾರ್ಗವಾಗಿರಬೇಕು. ಆದ್ದರಿಂದ ಕೂಡಲ ಸಂಗನ ಶರಣರ ಅನುಭವ ಭವಬಂಧನ ಹರಿಯಲು ಶ್ರೇಷ್ಠ ಔಷಧಿಯಾಗಿದೆ.

೨೪೪ ಕಂಡ ಭಕ್ತರಿಗೆ ಕೈಮುಗಿವಾತನೇ ಭಕ್ತ:
ಮೃದುವಚನವೇ ಸಕಲಜಪಂಗಳಯ್ಯಾ,
ಮೃದುವಚನವೇ ಸಕಲತಪಂಗಳಯ್ಯಾ,
ಸದುವಿನಯವೇ ಸದಾಶಿವನೊಲುಮೆಯಯ್ಯಾ,
ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯಾ.

ಜೀವನದಲ್ಲಿ ತಾಗಿ ಬಾಗಿ ಬಾಳಿ ಎದುರಿಗೆ ಬಂದ ಭಕ್ತರಿಗೆ ಕೈಮುಗಿದವನೇ ಭಕ್ತ. ಅವನಿಗೆ ಹಿತವಾಗಿ ಮಿತವಾಗಿ ಪರರ ಮನ ನೋಯದಂತೆ ಮಾತನಾಡುವದೇ ಜಪ-ತಪಗಳೆರಡೂ. ನಯ-ವಿನಯಗಳಿಂದ ನಡೆವುದೆ ಸದಾಶಿವನ ಪ್ರೀತಿ ಸಂಪಾದಿಸುವ ಮಾರ್ಗ. ಕೂಡಲ ಸಂಗಮ ದೇವನು ಇಂತಹರನ್ನು ಬಿಟ್ಟು ಬೇರೆಯವರನ್ನು ಕರುಣಿಸಲಾರನು.

೨೪೫ "ಇತ್ತ ಬಾರಯ್ಯಾ ಇತ್ತ ಬಾರಯ್ಯಾ" ಎಂದು
ಭಕ್ತರೆಲ್ಲರೂ ಕೂರ್ತು ಹತ್ತೆ ಕರೆಯುತಿರೆ.
ಮತ್ತೆ ಕೆಲಕ್ಕೆ ಹೋಗಿ, ಶರಣೆಂದು ಹಸ್ತಬಾಯನೆ ಮುಚ್ಚಿ,
ಕಿರಿದಾಗಿ ಭೃತ್ಯಾಚಾರವ ನುಡಿದು,
ವಿನಯವಧ್ಯಾನವುಳ್ಳರೆ
ಎತ್ತಿಕೊಂಬನಯ್ಯಾ ಕೂಡಲ ಸಂಗಮದೇವ
ಪ್ರಮಥರ ಮುಂದೆ.

ನಿನ್ನ ವಿನಯ ಗುಣ ಕಂಡು ಭಕ್ತರೆಲ್ಲ ಅತಿ ಪ್ರೇಮದಿಂದ ತಮ್ಮ ಹತ್ತಿರ ಇಲ್ಲಿ ಮೇಲೆ ಬಾ ಎಂದು ಕರೆಯುವಾಗ ನೀನು ಅವರ ಸಮೀಪ ವಾಗಿ ಕೆಳಗೆ ನಿಂತು ನಮಸ್ಕಾರ ಮಾಡಿ ನಮ್ಮ ದೀನಸೇವೆಯನ್ನು ಕೋರಿ ದರೆ ಕೂಡಲಸಂಗಮದೇವನು ಪ್ರಮಥರ ಮುಂದೆ ನಿಮ್ಮನ್ನು ಅಪ್ಪಿಕೊಳ್ಳು ತ್ತಾನೆ.

**೨೪೬ ಭಕ್ತ ಭಕ್ತನ ಮನೆಗೆ ಬಂದರೆ ಭೃತ್ಯಾಚಾರವ ಮಾಡಬೇಕು.:**

**ಕರ್ತನಾಗಿ ಕಾಲತೊಳೆಯಿಸಿಕೊಂಡರೆ,**
**ಹಿಂದೆ ಮಾಡಿದ ಭಕ್ತಿಗೆ ಹಾನಿ!**
**ಲಕ್ಷಗಾವುದ ದಾರಿಯ ಹೋಗಿ**
**ಭಕ್ತನು ಭಕ್ತನ ಕಾಂಬುದು ಸದಾಚಾರ;**
**ಅಲ್ಲಿ ಕೂಡಿ ದಾಸೋಹವ ಮಾಡಿದರೆ**
**ಕೂಡಿ ಕೊಂಬ ನಮ್ಮ ಕೂಡಲ ಸಂಗಮದೇವನು.**

ಓರ್ವ ಭಕ್ತನ ಮನೆಗೆ ಮತ್ತೊಬ್ಬ ಭಕ್ತನು ಬಂದರೆ ಅವನು ಸಣ್ಣ ವನೇ ಇರಲಿ ದೊಡ್ಡವನೇ ಇರಲಿ ಆ ಬಂದ ಭಕ್ತನಿಗೆ ಅತಿಥಿಸತ್ಕಾರದ ಸೇವೆ ಸಲ್ಲಿಸಬೇಕು. ಹೀಗೆ ಮಾಡದೆ ತಾನೇ ದೊಡ್ಡಭಕ್ತನೆಂದು ತಿಳಿದು ಬಂದ ಭಕ್ತನ ಕೈಯಿಂದ ಪಾದ ಪೂಜೆ ಮಾಡಿಸಿಕೊಂಡರೆ ಇಷ್ಟುದಿನ ಮಾಡಿದ ಪುಣ್ಯವೆಲ್ಲ ನಾಶವಾಗುತ್ತದೆ. ಬಹೂದೂರ ನಡೆದುಕೊಂಡು ಹೋಗಿ ಅಲ್ಲಿ ಭಕ್ತನ ದರ್ಶನ ಮಾಡಿಕೊಂಡು ಆ ಭಕ್ತನೊಂದಿಗೆ ಕೂಡಿ ಕೊಂಡು ಊರ ಊಟಹಾಕಿಸಿದರೆ ಕೂಡಲಸಂಗಮದೇವನು ಅವರ ಭಕ್ತಿಗೆ ಮೆಚ್ಚಿ ಮುಕ್ತಿ ಫಲ ಕೊಡುತ್ತಾನೆ.

**೨೪೭ ದಯವಿಲ್ಲದ ಧರ್ಮವದಾವುದಯ್ಯಾ?**
**ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ;**
**ದಯವೇ ಧರ್ಮದ ಮೂಲವಯ್ಯಾ**
**ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯಾ.**

ಪ್ರಾಣಿದಯೆ ಭೂತಾನುಕಂಪವಿಲ್ಲದ ಧರ್ಮವು ಯಾವುದೂ ಇಲ್ಲ. ಸಮಾಜ ಧರ್ಮಕ್ಕೆ ಮಾನವ ಧರ್ಮಕ್ಕೆ ಮೂಲ ಮಂತ್ರವುದಯವೇ. ಪರರ ದುಃಖ ಕಂಡು ಮರುಗುವ ಬುದ್ಧಿ-ದಯೆ ಎಲ್ಲ ಪ್ರಾಣಿಗಳಿಗೂ ಅವಶ್ಯ; ನಿರ್ದಯಿಗಳನ್ನು ಕೂಡಲ ಸಂಗಮ ದೇವನು ನರಕದಲ್ಲಿ ಚೆಲ್ಲುತ್ತಾನೆ.

**೨೪೮ ತನಗೆ ಮುನಿದವರಿಗೆ ತಾ ಮುನಿಯಲೇಕಯ್ಯಾ?**
**ತನಗಾದ ಆಗೇನು? ಅವರಿಗಾದ ಚೇಗೇನು?**
**ತನುವಿನ ಕೋಪ ತನ್ನ ಹಿರಿಯತನದ ಕೇಡು!**
**ಮನದ ಕೋಪ ತನ್ನರುಹಿನ ಕೇಡು!**
**ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ**
**ನೆರೆಮನೆಯ ಸುಡದು, ಕೂಡಲ ಸಂಗಮದೇವಾ!**

ತನ್ನ ಮೇಲೆ ಸಿಟ್ಟಾದವರಿಗೆ, ಕೇಡು ಬಗೆದವರಿಗೆ ತಾನೇಕೆ ಅವರ ಮೇಲೆ ಸಿಟ್ಟಾಗಬೇಕು, ಅವರಿಗೆ ಕೆಡಕು ಬಯಸಬೇಕು? ಅದರಿಂದ ಆಗುವದೂ ಹೋಗುವದೂ ಏನಿಲ್ಲ. ಸಿಟ್ಟೆಂಬುದು ಅವನ ಹಿರಿತನ ಕೊಂದು ಕುಂದು; ಅವನ ತಿಳುವಳಿಕೆಗೆ ಕತ್ತಲೆ ಕವಿಸುವ ರಾಹು, ಕೇತು. ಕಾರಣ ಈ ಮನೆಯ ಬೆಂಕಿ ಮನೆಯನ್ನಷ್ಟೇ ಸುಡುತ್ತದೆ. ಪರರಿಗೆ ತೊಂದರೆಕೊಡುವದಿಲ್ಲ. ಎಚ್ಚರವಾಗಿರುವದು ಲೇಸು.

**೨೪೯ ಅರ್ಥಕ್ಕೆ ತಪ್ಪಿದರೇನು? ಪ್ರಾಣಕ್ಕೆ ತಪ್ಪಿದರೇನು?**
**ಅಭಿಮಾನಕ್ಕೆ ತಪ್ಪಿದರೇನು?**
**ಶರಣರು ಶರಣರಲ್ಲಿ ಗುಣವನರಸುವರೆ?**
**ಕೂಡಲ ಸಂಗನ ಶರಣರು ನೊಂದು ಸೈರಿಸಬೇಕು.**

ಧನ ಕಳೆದು ಹೋಗಿ ಬಡವನಾದರೇನು? ಅಭಿಮಾನ ಶೂನ್ಯ ಮಾನವನಾದರೇನು? ಪ್ರಾಣ ಹೋದರೇನು? ಆದರೆ ಶರಣರು ಶರಣರಲ್ಲಿ ಹಿರಿ-ಕಿರಿ, ಮೇಲು ಕೀಳೆಂಬ ಗುಣಗಳನ್ನು ಹುಡುಕುವುದು ವಿಹಿತವೆ? ಈ ಕೃತ್ಯವನ್ನು ಕೂಡಲ ಸಂಗಮ ದೇವನ ಶರಣರು ನೋವು ಸಹಿಸಿಕೊಂಡಾದರೂ ತಾಳ್ಮೆಯಿಂದ ನಡೆಯಬೇಕು.

# ಭಕ್ತಿಸ್ಥಲ

**೨೫೦ ಕಾಣದ ಠಾವಿನಲಿ ಜರಿದರೆಂದರೆ, ಕೇಳಿ
ಪರಿಣಾಮಿಸಬೇಕು.
ಅದೇನು ಕಾರಣ? ಕೊಳ್ಳದೆ ಕೊಡದೆ ಅವರಿಗೆ
ಸಂತೋಷವಹುದಾಗಿ !
ಎನ್ನ ಮನದ ತದ್‌ದ್ವೇಷವಳಿದು, ನಿಮ್ಮ ಶರಣರಿಗೆ
ಶರಣೆಂಬುದ ಕರುಣಿಸು, ಕೂಡಲ ಸಂಗಮದೇವಾ.**

ಪರವೂರಲ್ಲಿ ಯಾರಾದರೂ ಹಳಿದರೆ ಅದನ್ನು ಕೇಳಿ ಸಿಟ್ಟಾಗದೆ ಶಾಂತರೀತಿಯಿಂದ ಇದ್ದು ಜನರೊಂದಿಗೆ ಮೊದಲಿನ ಹಾಗೆಯೇ ವರ್ತಿಸಬೇಕು. ಅದು ಯಾವ ಕಾರಣಕ್ಕೂ ಆ ನಿಂದಕರಿಗೆ ನಾನೇನೂ ಕೊಡದಿದ್ದರೂ ಸಂತೋಷವಾಗುತ್ತದೆ. ಹೀಗೆ ನನ್ನ ಮನಸ್ಸಿನ ಉದ್ವೇಗ-ಅಸೂಯೆ ಕಡಿದುಹೋಗಿ ನಿನ್ನ ಶರಣರ ಚರಣಗಳಿಗೆ ನಮಸ್ಕಾರ ಮಾಡುವ ಬುದ್ಧಿ ಕೊಡು ಕೂಡಲ ಸಂಗಮದೇವಾ.

**೨೫೧ ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯಾ;
ಒರೆಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯಾ;
ಕಡಿಹಕ್ಕೆ ಬಡಿಹಕೆ ತಂದೆನ್ನ ಕಡೆಯಾಣಿಯಮಾಡಿ,
ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು,
ಕೂಡಲ ಸಂಗಮದೇವಾ!**

ನನ್ನ ಮನದ ಎಲ್ಲ ಕಿಲ್ಬಿಷಗಳನ್ನು ದೂರಮಾಡಿ ಒರೆಗಲ್ಲ ಮೇಲೆ ತಿಕ್ಕಿ ಬಣ್ಣನೋಡಲು ನನ್ನನ್ನು ಪುಟಕ್ಕೆ ಹಾಕು. ನಂತರ ಕಡಿದು ಬಡಿದು ಮೃದು ಮಾಡಿ ನಿನ್ನ ಶರಣರ ಪಾದಗಳಿಗೆ ಆಭರಣಮಾಡಿ ನನ್ನನ್ನು ಕಾಪಾಡು ಕೂಡಲ ಸಂಗಮದೇವಾ.

**೨೫೨ (ಶ್ಲೋಕ) ವೇದಾದಿ ನಾಮ ನಿರ್ನಾಮಂ| ಮಹತ್ವಂ
ಮಹದೀಶ್ವರಂ
ಗುರೋಕ್ತಮಂತ್ರಂ ಮಾರ್ಗೇಣ|ಇಷ್ಟಲಿಂಗಂ ತು ಶಂಕರೀ**

**ಎಂದುದಾಗಿ, ವಚನ ಪಾತಕವೆನ್ನ, ವಚನದೋಷಂಗಳೆನ್ನ,**
**ಕಾಡಿ ಕಾಡಿ ಕೆಡಿಸಿಹುವೆನ್ನ, ಕೂಡಲ ಸಂಗಮದೇವಾ,**
**ಅಹನ್ಮೆಂಬ ಅಹಂಕಾರವೆನ್ನ!**

ಗುರೂಪದೇಶದಂತೆ ಇಷ್ಟಲಿಂಗನನ್ನು ತಿಳಿಯದೆ, 'ನಾ'ನೆಂಬ ಅಹಂಕಾರ ಹುಟ್ಟಿ ನನ್ನ ಮಾತು ಪಾಪವಾಯಿತು; ನುಡಿ ದೋಷಯುಕ್ತವಾಯಿತು.; ನನ್ನ ಜೀವನವನ್ನೇ ಹಾಳುಮಾಡಿತು ಮಮಕಾರ ಗರ್ವ.

**೨೫೩ ಅವರಿವರೆನ್ನದೆ ಚರಣಕ್ಕೆರಗಲು ಅಯ್ಯತನವೇರಿ**
**ಬೆಬ್ಬನೇ ಬೆರೆವೆ ನಾನು; ಕೆಚ್ಚು ಬೆಳೆಯಿತ್ತಯ್ಯಾ!**
**ಆ ಕೆಚ್ಚಿಂಗೆ ಕಿಚ್ಚನಿಕ್ಕಿ ಸುಟ್ಟು ಬೆಳ್ಳುಕನ ಮಾಡಿ**
**ಬೆಳುಗಾರದಂತೆ ಮಾಡು, ಕೂಡಲ ಸಂಗಮದೇವಾ.**

ಐಯ್ಯತನಸಂಸ್ಕಾರ ವಾದಮೇಲೆ ಎಲ್ಲರೂ ನನ್ನ ಪಾದ ಮುಟ್ಟಿ ನಮಸ್ಕಾರ ಮಾಡತೊಡಗಿದರು; ಇದರಿಂದ ನನ್ನ ಹಿರಿತನದ ಶಕ್ತಿಮೂಡಿತು. ಆ ಶಕ್ತಿಗೆ ಜ್ಯೋತಿರ್ಲಿಂಗದ ಕಿಚ್ಚನಿಟ್ಟು ನನ್ನಾತ್ಮ ಸದಾ ಬೆಳಗುವಂತೆ ಮಾಡು ಕೂಡಲಸಂಗಮದೇವಾ.

**೨೫೪ ನಡೆಯೇ ಕಂಡಾ ನಂಬಿ: ನುಡಿಯಲ್ಲಾ ಉಪಚಾರ!**
**ಮಿಗಿಲೊಂದು ಮಾತು ಬಂದರೆ ಸೈರಿಸಲಾರೆನು;**
**ತುಯ್ಯಲಾದರೆ ಉಂಬೆ; ಹುಯ್ಯಲಾದರೆ ಓಡುವೆ!**
**ಆಳು ಬೇಡಿದಡೆ ಅಲ್ಲನೇನನೀ (ಯು) ನಯ್ಯಾ?**
**ಆಳಾಗಿ ಹೊಕ್ಕು ಅರಸಾಗಿ ನಡೆದರೆ**
**ಆಳಿಗೊಂಡಿತ್ತೆನ್ನ ಕೂಡಲ ಸಂಗನ ಭಕ್ತಿ!**

ನಡತೆಯನ್ನು ಕಂಡು ನಂಬಿದರೆ,ಮಾತುಗಳೆಲ್ಲ ಬರಿ ಉಪಚಾರದವೆ. ಮಾತು ಹೆಚ್ಚಾದರೆ ಸಹನೆಗೂ ಮೀರಿ ಸಿಟ್ಟು ಬರುತ್ತದೆ; ಪಾಯಸ ಉಣಬಡಿಸಿದರೆ ಊಟ ಮಾಡುತ್ತೇನೆ, ಗದ್ದಲ ಮಾಡಿ, ದುಃಖವಾಗುವಂತೆ ಮಾಡಿದರೆ ಓಡಿಹೋಗುತ್ತೇನೆ. ಮನೆಯಾಳು ಬಂದು ಬೇಡಿದರೆ ದೇವರೇನೂ ಕೊಟ್ಟಿಲ್ಲ ಎಂದು ನುಡಿದು, ಬರುವಾಗ ಆಳು-ಸೇವಕನೆಂದು ಕೆಲ

ಸಕ್ಕೆ ಸೇರಿ ಪ್ರಯೋಗದಲ್ಲಿ ಅರಸನಂತೆ ನಡೆದರೆ ಕೂಡಲಸಂಗಮನ ಭಕ್ತಿ ನನ್ನನ್ನು ಸೇವಕ ವಂಶದಲ್ಲಿಯೇ ಹುಟ್ಟಿಸುತ್ತದೆ.

೨೫೫ **ಇರಿಸಿಕೊಂಡು ಭಕ್ತರಾದರೆಮ್ಮವರು;**
**ತರಿಸಿಕೊಂಡು ಭಕ್ತರಾದರೆಮ್ಮವರು;**
**ಕೊರೆಯಿಸಿಕೊಂಡು ಭಕ್ತರಾದರೆಮ್ಮವರು;**
**ಜರೆಯಿಸಿಕೊಂಡು ಭಕ್ತರಾದರೆಮ್ಮವರು;**
**ಕೂಡಲ ಸಂಗನ ಶರಣರಿಗೆ ಮುಳಿಸತಾಳಿ**
**ಎನ್ನ ಭಕ್ತಿ ಅರೆಯಾಯಿತ್ತು!**

ಖಡ್ಗದಿಂದ ಚುಚ್ಚಿಸಿಕೊಂಡು, ಕೊಡಲಿಯಿಂದ ಕಡಿಸಿಕೊಂಡು, ಕರಗಸದಿಂದ ಕೊರೆಯಿಸಿಕೊಂಡು, ಜನರಿಂದ ನಿಂದೆ ಮಾಡಿಸಿಕೊಂಡು ನಮ್ಮವರನೇಕರು ಭಕ್ತರಾಗಿ ಬಾಳಿದರು. ಆದರೆ ಕೂಡಲ ಸಂಗಮದೇವನ ಶರಣರನ್ನು ಕಂಡು ಸಿಟ್ಟಾದ ಕಾರಣ ನನ್ನ ಭಕ್ತಿ ಕಡಿಮೆ ಯಾಯ್ತು.

೨೫೬ **ಮನಕ್ಕೆ ನಾಚದ ವಚನ, ವಚನಕ್ಕೆ ನಾಚದ ಮನ!**
**ಕುಂದು ಹೆಚ್ಚ ನುಡಿವೆ,**
**ಒಂದು ಮಾತಿನ ಗೆಲ್ಲ-ಸೋಲಕ್ಕೆ ಹಿಡಿದು ಹೋರುವೆ:**
**ಕೂಡಲ ಸಂಗನ ಶರಣರೆನ್ನಾಳ್ವರೆಂಬೆ!**

ಶುದ್ಧಮನಸ್ಸಿಗೆ ಒಪ್ಪದ ಮಾತು ಅಥವಾ ಉತ್ತಮ ನುಡಿಗೆ ನಾಚದೇ ಇದ್ದ ಮನಸ್ಸು ಕೇವಲ ದೋಷಗಳನ್ನೆಣಿಸುತ್ತ ಉಚ್ಚ-ನೀಚಗಳನ್ನೇ ಮಾತನಾಡುತ್ತದೆ. ಒಂದು ಮಾತಿನಲ್ಲಿ ಗೆಲುವಾದರೆ-ನಾನು ಆಡಿದ್ದೆಲ್ಲ ನಿಜವೆಂದು ಸೋಲನ್ನೇ ಹಿಡಿದು ಜಗಳ ಕಾಯುವೆ. ಅಲ್ಲದೆ ಕೂಡಲ ಸಂಗಮದೇವನ ಶರಣರು ನನ್ನನ್ನು ಆಳುತ್ತಾರೆಂದು ಸಾರುವೆ.

೨೫೭ **ಇಲ್ಲವೆಯ ಮೇಲೆ ಕಂಚೊಡೆದಂತೆ, ಬಡಮನವೆನ್ನ**
**ಕಾಡಿತ್ತಯ್ಯಾ;**
**ಮತಿಯಿಲ್ಲದ ಮರುಳ ನಾನಯ್ಯಾ; ಭಕ್ತಿಯಿಲ್ಲದ**
**ಬಡವ ನಾನು;**

**ನಿಮ್ಮ ನೆನಹವಿಲ್ಲದೆ ನಿರ್ಭಾಗ್ಯನಾದೆ,**
**ಎನಗೆ ನೀ ಕರುಣಿಸು, ಕೂಡಲ ಸಂಗಮದೇವಾ.**

ಏನೂ ಪಾತ್ರಗಳಿಲ್ಲವೆಂದು ಗೋಳಿಡುತ್ತಿರುವಾಗ ಇದ್ದೊಂದು ಕಂಚಿನ ಪಾತ್ರೆಯೂ ಒಡೆದು ಹೋದಂತೆ ಭಕ್ತಿಯಿಲ್ಲದ ಈ ಜಂಜಡ ಮನಸ್ಸು ಜೇರೆ ನನ್ನನ್ನು ಕಾಡುತ್ತಲಿದೆ. ಬುದ್ಧಿಯಿಲ್ಲದ ಹುಚ್ಚ ನಾನು ನಿಮ್ಮ ಧ್ಯಾನವ ಮಾಡದೆ ದುರ್ದೈವಿ ಯಾಗಿರುವೆ. ನನ್ನನ್ನು, ಕೂಡಲಸಂಗಮ ದೇವನೆ ನೀ ಕರುಣಿಸಿ ಕಾಪಾಡು

೨೫೮ **ಲಿಂಗವ ನಚ್ಚದೀ ಮನವು, ಜಂಗಮವ ನಂಬದೀ ಮನವು;**
**ಕೂಪರ ಕಂಡರೆ ಒಲ್ಲದೀ ಮನವು.**
**ಈ ಮನದ ಭ್ರಮೆಯನೆಲ್ಲವ ಮರೆಸಿ,**
**ನಿಮ್ಮ ಶರಣರಿಗೆ ಶರಣೆಂಬುದ ಕರುಣಿಸು,**
**ಕೂಡಲ ಸಂಗಮದೇವಾ.**

ಈ ತಿಳಿಗೇಡಿ ಮನಸ್ಸು ಲಿಂಗಪ್ರೇಮವನ್ನು ಮಾಡದು; ಜಂಗಮ ನನ್ನು ನಂಬದು; ಪ್ರೀತಿಸುವವರನ್ನು ಕಂಡರಂತೂ ಓಡಿ ಹೋಗುವದು. ಕಾರಣ ಈ ಅವಿವೇಕ ಮನಸ್ಸಿನ ಭ್ರಮೆಯನ್ನೆಲ್ಲ ಕಿತ್ತು ಹಾಕಿ, ಹೇ ದಯಾ ನಿಧೆ ಕೂಡಲ ಸಂಗಮದೇವನೆ ನಿನ್ನ ಶರಣರ ಸೇವೆ ಮಾಡುವಂತೆ ಕೃಪೆಮಾಡು.

೨೫೯ **ಅಸನ ಕುಂದದು, ವ್ಯಸನ ಮಾಣದು,**
**ಆರತವಡಗದು, ಜೀವಹಾರವುಡುಗದು;**
**ಮಜ್ಜನಕ್ಕೆರೆವೆನಯ್ಯಾ ಕಾಯವಿಕಾರಿಯಾನು;**
**ಮಜ್ಜನಕ್ಕೆರೆವೆನಯ್ಯಾ; ಜೀವವಿಕಾರಿಯಾನು;**
**ಮಜ್ಜನಕ್ಕೆರೆವೆನಯ್ಯಾ, ಶರಣನಲ್ಲ, ಲಿಂಗೈಕ್ಯನಲ್ಲಾ!**
**ಕೂಡಲ ಸಂಗಮದೇವರಲ್ಲಿ ಅಂತರ ಜೆಂತರ ನಾನಯ್ಯಾ!**

ಹಸಿವೆ ಕಡಿಮೆಯಾಗದೆ- ಚಿಂತೆ, ಆಶೆ ನನ್ನನ್ನು ಬಿಡದಾಗಿವೆ. ಜೀವನ ರಸವು ಉಡುಗಿ ಸಣ್ಣದಾಗದು. ಕಾಯಾಂತರ, ಜೀವಾಂತರಗಳ ಭವ ಕಳೆಯದ, ಶರಣನಲ್ಲದ, ಲಿಂಗೈಕ್ಯನಲ್ಲದ ನಾನು ನಿನಗೆ ಶೀರೆರೆದು

ಪೂಜೆಮಾಡುತ್ತಲಿದ್ದೇನೆ. ಕೂಡಲಸಂಗಮದೇವನ ಮನೆಯಲ್ಲಿ ನಾನೊಂದು ಮಹಾಪಿಶಾಚಿ; ಭಕ್ತಿಯಿಲ್ಲದವನು ಭೂತನಾಗುತ್ತಾನೆ.

**೨೬೦ ಕುದುರನೇಸು ತೊಳೆದರೆಯೂ ಕೆಸರು ಮಾಣ್ಬುದೆ?**
**ಎನ್ನ ಕಾಯದೊಳುಳ್ಳವಗುಣಂಗಳ ಕಳೆದು ಕೃಪೆಯ ಮಾಡಯ್ಯಾ.**
**ಕಂಬಳಿಯಲ್ಲಿ ಕಣಕವ ನಾದಿದಂತೆ, ಕಾಣದೇ, ಎನ್ನ ಮನ !**
**ಕೂಡಲ ಸಂಗಮ ದೇವಾ, ನಿಮಗೆ ಶರಣೆಂದು ಶುದ್ಧ ಕಾಣಯ್ಯಾ.**

ಮಣ್ಣಿನ ಗೋಡೆಯನ್ನು ಎಷ್ಟುನೀರು ಹಾಕಿ ತೊಳೆದರೂ ಅದರ ಮಣ್ಣು ಕಳೆಯ ಬಹುದೆ? ಈ ದೇಹವನ್ನು ಎಷ್ಟು ತೊಳೆದರೂ ಅಷ್ಟೇ. ಕಾರಣ ನನ್ನಲ್ಲಿರುವ ದುರ್ಗುಣ ಗಳನ್ನು ಸುಟ್ಟು ನನ್ನನ್ನು ಪುನೀತನನ್ನಾಗಿ ಮಾಡುಲಿಂಗವೆ. ನನ್ನ ಮನಸ್ಸು ಕಂಬಳಿಯ ಮೇಲೆ ಕಣಕ ಕಲಿಸಿದಂತೆ; ಆದ್ದರಿಂದ ಕೂಡಲ ಸಂಗಮ ದೇವನೇ ನಿನಗೆ ಬಾಗಿದ ಈ ಮನವು ಶುದ್ಧ ವಾಗಿದೆ ನೋಡು.

**೨೬೧ ಕಾಮಧೇನು ನಿಮ್ಮ ಬಾರಿರಲು ಪರರ ಬೇಡಲಾರನಯ್ಯಾ,**
**ನಿಮ್ಮುವ ಪೂಜಿಸಿ ಭವಬಂಧನ ಬಿಡದೇಕಯ್ಯಾ?**
**ಹಿಂದಣಜನ್ಮದ ಚಿಹ್ನ ಬಿಡದನ್ನಕ್ಕ**
**ನಿಮ್ಮುವ ಪೂಜಿಸಿ ಏವೆನಯ್ಯಾ?**
**ಎನ್ನ ಮನದ ಅವಗುಣವ ಕಳೆದು**
**ನಿಮ್ಮ ಶರಣರಿಗೆ ಶರಣೆಂಬುದ ಕರುಣಿಸು**
**ಕೂಡಲ ಸಂಗಮದೇವಾ.**

ಹಿಂದಿನ ಜನ್ಮದ ಕರ್ಮಗಳು ಬಿಡದಾಗಿ ನಿನ್ನನ್ನು ಪೂಜಿಸಿ ಏನುಮಾ ಡಲು ಸಾಧ್ಯ? ನಿನ್ನನ್ನು ಪೂಜಿಸಿದ್ದಕ್ಕಾಗಿ ಭವ ಮುಕ್ತನಾಗಲು ನನ್ನ ಕೆಟ್ಟ ಗುಣಗಳನ್ನೆಲ್ಲ ದೂರಮಾಡಿ ಶಿವಶರಣರಿಗೆ ಮೊರೆಯಿಡುವ ಬುದ್ಧಿಕೊಡು.

ನೀನೇ ಸಕಲೈಶ್ವರ್ಯ ಕೊಡುವ ಕಾಮಧೇನು ವಾಗಿರಲಿಕ್ಕೆ ಪರರ ಹತ್ತಿರ ಕೈಯೊಡ್ಡಬೇಕೆ? ಕೂಡಲ ಸಂಗಮದೇವಾ.

**೨೬೨ ದುರ್ವ್ಯಸನಿ ದುರಾಚಾರಿಯೆಂದೆನಿಸದಿರಯ್ಯಾ, ಎನ್ನ-**
**ಲಿಂಗವ್ಯಸನಿ ಜಂಗಮಪ್ರೇಮಿ ಯೆಂದೆನಿಸಯ್ಯಾ.**
**"ಅವಶ್ಯಮನು ಬೋಕ್ತವ್ಯವೆಂ"ದೆನಿಸದಿರಯ್ಯಾ.**
**ಕೂಡಲ ಸಂಗಮದೇವಾ, ಸೆರಗೊಡ್ಡಿ ಬೇಡುವೆನು.**

ದುಷ್ಟ ಚಿಂತಕನ, ಕೆಟ್ಟ ನಡತೆಯುಳ್ಳ ಕುಲಗೇಡಿಯೆಂದು ಜರೆಯು ದಂತೆ ಮಾಡು. ನಾನು ಸದಾ ಲಿಂಗಚಿಂತನೆಯಲ್ಲಿ, ಜಂಗಮರ ಸೇವೆಯಲ್ಲಿ ನಿರತನಾದ ನಿಜಭಕ್ತನೆಂದೆನಿಸು. ಮನಸ್ಸಿಗೆ ಬಂದದ್ದನ್ನೇ ತಿಂದು ತೇಗುವ ನಾಯಿಯಾಗುವಂತೆ ಮಾಡಬೇಡಾ; ನಿನಗೆ ಅಂಗಲಾಚಿ ಬೇಡಿಕೊಳ್ಳುತ್ತೇನೆ ಕೂಡಲ ಸಂಗಮದೇವಾ.

**೨೬೩ ಧೃತಿಗೆಟ್ಟು ಅನ್ಯರ ಬೇಡದಂತೆ,**
**ಮತಿಗೆಟ್ಟು ಪರರ ಹೊಗಳದಂತೆ,**
**ಪರಸತಿಯರ ರತಿಗೆ ಮನ ಹಾರದಂತೆ,**
**ಶಿವ ಪಥವನೊಲ್ಲದವರೊಡನಾಡದಂತೆ,**
**ಅನ್ಯಜಾತಿಯ ಸಂಗವ ಮಾಡದಂತೆ,**
**ಎನ್ನ ಪ್ರತಿಪಾದಿಸು ಕೂಡಲ ಸಂಗಮದೇವಾ.**

ನನ್ನ ಸ್ಥಿತಿಗತಿಗಳು ಕೆಟ್ಟು ಹೋಗಿ, ಬುದ್ಧಿ ಭ್ರಮೆಗೊಂಡು ಬೇರೆ ಯವರನ್ನು ಹೊಗಳಿ ಅವರನ್ನು ಬೇಡದಂತೆ, ಹಾಗೂ ಎರಡನೇಯವರ ಹೆಂಡಂದಿರ ರತಿಭೋಗಕ್ಕೆ ಆಶೆಪಡದಂತೆ, ಶಿವ ಚಿಂತನೆ ಧ್ಯಾನಮಾಡದವರ ಕೂಡ ಕೂಡಿರದಂತೆ, ಶಿವಶರಣರ ಜಾತಿ ಬಿಟ್ಟು ಅನ್ಯರೊಡನೆ ಸಹವಾಸ ಮಾಡದಂತೆ ನನ್ನನ್ನು ಕೂಡಲ ಸಂಗಮದೇವಾ ನೀನು ಎತ್ತಿಹಿಡಿದು ಉದ್ಧರಿಸು.

**೨೬೪ ಮತ್ತೊಂದಕಾಣದಂತೆ, ಮತ್ತೊಂದ ಕೇಳದಂತೆ,**
**ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳಸದಂತೆ,**
**ಇರಿಸಯ್ಯಾ ಕೂಡಲ ಸಂಗಮದೇವಾ.**

ಕರುಣಾಕರನಾದ ಕೂಡಲ ಸಂಗಮದೇವನೆ ನಿನ್ನ ಶರಣರ ಪಾದ ಸೇವೆ, ಪಾದಧ್ಯಾನ ವಲ್ಲದೆ ಬೇರಾವ ಪ್ರಾಪಂಚಿಕ ತೊಂದರೆ ಆಮಿಷಗಳು ನನ್ನ ಮುಂದೆ ಸುಳಿಯದಂತೆ ಮಾಡು.

**೨೬೫ ಮತಿ ಮಂದನಾಗಿ ಗತಿಯ ಕಾಣದೆ ಇರ್ದೆನಯ್ಯಾ;**
**ಹುಟ್ಟು ಗುರುಡನ ಕಯ್ಯೆ ಕೋಲ ಕೊಟ್ಟು**
**ನಡೆಸುವಂತೆ**
**ನಡೆಸಯ್ಯಾ, ಎನ್ನಾ;**
**ನಿಮ್ಮಚ್ಚ ಶರಣರ ಒಕ್ಕುದ ಮಿಕ್ಕುದ**
**ನಚ್ಚಿಸು, ಮೆಚ್ಚಿಸು, ಕೂಡಲ ಸಂಗಮದೇವಾ.**

ಬುದ್ಧಿಗೆಟ್ಟು ದಾರಿಕಾಣದ ನನ್ನನ್ನು, ಹುಟ್ಟು ಗುರುಡನ ಕೈಗೆ ಕೋಲು ಕೊಟ್ಟು ನಡೆಸುವ ಹಾಗೆ ಕೈಹಿಡಿದು ನಡೆಸು. ಅಲ್ಲದೆ ನಿನ್ನ ಶರಣರು ಉಂಡು ಹೆಚ್ಚಾದ್ದನ್ನು ಪ್ರೀತಿಸುವಂತೆ ದಯೆದೋರು ಕೂಡಲ ಸಂಗಮದೇವಾ.

**೨೬೬ ಕಾಣದುದನೆಲ್ಲವ ಕಾಣಲಾರೆನಯ್ಯಾ**
**ಕೇಳದುದನೆಲ್ಲವ ಕೇಳಲಾರೆನಯ್ಯಾ**
**ದ್ರೋಹವಿಲ್ಲನೆಮ್ಮ ಶಿವನಲ್ಲಿ, ಸೀಮೆಯುಯ್ಯಾ!**
**ಒಲೆಯ ಮುಂದಿದ್ದು ಮಾಡದ ಕನಸ ಕಾಣ್ಬವರ**
**ನೊಲ್ಲನಯ್ಯಾ**
**ಕೂಡಲ ಸಂಗಮದೇವ.**

ಪ್ರಪಂಚದ ಮಹಾಸಂಗರದಲ್ಲಿ ದೃಷ್ಟಿಗೆ ಅಸಹ್ಯವಾದದ್ದನ್ನೆಲ್ಲ ಕಾಣಲಾರೆ, ಕಿವಿಗೆ ಕರ್ಕಶವಾದ್ದನ್ನೆಲ್ಲ ಕೇಳಲಾರೆ. ಶಿವ ಕೀರ್ತನೆ ಕೇಳಲು ಲಿಂಗ ಜಂಗಮರ ಭವ್ಯ ನಯನ ಮನೋಹರ ಮೂರ್ತಿಯನ್ನು ನೋಡಲು

ನನ್ನಲ್ಲಿ ಯಾವ ತರಹದ ರಾಗ ದ್ವೇಷಗಳಿಲ್ಲ. ಆದರೆ ಅಡಿಗೆ ಮಾಡಲು ಎಲ್ಲ ಸಲಕರಣೆಗಳೂ ಒಲೆಯಮುಂದೆ ಸಿದ್ಧವಿರುವಾಗ ಮಾಡಲು ಬೇಸತ್ತು ಕೇವಲ ಕನಸುಣಿಗಳನ್ನು ಮಾತ್ರ ಕೂಡಲ ಸಂಗಮ ದೇವನು ಸಂತೈಸಲು ಬರುವದಿಲ್ಲ.

೨೬೭ ಕಾಣಬಹುದೆ ಪರುಷದ ಗಿರಿಯಂಥಕಂಗೆ?
ಅರಿಯಬಹುದೆ ರಸದ ಬಾವಿ ನಿರ್ಭಾಗ್ಯಂಗೆ?
ತೆಗೆಯಬಹುದೆ ಕಡವರವು ದರಿದ್ರಂಗೆ?
ಕರೆಯಬಹುದೆ ಕಾಮಧೇನುವಶುದ್ಧಂಗೆ?
ಹೊನ್ನ ಹುಳವ ಕಂಡು ನರಿ ತನ್ನ ಬಾಲವ
ಹುಣ್ಣ ಮಾಡಿಕೊಂಡರೆ ಹೋಲಬಹುದೆ?
ಎನ್ನೊಡೆಯ ಕೂಡಲ ಸಂಗನ ಶರಣನು
ಪುಣ್ಯವಿಲ್ಲದೆ ಕಾಣಬಹುದೆ?

ಕುರುಡನಿಗೆ ಪರುಷದುಮಣಿಯ ಪರ್ವತ, ಹತಭಾಗ್ಯನಿಗೆ ರಸದ ಬಾವಿ, ಅಷ್ಟದರಿದ್ರನಿಗೆ ಬಂಗಾರ, ಅನಾಚಾರಿಗೆ ಕಾಮಧೇನು—ಸುಖ-ಶಾಂತಿಯನ್ನು ಕೊಡುತ್ತವೆಯೇ? ಇದೆಲ್ಲವು, ಹೊನ್ನೀಹುಳ (ದೀಪದ ಹುಳು) ಮಿಂಚುವದನ್ನು ನೋಡಿ ನರಿ ತನ್ನ ಬಾಲವನ್ನು ಸುಟ್ಟುಕೊಂಡು ಹುಣ್ಣು ಮಾಡಿಕೊಂಡಂತೆಯೇ; ಆದುದರಿಂದ ಪುಣ್ಯವಿಲ್ಲದ ಮನುಜರಿಗೆ ಕೂಡಲ ಸಂಗನ ಶರಣರ ಭೆಟ್ಟಿಯಾಗುವದು ದುರ್ಲಭ.

೨೬೮ ಎಂತಕ್ಕೆ ನಾ ನಿಮ್ಮ ದೇವರೆಂದರಿದೆನು?
ಇಂತಾಗಿ ನೀವೆನ್ನನಾರೆಂದರಿಬಿರಿ!
ನಂಬಲರಿಯೆ, ಒಲಿಸಲರಿಯೆ!
(ಶ್ಲೋಕ) ಯಥಾ ಭಾವಸ್ತಥಾ ಲಿಂಗಂ। ಸತ್ಯಂ ಸತ್ಯಂನ ಸಂಶಯಃ
ಯಥಾ ಭಕ್ತಿಸ್ತಥಾ ಸಿದ್ಧಿಃ। ಸತ್ಯಂ ಸತ್ಯಂನಸಶಂಯಃ

**ಎಂದುದಾಗಿ ಕೂಡಲ ಸಂಗಮದೇವಾ, ಕೇಳಯ್ಯಾ,**
**ಕೋಟಿ ಕೋಟಿ ವರ್ಷ ಕೋಟಲೆಗೊಂಡೆನಯ್ಯಾ!**

ನಿನ್ನಮೇಲೆ ವಿಶ್ವಾಸ ವಿಡಲಾರೆ, ನಿನ್ನೊಲವು ಸಂಪಾದಿಸುವ ರೀತಿ ಯನ್ನೂ ನಾನು ತಿಳಿಯೆ; ಆದಾಗ್ಯೂ ನಿನ್ನನ್ನು ದೇವರೆಂದೇಕೆ ಒಪ್ಪಿಕೊಂಡೆ? ಆದರೆ ನೀನು ನಾನು ಯಾರೆಂಬುದನ್ನು ಗುರುತಿಸಲಾರೆಯಾ! ಭಾವನೆಇದ್ದ ಹಾಗೆ ಲಿಂಗ; ಭಕ್ತಿಇದ್ದಹಾಗೆ ಸಿದ್ಧಿ ಎಂಬುದು ನಿಜ; ಇದನ್ನರಿಯಲು ಕೋಟಿವರ್ಷಗಳ ಕಾಲ ಬಳಲಿದ್ದೇನೆ ಕೂಡಲ ಸಂಗಮದೇವಾ.

**೨೬೯ ಅರಿಸಿನವನೇ ಮಿಂದು, ಹೊಂದೊಡಿಗೆಯನೆ ತೊಟ್ಟು,**
**ಪುರುಷನ ಒಲವಿಲ್ಲದ ಲಲನೆಯಂತಾಗಿರ್ದೆನಯ್ಯಾ!**
**ವಿಭೂತಿಯನೆ ಹೂಸಿ, ರುದ್ರಾಕ್ಷಿಯನೆ ಕಟ್ಟಿ,**
**ಶಿವ ನಿಮ್ಮೊಲವಿಲ್ಲದಂತೆ ಆಗಿರ್ದೆನಯ್ಯಾ!**
**ಕೆಟ್ಟು ಬಾಳುವರಿಲ್ಲಾ ಎಮ್ಮವರ ಕುಲದಲ್ಲಿ:**
**ನೀ ನೊಲಿದಂತೆ ಸಲಹಯ್ಯಾ, ಕೂಡಲ ಸಂಗಮದೇವಾ.**

ಅರಿಷಣಹಚ್ಚಿಕೊಂಡು ಚಿನ್ನದ ಆಭರಣಗಳನ್ನಿಟ್ಟುಕೊಂಡು ಹೊಸ ಬಾಳಿನ ನವತರುಣಿಗೆ ಗಂಡನ ಪ್ರೇಮ ವಿಲ್ಲದ ಹಾಗೆ ಪೆಚ್ಚಾಗಿದ್ದೇನೆ ವಿಭೂತಿಹಚ್ಚಿಕೊಂಡು ರುದ್ರಾಕ್ಷಿಮಾಲೆ ಹಾಕಿಕೊಂಡು ಶಂಕರನ ದಯವಿಲ್ಲದ ದಿಂಡಾಗಿದ್ದೇನೆ; ಕೆಟ್ಟು ಜೀವನ ಸಾಗಿಸುವುದು ಶಿವಶರಣರ ಕುಲಕ್ಕೆ ಸಲ್ಲದು. ಕಾರಣ ಕೂಡಲ ಸಂಗಮದೇವಾ ನಿನ್ನ ಮನಸ್ಸಿಗೆ ತೋಚಿದಂತೆ ನನ್ನನ್ನು ರಕ್ಷಿಸು.

**೨೭೦ ಉದಯಾಸ್ತಮಾನವೆನ್ನ ಬೆಂದ ಬಸುರಿಂಗೆ ಕುದಿಯ ಲಲ್ಲದೆ**
**ನಿಮ್ಮ ನೆನೆಯಲು ತೆರಹಿಲ್ಲಯ್ಯಾ!**
**ಎಂತೋ! ಲಿಂಗ ತಂದೆ ಎಂತಯ್ಯಾ? ಎನ್ನ ಪೂರ್ವಲಿಖಿತ!**
**ಬೆರಣೆಯನಾಯಲಲ್ಲದೆ ಅಟ್ಟುಣ್ಣ ತೆರಹಿಲ್ಲವೆನಗೆ!**
**ನೀ ಕರುಣಿಸು ಕೂಡಲ ಸಂಗಮದೇವಾ.**

ಹಗಲಿರುಳೂ ಈ ಬೆಂದ ಒಡಲಿಗಾಗಿ ಆದರ ಹಸಿವೆ ಹಿಂಗಿಸಲು ಹೆಣ ಗುವದರಲ್ಲಿಯೇ ಸಾಕುಬೇಕಾಗುತ್ತದೆ. ನಿನ್ನ ನಾಮಸ್ಮರಣೆ ಮಾಡಲು ವೇಳೆಯಿಲ್ಲ. ನನ್ನ ಪೂರ್ವಜನ್ಮದ ವಿಧಿಕರ್ಮ ಹೇಗಿದೆಯೋ ಏನೋ; ಅಡಿಗೆ ಮಾಡಿಟ್ಟದ್ದನ್ನು ಕದ್ದು ತಿನ್ನುವ ನಾಯಿಯಂತೆ ನನ್ನ ಜನ್ಮವಾಗಿದೆ, ನನಗೆ ಸ್ವತಃ ಮಾಡಿಕೊಂಡು ಉಣ್ಣಲು ವೇಳೆಯಿಲ್ಲದಾಗಿದೆ. ಈ ಜೀವನ ವನ್ನು ಕೂಡಲ ಸಂಗಮದೇವನೆ ನೀನೇ ದಯದೋರಿ ಕಾಪಾಡಬೇಕು,

**೨೭೧ ತಾಮಸ(ದೆ) ಮುಸುಕಿ ಕಂಗಳ ಕೆಡಿಸಿತ್ತೆನ್ನ ಭಕ್ತಿ;**
**ಕಾಮವೆಂಬಗ್ನಿಗೆ ಮುರಿದಿಕ್ಕಿತ್ತೆನ್ನ ಭಕ್ತಿ;**
**ಉದರಕ್ಕೆ ಕುದಿಕುದಿದು ಮುಂದುಗೆಡಿಸಿತ್ತೆನ್ನ ಭಕ್ತಿ!**
**ಇದಿರನಾಶ್ರಯಿಸಲು ಹೋಯಿತ್ತೆನ್ನ ಭಕ್ತಿ;**
**ಹೆಣಮೂಳನು ನಾನು ! ಕೂಡಲಸಂಗಮದೇವಾ,**
**ಕ್ಷಣ ಹದುಳವಿರದೆ ಬಾಯ ಟೊಣೆದೇ ಹೋಯಿತ್ತೆನ್ನ ಭಕ್ತಿ !**

ಸಿಟ್ಟಿನ ಕಿಡಿ ಕಾರುತ್ತ ನನ್ನ ಕಣ್ಣುಗಳು ಭಕ್ತಿಯ ಬಲಕೆಡಿಸಿತು; ಕಾಮಾಗ್ನಿಗೆ ಈ ದೇಹ ತುತ್ತಾಗಿ ನನ್ನ ಭಕ್ತಿಯ ಬಣ್ಣ ಸುಟ್ಟುಹೋಯಿತು; ಹೊಟ್ಟೆಯ ಪಾಡಿಗಾಗಿ ಅಂಡಲೆದು ನನ್ನ ಭಕ್ತಿಯ ದಾರಿಗೆ ಒಡ್ಡು ಹಾ ಕಿತು, ನಾಸ್ತಿಕ ಭಾವನೆ ತಳೆಯಲು ಹೋಗಿ ಭಕ್ತಿ ಭಾವಕ್ಕೆರವಾಗಿ ನಾನು ಹೆಣಮೂಳನಾದೆ, ಕೂಡಲ ಸಂಗಮದೇವಾ ಕ್ಷಣಕಾಲವೂ ನಿನ್ನ ನಾಮ ಭಜಿಸಲು ವಿರಾಮವಿಲ್ಲದೆ ಇದ್ದ ಕಾರಣ ನನ್ನ ಭಕ್ತಿಯ ಬಾಯಿ ಸೊಟ್ಟಾಗಿ ಹೋಯಿತು.

**೨೭೨ ಏನಿದ್ದರೇನಿದ್ದರೊಲ್ಲದು ನಿಮ್ಮ ಅನುಭಾವಕ್ಕೆನ್ನ ಮನವು;**
**ಡಂಬಕನೆಂಬವ ನಾನು ಕಂಡಯ್ಯಾ,**
**ಕೂಡಲ ಸಂಗನ ಪೂಜಿಸಿ ಮಾನವರಾಸೆ ಬಿಡದಾಗಿ.**

ಕೂಡಲ ಸಂಗಮದೇವನ ಪೂಜಿಸಿದರೂ ಲೋಕದ ಮಾನವರು ಹೆಚ್ಚಿನವರೆಂಬ ಬುದ್ಧಿ, ಸತಿ ನನ್ನವಳು, ಮಕ್ಕಳು ಮರಿ, ಬಂಧುಬಳಗ ವೆಂಬ ಮೋಹದಾಸೆ ಕಡಿಮೆಯಾಗದ ಡಂಬಾಚಾರದ ಭಕ್ತನಾದ ನನಗೆ

ಸಕಲ ಸಂಕಟ ಪರಿಹಾರಕ ಔಷಧಿಯಾಗಿದ್ದರೂ ಲಿಂಗನ ಅನುಭಾವಕ್ಕೆ ನನ್ನ ಮನಸ್ಸು ಹರಿಯುದಾಗಿದೆ.

**೨೭೩ ಬೆಲ್ಲವ ತಿಂದ ಕೋಡಗಗದಂತೆ ಸಿಹಿಯು ನೆನೆಯುದಿರಾ ಮನವೆ.**
**ಕಬ್ಬ ತಿಂದ ನರಿಯಂತೆ ಹಿಂದಕ್ಕೆಳಸದಿರಾ ಮನವೇ.**
**ಗಗನವನಡರಿದ ಕಾಗೆಯಂತೆ ದೆಸೆದೆಸೆಗೆ ಹಂಬಲಿಸದಿರಾ ಮನವೇ,**
**ಕೂಡಲಿ ಸಂಗನ ಶರಣರ ಕಂಡು ಲಿಂಗವೆಂದೇ ನಂಬು, ಮನವೇ.**

ಬೆಲ್ಲ ತಿಂದ ಮಂಗವು ಪುನಃ ಬೆಲ್ಲದ ಸಿಹಿಗೆ ಬಾಯಿ ಚಪ್ಪರಿಸುವ ಹಾಗೆ ಸಂಸಾರದ ಸಿರಿಗೆ ಮನಸೊಲಬೇಡ ಹುಚ್ಚ ಮನಸ್ಸೇ; ಕಬ್ಬಿನ ರುಚಿ ಗಂಡ ನರಿ ಮರಳಿ ಕಬ್ಬಿನ ತೋಟಕ್ಕೆ ಓಡುವಂತೆ, ಸಂಸಾರದ ಸುರೆ ಕುಡಿದು ಸರಸವಾಡಲು ತಿರುಗಿ ಭವಸಾಗರದಲ್ಲಿ ನುಗ್ಗಬೇಡ ಮನಸ್ಸೇ. ಅಂತರೀಕ್ಷದಲ್ಲಿ ಹಾರುವ ಕಾಗೆ ದಿಕ್ಕೆಟ್ಟು ಬಾಯಿ ಬಾಯಿ ಬಿಡುವಂತೆ ಎಲೆ ಮನವೇ ಹಗರಣದ ಸಂಸಾರದಲ್ಲಿ ತೊಳಲ ಬೇಡಾ. ಸದಾ ಶರಣರ ಸಂಗದಲ್ಲಿದ್ದು ಅವರೆ ಲಿಂಗವೆಂದು ತಿಳಿದು ಮುಕ್ತಿಸಂಪದ ಪಡೆ.

**೨೭೪ ಒಡೆಯನ ಕಂಡರೆ ಕಳ್ಳನಾಗದಿರಾ, ಮನವೇ,**
**ಭವದ ಭಾರಿಯು ತಪ್ಪಿಸಿಕೊಂಬರೆ**
**ನೀನು ನಿಯುತನಾಗಿ ಭಯಭರಿತನಾಗಿ,**
**ಅಹಂಕಾರಿಯಾಗದೆ ಶರಣೆನ್ನು, ಮನವೇ,**
**ಕೂಡಲ ಸಂಗನ ಶರಣರಲ್ಲಿ ಭಕ್ತಿಯನೋಲುವರೆ**
**ಕಿಂಕಿಲನಾಗಿ ಬದುಕು, ಮನವೇ.**

ಸರ್ವಾತ್ಮನಾದ ಭಗವಂತನನ್ನು ಕಣ್ಣಾರೆ ಕಂಡು ಜೀವಗಳ್ಳನಾಗ ಬೇಡ. ಹೇಯವಾದ ಸಂಸಾರ ಬಂಧನ ತಪ್ಪಿಸಿಕೂಳ್ಳಬೇಕಾದರೆ, ಅಹಂ

ಕಾರ ಬಿಟ್ಟು ನೀನು ನಿಯಮದಿಂದಲೂ ಭಯ ಭಕ್ತಿಯಿಂದಲೂ ಶರಣರಿಗೆ ಮೊರೆಹೋಗಿ ದಾಸಾನುದಾಸನಾಗಿ ಬಾಳು.

**೨೬೫ ಕೋ(ಟ್ಯ)ನು ಕೋಟಿ ಜಪವನು ಮಾಡಿ**
**ಕೋಟಲೆ ಗೊಳ್ಳದೇಕೆ ಮನವೇ ?**
**ಕಿಂಚಿತ್ತು ಗೀತವೊಂದನಂತ ಕೋಟಿ ಜಪ !**
**ಜಪವೆಂಬುದೇಕೆ ಮನವೇ ?**
**ಕೂಡಲ ಸಂಗನ ಶರಣರ ಕಂಡು, ಆಡಿ ಹಾಡಿ ಬದುಕು ಮನವೇ.**

ಕೋಟಿ ಕೋಟಿ ಜಪ ಮಾಡಿ ತೊಂದರೆ ಪಟ್ಟು ಕೊಳ್ಳುವದೇಕೆ ಮನಸ್ಸೆ? ದೇವನ ಭಜನೆಯ ಹಾಡಿನ ಒಂದು ಚರಣವ ನುಡಿದರೆ ಅದೇ ಅನಂತ ಕೋಟಿ ಜಪ. ಕೂಡಲ ಸಂಗಮದೇವನ ಶರಣರ ಮುಂದೆ ಕುಣಿದು ಹಾಡಿಕೊಂಡು, ಬಾಳು ಪೂರ್ಣಮಾಡಿಕೊ ಮನಸ್ಸೇ.

**೨೬೬ ಮನವೇ, ನಿನ್ನ ಜನ್ಮದ ಪರಿಭವವ ಮರೆದೆಯಲ್ಲಾ, ಮನವೇ !**
**ಲಿಂಗವ ನಂಬು ಕಂಡಾ, ಮನವೇ;**
**ಜಂಗಮನ ನಂಬು ಕಂಡಾ, ಮನವೇ !**
**ಕೂಡಲ ಸಂಗಮ ದೇವರ ಬಿಡದೆ ಬೆಂಬತ್ತು, ಕಂಡಾ, ಮನವೇ !**

ಎಲೆ ಮನವೇ ನಿನ್ನ ಅನೇಕ ಜನ್ಮಗಳ ಸಂತಾಪ ದುಃಖಗಳನ್ನು ಮರೆತು ಮತ್ತೇ ಸಂಸಾರ ದೀಪದ ಹುಳವಾಗಿ ಮೈ ಸುಟ್ಟುಕೊಳ್ಳುವ ಪ್ರಜ್ಞಾಹೀನನಾಗಿರುವೆಯಲ್ಲಾ. ಲಿಂಗ-ಜಂಗಮರಲ್ಲಿ ಭಕ್ತಿಯನ್ನಿಡು. ಕೂಡಲ ಸಂಗಮದೇವನನ್ನು ಹಿಂಬಾಲಿಸು. ಮುಕ್ತಿಮಾರ್ಗ ತೋರೆಂದು ಬಿಡದೇ ಬೇಡು.

**೨೭೭ ಸುರರ ಬೇಡಿದಡಿಲ್ಲ, ನರರ ಬೇಡಿದಡಿಲ್ಲ,**
**ಬರಿದೆ ಧೃತಿಗೆಡಬೇಡಾ ಮನವೇ;**
**ಆರನಾದಡೆಯೂ ಬೇಡಿ ಬೇಡಿ, ಬರಿದೆ ಧೃತಿಗೆಡಬೇಡಾ ಮನವೇ,**
**ಕೂಡಲ ಸಂಗಮ ದೇವನಲ್ಲದೆ, ಆರ ಬೇಡಿದಡಿಲ್ಲ, ಮನವೇ.**

ದೇವತೆಗಳನ್ನು ನರಪ್ರಾಣಿಗಳನ್ನು ಮತ್ತೆ ಯಾರಾದರನ್ನೂ ಮುಕ್ತಿ ಬಯಸಿ ಕೇಳಿದರೆ ಕೊಡರು. ಸುಮ್ಮ ಸಮ್ಮನೆ ಕಷ್ಟಕ್ಕೆಗುರಿಯಾಗಬೇಡಾ. ಕೂಡಲ ಸಂಗಮ ದೇವನನ್ನು ಭಕ್ತಿಪೂರ್ವಕವಾಗಿ ಬೇಡಿಕೊಂಡರೆ ಸದ್ಗತೀನಿಡುತ್ತಾನೆ. ಇದು ಮತ್ತಾರಿಂದಲೂ ಸಾಧ್ಯವಿಲ್ಲ.

**೨೭೮ ಆಡಿ ಅಳುಪದಿರಾ, ಲೇಸ ಮಾಡಿ ಮರುಗದಿರಾ, ಎಲೆ ಮನವೇ;**
**ಕೂಡಿ ತಪ್ಪದಿರಾ; ಬೇಡಿದವರಿಗಿಲ್ಲೆನ್ನದಿರು, ಕಂಡಾ ಮನವೇ;**
**ನಾಡ ಮಾತು ಬೇಡ, ಸೆರಗೊಡ್ಡಿ ಬೇಡು ಕೂಡಲ ಸಂಗನ ಶರಣರ.**

ಶಿವನ ಮುಂದೆ ಹಾಡಿ ಕುಣಿದು ಆಸೆಗಳನ್ನು ಪೂರೈಸೆಂದು ಕೇಳಿ ಕೊಳ್ಳಬೇಡಾ; ಉಪಕಾರ ಮಾಡಿ ಏನುಮಾಡಿದೆನಲ್ಲಾ ಎಂದು ಹಳಹಳಿ ಸದಿರು. ಪರಮೇಷ್ಟಿಯಾದ ಪರಮೇಶ್ವರನಲ್ಲಿ ಸಲೆ ಬೆರೆತು–ಪರ ದೈವ ವನ್ನು ಮತ್ತೆ ನೆನೆಯದಿರು. ಬಂದ ಅಯ್ಯನವರಿಗೆ ಏನೂ ಹಾಕದೆ ಕಳಿ ಸಬೇಡಾ. ಜಗದ ಮಾತು ಆಡದೆ, ದಯದೋರಿ ಕಾಪಾಡಿರೆಂದು ಶರಣ ರನ್ನು ಅಡ್ಡಬಿದ್ದು ಬೇಡಿಕೊ.

**೨೭೯ ಹೃದಯ ಕತ್ತರಿ: ತುದಿನಾಲಿಗೆಯು ಬೆಲ್ಲೇಂಬೋ!**
**ಆಡಿಹೆ (ನೇಂ) ಬೋ, ಹಾಡಿಹೆ (ನೇಂ) ಬೋ,**
**ನಿಚ್ಚ ನಿಚ್ಚ ಶಿವರಾತ್ರಿಯ ಮಾಡಿಹೆ (ನೇಂ) ಬೋ!!**
**ಆಸು ಎನ್ನಂತೆ, ಮನ ಮನದಂತೆ,**
**ಕೂಡಲ ಸಂಗಮದೇವ: ತಾನು ತನ್ನಂತೆ!!!**

ಹೃದಯವು ಹರಿತವಾದ ಕತ್ತರಿಯಾಗಿದೆ. ತುದಿನಾಲಗೆ ಬೆಲ್ಲದ ಮಾತುಗಳನ್ನಾಡುತ್ತ, ನಾನು ಕುಣಿದು ಹಾಡಿ ನಿತ್ಯ ಶಿವರಾತ್ರಿ ಉಪವಾಸ ಮಾಡುವೆ ಎಂದು ನುಡಿಯುತ್ತದೆ. ನಾನು ನನ್ನದಾರಿಯಲ್ಲಿ ನಡೆದರೆ ಮನಸ್ಸು ತನ್ನ ದಾರಿಯಲ್ಲಿಯೇ ಸಾಗುತ್ತದೆ. ಆದರೆ ಕೂಡಲ ಸಂಗಮ ದೇವ, ಆತ್ಮನೂ ಲಿಂಗನೂ ಬೇರೆಬೇರೆಯಾಗಿಯೇ ವರ್ತಿಸುತ್ತಾರೆ ಹೀಗಿದ್ದಲ್ಲಿ ಯಾವ ಭಕ್ತಿಯನ್ನೂ ನಾ ಮಾಡಲಾರೆ.

**೨೮೦ ಒಳ್ಳಿಹ ಮೈಲಾರನ ಮೊಣಗೆಲ್ಲ ಸಣಬು:**
**ಹೊರಗಣ ಬಣ್ಣ ಕರಲೇಸಾಯಿತ್ತಯ್ಯಾ!**
**ಶ್ವಾನನ ನಿದ್ರೆ, ಅಜ್ಞಾನಿಯ ತಪದಂತೆ**
**ಆಯಿತ್ತಯ್ಯಾ ಎನ್ನ ಮತಿ, ಕೂಡಲ ಸಂಗಮದೇವಾ.**

ಭಿನ್ನ ಭಿನ್ನ ಅಂಗಗಳನ್ನು ಕೂಡಿಸಿ ಸಣಬಿನಿಂದ ಸುತ್ತಿ ಕಟ್ಟಿ ಮೇಲೆ ಅಂದವಾಗಿ ಬಣ್ಣಬರೆದ ಮೈಲಾರಲಿಂಗನ ಉತ್ಸವಮೂರ್ತಿಯಂತೆ, ನನ್ನ ಬುದ್ಧಿ ನಾಯಿಯ ನಿದ್ರೆ, ತಿಳಿಗೇಡಿಯ ತಪಸ್ಸಿನಂತೆ ಹುಳುಹತ್ತಿದ ಹತ್ತಿಯಾಗಿದೆ ಕೂಡಲ ಸಂಗಮದೇವಾ.

**೨೮೧ ಲೋಕೋಪಚಾರಕ್ಕೆ ಮಜ್ಜನಕ್ಕೆರೆವೆನಯ್ಯಾ:**
**ಮನದ ತಾಮಸ ಬಿಡದು, ಮನದ ಕಪಟ ಬಿಡದಯ್ಯಾ;**
**'ಶಿವ ಶರಣೆಂ'ಬುದು ಒಪ್ಪತಿಯುಳವಡದಯ್ಯಾ!**
**ಎನ್ನ ಮನದಲ್ಲಿ ಎರಡುಳ್ಳನ್ನಕ್ಕ**
**ಕೂಡಲ ಸಂಗಮ ದೇವರೆಂತೊಲಿವ?**

ಮೋಸ-ಸಿಟ್ಟು ಎರಡು ಬಗೆಯ ಬುದ್ಧಿಗಳು ನನ್ನಿಂದ ತೊಲಗದ ವಿನಃ ಕೂಡಲ ಸಂಗಮದೇವನು ಒಲಿಯುವದು ಹೇಗೆ? ಕೇವಲ ಜನತೆಯ ತೋರ್ಕೆಗಾಗಿ ಲಿಂಗಕ್ಕೆ ನೀರೆರೆದು ಪೂಜಿಸುವೆ. ಇದರಿಂದ ಏನೂ ಫಲವಿಲ್ಲ. ಹರನೇ ನಿನಗೆ ನಮಸ್ಕಾರವೆಂದು ಒಮ್ಮೆಯಾದರೂ ಏಕಕಂಠದಿಂದ ನುಡಿಯಲು ಬಾಯಿಗೆ ಬಾರದು.

೨೮೨ ಮಜ್ಜನಕ್ಕೆರೆವೆನಲ್ಲದಾನು-ಸಜ್ಜನವೆನ್ನಲ್ಲಿಲ್ಲಯ್ಯಾ!
ಎನ್ನಲ್ಲೇನನರಸುವೆ? ನಂಬಿಯೂ ನಂಬದ ಡಂಬಕ
ನಾನಯ್ಯಾ
ಹಾವ ತೋರಿ ಹವಿಯ ಬೇಡುವಂತೆ,
ಕೂಡಲ ಸಂಗಮದೇವಾ!

ಲಿಂಗವನ್ನೂ ನಂಬಿಯೂ ನಂಬದ ಈ ಬಡಿವಾರದವನಲ್ಲಿ ಯಾವ ಉತ್ತಮ ಗುಣಗಳನ್ನು ಹುಡುಕುವಿ. ವಿನಯ-ಭಯ-ಶೀಲವಿಲ್ಲದೆ ಕೇವಲ ನಿನ್ನ ತಲೆಯ ಮೇಲೆ ನೀರು ಸುರುವಿದರೆ ಪೂಜೆಯಾಯ್ತೆ? ಹಾವು ತೋರಿಸಿ ತುಪ್ಪ ಬೇಡುವ ಹಾವಾಡಿಗನಂತೆ ನನ್ನ ಕೇಡು ಬಾಳು ಕೂಡಲ ಸಂಗಮದೇವಾ.

೨೮೩ ಕೆಲಕ್ಕೆ ಶುದ್ಧನಾದೆನಲ್ಲದೆ ಎನ್ನ ಮನಕ್ಕೆ ಶುದ್ಧನಾಗೆ
ನೇಕಯ್ಯಾ?
ಕೈಯ ಮುಟ್ಟಿ ಪೂಜಿಸುವರೆ, ಎನ್ನ ಕೈ ಶುದ್ಧವಲ್ಲ
ವಯ್ಯಾ.
ಮನ ಮುಟ್ಟಿ ಪೂಜಿಸುವರೆ, ಎನ್ನ ಮನ ಶುದ್ಧವಲ್ಲ
ವಯ್ಯಾ
ಭಾವ ಶುದ್ಧವಾದೊಡೆ ಕೂಡಲ ಸಂಗಯ್ಯನು
"ಇತ್ತ ಬಾ" ಎಂದೆತ್ತಿ ಕೊಳ್ಳನೇಕಯ್ಯಾ?

ಜನರು ನಾನು ಶುದ್ಧಾತ್ಮನೆಂದು ಒಪ್ಪಿಕೊಳ್ಳುತ್ತಾರೆ. ಆದರೆ ನನ್ನ ಮನಸ್ಸೂ ಮಾತ್ರ ಒಪ್ಪದಾಗಿದೆ. ಕೈಮುಟ್ಟಿ-ಮನಃಪೂರ್ವಕವಾಗಿ ಲಿಂಗ ಪೂಜೆ ಮಾಡಬೇಕೆಂದರೆ ಕೈಮನಗಳೆರಡೂ ಹೊಲೆಯಾಗಿವೆ. ಆದರೆ ಅಂತ ರಂಗ ಭಾವನೆ ನಿರ್ಮಲವಾಗಿ ತೇಜೋಮಯವಾದರೆ ಕೂಡಲ ಸಂಗ ಯ್ಯನು 'ಇಲ್ಲಿ ಬಾ' ಎಂದು ಕರೆದು ತನ್ನ ಸನ್ನಿಧಾನದಲ್ಲಿ ಕುಳ್ಳಿರಿಸಿ ಕೊಳ್ಳಲಾರನೆ?

**೨೮೪ ಕುಲದಮದಕ್ಕೆ ಹೋರಿ ಜಂಗಮ ಭೇದವ ಮಾಡವೆ:**
**ಫಲವೇನು?**
**ನಿತ್ಯ ಲಿಂಗಾರ್ಚನೆ ಪ್ರಾಯಶ್ಚಿತ್ತ!**
**ಛಲಮದಕ್ಕೆ ಹೋರಿ ಲಿಂಗ ಭೇದವ ಮಾಡುವೆ;**
**ಜಂಗುಳಿಯ ಕಾವ ಗೋವ ಹಲವು ಹಸುವ ನೀವಾಡಿಸು**
**ವಂತೆ!**
**ತನು ಭಕ್ತನಾಯಿತ್ತು; ಎನ್ನ ಮನ ಭವಿ! ಕೂಡಲ**
**ಸಂಗಮದೇವಾ.**

ಹೋರಿ ತನ್ನ ಮೈಸೊಕ್ಕಿನಿಂದ ಜಂಗಮರಲ್ಲಿ ಎರಡೆಣಿಸಿದರೆ ಏನು ಫಲ. ಹಟಕ್ಕಾಗಿ ಹೋರಿಯಹಾಗೆ ಲಿಂಗಭೇದವನ್ನು ನಾನು ಮಾಡುವೆ. ಈ ಎರಡು ತಪ್ಪಿಗಾಗಿ ದಿನದಿನವೂ ಲಿಂಗ ಪೂಜೆಮಾಡುವದೆ ಪ್ರಾಯಶ್ಚಿತ್ತ. ದನ ಕಾಯುವವನು ಅನೇಕ ತುರುಗಳನ್ನು ತನ್ನ ನಜರಿನಲ್ಲಿಟ್ಟು ಕಾಯುವಂತೆ ನನ್ನ ದೇಹ ಭಕ್ತನ ದೇಹವಾದರೆ ಮನಸ್ಸು ಲಿಂಗ ಪೂಜೆ ಜಂಗಮ ಪೂಜೆಗೆ ಆತಂಕ ಮಾಡುವ ಶೈವವಿರೋಧಿಯಾಗಿದೆ.

**೨೮೫ ಲಿಂಗದಲ್ಲಿ ಕಠಿಣವುಂಟೆ? ಜಂಗಮದಲ್ಲಿ ಕುಲವುಂಟೆ?**
**ಪ್ರಸಾದದಲ್ಲಿ ಅನುರುಚಿಯುಂಟೆ?**
**ಈ ತ್ರಿವಿಧದಲ್ಲಿ ಭಾವ ಭೇದವನರಸುವೆನು—**
**ಕೂಡಲಸಂಗಮದೇವಾ, ಧಾರೆವಟ್ಟಲೆನ್ನ ಭಕ್ತಿ!**

ಲಿಂಗದಲ್ಲಿ ಕೋಮಲ-ಕಠಿಣವೆಂದೂ, ಜಂಗಮರಲ್ಲಿ ಕುಲಾಚಾರ ವನ್ನೂ ಮತ್ತು ಪ್ರಸಾದದಲ್ಲಿ ಸಿಹಿ-ಕಹಿಎಂದೂ ಹೀಗೆ ಮೂರು ಪ್ರಕಾರಗಳಲ್ಲಿ ಭಾವ ಭೇದಮಾಡಿ ನೋಡುವೆ. ಈ ಭೇದವಳಿದು ನನ್ನ ಭಕ್ತಿಯ ಧಾರೆ ಗಂಗಾಜಲದಂತೆ ಧಾರೆಯಾಗಿ ಹರಿಯಲಿ ಕೂಡಲ ಸಂಗಮದೇವಾ.

**೨೮೬ ಲೌಕಿಕರ ಕಂಡು ಆಡುವೆ, ಹಾಡುವೆ;**
**ತಾರ್ಕಿಕರ ಕಂಡು ಆಡುವೆ, ಹಾಡುವೆ;**
**ಸಹಜಗುಣವೆನ್ನಲ್ಲಿಲ್ಲಯ್ಯಾ;**

**ನಿಜ ಭಕ್ತಿಯೆನಗಿಲ್ಲ, ತಂದೇ.**
**ಏಕೋಭಾವ ಎನಗುಳ್ಳರೆ, ಏಕೆ ನೀ ಕರುಣಿಸೆ,**
**ಕೂಡಲ ಸಂಗಮದೇವಾ?**

ಸಾಮಾಜಿಕ ವ್ಯವಹಾರದಂತೆ ಮಾತನಾಡುವೆ, ನಿನ್ನ ನಾಮ ಹಾಡುವೆ; ತರ್ಕಮಾಡುವವರನ್ನು ಕಂಡು ನಾನು ಅನುಕರಣೆಯ ತರ್ಕದ ಮಾತು ಆಡುವೆ, ಮತ್ತು ನಿನ್ನ ಭಜನೆ ಪಾಡುವೆ; ನನ್ನ ಹತ್ತಿರ ಸಹಜಗುಣವಿಲ್ಲ ನಿಜಭಕ್ತಿಯಿಲ್ಲ. ಆದರೆ ಸಕಲ ಕಾರ್ಯಕರ್ತನೂ ನೀನೆ ಎಂದು ಒಂದೇ ಮನಸ್ಸಿನಿಂದ ನಿನ್ನ ಗುಣಗಾನ ಮಾಡಿದರೆ ನಿನ್ನಲ್ಲಿ ವಿಶ್ವಾಸವಿಟ್ಟರೆ ನೀನು ಕೂಡಲ ಸಂಗಮದೇವಾ ನನಗೆ ಕರುಣೆಯ ಕನ್ನಡಿ ತೋರಿಸದೆ ಇರುವೆಯಾ?

**೨೮೭ ಓತಿ ಬೇಲಿವರಿದಂತೆ ಎನ್ನ ಮನವಯ್ಯಾ,**
**ಹೊತ್ತಿಗೊಂದು ಪರಿಯಪ್ಪ ಗೋಸುಂಬೆಯಂತೆನ್ನ ಮನವು;**
**ಬಾವುಲ ಬಾಳುವೆಯಂತೆನ್ನ ಮನವು !**
**ಕಡುವಿರುಳೊಳಿದ್ದ ಕುರುಡಂಗೆ ಅಗಸೆಯಲ್ಲಿ ಬೆಳಗಾದಂತೆ-**
**ನಾನಿಲ್ಲದ ಭಕ್ತಿಯ ಬಯಸಿದರುಂಟೆ**
**ಕೂಡಲ ಸಂಗಮದೇವಾ ?**

ಬೇಲಿಯನ್ನು ಬಿಟ್ಟು ಬಾರದ ಓತಿಕಾಟನಂತೆ, ತ್ರಿಕಾಲಕ್ಕೊಂದೊಂದು ಬಣ್ಣದಲ್ಲಿ ಬದಲಿಸಿ ಸೋಗಯಿಸುವ ಊಸರಗಟ್ಟೆಯಂತೆ,ತೊಗಲಬಾವುಲಿ ಪಕ್ಷಿಯ ಜೀವನದಂತೆ, ನನ್ನ ಮನಸ್ಸು ಸಂಸಾರಮಯವಾಗಿ ಸೆರೆಹಿಡಿದಹಕ್ಕಿಯಂತಾಗಿದೆ. ಅಲ್ಲದೆ ನಡುರಾತ್ರಿಯಲ್ಲಿ ಎದ್ದು ಹೊರಟಕುರುಡನಿಗೆ ಅಗಸೆ ದಾಟುವದರೊಳಗಾಗಿಯೇ ಬೆಳಗಾಗುವಹಾಗೆ ಮನಸ್ಸಿಲ್ಲದ ಭಕ್ತಿಯನ್ನು ಬೇಡಿ ಬಯಸಿದರು ಮುಕ್ತಿದೊರೆಯಲು ಸಾಧ್ಯವೆ? ಕೂಡಲ ಸಂಗಮದೇವಾ.

**೨೮೮ ಸತ್ಯ ಸಂಬಂಧ ಸಯುವಾದ ಭೃತ್ಯಾಚಾರ ವೆನಗಿಲ್ಲವಯ್ಯಾ;**
**ಅನುದಿನ ನಿಮ್ಮ ನೆನೆಯುಲು ಭಕ್ತಿಯಿಲ್ಲವಯ್ಯಾ—**
**ಎನಗೆ, ಕೂಡಲ ಸಂಗವುದೇವಾ, ಕರುಣೀ, ಕೃಪೆಯು**
**ಮಾಡಯ್ಯಾ;**

ಸತ್ಯದೇವಿಯೊಡನೆ ಬಂಧುತ್ವ ಬೆಳೆಸಿಕೊಂಡಿರವ ನನ್ನ ಆತ್ಮಕ್ಕೆ ಸೇವೆಮಾಡುವ ಬುದ್ಧಿಯಿಲ್ಲವಯ್ಯಾ; ನಿರಂತರವೂ ನಿನ್ನ ನಾಮುಸ್ಮರಣೆ ಮಾಡಲು ಭಕ್ತಿಯೇ ಇಲ್ಲದಾಗಿದೆ ನನ್ನ ಬಳಿ;ಕರುಣಾಂಬುಧಿಯಾದ ಕೂಡ ಲಸಂಗಮ ದೇವನೆ ನನಗೆ ಕೃಪೆಮಾಡಿ ಉದ್ಧರಿಸು.

**೨೮೯ ಶಬ್ದ ಸಂಭಾಷಣೆಯು ನುಡಿಯು ವರ್ಣಿಸಿ ನುಡಿವೆ;**
**ತೊಡಹದ ಬಣ್ಣದ ಕೆಲಸದಂತೆ**
**ಕಡಿಹಕ್ಕೆ ಒರೆಗೆ ಬಾರದು, ನೋಡಾ!**
**ಎನ್ನ ಮನದಲೊಂದು, ಹೃದಯುದಲೊಂದು**
**ವಚನದಲೊಂದು ನೊಡಾ:**
**ಕೂಡಲ ಸಂಗವುದೇವಾ, ಆಸುಭಕ್ತನೆಂಬ**
**ಹುಸಿಯು ಮುಸಕವನೇನ ಬಣ್ಣಿಸುವೆನಯ್ಯಾ?**

ಕಿವಿಗೆ ಇಂಪಾಗಿ, ಸೂಂಪಾಗಿ ಹಿತವಾಗಿ ಮಿತವಾಗಿ ಮಾತು ಕಟ್ಟಿ ನುಡಿಯುವ ನನ್ನ ಮಾತುಗಳು ಮಣ್ಣಿನ ಆಭರಣಗಳಿಗೆ ಬಂಗಾರದ ಬಣ್ಣ ಬಳಿದು ಇಟ್ಟಂತೆ ಅವು ಕಡಿದು ಒರೆಗಲ್ಲ ಮೇಲೆ ತಿಕ್ಕಲು ಸಾಧ್ಯವೇಇಲ್ಲ. ಹಾಗೆ ಹೃದಯುದಲ್ಲಿ ಕಪಟ, ಮನದಲ್ಲಿ ಮೋಹ, ಮಾತಿನಲ್ಲಿ ಬೆಲ್ಲ ತುಂಬಿ ಕೊಂಡಿರುವ ನನ್ನ ಭಕ್ತಿಯ ಬಗೆಯನ್ನೂ ಭಕ್ತನೆಂದು ಸುಳ್ಳು ಮುಸುಕು ಹೊದ್ದಿರುವದನ್ನೂ ಏನೆಂದು ವರ್ಣಿಸಲಿ ಕೂಡಲ ಸಂಗವುದೇವಾ.

**೨೯೦ ಹಾಲ ತೊರೆಗೆ ಬೆಲ್ಲದ ಕೆಸರು, ಸಕ್ಕರೆಯು ಮಳಲು,**
**ತವರಾಜದ ನೊರೆ ತೆರೆಯುಂತೆ,**
**ಆದ್ಯರ ವಚನವಿರಲು,**

**ಬೇರೆ ಜಾವಿಯ ತೋಡಿ ಉಪ್ಪನೀರನುಂಬುವನ ವಿಧಿಯಂತೆ
ಆಯಿತ್ತೆನ್ನ ಮತಿ, ಕೂಡಲ ಸಂಗಮದೇವಾ.**

ಹಾಲಿನ ಹಳ್ಳದಲ್ಲಿ ಬೆಲ್ಲದ ಕೆಸರು ತುಂಬಿಕೊಂಡು ಮಳಲ ಸಕ್ಕರಿಯನ್ನು ದಂಡೆಗೆರಗಿಸಿ ತವರಾಜ ಹಿಟ್ಟು ಸಕ್ಕರೆಯ ನೊರೆಯು ತೆರೆಹಬ್ಬಿಸುತ್ತ ಹರಿಯುತ್ತಿರುವ ಆದ್ಯರ ಅನುಭವದ ನುಡಿಯಿರಲು ಬೇರೆಯವರ ಮಾತು ಕೇಳಿ-ಉಪ್ಪು ನೀರು ಕುಡಿದು ಬಾಯಿ ಕೆಡಿಸಿಕೊಂಡ ಹಾಗೆ ಆಗಿದೆ ನನ್ನ ತಿಳಿಗೇಡಿತನ, ಕೂಡಲ ಸಂಗಮದೇವಾ.

**೨೯೧ ಜನ್ಮ ಹೊಲ್ಲೆಂಬೆನೆ: ಜನ್ಮವ ಬಿಡಲಹೆನು;
ಭಕ್ತರೊಲವ ಪಡೆವೆನೆ: ಭಕ್ತಿಯ ಪಥವ ನರಿವೆನು;
ಲಿಂಗವೆಂದು ಬಲ್ಲೆನೆ: ಜಂಗಮವೆಂದು ಕಾಣ್ಬೆನು;
ನಿಚ್ಚ ನಿಚ್ಚ ಶಿವರಾತ್ರಿಯ ಮಾಡಬಲ್ಲೆನೆ;
ಕೈಲಾಸವ ಕಾಣಬಲ್ಲೆನು !
ಎನ್ನಲ್ಲಿ ನಡೆಯಿಲ್ಲವಾಗಿ, ನಾನು ಭಕ್ತನೆಂತೆಪ್ಪೆನಯ್ಯಾ,
ಕೂಡಲ ಸಂಗಮದೇವಾ ?**

ಈ ಜನ್ಮ ಹೇಸಿಯಂದು ಹೇಳಲೆ—ಜನ್ಮವನ್ನು ಬಿಡಲು ಸಾಧ್ಯವಿಲ್ಲದಾಗಿದೆ. ಭಕ್ತರ ಪ್ರೀತಿಯನ್ನು ಗಳಿಸಬೇಕಾದರೆ-ಮೊದಲು ಭಕ್ತಿಯ ದಾರಿ ಕಾಣಬೇಕಾಗುತ್ತದೆ. ಲಿಂಗವು ಸತ್ಯಲಿಂಗವೆಂದು ತಿಳಿದರೆ—ಜಂಗಮ ರೂಪದಲ್ಲಿ ಆಲಿಂಗವನ್ನು ಮೊದಲು ಕಾಣುವ ಸೌಭಾಗ್ಯಬೇಕು. ನಿತ್ಯ ನಿತ್ಯ ಶಿವೋಪಾಸನೆ, ರುದ್ರಪೂಜೆ ಮಾಡಬಹುದಾದರೆ—ಕೈಲಾಸವನ್ನೇ ಕಾಣಬಹುದಾಗಿದೆ; ಅದರ ಪ್ರತಿಫಲವಾಗಿ; ಆದರೆ ಕೂಡಲ ಸಂಗಮ ದೇವನೆ ನನ್ನಲ್ಲಿ ಚಾರಿತ್ರ್ಯವಿಲ್ಲದಾಗಿ ನಾನು ಭಕ್ತನಾಗುವ ದಾರಿಯಾವುದು?

**೨೯೨ ಉಡುವಿನ ಭಾವದಲ್ಲಿ ಹಡೆದರೆಮ್ಮವರು:
ಊಸರವಳ್ಳಿಯಂತೆ ಎನ್ನಿರವು—
ಬಾವುಲ ಬಾಳುವೆಯ ತೆರನಂತೆ !**

**ಹೊತ್ತಾರೆ ಎದ್ದ ಕುರುಡಂಗೆ**
**ಅಗಸೆಯಲ್ಲಿ ಅಸ್ತಮಾನವಾದಂತೆ;**
**ಆನುಭಕ್ತಿಯ ಬಯಸಿದರಹುದೆ**
**ಕೂಡಲ ಸಂಗಮದೇವಾ ?**

ಉಡದ ಸ್ವಭಾವದ ಹಾಗೆ ನಮ್ಮವರು (ಶರಣರು) ಧೃಡ ಮನದಿಂದ ಹರಕರುಣೆಯನ್ನು ಪಡೆದರು; ಆದರೆ ನನ್ನ ಜೀವನವು ತಾಸಿಗೊಂದು ಬಣ್ಣ ತಾಳುವ ಊಸರ ಬಳ್ಳಿಯ ಹಾಗೆ ಚಂಚಲ ಬುದ್ಧಿಯ ಬದಗನ ಕೈಗೆ ಸಿಕ್ಕು ತೊಳಲುತ್ತಿದೆ–ತೊಗಲ ಬಾವುಲ ಹಕ್ಕಿಯ ಜೀವನದಂತೆ; ನಸುಕಿನಲ್ಲಿ ಎದ್ದು ದಾರಿ ನಡೆವ ಕುರುಡನಿಗೆ ಅಗಸೆಯಲ್ಲಿಯೇ ಹೊತ್ತು ಮುಣುಗಿ ಕತ್ತಲಾದ ಹಾಗೆ ಹೃದಯ ಶೂನ್ಯನಾದ ನಾನು ಭಕ್ತಿಯನ್ನು ಬೇಡಿದರೆ ಬರುತ್ತದೆಯೇ ಕೂಡಲ ಸಂಗಮದೇವಾ.

**೨೯೩ ಬಸುರ ಬಾಳುವೆಗೆ ನಿಮ್ಮಲ್ಲಿ—**
**ಮನೆಯ ಹೊಸಿ ನೇರಿಲ ಹಣ್ಣ ಮಾರುವಂತೆ**
**ಕಾಲ ಸಾಲ ದಾರಿದ್ರ್ಯಕ್ಕಂಜಿ ಹಣ್ಣು ಮಾರುವಂತೆ**
**ಆವುದು ಹುಸಿಯೆಂಬೆ ? ಆವುದು ಕಿರಿದೆಂಬೆ ?**
**ಇದ ನೀನೇ ಬಲ್ಲೆಯಯ್ಯಾ,**
**ಕೂಡಲ ಸಂಗಮದೇವಾ,**
**ನಾನು ಉದರ ಪೋಷಕನಯ್ಯಾ !**

ಮಸಿ ಬಳಿದುಕೊಂಡು ನೀರಲ ಹಣ್ಣು ಮಾರುವ ಸೋಗು ಹಾಕಿದಂತೆ ಪ್ರಪಂಚಕ್ಕಾಗಿಮಾಡಿದ ಸಾಲದ ಸೆಳಿತಕ್ಕೆ ಹೊಟ್ಟೆನೋವು, ಎಂದು ಹೇಳಿದಂತೆ ಬಡತನದ ಭವಣೆಗಂಜಿ ದೇವಾ ನಿನ್ನ ಬೆನ್ನಿಗೆ ಬಿದ್ದಿರುವೆ; ಯಾವುದು ಸುಳ್ಳು— ಯಾವುದು ಸತ್ಯ; ಎಂಬುದೆಲ್ಲನೀನೆ ಬಲ್ಲೆ. ಕೂಡಲ ಸಂಗಮದೇವಾ ನಾನು ಕೇವಲ ಹೊಟ್ಟೆತುಂಬಿಕೊಳ್ಳುವ ಬಡಪ್ರಾಣಿ.

**೨೯೪ ಮೂಗ ಕಂಡ ಕನಸಿನಂತಾಯಿತ್ತೆನ್ನ ಭಕ್ತಿ;**
**ಗುಣವ ಹೇಳಬಾರದಾರಿಗೆಯೂ; ಕೇಳಲೆಂತೂ ಬಾರದು!**
**ಎನ್ನ ಹಗೆತನವ ಮಾಣಿಸು, ಕೂಡಲ ಸಂಗಮದೇವಾ.**

ನನ್ನ ಭಕ್ತಿ ಯಾರಿಗೂ ಹೇಳಲೂ ಬಾರದ, ಕೇಳಲೂ ಬಾರದ, ಮೂಕ ಕಂಡ ಕನಸಿನಂತಿದೆ. ಆದರೆ ನನ್ನಲ್ಲಿ ಹುಟ್ಟಿದ ದ್ವೇಷವನ್ನು ಕಡಿದು ಹಾಕು ಕೂಡಲ ಸಂಗಮದೇವಾ.

**೨೯೫ ಕಾಣಿಯ ಲೋಭ ಕೋಟಿಯ ಲಾಭವ**
**ಕೆಡಿಸಿದುದನಾನರಿಯೆನಯ್ಯಾ.**
**ಭಕ್ತಿಯ ಕುಳವ ನಾನರಿಯದೆ**
**ಮತಿಗೆಟ್ಟ ಪರಿಯ ನೋಡಯ್ಯಾ.**
**ಕೂಡಲ ಸಂಗನ ಶರಣರ ಸಂಗದಿಂದಲರಿದರೆ**
**ನಾನು ಬದುಕುವೆನಯ್ಯಾ.**

ಅಲ್ಪಕ್ಕಾಗಿ ಕಲ್ಪಕಳೆದುಕೊಂಡರೆಂಬ ಶಾಸ್ತ್ರದಂತೆ ಕಾಣಿಯ ಆಸೆಗೆ ಬಿದ್ದು ಕೋಟಿ ಲಾಭಬರುವದನ್ನು ಕೆಡಿಸಿಕೊಂಡ ವ್ಯಾಪಾರವನ್ನು ನಾನೆಲ್ಲಿಯೂ ನೋಡಿಲ್ಲ. ಆದರೆ ಭಕ್ತಿಯ ರೀತಿಯನ್ನೇ ಅರಿಯದ ನಾನು ಕೊಳಕ ಬುದ್ಧಿಯ ಕುಲ್ಲನಾಗಿರುವೆ. ಶರಣರ ಸಂಗದಿಂದ ಭಕ್ತಿಯ ಮಾರ್ಗ ಅರಿತರೆ ನನ್ನ ಜೀವನ ಸಾರ್ಥಕವಾಗುತ್ತದೆ.

**೨೯೬ ಏನನೋಡಿ, ಏನಕೇಳಿ, ಏನ ಮಾಡಿಯೂ ಫಲವೇನು**
**ನಿಮ್ಮವರೊಲಿಯದನ್ನಕ್ಕ?**
**ಶಿವ, ಶಿವ, ಮಹಾದೇವಾ,**
**ಬಾಳಿಲ್ಲಿದವಳ ಓಲೆಯಂತಾಯಿತ್ತೆನಗೆ,**
**ಕೂಡಲ ಸಂಗಮದೇವಾ.**

ಶಿವ ಶರಣರ ಪ್ರೀತಿಗೆ ಪಾತ್ರನಾಗದ ವಿನಃ ಏನುಓದಿದರೂ ಏನು ಕೇಳಿದರೂ, ಮತ್ತು ಏನು ಮಾಡಿದರೂ ಪ್ರಯೋಜನವಿಲ್ಲ. ಅದೆಲ್ಲ ವಿಧವೆಯ ಕಿವಿಯಲ್ಲಿರುವ ಬೆಂಡವೋಲೆ ಇದ್ದಹಾಗೆ. ಶಿವ, ಶಿವ, ಮಹಾದೇವ ನಿನ್ನ ಕೃಪೆಯಿಲ್ಲದ ಬಾಳು ನಿರ್ಜೀವ ಬಾಳು.

**೨೯೭ ಮುನ್ನೂರರವತ್ತು ದಿನ ಶ್ರವವ ಮಾಡಿ.**
**ಕಳನೇರಿ ಕೈಮರೆದಂತಾಯಿತ್ತೆನ್ನ ಭಕ್ತಿ!**
**ಎನಿಸು ಕಾಲ ಲಿಂಗಾರ್ಚನೆಯ ಮಾಡಿ ಏವೆನಯ್ಯಾ**
**ಮನದಲ್ಲಿ ಧೃಡವಿಲ್ಲದನ್ನಕ್ಕ?**
**ಕೊಡನ ತುಂಬಿದ ಹಾಲ ಕೆಡಹಿ,**
**ಉಡುಗಲೆನ್ನಳವೆ ಕೂಡಲ ಸಂಗಮದೇವಾ.**

ಮುನ್ನೂರರವತ್ತು ದಿನವೂ ದುಡಿದು ರೂಢಿಮಾಡಿ ಕತ್ತಿಹಿಡಿದು ಯುದ್ಧ ಮಾಡಲು ಹೋಗಿ ಕೈನಿಂತು ಹೋದಂತೆ ನನ್ನ ಭಕ್ತಿ, ಎಷ್ಟೋ ಕಾಲ ಲಿಂಗ ಪೂಜೆಮಾಡಿದರೂ ಮನದಲ್ಲಿ ಸ್ಥಿರತೆ ಬಾರದ್ದಕ್ಕೆ ಏನು ಮಾಡಿದರೂ ಬಿರಿಯಿತು. ಹಾಲು ತುಂಬಿದ ಕೊಡ ಉರುಳಿಸಿ ಪುನಃ ಅದನ್ನು ಬಳಿದು ತುಂಬುವ ಯೋಗ್ಯತೆ ನನ್ನಲ್ಲಿಲ್ಲ ಕೂಡಲ ಸಂಗಮದೇವಾ.

**೨೯೮ ಶಬ್ದ ಸುಖಕ್ಕೆ ಮೆಚ್ಚಿ, ಮಾತಿಂಗೆ ಮಾತನೆ ಕೊಟ್ಟು,**
**ಕೆಟ್ಟೆನಯ್ಯಾ!**
**ಅನುಭಾವ ಅಕ್ಕನೆಯಾಗದೆ, ಬೆಬ್ಬನೆ ಬೆರೆತನಯ್ಯಾ**
**ಅಮೃತದ ಕೊಡನ ತುಂಬಿ ಒಡೆಯೆ ಹೊಯ್ದು**
**ಅರಸಲುಂಟೆ?**
**ಸ್ವಾಮಿ-ಭೃತ್ಯಸಂಬಂಧವೇ ಎನ್ನ ಭಕ್ತಿ,**
**ಪ್ರತ್ಯುತ್ತರ ನಾಯಕನರಕ, ಕೂಡಲ ಸಂಗಮದೇವಾ.**

ಆದ್ಯರ ಅನುಭವದ ನುಡಿಗಳು ಅಪ್ರೀಯವಾಗಿ, ಬಣ್ಣಗಾರನ ಸವಿ ಮಾತಿಗೆ ಒಲಿದು, ಅವನಿಗೆ ಮಾತು ಕೊಟ್ಟು ನಾನು ಗೋಳಾಡುತ್ತಿರುವೆ. ಅಮೃತದಿಂದ ತುಂಬಿದ ಕೊಡವನ್ನು ಒಡೆಯುವಹಾಗೆ ಕೋಲಿನಿಂದ ಹೊಡೆದು ಮರಳಿ ಅದು ಎಲ್ಲಿದೆ ಎಂದು ಹುಡುಕುವದು ಸರಿಯೆ? ನನ್ನ ಭಕ್ತಿ ಯಜಮಾನ-ಸೇವಕರಂತೆ ಅತಿ ನಿಕಟವಾಗಿದೆ. ಒಡೆಯನಿಗೆ ತಿರುಗಿ ಉತ್ತರ ಕೊಟ್ಟಿದ್ದಾದರೆ ಘೋರನರಕ ವಾಗುತ್ತದೆ ಕೂಡಲ ಸಂಗಮದೇವಾ.

**೨೯೯ ಅಂಕ ಓಡಿದರೆ ತೆತ್ತಿಗಂಗೆ ಭಂಗವಯ್ಯಾ:**
**ಕಾದಿ ಗೆಲಿಸಯ್ಯಾ, ಎನ್ನನು**
**ಕಾದಿ ಗೆಲಿಸಯ್ಯಾ, ಕೂಡಲ ಸಂಗಮ ದೇವಯ್ಯಾ,**
**ಎನ್ನ ತನು ಮನ ಧನದಲ್ಲಿ ವಂಚನೆಯಿಲ್ಲದೆ.**

ದಂಡಾಳು ಯುದ್ಧಬಿಟ್ಟು ಓಡಿಹೋದರೆ ದಳಪತಿಗೆ ಕಳಂಕ ಬರುತ್ತದೆ. ಹಾಗೆ ಈ ಪ್ರಪಂಚ ಕಾಳಗದಲ್ಲಿ ನನ್ನ ತನು-ಮನ-ಧನಗಳಲ್ಲಿ ಯಾವ ತರಹದ ಮೋಸ, ಸುಳ್ಳು, ಹಾದರಗಳಿಲ್ಲದಂತೆ ಮಾಡಿ ನನಗೆ ಗೆಲವು ದೊರಕಿಸಿ ಕೊಡು ಕೂಡಲ ಸಂಗಮದೇವಾ.

**೩೦೦ ಹೇಡಿ ಬಿರುದ ಕಟ್ಟಿದಂತಾಯಿತೆನ್ನ ವೇಷ:**
**ಕಾದಬೇಕು ಕಾದುವರೆ ಮನವಿಲ್ಲ-**
**ಆಗಳೇ ಹೋಯಿತ್ತು ಬಿರುದು:**
**ಹಗರಣ ನಗೆಗೆಡೆಯಾಯಿತ್ತು!**
**ಮಾರಂಕ ಜಂಗಮ ಮನೆಗೆ ಬಂದಡೆ,**
**ಕಾಣದಂತಡ್ಡ ಮುಸುದಿಟ್ಟಡೆ,**
**ಕೂಡಲ ಸಂಗಮ ದೇವ, ಜಾಣ, ಮೂಗ ಹಲುದೋರೆ ಕೊಯ್ವ**

ರಣಹೇಡಿ ಪೌರುಷದ ಅಂಕಿತಗಳನ್ನು ಹೇಳಿಕೊಂಡಂತೆ ನನ್ನ ಭಕ್ತಿಯ ವೇಷ ಭೋಜನಕ್ಕೆ ಸರಿಯಾಗಿದೆ. ಯುದ್ಧಮಾಡುವ ಧೈರ್ಯವಿಲ್ಲ. ಹಾಗೆ ಭಕ್ತಿಯ ಭಾವ ಅಳಿದು ಭಕ್ತನೆಂಬ ಹೆಸರು ಕೂಡಾ ಅಳಿಸಿಹೋಗಿ ಜನತೆಯಲ್ಲಿ ನಗೆಗೇಡಾಗಿದೆ. ಪ್ರತಿಸ್ಪರ್ಧಿಯಾಗಿ ಮನೆಗೆ ಜಂಗಮ ಬಂದರೆ ಅವನಿಗೆ ಕಾಣದಂತೆ ಮುಖ ಅಡಮಾಡಿಟ್ಟುಕೊಂಡು ತಲೆ ಮರೆಸಿಕೊಂಡರೆ ಕೂಡಲ ಸಂಗಮ ದೇವನು ಹಲ್ಲು ಹಿಡಿದು ಮೂಗು ಕೊಯ್ಯುತ್ತಾನೆ.

**೩೦೧ ಅಚ್ಚ ಶರಣರು ನಿಮ್ಮ ನಿಚ್ಚ ನಿಚ್ಚ ನೆನೆವರು:**
**ಬಚ್ಚ ಬರಿಯ ಮಾತನಾಡುವೆನು!**

**ಒಪ್ಪಚ್ಚಿ ಅರೆಭಕ್ತಿ ನೆನೆಯಲೀಯದು ನಿಮ್ಮ;**
**ನೆಚ್ಚರು ನಿಮ್ಮ ಶರಣರು ಎನ್ನ,**
**ಕೂಡಲ ಸಂಗಮದೇವಾ.**

ಕೂಡಲ ಸಂಗಮ ದೇವನೆ, ನಿಜವಾದ ಶರಣರು ನಿನ್ನನ್ನು ದಿನಂ ಪ್ರತಿ ಹಾಡಿ ಹರಸುತ್ತಾರೆ, ಆದರೆ ಅರೆ ಭಕ್ತಿಯ ಅಂದಗಾರನಾದ ನಾನು ನಿನ್ನನ್ನು ಕುರಿತು ಒಮ್ಮೆಯೂ ಭಜಿಸದೆ ಕೇವಲ ಆಗದ ಹೋಗದ ಬರಿ ಮಾತಗಳನ್ನಾಡುವದರಿಂದ ನಿನ್ನ ಶರಣರು ನನ್ನನ್ನು ಪ್ರಿತಿಸುವದಿಲ್ಲ.

**೩೦೨ ಆಡುವದಳವಟ್ಟಿತ್ತು, ಹಾಡುವುದಳವಟ್ಟಿತ್ತು;**
**ಅರ್ಚನೆಯುಳವಟ್ಟಿತ್ತು, ಪೂಜನೆಯುಳವಟ್ಟಿತ್ತು;**
**ನಿತ್ಯ ಲಿಂಗಾರ್ಚನೆ ಮುನ್ನವೆಯುಳವಟ್ಟಿತ್ತು:**
**ಕೂಡಲ ಸಂಗನ ಶರಣರು ಬಂದರೆ**
**"ಏಗುವುದು ಏ ಬೆಸನೆ"ಂಬುದು ಒಪ್ಪಚಿ ಯುಳವಡದು!**

ನೃತ್ಯ ಮಾಡುವದು, ಹಾಡುವದು, ಪೂಜೆ ನಮಸ್ಕಾರ ಮಾಡುವದು, ನಿತ್ಯವೂ ಲಿಂಗಪೂಜೆ ಆರೋಗಣೆ ಮಾಡುವದು ಎಲ್ಲವೂ ರೂಢಿಯಾಗಿ ನನ್ನ ಜೀವನದ ಒಂದಂಗವಾಗಿವೆ. ಆದರೆ ಕೂಡಲ ಸಂಗಮದೇವನ ಶರಣರು ಬಂದರೆ "ಏನು ಸೇವೆ ಮಾಡಬೇಕು, ಏನಪ್ಪಣೆ" ಎಂದು ವಿನಯಪೂರ್ವಕವಾಗಿ ಬೇಡಲು, ಒಂದು ಸಾರೆಯೂ ನನ್ನ ಬಾಯಿಂದ ಬಾರದಾಗಿದೆ?

**೩೦೩ ಒಡೆಯರಿಗೆ ಒಡವೆಯನೊಪ್ಪಿಸಲಾರದೆ**
**ಮೊರೆಯಿಡುವ ಮನವ ನಾನೇನೆಂಬೆ?**
**ನೆತ್ತಿಯಲ್ಲಿ ಅಲಗ ತಿರುಹುವಂತಪ್ಪ**
**ವೇದನೆಯುಹುದೆನಗೆ!**
**ಕೊಯಿದ ಮೂಗಿಂಗೆ ಕನ್ನಡಿಯ ತೋರುವಂತಪ್ಪ**
**ವೇದನೆಯುಹುದೆನಗೆ!**
**ಬೆಂದ ಹುಣ್ಣ ಕಂಬಿಯಲ್ಲಿ ಕೀಸುವಂತಪ್ಪ**
**ವೇದನೆಯುಹುದೆನಗೆ!**

**ಕೂಡಲ ಸಂಗಮದೇವ ಮಾಡಿ ನೋಡುವ ಹಗರಣವ**
**ನಾಮಾಡಿಹೆನೆಂದರೆ ಮನಕ್ಕೆ ಮನ ನಾಚದೆ, ಅಯ್ಯಾ?**

ಯಜಮಾನನಿಂದ ಪಡೆದ ಆಭರಣಗಳನ್ನು ಪುನಃ ಯಜಮಾನನಿಗೆ ಕೊಡದೆ ನನಗೆ ಕರುಣೆದೋರಿ ಕಾಪಾಡು ಎನ್ನುವ ಸೇವಕನಂತೆ ಸರ್ವ ಸಂಗ ಪರಿತ್ಯಾಗಮಾಡಿ–ತನು–ಮನಗಳನ್ನು ಈಶ್ವರನಿಗೆ ಒಪ್ಪಿಸದೆ ನನಗೆ ಮುಕ್ತಿಕೊಡು ಎಂದು ಬೇಡುವ ಮನಸ್ಸಿಗೆ ಏನೆಂದು ತಿಳಿ ಹೇಳಬೇಕು. ನೆತ್ತಿಯಲ್ಲಿ ಚೂರಿ ಇಟ್ಟು ತಿರುವುವ ನೋವಿನಂತೆ, ಮೂಗು ಕೊಯಿಸಿ ಕೊಂಡು ಕನ್ನಡಿ ಹಿಡಕೊಂಡು ನೋಡಿದರೆ ಆ ಯಾತನೆ ಮರಕಳಿಸಿ ಹೃದ ಯದಲ್ಲಿ ಚೂರಿ ಚುಚ್ಚಿದಂತಾಗುವಂತೆ, ಸುಟ್ಟು ಹುಣ್ಣಾದ ಭಾಗದಲ್ಲಿ ಮತ್ತೆ ಡಬ್ಬಣದಿಂದ ಚುಚ್ಚಿನೋವು ಮಾಡಿದಂತೆ, ಕೂಡಲ ಸಂಗಮದೇ ವನನ್ನು ಸರಿಗಟ್ಟಿಕೊಂಡು ಆವನ ಲೀಲೆಗಳನ್ನು ನಾಮಾಡಲು ಹೋಗು ವದೆಂದರೆ ನನ್ನ ಮನಸ್ಸಿಗೆ ನಾಚಿಕಿಯಾಗದೆ ಇರುತ್ತದೆಯೇ?

**೩೦೪ ಹೊರಿಸಿಕೊಂಡು ಹೋದ ನಾಯಿ; ಮೊಲನೇನ**
**ಹಿಡಿಯುವದಯ್ಯಾ?**
**ಇರಿಯದ ವೀರ: ಇಲ್ಲದ ಸೊಬಗುವ ಹೇಳುವುದೇ**
**ನಾಚಿಗೆ!**
**ಆನು ಭಕ್ತನೆಂತಪ್ಪೆನಯ್ಯಾ, ಕೂಡಲ ಸಂಗಮದೇವಾ?**

ಬೇಟೆಗೆಂದು ತೆಗೆದುಕೊಂಡು ಹೋಗುವ ನಾಯಿಯನ್ನು ಹೆಗಲ ಮೇಲೆ ಹೊತ್ತುಕೊಂಡು ಹೋದರೆ ಅದು ಮೊಲದ ಬೇಟೆಯನ್ನೇ ನಾಡು ತ್ತದೆ? ಯುದ್ಧದಲ್ಲಿ ಯಾರಿಗೂ ಗಾಯ ಮಾಡದ ವೀರ, ಹಾಗೆ ಮಾಡಿದೆ, ಹೀಗೆ ಮಾಡಿದೆ ಎಂದು ಇಲ್ಲದ್ದೊಂದು ಬಡಾಯಿ ಕೊಚ್ಚಿಕೊಂಡು ಉತ್ತ ರನ ಪೌರುಷ ಹೇಳುವದು ನಾಚಿಗೆಗೇಡು. ಈತೆರ ಭಕ್ತಿಯನ್ನು ಮಾಡದೆ ಭಕ್ತಿಯ ಬಡಿವಾರದ ಬಾಳನ್ನು ಬೆರಸಿದರೆ ನಾನು ನಿಜ ಭಕ್ತನಾಗುವ ದಾರಿ ಯಾವುದು ಕೂಡಲ ಸಂಗಮದೇವಾ?

೩೦೫ ಎನ್ನ ಭಕ್ತನೆಂದೆಂಬರು:
ಎನ್ನ ಹೊರಹಂಚೆ ಒಳಬೊಳ್ಳೆತನವನರಿಯರಾಗಿ!
ಎನ್ನ ಮಾನಾಪಮಾನ ಶರಣರಲ್ಲಿ; ಜಾತಿ-ವಿಜಾತಿಯು
ಶರಣರಲ್ಲಿ;
ತನು-ಮನ-ಧನವೂ ಶರಣರಲ್ಲಿ.
ವಂಚನೆಯುಳ್ಳ ಡಂಭಕ ನಾನು:
ತಲೆಯೊಡೆಯಂಗೆ ಕಣ್ಣ ಬೈಚಿಡುವೆ,
ಕೂಡಲ ಸಂಗಮದೇವಾ.

ಮೋಸದ ಬಲೆ ಬೀಸಿ ಮೇಲೆ ಜನರ ಕಣ್ಣಿಗೆ ಮಣ್ಣೆರಚಲು ವೇಷಧಾರಿ ಭಕ್ತನ ಬಣ್ಣ ಬಳಿದುಕೊಂಡು ಸಾಗಿರುವ ನನ್ನ ಅಂತರಂಗದಲ್ಲಿ ಎಷ್ಟು ಅಂಶ ಒಳ್ಳೆಯ ಗುಣವಿದೆ ಎಂಬುದನ್ನು ತಿಳಿಯದೆ ಜನರು ನನಗೆ ಭಕ್ತನೆಂದು ಕರೆದು ಮನ್ನಣೆ ಕೊಡುತ್ತಲಿದ್ದಾರೆ. ಆದರೆ ನನ್ನ ಮಾನಹೋಗುವದು-ಬರುವದು ಶರಣರ ಸಮ್ಮುಖದಲ್ಲಿ; ಜಾತಿ ಎತ್ತಿಎಣಿಸುವದೂ ಶರಣರ ಹಿರಿತನದಲ್ಲಿ; ನನ್ನ ಸರ್ವಸಂಪತ್ತೂ ಶರಣರೆ ಇರುವಾಗ ತಲೆಯೊಡೆಯಲು ಬಂದವನೆದುರಿಗೆ ಕಣ್ಣು ಮುಚ್ಚಿ ಕೂಡ್ರುತ್ತೇನೆ ಕೂಡಲ ಸಂಗಮದೇವಾ.

೩೦೬ ನೋಡುವರುಳ್ಳರೆ ಮಾಡುವೆ ದೇಹಾರವ:
ಎನಗೊಂದು ನಿಜವಿಲ್ಲ: ಎನಗೊಂದು ನಿಷ್ಪತ್ತಿಯಿಲ್ಲ!
ಲಿಂಗವ ತೋರಿ ಉದರವ ಹೊರೆವ
ಭಂಗಗಾರ ನಾನು, ಕೂಡಲ ಸಂಗಮದೇವಾ!

ಯಾರಾದರೂ ನನ್ನ ಭಕ್ತಿಯ ಪರವಶತೆಯನ್ನು ನೋಡಬೇಕೆನ್ನುವವರಿದ್ದರೆ- 'ಪಾವಾಡ' ಗಳನ್ನು ಮಾಡಿ ತೋರಿಸುವೆ. ಆದರೆ ನನ್ನ ಈ ಕಾರ್ಯ ನಿಜವೆಂದು ತೋರಿಸುವ ಒಂದು ಪರಿಣಾಮವೂ ಜನರಲ್ಲಿ ಆಗದಿದ್ದುದರಿಂದ, ಲಿಂಗವನ್ನು ತೋರಿಸಿ ಹೊಟ್ಟೆತುಂಬಿಸಿಕೊಳ್ಳುವ ನಾನೊಬ್ಬ ಅವಮಾನಗೇಡಿ ಕೂಡಲ ಸಂಗಮದೇವಾ.

**೩೦೭ ಭಕ್ತಿಯೆಳ್ಳನಿತಿಲ್ಲ: ಯುಕ್ತಿಶೂನ್ಯನಯ್ಯಾ ನಾನು:**
**ತನು ವಂಚಕ, ಮನ ವಂಚಕ, ಧನವಂಚಕ ನಾನಯ್ಯಾ.**
**ಕೂಡಲ ಸಂಗಮದೇವಾ, ಒಳಲೊಟ್ಟೆಯೆನ್ನ ಮಾತು!**

ಭಕ್ತಿಯಂತೂ ಎಳ್ಳಕಾಳಷ್ಟಿಲ್ಲ; ಯುಕ್ತಿಯಂತೂ ಇಲ್ಲವೇ ಇಲ್ಲ. ಮೈಗಳ್ಳ ಮನಗಳ್ಳ, ಧನಗಳ್ಳ ನಾನು; ನನ್ನ ಮಾತುಗಳು ಮೇಲೆ ತಿಳಿನೀರು ತುಂಬಿ ಕೊಂಡು ಒಳಗೆ ಕೊಳಕು ರಾಡಿ ತುಂಬಿದ ನೀರಿನ ಗುಂಡಿ ಕೂಡಲ ಸಂಗಮದೇವಾ.

**೩೦೮ ತನು ನಿಮ್ಮದೆಂಬೆ, ಮನ ನಿಮ್ಮದೆಂಬೆ:**
**ಮತ್ತೆಯೂ ವಂಚನೆ ಮಾಣದಯ್ಯಾ.**
**ಲಿಂಗ ಜಂಗಮ ವೆಂಬೆ, ಜಂಗಮ ಲಿಂಗವೆಂಬೆ:**
**ಮತ್ತೆಯೂ ವಂಚನೆ ಮಾಣದಯ್ಯಾ.**
**ಒಡಲೊಡವೆ ಹಡೆದರ್ಥ ನಿಮ್ಮದೆಂದರಿಯದೆ-**
**ಕೆಮ್ಮನೆ ಕೆಟ್ಟೆ, ಕೂಡಲ ಸಂಗಮದೇವಾ!**

ಈ ದೇಹ, ಮನಸ್ಸು ಧನವೆಲ್ಲವೂ ದೇವಾ ನಿನ್ನದೆ ಎಂದು ತಿಳಿದರೂ ವಂಚಕತನ ಬಿಡದಾಗಿದೆ; ಲಿಂಗವೆ-ಜಂಗಮ, ಜಂಗಮವೇ ಲಿಂಗ ಎಂದು ದ್ವಿಭಾವ ಮಾಡದಿದ್ದರೂ ಮೋಸಗಾರಿಕೆ ಹೋಗದಾಗಿದೆ; ಹೊಟ್ಟೆ ಪಾಡಿಗಾಗಿ-ದೇಹ ಮುಚ್ಚಿಕೊಳ್ಳಲು ದೊರೆತ ಈ ಅನ್ನವಸ್ತ್ರಾದಿಗಳು-ಗಳಿಸಿದ ದ್ರವ್ಯ, ಕೂಡಲಸಂಗಮದೇವಾ ನಿನ್ನದೆಂದು ತಿಳಿಯದೆ ಸುಮ್ಮನೇ ಕೆಟ್ಟು ಹೋದೆ.

**೩೦೯ ಊರ ಸೀರೆಗೆ ಅಗಸ ತಡಬಡಿಹಡೆದಂತೆ,**
**ಹೊನ್ನೆನ್ನದು ಹೆಣ್ಣೆನ್ನದು, ಮಣ್ಣೆನ್ನದೆಂದು ಮರುಳಾದೆ:**
**ನಿಮ್ಮನರಿಯದ ಕಾರಣ ಕೆಮ್ಮನೆ ಕೆಟ್ಟೆ,**
**ಕೂಡಲ ಸಂಗಮದೇವಾ !**

ಊರ ಜನರ ಮಾಸಿದ ಸೀರೆ ವಸ್ತ್ರಗಳು ತನ್ನವೆಂದು ಭಾವಿಸಿ ಅಗಸ ಜಗಳಕಾದಂತೆ- ಸಂಸಾರ ಸಾಗರದಲ್ಲಿಯ ಆಶೆಗನ್ನಡಿಗಳಾಗಿದ್ದ ಹೊನ್ನು,

ಹೆಣ್ಣು ಮತ್ತು ಮಣ್ಣುಗಳು ನನ್ನ ಚಿರಂತನ ವಸ್ತುಗಳೆಂದು ನಂಬಿ ಹುಚ್ಚ ನಾದೆ. ಕೂಡಲ ಸಂಗಮದೇವಾ ನಿನ್ನ ನಿಜಗುಣನಿಧಿಯನ್ನು ತಿಳಿಯದೇ ಮೋಸ ಹೋಗಿ ವ್ಯರ್ಥ ಕೆಟ್ಟೆ.

**೩೧೦ ಅರ್ಥ ಪ್ರಾಣಾಭಿಮಾನ ನಿಮ್ಮದೆಂಬೆ:**
**ಮತ್ತೆಯೂ ಆಸೆ ಬಿಡದನ್ನಕ್ಕ ಭಕ್ತನೆಂತಪ್ಪೆನಯ್ಯಾ ?**
**ಶರಣನೆಂತೆನಿಸುವೆನಯ್ಯಾ !**
**ಕೂಡಲ ಸಂಗನ ಶರಣರ ಸಕಲ ಸತಿಗೆ ಸಲ್ಲದನ್ನಕ್ಕ ?**

ಧನ ಕನಕಾದಿಗಳು- ಈ ಜೀವ ಭಗವಂತನದೆಂದು ನಾಲಿಗೆ ತುದಿ ಯಿಂದ ಹೇಳಿ ಆಸೆಯ ತೊರೆ ಬತ್ತದಿದ್ದಲ್ಲಿ ಭಕ್ತನಾಗುವ ಬಗೆ ಹೇಗೆ? ಶರ ಣನಾಗುವ ರೀತಿ ಹೇಗೆ? ಆ ಸಿರಿ, ಪ್ರಾಣಗಳು ಕೂಡಲ ಸಂಗನ ಶರಣರ ಭೋಗ್ಯ ವಸ್ತುಗಳಾಗದ ವಿನಃ ಯಾವುದೂ ಸಾಧ್ಯವಿಲ್ಲ.

**೩೧೧ ಆನು ನಿಮ್ಮ ಭಕ್ತಿಯಲ್ಲಿ ದರದುರನೆಂಬೆ:**
**ದಿಟಕ್ಕೆ ಬಂದರೆ ಕಾಣದಂತಡ್ಡ ಮೊಗವಿಕ್ಕುವೆ -**
**ಗರುಡಂಗೆ ಘಟಸರ್ಪವ ತೋರುವಂತೆ !**
**ಶಿವಶರಣರೆಂದರೆ ಕಿವಿಗೇಳದಂತಿಹೆನು:**
**ಮನಕ್ಕೆ ಮನವೇ ಸಾಕ್ಷಿಯಯ್ಯಾ, ಕೂಡಲಸಂಗಮದೇವಾ.**

ನಾನು ಭಕ್ತಶ್ರೇಷ್ಠನೆಂದು ಹೇಳಿಕೊಳ್ಳುವೆ. ಈ ಮಾತು ಖಾತ್ರಿ ಯಾಗಬೇಕೆಂದು ಯಾರಾದರೂ ಒರೆ ಹಚ್ಚಲು ಬಂದರೆ ಗರುಡನಿಗೆ ಹಾವು ತೋರಿಸಿ ತಾನು ಪಾರಾಗುವ ಜಾಣತನದಂತೆ ನಾನು ತಲೆ ಮರೆಸಿಕೊಂಡು ಪಾರಾಗುತ್ತೇನೆ. ಶಿವಶರಣರೆಂದು ಯಾರಾದರೂ ಕೂಗಿದರೆ ಕಿವಿ ಕೇಳದ ಕಿವುಡನಾಟ್ಯವಾಡುವೆ. ಈ ನನ್ನ ವೃತ್ತಿಯ ಮನಸ್ಸಿಗೆ ನನ್ನ ಅಂತರಾತ್ಮ ಲಿಂಗವೇ ಸಾಕ್ಷಿ ಕೂಡಲಸಂಗಮದೇವಾ.

**೩೧೨ ಆದ್ಯರ ವಚನ ಪರುಷವೆಂದೆಂಬೆನು:**
**ಆ ಪರುಷ ಎನಗೆಂತು ದೊರೆಕೊಂಬುದಯ್ಯಾ?**

**ತನು-ಮನ-ಧನವ ವಿವರಿಸಿ ನುಡಿವೆ:**
**ಸೋಂಕಿಂಗೆ ಸೈರಿಸಲಾರೆ !**
**ಹೊಲೆಯರ ಮದ್ದಳೆಯಂತೆ ನುಡಿವ ಡಂಭಕ ನಾನಯ್ಯಾ.**
**ಕೂಡಲಸಂಗಮದೇವಾ!**

ಪುರಾತರ ವಚನವು ಪರುಷಮಣಿ ಎಂದು ಹೇಳುವೆ. ಆದರೆ ಆ ಪರುಷಮಣಿ ನನಗೆ ದೊರೆಯುವದು ಹೇಗೆ? ಆಚಾರವ ಹೇಳಿ— ನಡೆಯಲು ಹಿಂಜರಿಯುವ ಚದುರನಂತೆ, ಹೊಲೆಯರ (ಚರ್ಮದ) ಮದ್ದಳೆ ನುಡಿಯುವ ತೆರ ನುಡಿವ ಡಂಭಾಚಾರಿಯಾದ ನನಗೆ ಶಿವಕೃಪೆಯಾಗುವದು ಹೇಗೆ ಕೂಡಲ ಸಂಗಮದೇವಾ?

**೩೧೩ ಕಾಂಚನವೆಂಬ ನಾಯು ನಚ್ಚಿ, ನಿಮ್ಮ ನಾನು**
**ಮರೆದೆನಯ್ಯಾ !**
**ಕಾಂಚನಕ್ಕೆ ವೇಳೆಯಲ್ಲದೆ, ಲಿಂಗಕ್ಕೆ ವೇಳೆಯಿಲ್ಲಾ !**
**ಹಡಿಕೆಗೆ ಮೆಚ್ಚಿದ ಸೊಣಗ**
**ಅಮೃತದ ಸವಿಯು ಬಲ್ಲುದೆ, ಕೂಡಲ ಸಂಗಮದೇವಾ ?**

"ಹಣವೆಂದರೆ ಹೆಣ ಬಾಯಿ ತೆರೆಯಿತು" ಎಂಬ ನಾಣ್ನುಡಿಯಂತೆ ಹಣವಿದ್ದು ಗುಣವಿಲ್ಲದವನ ಬಾಳು ಹದ್ದಿನ ಬಾಳು.ಹಣದಪೂಜಾರಿಯಾಗಿ ಹಗಲಿರುಳೂ ಮಾರುಗಟ್ಟೆಯ ಮಾದಿಗನಾಗಿ ಲಿಂಗಪೂಜೆಗೆ ವೇಳೆಯೇ ಇಲ್ಲ ಎಂದು ಹೇಳುವವನ ಸಂಸಾರ, ರಕ್ತದ ರುಚಿಗಂಡ ನಾಯಿಗೆ ಅಮೃತ ಹೇಗೆ ರುಚಿಸೀತೆಂಬುವ ನಾಯಿಯ ಸಂಸಾರ ಕೂಡಲಸಂಗಮದೇವಾ.

**೩೧೪ ಒಲುವ ಗಂಡನೊಮ್ಮೆ ಒಲ್ಲದಿಪ್ಪ ಕಂಡಯ್ಯಾ !**
**ತಪ್ಪೆನ್ನದು, ತಪ್ಪೆನ್ನದು:**
**ತನು-ಮನ-ಧನದಲ್ಲಿ ಮಾಟ-ಕೂಟವೆಂದರಿಯದ**
**ತಪ್ಪೆನ್ನದು, ತಪ್ಪೆನ್ನದು !**
**ಕಡೆಯಿಲ್ಲದ ಹುಸಿಯೆನ್ನದು ! ಕೂಡಲಸಂಗಮದೇವಾ.**

ಕೈ ಹಿಡಿದು ಪ್ರೀತಿಯಿಂದ ಮಾತನಾಡಿಸುವ ಗಂಡನೂ ಒಂದೊಂದು ಸಲ ಪ್ರೇಮ ಮಾಡುವದಿಲ್ಲ. ನನ್ನ ದೇಹ-ಮನ-ಧನಗಳಲ್ಲಿ ಮೋಸದ ಆಟ ತುಂಬಿದೆ ಎಂದು ತಿಳಿಯದೆ, ಮತ್ತು ಪಾರವಿಲ್ಲದ ಈ ನನ್ನ ಸುಳ್ಳು ಬಾಳು ತಪ್ಪೆಂದು ಒಪ್ಪಿಕೊಳ್ಳಲಾರೆನು ಕೂಡಲಸಂಗಮದೇವಾ.

**೩೧೫ ಕಾಣುತ್ತ ಕಡೆಗಣಿಸಿ, ಕೆಡಿಸಿಯರಸುವ**
**ಮತಿ ಭ್ರಷ್ಟ ನಾನು, ಲಿಂಗಯ್ಯಾ !**
**ತನುಲೋಭ—ಮನಲೋಭ - ಧನಲೋಭ**
**ಮುಂದುಗೆಡಿಸಿ ಕಾಡಿಹುವೆನ್ನಾ,**
**ತನು - ಮನ- ಧನವ ನಿವೇದಿಸಿದವರ ಮನೆಯ**
**ಮಗ ನಾನಯ್ಯಾ,**
**ಕೂಡಲ ಸಂಗಮದೇವಾ.**

" ಅರಸುತಿಹ ಲತೆಕಾಲ ತೊಡಕಲು, ಹರಿದು ಬಿಸುಟುವರುಂಟೆ'' ಎಂದು ತನ್ನ ಅನುಭವ ನುಡಿ ಹೇಳುತ್ತಿರುವ ಹಾಗೆ, ಕಣ್ಣಿಗೆ ಕಂಡ ಅಮೃತದ ಕೊಡವನ್ನು ತುಚ್ಛಮಾಡಿ- ಅದನ್ನು ಕೆಡಿಸಿ ಹುಡುಕುವ ತಿಳಿಗೇಡಿ ನಾನಃ ಪ್ರಭುಲಿಂಗವೆ? ದೇಹದ ಮೇಲಿನ ಮಮತೆ, ಮನದ ಬಯಕೆ, ಧನದಾಶೆ ಈ ಮೂರು ಕವಡಕಂಟಕರು ನನ್ನ ದಾರಿಯನ್ನು ತಪ್ಪಿಸಿ ತಲೆ ಹೊಡೆಯುತ್ತಲಿದ್ದಾರೆ. ನಾನು ತನು-ಮನ-ಧನಗಳನ್ನು ಹುಲ್ಲಿಗೆ ಸರಿಮಾಡಿ ತ್ಯಾಜ್ಯ ಮಾಡಿದ ಶಿವಶರಣರ ಮನೆಯ ಮಗ ಕೂಡಲಸಂಗಮದೇವಾ.

**೩೧೬ ಹಗಹದಲ್ಲಿ ಬಿದ್ದವರ ಮೇಲೆ ಒರಳ ನೂಂಕುವರೆ ?**
**ಕೋಳದ ಮೇಲೆ ಸಂಕೋಲೆಯ ನಿಕ್ಕುವರೆ ?**
**ಬೆಂದ ಹುಣ್ಣ ಕೆಂಬಿಯಲ್ಲಿ ಕೀಸುವರೆ ?**
**ಕೂಡಲ ಸಂಗಯ್ಯನ ಕಾಡವ ಕಾಟ**
**ಸಿರಿಯಾಳಂಗಲ್ಲದೆ ಸೈರಿಸಬಹುದೇ ?**

ಹಾಳ ಹಗೇದಲ್ಲಿ ಬಿದ್ದವರ ಮೇಲೆ ಯಾರಾದರೂ ಒರಳಕಲ್ಲು ಎತ್ತಿ ಹಾಕುತ್ತಾರೆಯೇ ? ಸುಟ್ಟ ಘಾಯಕ್ಕೆ ಕಬ್ಬಿಣದ ಕಂಬಿಯಿಂದ ಮತ್ತೆ ಚುಚ್ಚುವರೆ? ಈ ಸಂಸಾರದಲ್ಲಿ ನೊಂದು ಬೇಸತ್ತವರಿಗೆ ಕೂಡಲ ಸಂಗಮ ದೇವನು ಪರೀಕ್ಷಿಸಲು ಕೊಟ್ಟ ಕಾಟಗಳು ಸಿರಿಯಾಳನೊಬ್ಬನಿಗೆ ಸಹಿಸಲು ಸಾಧ್ಯ. ಉಳಿದವರಿಗೆ ಎಂದಿಗೂ ಆಗದ ಮಾತು.

**೨೧೭ ಸೋಲಬಲ್ಲರವರು: ಗೆಲಲರಿಯರಯ್ಯಾ;**
**ತನು-ಮನ-ಧನದಲ್ಲಿ ವಂಚನೆಯನರಿಯರಯ್ಯಾ,**
**ದಾಸ-ಸಿರಿಯಾಳನವರು,**
**ಕೂಡಲ ಸಂಗನ ಶರಣರು ಉಪಚಾರವನರಿಯರಯ್ಯಾ!**

ಸದ್ಭಕ್ತನಾದ ಸಿರಿಯಾಳರಾಜನು ತನು-ಮನ-ಧನಗಳಲ್ಲಿ ಎಳ್ಳಷ್ಟು ಕೃಪಣತನ ಮಾಡದೆ ನಿರಹಂಕಾರ, ನಿರ್ವಿಕಾರ ಬುದ್ಧಿಯಿಂದ ಜಂಗಮಾ ರ್ಚನೆ-ದಾಸೋಹಗಳನ್ನು ಮಾಡಿದಾಗ್ಯೂ ತಾನೇ ಸೋತು ನಡೆಯುತ್ತಿ ದ್ದನೇ ವಿನಃ ಮೇಲೆಂದು ಎಂದೂ ಹೇಳಿಕೊಳ್ಳಲಿಲ್ಲ. ಕೂಡಲ ಸಂಗಮ ದೇವನ ಶರಣರಿಗೆ ಕವಡಕಂಟಕತನದ ಮಾತುಗಳು ರುಚಿಸುವದಿಲ್ಲ.

**೩೧೮ ಮಾತಿನಲ್ಲಿ ಶ್ರೋತ್ರಸುಖವ ನುಡಿಯಬಹುದಲ್ಲದೆ,**
**ಮಾಡುವ ಸತ್ಕ್ರಿಯೆಯಿಂದ ಭಕ್ತನೆನಿಸಬಾರದು.**
**ಅರ್ಥ ಪ್ರಾಣಾಭಿಮಾನವಾರಿಗೆಯೂ ಸಮನಿಸದು**
**ಲಿಂಗ ಮುಖದಲ್ಲುದಯವಾದ ಶರಣಂಗಲ್ಲದೆ, ಅಯಾ,**
**ಕೂಡಲಸಂಗನ ಶರಣರ ಭಕ್ತಿ ಭಂಡಾರವು**
**ಎನಗೆಂತು ಸಾಧ್ಯವಪ್ಪುದು ? ಹೇಳೆನ್ನ ತಂದೆ.**

ಕಿವಿಯಿಂದ ಶಿವಭಜನೆ, ದೇವರ ನಾಮ ಸ್ತೋತ್ರಗಳನ್ನು ಕೇಳಿ ತಲೆ ದೂಗಿ ಆನಂದ ತುಂದಿಲರಾಗುವವರಿಗೆ ಭಕ್ತರೆಂದು ಕರೆಯುತ್ತಾರೆ. ಆದರೆ ನಿಜದಲ್ಲಿ, ನಿತ್ಯವೂ ದೇವಪೂಜೆ, ಹರನಾಮಸ್ಮರಣೆ ಮಾಡಿಕೊಂಡು ಸತ್ಯ ಸತ್ಯಸಂಧರಾದವರಿಗೆ ಯಾರೂ ಭಕ್ತನೆಂದು ಕರೆಯುವದಿಲ್ಲ. ಆದ ಕಾರಣ ಧನದಾಶೆ, ಜೀವದಾಶೆಗಳನ್ನು ತೊರೆಯಲು ಶರಣರನ್ನುಳಿದು ಬೇರೆ

ಯಾರಿಗೂ ಒಗ್ಗುವದಿಲ್ಲ. ಹೀಗಿದ್ದಲ್ಲಿ ಶರಣರ ಭಕ್ತಿ ಭಾಂಡಾರವು ನನಗೆ ಹೇಗೆ ದೊರೆಯಬೇಕು ಕೂಡಲ ಸಂಗಮದೇವಾ.

೩೧೯ ಬಾಣ-ಮಯೂರನಂತೆ ಬಣ್ಣಿಸಬಲ್ಲೆನೆ?
ಸಿರಿಯೊಳನಂತೆ ಉಣಲಿಕ್ಕಬಲ್ಲೆನೆ?
ದಾಸಿಮಯ್ಯನಂತೆ ಉಡಕೊಡಬಲ್ಲೆನೆ?
ಉಂಡುಟ್ಟುಕೊಟ್ಟರೆ ಮಯ್ಯಿಗೆ ಮಯ್ಯೆನಿಸಿತ್ತು;
ಎನಗೆ ಕೊಟ್ಟರೆ ಧರ್ಮ ! ಕೂಡಲ ಸಂಗಮದೇವಾ.

ಬಾಣ-ಮಯೂರ ಕವಿಯಂತೆ ನಿನ್ನ ಗುಣಗಾನ ಮಾಡಲು ನನಗೆ ಸಾಧ್ಯವೆ? ಸಿರಿಯಾಳನು ತನ್ನ ಮಗನ ದೇಹದ ಮಾಂಸದ ಅಡಿಗೆ ಮಾಡಿ ಉಣಬಡಿಸಿದಂತೆ ನನಗೆ ಸಾಧ್ಯವೆ? ದೇವರ ದಾಸಿಮಯ್ಯನಂತೆ ಬಟ್ಟೆಗಳನ್ನು ಉಟ್ಟುಕೊಳ್ಳಲು ನಿನಗೆ ನಾನು ಕೊಡಬಲ್ಲೆನೆ? ನಾವು ನಿನ್ನ ಕರುಣೆಯಿಂದ ಊಟ ಮಾಡಿ, ತೊಟ್ಟುಕೊಂಡು ಪುನಃ ನಿನಗೆ ಕೊಟ್ಟರೆ, ಮಯ್ಯಿಗೆ ಮಯ್ಯಿ ತೀರಿಸಿದಂತಾಗುತ್ತದೆ; ನಾನು ನಿನಗೆ ಕೊಡುವದಕ್ಕಿಂತ ನಿನ್ನ ಅಪಾರ ಕರುಣೆಯನ್ನು ಕೂಡಲ ಸಂಗಮದೇವಾ ನನಗೆ ನೀ ನೀಡುವದು ನಿನ್ನ ಘನತೆ.

೩೨೦ ದಾಸಿದೇವ ತನ್ನ ವಸ್ತ್ರವನಿತ್ತು ತವನಿಧಿಯ ಪ್ರಸಾದವ ಪಡೆದ,
ಸಿರಿಯಾಳ ತನ್ನ ಮಗನನಿತ್ತು ಪ್ರಾಣ ಪ್ರಸಾದವ ಪಡೆದ,
ಬಲ್ಲಾಳ ದೇವ ತನ್ನ ವಧುವ ನಿತ್ತು ಸಮತಾ ಪ್ರಸಾದವ ಪಡೆದ.
ಇವರೆಲ್ಲರು ತಮ ತಮಗೆ ಮಾಡಿ ಹಡೆದರು ಸಮ್ಯಕ್ ಪದವಿಯನು,
ನಾನೇನೂ ಅರಿಯದ ಭಕ್ತಿಯ ಬಡವಂಗೆ ಕರುಣಿಸು,
ಕೂಡಲ ಸಂಗಮ ದೇವಾ.

ದಾಸಿಮಯ್ಯನು ತನ್ನ ಅರಿವೆಯನ್ನೇ ದಾನ ಮಾಡಿ ನಿನ್ನಲ್ಲಿ ಐಕ್ಯ ಪ್ರಸಾದ ಪಡೆದನು; ಸಿರಿಯಾಳ ರಾಜನು ಮಗನನ್ನೇ ಸಾಂಬನಿಗೆ ಅರ್ಪಣೆ ಮಾಡಿ— ಪುನಃ ಮಗನ ಪ್ರಾಣ ಪಡೆದು ಸುಖಿಯಾದನು. ಬಲ್ಲಾಳನು ಸ್ತ್ರೀಯನ್ನೇ ಅರ್ಪಿಸಿ, ಸಮನ್ವಯ ದೃಷ್ಟಿಯನ್ನು ಪಡೆದನು. ಇವರೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಹೆಚ್ಚಳ ಪಡೆದು, ಸಮ್ಯಕ್‌ಜ್ಞಾನ, ಸಮ್ಯಕ್ ಚಾರಿತ್ರ್ಯ, ಸಮ್ಯಕ್ ದರ್ಶನ ಪದವಿಗಳನ್ನು ಪಡೆದುಕೊಂಡರು. ಆದರೆ ಏನೂ ಅರಿಯದ ಹಸುಗೂಸಿನ ಭಕ್ತಿಯನ್ನು ತೋರುವ ಈ ಬಡ ಬಸವನಿಗೆ ಕರುಣಿಸು ಕೂಡಲ ಸಂಗಮದೇವಾ.

**೩೨೧ ತ್ರಿವಿಧ ತ್ರಿವಿಧದಲ್ಲಿ ತಪ್ಪಿದ ತಪ್ಪುಕ ನಾನಯ್ಯಾ:**
**ಒಮ್ಮಿಂಗೆ ಕರುಣಿಸೆಯ್ಯಾ,**
**ಇದನರಿದು ಇನ್ನು ತಪ್ಪಿದೆನಾದರೆ**
**ನೀ ಮಾಡಿತ್ತೆ ಸಲುವುದು, ಕೂಡಲ ಸಂಗಮದೇವಾ.**

ಲಿಂಗಪೂಜೆ, ಜಂಗಮ ದಾಸೋಹ, ಶರಣರಿಗೆ ಶರಣೆನ್ನುವದು ಈ ಮೂರು ಪ್ರಕಾರದ ವಿಧಿ ಕರ್ಮಗಳಲ್ಲಿ ತಪ್ಪಿದ ತಪ್ಪುಗಾರನಾದ ನನ್ನನ್ನು ಈ ಒಂದು ಸಲ ಕ್ಷಮಿಸು. ನನ್ನ ತಪ್ಪು ತಿಳಿದ ನಾನಿನ್ನು ಈ ತ್ರಿಪೂಜಾ ವಿಧಿಗಳಲ್ಲಿ ತಪ್ಪಿ ನಡೆದರೆ ನೀ ಕೊಟ್ಟ ಶಿಕ್ಷೆ ಅನುಭವಿಸಲು ಸಿದ್ಧ, ಕೂಡಲ ಸಂಗಮದೇವಾ ರಕ್ಷಿಸು, ರಕ್ಷಿಸು.

**೩೨೨ ಎನ್ನ ತಪ್ಪು ಅನಂತಕೋಟಿ: ನಿಮ್ಮ ಸೈರಣೆಗೆ ಲೆಕ್ಕವಿಲ್ಲ !**
**ಇನ್ನು ತಪ್ಪಿದೆನಾದರೆ ನಿಮ್ಮ ಪಾದವೇ ದಿಬ್ಯ !**
**ಕೂಡಲ ಸಂಗಮ ದೇವಯ್ಯಾ,**
**ನಿಮ್ಮ ಪ್ರಮಥರ ಮುಂದೆ ಕಿನ್ನರ ಬೊಮ್ಮಣ್ಣನೇ ಸಾಕ್ಷಿ !**

ನನ್ನ ಅನಂತ ಕೋಟಿ ತಪ್ಪುಗಳನ್ನು ಮನ್ನಿಸಿದ ನಿನ್ನ ಸಹನಶೀಲ ಗುಣ ಅಗಣಿತವಾದದ್ದು. ಇನ್ನು ಮುಂದೇನಾದರೂ ತಪ್ಪು ಮಾಡಿದರೆ ನಿನ್ನ ಪಾದದಾಣೆ. ಕೂಡಲ ಸಂಗಮ ದೇವಾ ನಿನ್ನ ಪ್ರಮಥರ ಸಮ್ಮುಖದಲ್ಲಿ ಸದಾವಕಾಲ ನಿಂತು ಹಾಡಿ ಕುಣಿವ ಕಿನ್ನರ ಬೊಮ್ಮಣ್ಣನೇ ಸಾಕ್ಷಿ ನನ್ನ ಶಪಥಕ್ಕೆ.

**೩೨೩ ಅಡಿಗಡಿಗೆ ಎನ್ನ ಮನವ ಜರಿದು ನೋಡದಿರಯ್ಯಾ;**
**ಬಡವನೆಂದೆನ್ನ ಕಾಡದಿರಯ್ಯಾ:**
**ಎನಗೆ ಒಡೆಯರುಂಟು ಕೂಡಲ ಸಂಗನ ಶರಣರು.**

ಹೇ ಪ್ರಾಣ ಲಿಂಗವೇ ಹೆಜ್ಜೆ ಹೆಜ್ಜೆಗೂ, ಕ್ಷಣಕ್ಷಣಕ್ಕೂ ನನ್ನನ್ನು ತೊಂದರೆಗೊಳಿಸಿ ಪರೀಕ್ಷಿಸಬೇಡಾ. ಅಲ್ಲದೆ ಕಡು ಬಡವನೆಂದು ಮುನಿಸಿ ಕೊಂಡು ನನ್ನನ್ನು ಕೆಂಡದ ಕುಂಡದಲ್ಲಿರಿಸಬೇಡಾ. ರಕ್ಷಣೆ ಮಾಡಲು ನನ್ನ ಸ್ವಾಮಿಗಳಾದ ಕೂಡಲ ಸಂಗಮ ದೇವನ ಬಿಂಬಗ್ರಾಹಿಗಳಾದ ಶರಣರು ಸದಾ ಸಿದ್ಧರಿದ್ದಾರೆ.

**೩೨೪ ಭಕ್ತಿ ವಿಶೇಷವ ಮಾಡುವರೆ ಹತ್ತು ಬೆರಳುಗಳುಂಟು:**
**ಹಾಸಿ ದುಡಿದರೆ ತನಗುಂಟು ತನ್ನ ಪ್ರಮಥರಿಗುಂಟು,**
**ಮಾರಿ ತಂದೆಗಳಂತೆ ಎನಗೇಕಹುದಯ್ಯಾ ?**
**ರತ್ನದ ಸಂಕಲೆಯ ನಿಕ್ಕಿ ಕಾಡಿಹೆ,**
**ಕೂಡಲ ಸಂಗಮದೇವಾ, ಶಿವಧೋ ! ಶಿವಧೋ !!**

ನಿಶ್ಚಲ ಮತಿಯಿಂದ,ನಿರಂಕುಶ ಮನದಿಂದ ನಿರಾತಂಕವಾಗಿ ಸಗುಣ ನಿಗೆ ನಿರಾಡಂಬರದ ನಿಯತ ನಿಷ್ಠೆಯ ನೈವೇದ್ಯ ನಿವೇದಿಸಬೇಕೆಂದರೆ ಹುಚ್ಚು ಮನಸ್ಸಿನ ಹತ್ತು ಮುಖಗಳು ಒಂದೊಂದು ರೀತಿಯಲ್ಲಿ ಅಡೆತಡೆಗ ಳನ್ನುಂಟು ಮಾಡುತ್ತಲಿವೆ. ಕೋಳಿಗಡಕ ತಂದೆಗಳಂತೆ ನನಗೆ ಆ ಬುದ್ಧಿ ಬೇಡಾ. ಹಾಗೆ ಮಾಡಲು ಹಾತೊರೆದಲ್ಲಿ ರತ್ನದ ಹಾರ ಕುತ್ತಿಗೆಗೆ ಉರುಲು ಬೀಳುವಂತೆ ಮಾಡಿ ಕೊಲ್ಲುವೆ. ಆದ್ದರಿಂದ ಪ್ರಮಾಣ ಪೂರ್ವಕವಾಗಿ ಕೂಡಲ ಸಂಗಮದೇವಾ ನಿನ್ನ ಸೇವೆ ಮಾಡಿದರೆ, ಸೇವೆ ಮಾಡಿದವನಿಗೂ ಅವನ ಗುರುಗಳಿಗೂ ಹಿರಿಯರಿಗೂ ಶ್ರೇಯಸ್ಸು.

**೩೨೫ ಮನೆ ನೊಡಾ; ಬಡವರು: ಮನ ನೋಡಾ ಘನ;**
**ಸೋಂಕಿನಲ್ಲಿ ಸುಖಿ: ಸರ್ವಾಂಗ ಕಲಿಗಳು;**
**ಪಸಾರಕ್ಕನುವಿಲ್ಲ: ಬಂದ ತತ್ಕಾಲಕ್ಕುಂಟು;**
**ಕೂಡಲ ಸಂಗನ ಶರಣರು ಸ್ವತಂತ್ರ ಧೀರರು**

ಸ್ವತಂತ್ರರೂ ಧೀರರೂ, ಆದ ಕೂಡಲ ಸಂಗಮ ದೇವನ ಶರಣರ ಮನೆ ಚಿಕ್ಕದಾದರೂ ಮನಸ್ಸು ದೊಡ್ಡದು. ಎಲ್ಲ ಅವಯವಗಳನ್ನು ತಮ್ಮ ಆತಂಕದಲ್ಲಿಟ್ಟುಕೊಂಡ ದಿಟ್ಟ ಶಿವಶರಣರು-. ಇಂದು ನಾಳೆ ಎಂದು ಕಾಲಹರಣ ಮಾಡುವ, ಹೆಸರುವಾಸಿಯಾಗುವ, ಗೊಡವೆಗೆ ಹೋಗದೆ ಕೇವಲ ಲಿಂಗ ಸಾನಿಧ್ಯದಲ್ಲಿ ಸುಖ ಪಡೆಯುತ್ತಾರೆ.

**೩೨೬ ತತ್ವವನರಿದೆನೆಂದು ಮೃತ್ಯುವ ಕರಕೊಂಡೆನಯ್ಯಾ.**
**ನಾನೆತ್ತ ಬಲ್ಲೆ ನಿಮ್ಮ ಶರಣರಂತುವನು?**
**ನಾನೆತ್ತ ಬಲ್ಲೆ ನಿಮ್ಮ ಪ್ರಮಥರಂತುವನು?**
**ಸರ್ವಾಪರಾಧಿಯಾನು: ಎನ್ನ ಮನದ ಕೊನೆಯ ಸೂತಕ ಹಿಂಗದು,**
**ಕೂಡಲ ಸಂಗಮದೇವಾ.**

ಕೂಡಲ ಸಂಗಮ ದೇವನೆ- ನಿನ್ನ ಶರಣರ ಮತ್ತು ಪ್ರಮಥರ ಘನತೆಯನ್ನು ತಿಳಿಯದ ನಾನು ಆತ್ಮಜ್ಞಾನದ-ಲಿಂಗ-ಜಂಗಮ ಜ್ಞಾನದ ಅಭೇದ್ಯ ತತ್ವಗಳನ್ನು ತಿಳಿದುಕೊಂಡಿರುವೆನೆಂದು ಭ್ರಮೆಗೊಂಡು ಸಂಸಾರ ಸಂತೆಯ ಸಾವನ್ನು ಬರಮಾಡಿಕೊಂಡು ಸರ್ವಾಪರಾಧಿಯಾದ ನನ್ನ ಮನದ ಹೊಲೆತನ ಕಳೆಯದಾಗಿದೆ.

**೩೨೭ ಆ ಮಿಹಿಲಾಳು ಭೋಜ ದೇವುಲಾಳು:**
**ಆನು ಸೂಳೆ, ನಮ್ಮಕ್ಕನೂ ಸೂಳೆ!**
**ಬೆಳ್ಳಿಗೆ ಆವಿನ ಕರುವೆಂದೊಡೆ ಬಳ್ಳವಾಲ ಕರೆವುದೆ?**
**ಕೂಡಲ ಸಂಗನ ಶರಣರ ಮುಂದೆ ನಾನು ಕಾದಹೆ ಬಾಬಿಸಿಲೆ.**

ನನ್ನ ದೇಹ, ನನ್ನ ಮನಸ್ಸುಗಳೆರಡೂ ಜಾರಿಣಿಯಂತಿರುವಾಗ ನನ್ನಲ್ಲಿ ನೀಚ-ಹೀನ ವಿಚಾರಗಳ ತರಂಗಗಳೆದ್ದು ಕುಣಿಯುವಾಗ ತೋರುಗಾಣಿಕೆಗಾಗಿ ಸದ್ಗೃಹಿಣಿಯಂತೆ ನಟಿಸುತ್ತಿರುವೆ; ಕೃತ್ರಿಮ ಆಕಳ ಕರುವನ್ನು ಮಾಡಿಕೊಂಡು ಆಕಳ ಮುಂದೆ ಇಟ್ಟು ಹಿಂಡಿದರೆ ಆ ಆಕಳು ಎಂದಾದರೂ

ಅಪಾರ ಹಾಲು ಕೊಡುತ್ತದೆಯೋ ?- ಹಾಗೆ ಕೂಡಲ ಸಂಗಮದೇವನ ಶರಣರ ಮುಂದೆ ನಿಂತು ಅವರ ಸೇವೆ ಮಾಡುವ ಸುಯೋಗದ ವೇಳೆ ಕಾಯದೆ ನಾನು ಪುನೀತನೆಂದು ಭಾವಿಸುವದು ಸರಿಯೆ ?

**೩೨೮ ಆನೆಯುು ಆ ದಾರಿಯಲ್ಲಿ ಹೋಯಿತ್ತೆಂದಡೆ,**
**ಆಡೂ ಆ ದಾರಿಯಲ್ಲಿ ಹೋಯಿತ್ತೆನ್ನಬಹುದೆ?**
**ಸಂಗನ ಶರಣರಿಗೆ ಆನು ಸರಿಯೆಂದು ಗಳುಹಲು ಬಹುದೆ?**
**ಜಂಗಮಕ್ಕೆ ಮಾಡುವ ಭಕ್ತರಿಗೆ ಆನು ಸರಿಯೆ?**
**ಹೇಳಾ ಕೂಡಲ ಸಂಗಮದೇವಾ.**

ಕಾರುಣ್ಯನಿಧಿ ಕೂಡಲ ಸಂಗಮ ದೇವನೆ- ನೀನೆ ಹೇಳು- ಆನೆ ದಟ್ಟಾದ ಅರಣ್ಯದಲ್ಲಿ ಸಂಚರಿಸುತ್ತದೆಂದ ಮಾತ್ರಕ್ಕೆ ಆದೂ ಅದೇ ಅಡವಿ ಯಲ್ಲಿ ಚಲಿಸಬಹುವೆ ? ಹಾಗೆ ನಿನ್ನ ದಾಸಾನುದಾಸರಾದ, ಶಾಂತಿದೂತ ಶರಣರೂ ನಾನೂ ಸಮಾನರೆಂದು ಮತ್ತು ಜಂಗಮ ಪೂಜೆ ಆರೋಗಣೆ ಮಾಡುವ ಶಿವಭಕ್ತರಿಗೆ ನಾನು ಸಮತೂಕವುಳ್ಳವನೆಂದು ಜಂಭ ಕೊಚ್ಚಿ ಕೊಳ್ಳಲು ಸಾಧ್ಯವೆ?

**೩೨೯ ಆ ಕರಿಯಾಕೃತಿಯು ಸೂಕರನ ಹೋಲಿಸಿದರೆ**
**ಆ ಕರಿಯಾಗಲರಿವುದೆ?**
**ಭೋನಾಗ ನಾಕೃತಿಯುನು ವ್ಯಾಳೇಸನ ಹೋಲಿಸಿದರೆ**
**ವ್ಯಾಳೇಶನಾಗಲರಿವುದೆ?**
**ನಾನು ಭಕ್ತನಾದರೇನಯ್ಯಾ? ಕೂಡಲ ಸಂಗಮ ದೇವನ**
**ಸದ್ ಭಕ್ತರ ಹೋಲಲರಿವೆನೆ?**

ಆನೆಯ ಆಕಾರಕ್ಕೆ ಹೋಲುವ- ಕೋರೆಯ ಮಿಕ (ಹಂದಿ) ಎಂದಾ ದರೂ ಆನೆಯಾಗಬಲ್ಲುದೆ? ಭುಸ್ ಎಂದು ಗರ್ಜಿಸುವ ಹಾವು- ಎಂದಾ ದರೂ ಸರ್ಪಗಳ ರಾಜನಾದ ಆದಿಶೇಷನಾಗಬಲ್ಲುದೆ? ಹಾಗೆಯೇ ನಾನು ಸಾದಾ ಭಕ್ತನಾಗಿದ್ದ ಮಾತ್ರಕ್ಕೆ ಕೂಡಲ ಸಂಗಮದೇವನ ಶ್ರೇಷ್ಠ ಭಕ್ತರ ಮಟ್ಟಕ್ಕೇರಲು ಸಾಧ್ಯವೇ ?

**೩೩೦ ಮೋಟನ ಮೌಳಿ, ಮೂಕೊರತಿಯ ಶೃಂಗಾರ,**
**ಬೇಟೆ ಕುರುಡಂಗೆ ನಗೆಗೆಡೆಯಾಯಿತ್ತು!**
**ನಮ್ಮ ಕೂಡಲ ಸಂಗನ ಶರಣರ ಮುಂದೆ**
**ಆನು ಭಕ್ತನೆಂಬ ನಾಚಿಕೆ ಸಾಲದೆ?**

ಕೈಕಾಲುಗಳಿಲ್ಲದವನ ತಲೆಯ ಕಿರೀಟ, ಮೂಗಿಲ್ಲದವಳು ವಸ್ತ್ರ ಒಡವೆ ಧರಿಸಿದ ಅಂದ ಮತ್ತು ಕುರುಡನ ಬೇಟೆ-- ಹಾಸ್ಯಕ್ಕೆ ಹಸನವಾದಂತೆ ಕೂಡಲ ಸಂಗಮ ದೇವನ ಚರಣ ಶರಣರ ಮಹತಿಯ ಮುಂದೆ ನಾನು ಭಕ್ತನೆಂದುಕೊಳ್ಳುವದೊಂದು ನಾಚಿಕೆಗೇಡಿತನದ ಮಾತು.

**೩೩೧ ಮೂಗಿಲ್ಲದ ಮುಖಕ್ಕೆ ಶೃಂಗಾರವೇ?**
**ವಿಕೃತ ವೇಷಧಾರಿಯಾನು: ಭಂಡನು! ಲಜ್ಜೆಭಂಡನು!**
**ಕೂಡಲ ಸಂಗನ ಶರಣರಲ್ಲಿ**
**ಹಾವ ತೋರಿ ಹವಿಯ ಬೇಡುವಂತೆ!**

ಲಜ್ಜಾಹೀನ, ವಿಕೃತ ವೇಷಧಾರಿ ಭಂಡನಾದ ನನ್ನ ಭಕ್ತಿ ಮೂಗಿಲ್ಲದವಳ ಮುಖಕ್ಕೆ ಮೆರಗು ಕೊಟ್ಟಂತೆ- ಅದು ಕೂಡಲ ಸಂಗಮದೇವನ ಶರಣರಿಗೆ ಹಾವು ಕೊಟ್ಟು- ಹಾಲು ತುಪ್ಪ ಬೇಡುವ ಲಂಡ ಮೊಂಡನ ಬಾಳಿನಂತೆ.

**೩೩೨ ಮಾವಿನ ಕಾಯಿಯೊಳಗೊಂದು ಎಕ್ಕೆಯ ಕಾಯಿ ನಾನಯ್ಯಾ;**
**ಆನು ಭಕ್ತನೆಂತೆಂಬೆ, ನಿಮ್ಮ ಶರಣರ ಮುಂದೆ ನಾಚಿಕೆಯಿಲ್ಲದೆ?**
**ಕೂಡಲ ಸಂಗನ ಶರಣರ ಮುಂದೆ ನಾನೆಂತು ಭಕ್ತನಪ್ಪೆನಯ್ಯಾ?**

ರಾಶಿ ಮಾವಿನ ಕಾಯಿಗಳಲ್ಲಿ ಕಲಬೆರಕೆಯಾದ ಎಕ್ಕೆಯ ಕಾಯಂತೆ ನಾನು ಭಕ್ತನೆಂದುಕೊಂಡು ಶಿವಶರಣರ ಮುಂದೆ ನಾಚಿಕೆಯಿಲ್ಲದೆ ಓಡಾಡಿ

ದರೆ ಕೂಡಲ ಸಂಗಮದೇವನ ಸದ್ಭಾವದ ಶರಣರ ಪಂಕ್ತಿಗೆ ಬರಲು ಧೈರ್ಯವಾದೀತೆ ?

**೩೩೩ ಮರದ ನೆಳಲಲ್ಲಿದ್ದು ತನ್ನ ನೆಳಲ ನರಸಬಹುದೆ?**
**ನಿಮ್ಮ ಶರಣರ ಮುಂದೆ ನಾನೇತರ ಭಕ್ತನಯ್ಯಾ?**
**ನಿಮ್ಮ ಶರಣರ ಮುಂದೆ ನಾನೇತರ ಯುಕ್ತನಯ್ಯಾ?**
**ಆನು ಭಕ್ತನೆಂಬ ನುಡಿ ಸುಡದೆ, ಕೂಡಲ ಸಂಗಮ ದೇವಾ?**

ಮರದ ನೆರಳಿನಲ್ಲಿ ನಿಂತು ತನ್ನ ನೆರಳು ಎಲ್ಲಿದೆಯೆಂದು ಹುಡುಕ್ಕುವದು ಜಾಣ್ಮೆಯೆ? ಆ ಪ್ರಕಾರ ಕೂಡಲ ಸಂಗಮದೇವಾ ನಿನ್ನ ಮನೆಯ ರತ್ನಗಂಬಗಳಾದ ಶರಣರ ನಿಲುವೆತ್ತ ನಾನೆತ್ತ. ಅವರ ಯೋಗ್ಯತೆಯ ಮುಂದೆ ನಾನೊಂದು ಹುಲ್ಲುಬೀಜ. ಹೀಗಿದ್ದೂ ನಾನು ಭಕ್ತನೆಂದು ನುಡಿದರೆ ಆ ನುಡಿ ಕಿಡಿಯಾಗಿ ನನ್ನನ್ನು ಸುಡದೇ ಬಿಟ್ಟೀತೇ ?

**೩೩೪ ಎನ್ನಿಂದ ಕಿರಿಯರಿಲ್ಲ: ಶಿವ ಭಕ್ತರಿಂದ ಹಿರಿಯರಿಲ್ಲ--**
**ನಿಮ್ಮ ಪಾದಸಾಕ್ಷಿ, ಎನ್ನ ಮನ ಸಾಕ್ಷಿ,**
**ಕೂಡಲ ಸಂಗಮದೇವಾ, ಎನಗಿದೇ ದಿಬ್ಯ!**

ಕೂಡಲ ಸಂಗಮದೇವಾ ಈ ಲೋಕದಲ್ಲಿ ಲೌಕಿಕವಾಗಿ ನಾನೇ ಎಲ್ಲಕ್ಕಿಂತ ಸಣ್ಣವನು. ಪಾರಿಮಾರ್ಥಿಕವಾಗಿ ದೊಡ್ಡವರೆಂದರೆ ಶಿವಭಕ್ತರೆ. ಈ ಮಾತು ಸತ್ಯವೆಂದರಿಯಲು ನಿನ್ನ ಪಾದದಾಣೆ, ನನ್ನ ಮನದಾಣೆ, ಇದೋ ನನ್ನಪಾವಿತ್ರ್ಯ ಕಂಡುಕೊಳ್ಳಲು-ಕಾದ ಕಬ್ಬಿಣ ತುಂಡು ಎತ್ತುವ ಸಾಧನ ಮಾಡುತ್ತಿರುವೆನು.

**೩೩೫ ಭಕ್ತನಲ್ಲಯಾ; ಆನು ವೇಷಧಾರಿಯುಯ್ಯಾ;**
**ಕಾಟುಗ, ಕೆತ್ತುಗ, ಪೋಲುಗನೆಂಬುದು ಎನ್ನ ಹೆಸರು!**
**ಕೂಡಲ ಸಂಗಮದೇವಾ, ನಿಮ್ಮ ಶರಣರ ಮನೆಯ ಮಗನಾನಯ್ಯಾ**

ನಾನು ಭಕ್ತನ ಸೋಗು ಹಾಕಿಕೊಂಡು ಹೊರಟ ಹೊಟ್ಟೆ ಹೊರಕ; ನಿಜವಾದ ಭಕ್ತನಲ್ಲಾ. ಕಾಡಿ ಬೇಡುವ ಕಾಡಯ್ಯಾ, ಕೆತ್ತಿ ಕೆಡಿಸುವ ಕಿಡಿಗೇಡಿ, ಮನೆ ಹೊಕ್ಕು ಹಾಳು ಮಾಡುವ ಪೋಲಿ ಪೋಕರಿ ಎಂದು ನನ್ನ ಹೆಸರಾದರೂ– ಕೂಡಲ ಸಂಗಮ ದೇವಾ ನಾನು ನಿನ್ನ ದಂಡಿಗೆಯ ದಾರವಾದ ಶರಣರ ಮನೆಯ ಮಗ.

**೩೩೬ ಡಂಬು ಡಳುಹು ಎನ್ನದಯ್ಯಾ; ಡಂಬಕ ನೆಂಬವ ನಾನಯ್ಯಾ,**
**ನಿಮ್ಮ ನಂಬಿದ ಶರಣರ ಡಿಂಗರಿಗ ನಾನು,**
**ಕೂಡಲ ಸಂಗಮದೇವಾ.**

ಜಂಬ–ಬಿಂಕಗಳು ಬೂಟಾಟಿಕೆ ಎಂಬವುಗಳು ನನ್ನಲ್ಲಿದ್ದ ದುರ್ಗುಣಗಳು. ಆದರೂ ಕೂಡಲ ಸಂಗಮದೇವಾ, ನಿನ್ನನ್ನು ದೃಢವಾಗಿ ನಂಬಿದ ಶರಣರ ಸೇವಕನಾಗಿ ನಾನು ಬದುಕಿರುವೆ.

**೩೩೭ ಚೆನ್ನ–ಚೇರಮರ ಬಂಟ ನಾನಯ್ಯಾ:**
**ಎನ್ನ ಚಾಗುಬೊಲ್ಲನ ಕಾವ ಗೋವನೆಂಬರು.**
**ಕೂಡಲ ಸಂಗನ ಶರಣರೊಡೆಯರಾಗಿ**
**ತಮ್ಮ ತೊತ್ತಿನ ಮಗನೆಂದು ಒಲಿದಂತೆ ನುಡಿವರು.**

ಹುಲುಸಾಗಿ ಕೊಬ್ಬಿ ಬೆಳೆದ ತೇಗಿನ ಮರದ ಹಾಗೆ ಬಂಟನಾದವನು ನಾನು; ನಾನು ಹಾಡಿ ಕೊಂಡಾಡುವ ಮತ್ತು ನನ್ನ ಸಂರಕ್ಷಣೆ ಮಾಡುವ ಮೂರ್ತಿಗೆ ದನಕಾಯುವನೆಂದು ಕರೆಯುತ್ತಾರೆ. ಆದರೆ ನನ್ನನ್ನು, ಪ್ರಪಂಚಕ್ಕೆ ಹಿರಿಯರಾದ ಕೂಡಲ ಸಂಗನ ಶರಣರು– ತಮ್ಮ ಕೈಗೆಲಸದ ಆಳಿನ ಮಗನೆಂದು ಅಕ್ಕರತೆಯಿಂದ ಕರೆಯುತ್ತಾರೆ.

**೩೩೮ ಕಾಲಲೊದೆದು ಬಡಿದು ಜಡಿವರಯ್ಯಾ; ಭಕ್ತಿಯುಯ್ದೆ ದೆಂದೆನ್ನ,**
**ಜರಿವರಯ್ಯಾ ನುಡಿವರಯ್ಯಾ,**
**ಕೂಡಲ ಸಂಗನ ಶರಣರೊಡೆಯರಾಗಿ.**

ಕೂಡಲ ಸಂಗಮ ದೇವನ ಶರಣರು ನನಗೆ ಒಡೆಯರಾಗಿ, ನನ್ನ ಭಕ್ತಿ ಭಂಡತನದ್ದೆಂಥು ಹಳಿದು ಕಾಲಿನಿಂದೊದ್ದು- ಹೊಡೆಯುತ್ತಾರೆ ಮಹಾಲಿಂಗದೇವನೆ.

**೩೩೯ ನಡೆವರಯ್ಯಾ ಒಡೆಯರು ತನು-ಮನ-ಧನದ ಮೇಲೆ:**
**ನುಡಿವರಯ್ಯಾ ಒಂದು ನಿಮಿಷ ಬಾರದಿರ್ದೊಡೆ:**
**ಜರಿವರಯ್ಯಾ ಒಡೆಯರು ಮನಬಂದ ಪರಿಯಲಿ;**
**ಶಿವ, ಶಿವಾ! ಅಣೆವರಯ್ಯಾ ಮಂಡೆಯನೂರಿ,**
**ಪ್ರಾಣದೊಡೆಯರಯ್ಯಾ, ಕೂಡಲ ಸಂಗಮದೇವಾ,**
**ನಿಮ್ಮ ಶರಣರು.**

ಕೋಮಲ ಹೃದಯಸದಯಾ ಕೂಡಲ ಸಂಗಮದೇವಾ, ನನ್ನ ಪ್ರಾಣದ ಒಡೆಯರಾದ ನಿನ್ನ ಶರಣರು ತನು-ಮನ-ಧನವನ್ನು ತೃಣೀಕರಿಸಿ ತೃಪ್ತಿಯಿಂದ ನಡೆಯುತ್ತಲಿದ್ದಾರೆ. ಸೇವೆಗೆ ಒಂದು ನಿಮಿಷ ತಡವಾದರೂ— ಮನಬಂದಂತೆ ನಿಂದಿಸಿ, ಕಡೆಗಾಣಿಸಿ ನುಡಿಯುತ್ತಾರೆ; ಅಲ್ಲದೆ ಮೈಮೇಲೆ ಮಣಕಾಲೂರಿ ನಿಂತು ಅರೆಯುತ್ತಾರೆ. ಶಿವ ಶಿವಾ ವ್ಯಥೆ ತಾಳಲಾರೆ. ತಪ್ಪಿನ ಶಿಕ್ಷೆ ಯಮ ಶಿಕ್ಷೆ.

**೩೪೦ ಅರ್ಥಪ್ರಾಣಾಭಿಮಾನಕ್ಕೆ ಒಡೆಯರು ಸದ್‌ಭಕ್ತರಲ್ಲದೆ**
**ಎನಗಾರೂ ಇಲ್ಲವಯ್ಯಾ,**
**'ಭೃತ್ಯಾಪರಾಧ ಸ್ವಾಮಿನೋದಂಡ'**
**ಕೂಡಲ ಸಂಗಮದೇವಾ, ನೀವೇ ಪ್ರಮಾಣು.**

ದ್ರವ್ಯ ಮತ್ತು ಪ್ರಾಣಗಳಿಗೆ ಮಾತ್ರ ಯಜಮಾನರು ಸದ್‌ಭಕ್ತರಾಗುತ್ತಾರೆ. ಆದರೆ ಬಡವನಾದ ನನಗೆ ಯಾರೂ ಯಜಮಾನರಿಲ್ಲ. ಸೇವಕನ ತಪ್ಪಿಗಾಗಿ ಮಾಲಕನಿಗೆ ದಂಡ— ಜುಲ್ಮಾನ ಹಾಕುವಂತೆ ಕೂಡಲ ಸಂಗಮ ದೇವಾ ನನ್ನ ಸರ್ವ ಕಾರ್ಯಕ್ಕೂ ನೀನೆ ಪ್ರಮಾಣದೇವನು.

**೩೪೧ ಅರ್ಚಿಸಲರಿಯೆ, ಪೂಜಿಸಲರಿಯೆ,**
**ನಿಚ್ಚ ನಿಚ್ಚ ಶಿವರಾತ್ರಿಯ ಮಾಡಲರಿಯೆ!**

**ಕಪ್ಪಡಿ ವೇಷದಿಂದಾನು ಬಂದಾಡವೆ, ಕಪ್ಪಡಿ ವೇಷದಿಂದ!**
**ಈಶ ನಿಮ್ಮ ದಾಸರ ದಾಸಿಯ ದಾಸ ನಾನಯ್ಯಾ,**
**ನಿಮ್ಮ ವೇಷಧಾರಿಯ ಮನೆಯ ಪಂಗುಳ ನಾನಯ್ಯಾ;**
**ಕೂಡಲ ಸಂಗಮದೇವಾ,**
**ನಿಮ್ಮ ಲಾಂಛನವ ಧರಿಸಿಪ್ಪ ಉದರ ಪೋಷಕ**
**ನಾನಯ್ಯಾ!**

ಲಿಂಗ ಪೂಜೆ ಹೇಗೆ ಮಾಡಬೇಕೆಂಬ ವಿಧಾನ ಗೊತ್ತಿಲ್ಲದ, ಪ್ರತಿದಿನ ಶಿವೋಪಾಸನೆ ಮಾಡಿ ಜಾಗರಣೆ ಆಚರಿಸದ ನಾನು ಕಾವಿಯ ಹರಕು ತುಕ್ಕಡೆಗಳನ್ನು ಸುತ್ತಿಕೊಂಡು– ಹೊತ್ತುಕೊಂಡು ಪರಮೇಷ್ಟಿ ಲಿಂಗನ ಮುಂದೆ ನಟನೆಯಾಡುವೆ; ಕೂಡಲ ಸಂಗಮದೇವಾ ಸರ್ವಸಂಗ ಪರಿತ್ಯಾಗ ಮಾಡಿದ ನಿನ್ನ ಶರಣರ ಚರಣ ದಾಸಿಯರ–ಸೇವಕ ನಾನು. ಡಂಭಾ ಚಾರಿಗಳ ಮನೆಯ ಹೆಳವನಾದ ನಾನು ನಿನ್ನ ಸಾದೃಶ್ಯಾಕಾರದಲ್ಲಿ ವೇಷ ಕಟ್ಟಿಕೊಂಡು ಹೊಟ್ಟೆ ತುಂಬಿಕೊಳ್ಳುವ ಹೊಲ್ಲ ನಾನು.

**೩೪೨ ಅಪ್ಪನು ಡೋಹಾರ ಕಕ್ಕಯ್ಯನಾಗಿ, ಮುತ್ತಯ್ಯ ಚೆನ್ನ**
**ಯ್ಯನಾದರೆ ಆನು ಬದುಕೆನೆ?**
**ಮತ್ತಾ ಶ್ವಪಚಯ್ಯನ ಸನ್ನಿಧಿಯಿಂದ**
**ಭಕ್ತಿಯ ಸದ್‌ಗುಣವ ನಾನರಿವೆನಯ್ಯಾ.**
**ಕಷ್ಟಜಾತಿಯ ಜನ್ಮದಲಿ ಜನಿಸಿದೆ:**
**ಎನಗಿದು ವಿಧಿಯೇ! ಕೂಡಲ ಸಂಗಮದೇವಾ?**

ನನ್ನ ತಂದೆ ಡೋಹಾರ ಕಕ್ಕಯ್ಯ–ಮುತ್ತಜ್ಜ ಮಾದಾರ ಚನ್ನಯ್ಯ ರಾದರೆ ನಾನು ಬದುಕಿ ಬಾಳಲಾರೆನೆ? ಮತ್ತೆ ವ್ಯವಹಾರದಲ್ಲಿ ಚಂಡಾ ಲನೆಂದೆನಿಸಿಕೊಳ್ಳುವವನ ಸಂಪರ್ಕದಿಂದಲೇ ನಾನು ಭಕ್ತಿ– ಉತ್ತಮ ಗಳನ್ನು ಕಲಿಯುವೆ. ಉಚ್ಚ ಜಾತಿಯೆಂಬ ಕಾರ್ಪಣ್ಯದ ಜೀವನ ನಡೆ ಸುವದು ನನಗೆ ಕಡ್ಡಾಯವೆ ? ಇದನ್ನು ಬಿಡಲು ಬಾರದೇ ? ಕೂಡಲ ಸಂಗಮ ದೇವಾ.

೩೪೩ ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ
ಕಷ್ಟತನದ ಹೊರೆಯ ಹೊರಿಸದಿರಯ್ಯಾ—
ಕಕ್ಕಯ್ಯ ನೊಕ್ಕುದ ನಿಕ್ಕ, ನೋಡಯ್ಯಾ;
ದಾಸಯ್ಯ ಶಿವದಾನವ ನೆರೆಯೆ, ನೋಡಯ್ಯಾ;
ಮನ್ನಣೆಯ ಚನ್ನಯ್ಯ ನೆನ್ನುವ ಮನ್ನಿಸ;
ಉನ್ನತ ಮಹಿಮಾ,
ಕೂಡಲ ಸಂಗಮದೇವಾ, ಶಿವಧೊ! ಶಿವಧೊ!!

ಮಹಿಮಾ ಪೂರ್ಣ ಮಹೇಶನಾದ ಕೂಡಲ ಸಂಗಮದೇವಾ, ನಾನು ಉತ್ತಮಕುಲ ಜಾತಿಯಲ್ಲಿ ಹುಟ್ಟಿ ಬಂದಿದ್ದೇ ಅಪರಾಧವೆಂದೆಣಿಸಿ ನಾನು ಕಷ್ಟದ ಕಲ್ಲು ಬಂಡೆ ಹೊತ್ತು ಬಾಳುವಂತೆ ಮಾಡಬೇಡ. ಇದು ನೋಡು, ಕಕ್ಕಯ್ಯನು ತನಗೆ ಸಿಕ್ಕ ಶಿವಪ್ರಸಾದಸೇವಿಸಿ ಉಳಿದದ್ದನ್ನು ನನಗೆ ಕರುಣಿಸಲೊಲ್ಲ. ದೇವರ ದಾಸೀಮಯ್ಯನು ದಾನ ಮಾಡಿ ಗಳಿಸಿದ ಪುಣ್ಯವನ್ನು ನನಗೂ ಕೊಂಚ ಪುಣ್ಯದಾನ ನೀಡದಾಗಿದ್ದಾನೆ. ನಿನ್ನ ಮನ್ನಣೆಗೆ ಪಾತ್ರನಾದ ಚನ್ನಯ್ಯನು ನನ್ನ ಅಪರಾಧಗಳನ್ನು ಕ್ಷಮಿಸದವನಾಗಿದ್ದಾನೆ. ನೀನೇ ಕಾಪಾಡು ಶಂಭೋಶಂಕರ.

೩೪೪ ಶಟ್ಟಿಯೆಂದೆಂಬೆನೆ ಸಿರಿಯಾಳನ? ಮಡಿವಾಳನೆಂದೆಂಬೆನೆ
ಮಾಚಯ್ಯನ?
ಡೋಹಾರನೆಂದೆಂಬನೆ! ಕಕ್ಕಯ್ಯನ?
ಮಾದಾರನೆಂದೆಂಬೆನೆ ಚೆನ್ನಯ್ಯನ?
ಆನು ಹಾರುವನೆಂದರೆ ಕೂಡಲ ಸಂಗಯ್ಯ ನಗುವನಯ್ಯಾ !

ಈ ಭಕ್ತ ಶ್ರೇಷ್ಠರಿಗೆ-ಶಟ್ಟಿ-ಡೋಹಾರ-ಮಾದಾರ ಎಂಬ ಜಾತಿ ಭೇದವನೆಣಿಸಿ ತುಚ್ಛೀಕರಿಸಿ ನಾನು ಉತ್ತಮ ಜಾತಿಯವನು ಬ್ರಾಹ್ಮಣನೆಂದು ಹೇಳಿಕೊಂಡರೆ- ಕೂಡಲ ಸಂಗಮದೇವನು ನಗುತ್ತಾನೆ. ಲಿಂಗ-ಜಂಗಮ-ಶರಣರಿಗೆ ಕುಲ ಜಾತಿ ಗಳೆಂಬವಾವೂ ಹೊಲೆ ಇಲ್ಲ.

**೩೪೫ ಚನ್ನಯ್ಯನ ಮನೆಯ ದಾಸಿಯ ಮಗನು**
**ಕಕ್ಕಯ್ಯನ ಮನೆಯ ದಾಸಿಯ ಮಗಳು—**
**ಇವರಿಬ್ಬರು ಹೊಲದಲಿ ಬೆರಣಿಗೆ ಹೋಗಿ ಸಂಗವ ಮಾಡಿದರು;**
**ಇವರಿಬ್ಬರಿಗೆ ಹುಟ್ಟಿದ ಮಗ ನಾನು,**
**ಕೂಡಲ ಸಂಗಮ ದೇವ ಸಾಕ್ಷಿಯಾಗಿ.**

ಮಾದಾರ ಚನ್ನಯ್ಯ-ಡೋಹಾರ ಕಕ್ಕಯ್ಯ ಇವರೀರ್ವರ ಜಾತಿಯಲ್ಲಿ ದೇಹ ಸಂಬಂಭ ಮಾಡುವ ರೂಢಿ ಪ್ರಪಂಚದಲ್ಲಿಲ್ಲ. ಆದರೆ ಶಿವಗುಣಿಗಳಾದ ಈ ಶರಣರು ತಮ್ಮ ತಮ್ಮ ಲೌಕಿಕ ಕುಲಾಚಾರಗಳನ್ನು ಮೀರಿ ಶಿವಾಚಾರಿಗಳಾದ್ದರಿಂದ ಅವರ ಕುಲಮತ ಒಂದೇ. ಕಾರಣ ಅವರ ಮನೆಯ ಸೇವಕಿಯರ ಮಗ-ಮಗಳು .ಕುರುಳು ಆರಿಸಲು ಹೋದಾಗ ಬಯಲಾಲಯದಲ್ಲಿ-ಕೂಡಲ ಸಂಗಮ ದೇವನ ಸಾಕ್ಷಿಯಾಗಿ ಪ್ರೇಮಪೂಜಾರಿಗಳಾಗಿದ್ದರ ಫಲವಾಗಿ ಹುಟ್ಟಿದ ಮಗ ನಾನು.

**೩೪೬ ಸೂಳೆಗೆ ಹುಟ್ಟಿದ ಕೂಸಿನಂತೆ**
**ಆರನಾದಡೆಯೂ "ಅಯ್ಯಾ" "ಅಯ್ಯಾ" ಎನಲಾರೆ,**
**ಚೆನ್ನಯ್ಯ ನಮ್ಮಯ್ಯನು: ಚೆನ್ನಯ್ಯನ ಮಗ ನಾನು,**
**ಕೂಡಲ ಸಂಗನ ಮಹಾ ಮನೆಯೊಳು**
**ಧರ್ಮ ಸಂತಾನ ಭಂಡಾರಿ ಬಸವಣ್ಣನು.**

ಸೂಳೆಗೆ ಹುಟ್ಟಿದ ಕೂಸು ಕಂಡ ಪುರುಷನಿಗೆ ಅಪ್ಪಾ ಎಂದು ಬಾಯ್ಬಿಡುವಂತೆ ನಾನು ಸಿಕ್ಕಸಿಕ್ಕವರಿಗೆ ಅಪ್ಪಾಎಂದು ಹೇಗೆನ್ನಲಿ.ಭಕ್ತಿ ಭೋಗದ ಭುವನ ಸಿರಿಯಾಗಿ, ಶರಣ ಸುತನಾಗಿ-ಧರ್ಮ ವೃಕ್ಷವಾಗಿ ಬೆಳೆದು ಬಂದ ಚನ್ನಯ್ಯನ ಮಗ ಭಕ್ತಿ ಭಂಡಾರಿ ಬಸವಣ್ಣ ನಾನು.

**೩೪೭ ಹರನು ಮೂಲಿಗನಾಗಿ, ಪುರಾತನರೊಳಗಾಗಿ**
**ಬಳಿ ಬಿಳಿಯಲು ಬಂದ ಮಾದಾರನ ಮಗನಾನಯ್ಯಾ,**
**ಕಳದ ಹೊಲೆಯನೆಮ್ಮಯ್ಯ: ಜಾತಿಸೂತಕ !**

**ಮಾದಾರನ ಮಗನಾನಯ್ಯಾ,**
**ಪನ್ನಗ ಭೂಷಣ ಕೂಡಲ ಸಂಗಯ್ಯಾ,**
**ಚೆನ್ನಯ್ಯನೆನ್ನ ಮುತ್ತಯ್ಯನಜ್ಜನಪ್ಪನಯ್ಯಾ !!**

ಶರಣರ ವಂಶಕ್ಕೆ ವಿರುಪಾಕ್ಷನು ಮೂಲಪುರುಷನು. ಪುರಾತರು ಈ ಮನೆತನದ ಆಸ್ತಿವಾರು-ಶರಣರು ಈ ಕುಲ ಬೆಳಗಿಸುವ ಬಳ್ಳಿಗಳಾದರು. ಅಂಥ ಬಳ್ಳಿಯ ಬಳಗದ ಮಾದಾರ ಚನ್ನಯ್ಯನ ಮಗನಾಗಿ ಪರಂಪರೆಯನ್ನೇ ಸಾಗಿಸಿಕೊಂಡು ಹೋಗಲು-ಜಾತಿ-ಕುಲ ಸೂತಕಗಳನ್ನು ಕಳೆದುಕೊಂಡು ಪಾವನನಾಗಿ ಸರ್ಪಭೂಷಣನಾದ ಕೂಡಲ ಸಂಗಮನ ಚರಣ ಸೇವೆಗೆ ಸನ್ನದ್ಧನಾಗಿ ಬಂದಿರುವೆ.

**೩೪೮ ಅಪ್ಪನು ನಮ್ಮ ಮಾದಾರ ಚೆನ್ನಯ್ಯ;**
**ಬೊಪ್ಪನು ನಮ್ಮ ಡೋಹರ ಕಕ್ಕಯ್ಯ;**
**ಚಿಕ್ಕಯ್ಯನೆಮ್ಮಯ್ಯ, ಕಾಣಯ್ಯಾ;**
**ಅಣ್ಣನು ನಮ್ಮ ಕಿನ್ನರ ಬೊಮ್ಮಯ್ಯ**
**ಎನ್ನನೇತಕ್ಕರಿಯಿರಿ, ಕೂಡಲ ಸಂಗಯ್ಯಾ ?**

ತಂದೆ, ಅಜ್ಜ ಮುತ್ತಜ್ಜರು, ಅಣ್ಣ ತಮ್ಮರು, ಸಕಲ ಬಂಧುಗಳು-ಶಿವಮಂತ್ರದ ಬಳ್ಳಿಯಾಗಿ ಹಬ್ಬಿ, ಬಣ್ಣನೆಯಿಲ್ಲದ, ಬಡಿವಾರವಿಲ್ಲದ ಬದುಕು ಬಾಳಿದ ಬಳಗದ ಕುಲ ಪುತ್ರನಾದ ನನ್ನನ್ನೇಕೆ ಗುರುತಿಸಲೊಲ್ಲಿ ಕೂಡಲ ಸಂಗಮದೇವಾ?

**೩೪೯ ಭಕ್ತಿಯಿಲ್ಲದ ಬಡವ ನಾನಯ್ಯಾ: ಕಕ್ಕಯ್ಯನ ಮನೆಯಲು ಬೇಡಿದೆ;**
**ಚೆನ್ನಯ್ಯನ ಮನೆಯಲೂ ಬೇಡಿದೆ,**
**ದಾಸಯ್ಯನ ಮನೆಯಲೂ ಬೇಡಿದೆ,**
**ಎಲ್ಲಾ ಪುರಾತರು ನೆರೆದು ಭಕ್ತಿಭಿಕ್ಷವನಿಕ್ಕಿದರೆ**
**ಎನ್ನ ಪಾತ್ರೆ ತುಂಬಿತ್ತು ಕೂಡಲ ಸಂಗಮದೇವಾ.**

ಅತಿ ಬಡವನಾದ ನಾನು ಭಕ್ತಿಯ ಬಯಿಸಿ ಜೋಳಿಗೆ ಹಿಡಿದುಕೊಂಡು ಭಕ್ತಿಭಿಕ್ಷೆ ಬೇಡಲು ಕಕ್ಕಯ್ಯನ ಮನೆಯಲ್ಲಿ ದಾಸಯ್ಯನ ಮನೆ

ಯಲ್ಲಿ, ಚೆನ್ನಯ್ಯನ ಮನೆಯಲ್ಲಿಯೂ ಬೇಡಿದೆ. ಹೀಗೆ ಎಲ್ಲಾ ಹಿರಿಯರು ಕೂಡಿ ಅಲ್ಪ ಸ್ವಲ್ಪ ಭಿಕ್ಷೆ ಕೊಟ್ಟರೆ ಬಡವನ ಪಾತ್ರೆ ತುಂಬಿ ಭಕ್ತಿರಸ ಹರಿಯದೆ ನನ್ನ ಹೃದಯದಲ್ಲಿ!

**೩೫೦ ಹಿರಿಯಯ್ಯ ಶ್ವಪಚಯ್ಯ, ಕಿರಿಯಯ್ಯ ಡೋಹಾರ ಕಕ್ಕಯ್ಯ,**
**ಅಯ್ಯಗಳಯ್ಯನು ನಮ್ಮ ಮಾದಾರ ಚೆನ್ನಯ್ಯನು;**
**ಕೂಡಲ ಸಂಗಮ ದೇವಾ,**
**ನಿಮ್ಮ ಶರಣರೊಲಿದೆನ್ನ ಸಲಹುವರಾಗಿ.**

ಯಷ್ಟಿ ಸಮಷ್ಟಿಗಳ ಸಂಕೀರ್ಣರಾದ- ಜಾತ್ಯತೀತರಾದ- ಭಕ್ತಿ ಭಾಗ್ಯದ ಬಾಳೆಯ ಗೊನೆಯಾದ ನಿನ್ನ ಶರಣರು ಸಹ ಸೌಜನ್ಯ ಪ್ರೀತಿ ಯಿಂದ ನನ್ನ ಆರೈಕೆ ಮಾಡುತ್ತಾರೆ, ಕೂಡಲ ಸಂಗಮ ದೇವಾ.

**೩೫೧ ಎಮ್ಮ ತಾಯಿ ನಿಂಬವ್ವೆ: ನೀರನೆರೆದುಂಬಳು:**
**ಎಮ್ಮಯ್ಯ ಚೆನ್ನಯ್ಯ: ರಾಯ ಕಂಪಣವ ಹೊರುವ—**
**ಎಮಗಾರೂ ಇಲ್ಲವೆಂದೆಂಬಿರಿ—**
**ಎಮ್ಮಕ್ಕ ಕಂಚಿಯಲ್ಲಿ ಬಾಣಸವ ಮಾಡುವಳು;**
**ಎಮ್ಮಜ್ಜರು ಹಡೆದ ಭಕ್ತಿಯ ನಿಮ್ಮ ಕೈಯಲು ಕೊಂಬೆ, ಕಾಣಾ,**
**ಕೂಡಲ ಸಂಗಮದೇವಾ.**

ನನ್ನವರೆಂಬ ಹಿತಚಿಂತಕರು ನನಗೆ ಯಾರೂ ಇಲ್ಲವೆಂದು ಹೇಳುತ್ತಿರುವಿರಿ. ಆದರೆ ನನ್ನ ತಾಯಿಯಾದ ನಿಂಬವ್ವ ಶಿವಲಿಂಗ ಪೂಜೆಗೆ ನೀರು ತಂದು ಕೊಡುವಳು; ಮತ್ತು ಶಿವಮಂದಿರದ ಹೂ ಗಿಡ ಬಳ್ಳಿಗಳಿಗೆ ನೀರು ಣಿಸಿ ತನ್ನ ಕಾಯಕ ಮಾಡಿ ಉಣ್ಣುತ್ತಾಳೆ; ತಂದೆ ಚೆನ್ನಯ್ಯನು ವಿರುಪಾಕ್ಷ ದೇವನ ಸೇವೆ ಮಾಡಿಕೊಂಡು ಕೈಲಾಸ ಸಾಮಿಪ್ಯ ಸಾಧಿಸುತ್ತಿದ್ದಾನೆ. ನನ್ನ ಅಕ್ಕ ಕಂಚಿಯಲ್ಲಿ ಶಿವಾಲಯದಲ್ಲಿ ಜಂಗಮ-ಶಿವಭಕ್ತರಿಗೆ ಅಡಿಗೆ ಮಾಡಿ ಹಾಕಿ ಸಾಯುಜ್ಯ ಪಡೆಯುತ್ತಲಿದ್ದಾಳೆ. ಹೀಗೆ ನನ್ನ

ಅಜ್ಜಂದಿರ ಪ್ರತಿಫಲವನ್ನು ಕೂಡಲ ಸಂಗಮ ದೇವಾ ನಿನ್ನ ಕೈಯಿಂದ ನಾನು ಪಡೆಯುತ್ತೇನೆ.

**೩೫೨ ಎನಗಾರೂ ಇಲ್ಲ, ಎನಗಾರೂ ಇಲ್ಲವೆಂಬರು:**
**ಬಾಣನವ ನಾನು, ಮಯೂರನವ ನಾನು,**
**ಕಾಳಿದಾಸನವ ನಾನು !**
**ಕಕ್ಕಯ್ಯ ಹಿರಿಯಯ್ಯ, ಚಿಕ್ಕಯ್ಯ ಚೆನ್ನಯ್ಯ**
**ಎತ್ತಿ ಮುದ್ದಾಡಿ ಸಲಹಿದರೆನ್ನ,**
**ಕೂಡಲ ಸಂಗಯ್ಯಾ**

ನನಗೆ ಈ ಪ್ರಪಂಚದಲ್ಲಿ ವ್ಯವಹಾರಿಕ ಜೀವ ಸಂಬಂಧಿಗಳಾರೂ ಇಲ್ಲ. ಆದರೆ ಸಂಬಂಧಿಗಳೇ ಇಲ್ಲವೆಂಬುದು ಸರಿಯಲ್ಲ. ಬಾಣನ, ಮಯೂರನ ಮತ್ತು ಕಾಳಿದಾಸನ ಬಂಧು ನಾನೇ. ನಾನೇ ಲೌಕಿಕದಲ್ಲಿ ಸರ್ವಸ್ವ. ಆದರೆ ನನ್ನನ್ನು ಎತ್ತಿ ಮುದ್ದಾಡಿ ಸಲುಹಿದವರು ಕಕ್ಕಯ್ಯ-ಚೆನ್ನಯ್ಯರು ಕೂಡಲ ಸಂಗಮದೇವಾ.

**೩೫೩ ಅಯ್ಯಾ ನಿಮ್ಮ ವಂಶಾವಳಿಯಲು**
**ಒಬ್ಬ ತೊತ್ತಿನ ಮಗ ಹುಟ್ಟಿದಾತನ ತೊತ್ತಿನ ಮಗ ನಾನಯ್ಯಾ;**
**ಬಳಿದೊತ್ತು, ಬಳಗದೊತ್ತು, ವಂಶದೊತ್ತು ನಾನಯ್ಯಾ !**
**ಕೂಡಲ ಸಂಗಮ ದೇವಾ,**
**ನಿಮ್ಮ ಒಡೆತನಕ್ಕೆ ಕೇಡಿಲ್ಲವಾಗಿ**
**ಎನ್ನ ತೊತ್ತುತನಕ್ಕೆ ಕೇಡಿಲ್ಲ.**

ಪ್ರಭುಲಿಂಗವೆ- ನಿನ್ನ ಶರಣರ ವಂಶಾವಳಿಯಲ್ಲಿ ಓರ್ವ ಭಕ್ತನ ಕೈಗೆಲಸದಾಳಿಗೆ ಒಬ್ಬ ಮಗ ಹುಟ್ಟಿದ. ಅವನ ಕೈಗೆಲಸದಾಳಿನ ಮಗನಾಗಿ ನಾನು ಹುಟ್ಟಿದೆ. ನಾನೆಂದರೆ ಪರಂಪರೆಯ ಅಚ್ಚು ಹಾಕಿಸಿಕೊಂಡವ, ಬಳಗದ ಸಾಂಪ್ರದಾಯದ ಮುದ್ರೆ ಧಾರಣೆ ಮಾಡಿದವ ಮತ್ತು ವಂಶದ ಕುರುಹು ಪಡೆದು ಬಂದವ. ಕೂಡಲ ಸಂಗಮ ದೇವಾ, ನಿನ್ನ ಒಡೆತನಕ್ಕೆ

ಕುಂದು—ಬಾಧೆಗಳಿಲ್ಲದಿರುವಾಗ ನನ್ನ ಸೇವಕತನಕ್ಕೂ ಕುಂದಿಲ್ಲ. ನಾಶವಿಲ್ಲ.

**೩೫೪ ಕೈಯಲಿ ಬೋಹರಿಗೆ, ಮಂಡೆಯ ಮೇಲೆ ಸಿಂಬಿ:**
**ಸಿಂಬಕನ ಮನೆಯ ಮಗ ನಾನಯ್ಯಾ;**
**ಕೂಡಲ ಸಂಗಮ ದೇವಯ್ಯಾ,**
**ಮಂಚದ ಕೋಡೇರಿ ಬಂದ ತೊತ್ತಿನ ಮಗ ನಾನಯ್ಯಾ.**

ಕೈಯಲ್ಲಿ ಸದಾ ಕಸಬರಿಗೆ ಹಿಡಿದು ತಲೆಯ ಮೇಲೆ ಸಿಂಬೆ ಇಟ್ಟು ಕೊಂಡು ದೇವಾಲಯದ ಮಡಿ ಕೆಡದಂತೆ ಸ್ವಚ್ಛ ಮಾಡುವ ಮಹಾದೇವನ ಮಮತೆಯಾಳಿನ ಸುಪುತ್ರ ನಾನು. ಕೂಡಲ ಸಂಗಮದೇವಾ, ಮಂಚದ ಒಂದು ಕಾಲನ್ನೇ ವಾಹನ ಮಾಡಿಕೊಂಡು ಭಕ್ತಿಯ ಪರವಶನಾಗಿ ಪಂಚಾಕ್ಷರನಲ್ಲಿ ಐಕ್ಯ ಫಲ ಪಡೆದ ನಿನ್ನ ದಾಸನ ಮಗನು ನಾನು.

**೩೫೫ ಅರಸರ ಮನೆಯಲ್ಲಿ ಅರಸಿಯಾಗಿಪ್ಪುದರಿಂದ**
**ಭಕ್ತರ ಮನೆಯಲ್ಲಿ ತೊತ್ತಾಗಿಪ್ಪುದು ಕರಲೇಸಯ್ಯಾ;**
**"ತಾರೋ ಅಗಭವಣಿಯ ನೀಡೋ ಪತ್ರೆಯ,**
**ಲಿಂಗಕ್ಕೆ ಬೋನವ ಹಿಡಿಯೋ" ಎಂಬರು;**
**" ಕೂಡಲ ಸಂಗನ ಮಹಾ ಮನೆಯಲ್ಲಿ**
**ಒಕ್ಕುದ ನುಣ್ಣೋ, ತೊತ್ತೇ" ಎಂಬರು.**

ಆಳರಸರ ಮನೆಯಲ್ಲಿ ಅರಸಿಯಾಗಿ ಮೆರೆಯುವದಕ್ಕಿಂತ ಭಕ್ತರ ಮನೆಯಲ್ಲಿ ಶರಣರಂಗಳದಲ್ಲಿ ಆಳಾಗಿ ದುಡಿದುಂಡಿರುವದು ಮೇಲು. ಅಲ್ಲಿ ಭಗವತ್ಸೇವೆಗೆ ದೇಹ ಶಕ್ತಿ ವಿನಿಯೋಗವಾಗಿ ಅಂಗಾಂಗಗಳು ಅನಂಗ ಸಂಗ ರಹಿತವಾಗಿ ಲಿಂಗಸಂಗಿಗಳಾಗಿ ಪವಿತ್ರವಾಗುತ್ತವೆ. ಕೂಡಲ ಸಂಗಮ ದೇವನರಮನೆಯಲ್ಲಿ ಜಂಗಮರುಂಡುಳಿದುದನ್ನು ಪ್ರಸಾದವೆಂದು ಸ್ವೀಕರಿಸಿದರೆ ಮನದ ಕೆಸರು ತೊಳೆದು ತನು ಚಿನ್ನವಾಗಿ ಕೂಡಲ ಸಂಗನ ಚರಣ ಭಾಂಡಾರದಲ್ಲಿರಲು ಅನುವು ದೊರೆಯುತ್ತದೆ.

**೩೫೬ ಆನು, ನಿಮ್ಮ ಶರಣರಿಗೆ, ಮುಂಡೆಯ ಬೋಳಿಸಿಕೊಂಡು,**
**ಗಂಡು ದೊತ್ತಾದೆನಯ್ಯಾ, ಕೂಡಲಸಂಗಮದೇವಾ,**
**ನಿಮ್ಮ ಶರಣರಿಗೆ.**

ಪರಂಜ್ಯೋತಿ ಕೂಡಲ ಸಂಗಮದೇವಾ, ನಾನು ಲಿಂಗದೀಕ್ಷೆ ಪಡೆದುಕೊಂಡು, ಶಿವಪಂಚಾಕ್ಷರೀ ಮಂತ್ರದುಪದೇಶ ಪಡೆದು ನಿನ್ನ ಗುಣಾಭರಣ ಶರಣರಿಗೆ ಶಿಷ್ಯನಾದೆ.

**೩೫೭ ಅನುದಿನ ಮನಮುಟ್ಟಿ ಧನ್ಯನಯ್ಯಾ, ದಮ್ಮಯ್ಯಾ !**
**ದಮ್ಮಯ್ಯಾ !**
**ನಿಮ್ಮ ಧರ್ಮದ ಕವಿಲೆಯಾನಯ್ಯಾ !**
**ಕೂಡಲ ಸಂಗಮ ದೇವಯ್ಯಾ,**
**ನಿಮ್ಮ ಶರಣರ ಮನೆಯ ಮಗನಾನಯ್ಯಾ.**

ದಿನಂಪ್ರತಿ ದೇವರ ಭಜನೆಯನ್ನು ಮನಮುಟ್ಟಿ ಮಾಡಿ ನಾನು ಧನ್ಯನಾಗಿರುವೆ. ಅದೆಲ್ಲ ನಿನ್ನ ಕೃಪೆ ಕೂಡಲ ಸಂಗಮದೇವಾ. ನಾನು ಶರಣರ ಮಗನಾಗಿದ್ದಲ್ಲದೆ ನಿನ್ನ ಗೋಶಾಲೆಯಲ್ಲಿರುವ ಧರ್ಮದ 'ಕಪಿಲೆ' ಎಂಬ ಆಕಳೂ ಅಹುದು.

**೩೫೮ ಕಾಮುವತೊರೆದಾತ, ಹೇಮುವ ಜರೆದಾತ**
**ಭಾನುವಿನ ಉದಯಕ್ಕೆ ಒಳಗಾಗದ ಶರಣನು !**
**ಆಗಳೂ ನಿಮ್ಮ ಮಾಣದೆ ನೆನೆವರ ಮನೆಯಲು**
**ಶ್ವಾನನಾಗಿರಿಸು, ಮಹಾದಾನೀ, ಕೂಡಲಸಂಗಮದೇವಾ.**

ಇಚ್ಛೆ, ವಿಷಯಸುಖದಾಸೆಗಳನ್ನು ಬಿಟ್ಟು- ಧನ ಕನಕಾದಿಗಳನ್ನು ಜೊಳ್ಳು ಕಾಳುಗಳಂತೆ ಗಾಳಿಗೆ ತೂರಿ ಬಿಟ್ಟು—ಮೃತ್ಯುವನ್ನು ಗೆದ್ದಂಥ ಶಿವಶರಣನು ನಾನು. ಅಲ್ಲಿ ಪರಲೋಕದಲ್ಲಿಯೂ ಸಹಿತ, ಕೂಡಲ ಸಂಗಮದೇವಾ ನಿನ್ನನ್ನು ಮರೆಯದಲೆ ಧ್ಯಾನಿಸುವವರ ಮನೆಯ ನಾಯಿಯಾಗಿರಲು ಅಪ್ಪಣೆ ಕೊಡಿಸು ಭಕ್ತವತ್ಸಲಾ.

೩೫೯ ಮೇಲಾಗಲೊಲ್ಲೆನು ಕೀಳಾಗಲಲ್ಲದೆ:
(?) ಕೀಳಿಂಗಲ್ಲದೆ ಹಯನ ಕರೆವುದೆ ?
ಮೇಲಾಗಿ ನರಕದೊಳೋಲಾಡಲಾರೆನು:
ನಿಮ್ಮ ಶರಣರ ಪಾದಕ್ಕೆ ಕೀಳಾಗಿರಿಸು,
ಮಹಾದಾನಿ, ಕೂಡಲ ಸಂಗಮದೇವಾ.

ನಾನು ಎಲ್ಲರಿಗೂ ಕಿರಿಯನಾಗಿ – ಕಡೆಗಾಣಿಸಿದಾಳಾಗಿರಲು ತವಕ ಪಡುತ್ತೇನೆ. ನನಗೆ ದೊಡ್ಡಸ್ತಿಕೆ ಹೆಚ್ಚಳ ಪದವಿಗಳು ಬೇಕಿಲ್ಲ. ಆಕಳು ಕರುವಿಗಲ್ಲದೆ ಬೇರೆ ವಸ್ತುಗಳಿಗೆ ಹಾಲು ಕೊಡುತ್ತದೆಯೋ? ಹಿರಿತನದ ಹುಚ್ಚಿಗೆ ಬಿದ್ದು ಕೊಚ್ಚಿಕೊಂಡು ಹೋಗಿ ನರಕದಲ್ಲಿ ಧುಮುಕಲು ನಾನೊಲ್ಲೆ. ಕೂಡಲಸಂಗಮದೇವ ನನ್ನನ್ನು ನಿನ್ನ ಶರಣರ ಪಾದಧೂಳು ಒರಿಸುವ ವಸ್ತ್ರವಾಗಿರಿಸು.

೩೬೦ ಬ್ರಹ್ಮಪದವಿಯನೊಲ್ಲೆ, ವಿಷ್ಣುಪದವಿಯನೊಲ್ಲೆ,
ರುದ್ರ ಪದವಿಯನೊಲ್ಲೆ,
ಮತ್ತಾವ ಪದವಿಯನೊಲ್ಲೆನಯ್ಯಾ !
ಕೂಡಲ ಸಂಗಮದೇವಾ, ನಿಮ್ಮ ಸದ್ಭಕ್ತರ
ಪಾದವನರಿದಪ್ಪ ಮಹಾ ಪದವಿಯನೆ ಕರುಣಿಸಯ್ಯಾ.

ಬ್ರಹ್ಮಪಟ್ಟ ಕೊಟ್ಟರೂ ವಿಷ್ಣುಪಟ್ಟ ಕೊಟ್ಟರೂ, ಮಹೇಶ್ವರ ಪಟ್ಟ ಕೊಟ್ಟರೂ ಮತ್ತಾವ ಹಿರಿ ಪಟ್ಟ ಕೊಟ್ಟರೂ ನನಗೆ ಬೇಕಿಲ್ಲ. ಕೂಡಲ ಸಂಗಮ ದೇವಾ, ನಿನ್ನನ್ನು ಹಗಲಿರುಳೂ ಹಾಡಿಹರಿಸಿ ಮೈ ಮರೆದು ಕುಣಿಯುವ ನಿನ್ನ ಪರಮಭಕ್ತರ ಮಾರ್ಗ ತಿಳಿದು ಅವರ ಪವಿತ್ರ ಹೆಜ್ಜೆಗಳನ್ನು ಅಪ್ಪಿಕೊಂಡಿರುವ ಮಹಾ ಸೌಭಾಗ್ಯವನ್ನು ಕರುಣಿಸು.

೩೬೧ ಕಾಗೆ ವಿಷ್ಟಿಸುವ ಹೊನ್ನ ಕಳಸವಹುದರಿಂದ
ಒಡೆಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯಾ:
ಅಯ್ಯಾ, ನಿಮ್ಮ ಶರಣರ ಪಾದಕ್ಕೆ ಚಮ್ಮಾವುಗೆಯ
ಮಾಡಯ್ಯಾ!

**(ಶ್ಲೋಕ) ಕರ್ಮಾವಲಂಬನಂ ಕೇಚಿತ್ | ಕೇಚಿತ್ ಜ್ಞಾನಾವಲಂಬನಂ ।**
**ವಯಂ ತು ಶಿವಭಕ್ತಾನಾಂ । ಪಾದುಕಸ್ಯಾವಲಂಬನಂ ।**

**ಕೂಡಲ ಸಂಗಮದೇವಾ,**
**ನಿಮ್ಮ ಸೆರಗೊಡ್ಡಿ ಬೇಡು(ವಿ)ದೊಂದೇವರು ಕರುಣಿಸಯ್ಯಾ.**

ಕಾಗೆ ಕುಳಿತು ಹೊಲಸು ಮಾಡುವ ಶಿಖರದ ಮೇಲಿನ ಬಂಗಾರದ ಕಳಸವನ್ನಾಗಿರಿಸುವದಕ್ಕಿಂತ ನನ್ನನ್ನು ಶರಣರ ಪಾದದ ಕೆರವನ್ನಾಗಿ ಮಾಡು. ಭಕ್ತರು ಕಾದಿರಿಸಿಕೊಂಡ ಚರ್ಮದ ಜೋಡು ಮಾಡು. ಕೆಲವರು ಕರ್ಮಗಳನ್ನು ನಂಬಿದ್ದರೆ, ಇನ್ನು ಕೆಲವರು ಜ್ಞಾನವನ್ನು ನಂಬಿರುತ್ತಾರೆ. ನಾನಂತೂ ನಿನ್ನ ಭಕ್ತರ ಕೆರವುಗಳನ್ನು ನಂಬಿಕೊಂಡಿರುವೆ. ಕೂಡಲ ಸಂಗಮದೇವಾ, ನಿನ್ನನ್ನು ಕಾಪಾಡೆಂದು ಅಂಗಲಾಚಿ ಬೇಡಿಕೊಳ್ಳುವ ಒಂದೇ ಒಂದು ವರ ದಯಪಾಲಿಸು.

**೩೬೨ ಆವಾವ ಭಾವದಲ್ಲಿ ಮಾಡಿ ಕೂಡಿಹೆನೆಂಬರ ಬಾಗಿಲ ತೋರಯ್ಯಾ,**
**ತನುವನೊಪ್ಪಿಸಿದವರ, ಮನವನೊಪ್ಪಿಸಿದವರ, ಧನವನೊಪ್ಪಿಸಿದವರ ಬಾಗಿಲ ತೋರಯ್ಯಾ,**
**ಇವನ್ನೆಲ್ಲವನೊಪ್ಪಿಸಿ ಜಂಗಮವೆನ್ನುವರೆನ್ನವರೆನ್ನವರೆಂಬವರ**
**ಕೆರಹ ಹೊತ್ತಿರಿಸೆನ್ನನು, ಕೂಡಲಸಂಗಮದೇವಾ.**

ತನು ಮನ ಧನಗಳಿಂದ ಲಿಂಗ ಜಂಗಮರನ್ನು ಪೂಜಿಸಿ, ಅನೇಕಾನೇಕ ಪ್ರಕಾರಗಳಲ್ಲಿ ಸ್ವಾಮಿಭಕ್ತಿಯನ್ನು ಮಾಡಿದ ಭಾವುಕರ ಮನೆಯ ಬಾಗಿಲನ್ನು ನನಗೆ ತೋರಿಸು. ಅಲ್ಲದೆ ಜಂಗಮರು ನನ್ನವರೆಂಬುವ ಮಹಾ ಮಾನಿಸರ ಮೆಟ್ಟುಗಳನ್ನು ಹೊತ್ತುಕೊಂಡು ಕುಣಿಯುವ ದಾಸನನ್ನಾಗಿ ಮಾಡು ಕೂಡಲ ಸಂಗಮದೇವಾ.

**೩೬೩ ಆಯತ, ಸ್ವಾಯತದನುಭಾವವ ನಾನೆತ್ತ ಬಲ್ಲೆನೆ ?**
**ಲಿಂಗ-ಜಂಗಮಕ್ಕೆ ಮಾಡಿ ನೀಡುವ**

**ಅಚ್ಚ ಶರಣರ ಮನೆಯಲು ಭೃತ್ಯನಾಗಿಪ್ಪೆನಯ್ಯಾ;**
**ಇದು ಕಾರಣ: ಕೂಡಲ ಸಂಗನ ಶರಣರಲ್ಲದೆ ಅನ್ಯವನರಿಯನಾಗಿ.**

ಲಿಂಗ ಜಂಗಮರಿಗೆ ಅಡಿಗೆ ಮಾಡಿ ಬಡಿಸುವ ಆಳಾಗಿ ನಿಜಗುಣಿ ಶರಣರ ಮನೆಯಲ್ಲಿದ್ದ ನನಗೆ, ಗುರುಸ್ಥಾನದಲ್ಲಿ ನಿಂತು ಲಿಂಗ ದೀಕ್ಷೆ ಕೊಡುವ ಸ್ವಂತ ಅನುಭವ ನನಗೆಲ್ಲಿದೆ ಈಶ. ಕೂಡಲ ಸಂಗಮ ದೇವನ ಶರಣರ ಪಾದಸೇವೆಯೊಂದೇ ನನಗೆ ತಿಳಿದದ್ದು.

೩೬೪ **ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ**
**ಅಂಬುಜಕೆ ಭಾನುವಿನುದಯದ ಚಿಂತೆ**
**ಭ್ರಮರಂಗೆ ಪರಿಮಳ(ದ) ಬಂಡುಂಬ ಚಿಂತೆ**
**ಎನಗೆ ನಮ್ಮ ಕೂಡಲ ಸಂಗಮದೇವರ ಚಿಂತೆ**

ಚಕೋರ ಪಕ್ಷಿಗೆ ಚಂದ್ರನ ಬೆಳದಿಂಗಳೂಟದ ಚಿಂತೆಯ ಹಾಗೆ, ಕಮಲಕ್ಕೆ ಸೂರ್ಯೋದಯ ಯಾವಾಗ್ಗೆ ಆದೀತೆಂಬ ನೆನವರಿಕೆಯ ಹಾಗೆ (ಭ್ರಮರ) ಜೇನಹುಳಕ್ಕೆ ಪರಿಮಳಯುಕ್ತ ಹೂವಿಗೆ ಧಾಳಿ ಇಟ್ಟು ಜೇನು ಸವಿಯುವ ಕನವರಿಕೆಯ ಹಾಗೆ ನನ್ನ ಮನದಂತರಾಳದಲ್ಲಿ ಸದಾವಕಾಲ ಕೂಡಲ ಸಂಗಮ ದೇವನ ಇಂಪಾದ ನುಡಿಯ ಧ್ಯಾನದ ನಾದತರಂಗಗಳು ಧ್ವನಿತವಾಗಬೇಕೆಂಬ ಚಿಂತೆ.

೩೬೫ **ಹೊಲಬುಗೆಟ್ಟ ಶಿಶು ತನ್ನ ತಾಯ ಬಯಸುವಂತೆ,**
**ಬಳಿದಪ್ಪಿದ ಪಶು ತನ್ನ ಹಿಂಡನರಸುವಂತೆ,**
**ಬಯಸುತ್ತಿರ್ದೆನಯ್ಯಾ ನಿಮ್ಮ ಶರಣರ ಬರವನು,**
**ಬಯಸುತ್ತಿರ್ದೆನಯ್ಯಾ ನಿಮ್ಮ ಭಕ್ತರ ಬರವನು,**
**ದಿನಕರನುದಯಕ್ಕೆ ಕಮಳ ವಿಕಸಿತವಾದಂತೆ**
**ಎನಗೆ ನಿಮ್ಮ ಶರಣರ ಬರವು, ಕೂಡಲ ಸಂಗಮದೇವಾ.**

ಕಷ್ಟ, ಕಾರ್ಪಣ್ಯಗಳಿಗೊಳಪಟ್ಟ ಮಗು ತನ್ನ ತಾಯಿಯನ್ನು ಕುರಿತು ಅಳುವಂತೆ, ಮತ್ತು ದಾರಿ ತಪ್ಪಿ ಗುಂಪಿನಿಂದ ಹಿಂದುಳಿದ ಪಶುವು ತನ್ನ

ಹಿಂಡನ್ನು ಹುಡುಕುವ ಹಾಗೆ- ನಾನು ಕೂಡಲಸಂಗಮದೇವಾ, ನಿನ್ನ ಶರಣರ ಭವಹರ ಭಕ್ತರ ದಾರಿಯನ್ನೇ ಎದುರು ನೋಡುತ್ತಿದ್ದೇನೆ. ಸೂರ್ಯೋದಯವಾದರೆ ಕಮಲ ಅರಳುವ ಹಾಗೆ ಶರಣರ ಆಗಮನವಾದರೆ ನನ್ನ ಹೃದಯಮಲ್ಲಿಗೆ ವಿಕಾಸಗೊಳ್ಳುತ್ತದೆ; ಮನ ಕುಸುಮ ಸುಗಂಧ ಬೀರುತ್ತದೆ.

**೩೬೬ ಸೂರ್ಯನುದಯ ತಾವರೆಗೆ ಜೀವಾಳ,**
**ಚಂದ್ರಮನುದಯ ನೇಯ್ದಿಲೆಗೆ ಜೀವಾಳ,**
**ಕೂಪದ ಠಾವಿನಲ್ಲಿ ಕೂಟ ಜೀವಾಳ,**
**ಒಲಿದ ಠಾವಿನಲ್ಲಿ ನೋಟ ಜೀವಾಳವಯ್ಯಾ,**
**ಕೂಡಲ ಸಂಗನ ಶರಣರ ಬರವೆನಗೆ ಪ್ರಾಣ ಜೀವಾಳ ವಯ್ಯಾ !**

ಕಮಲವು ಅರಳಿ ತನ್ನ ಸೌಂದರ್ಯ ಸಾರಬೇಕಾದರೆ ಸೂರ್ಯೋದಯ ಅವಶ್ಯವಿದ್ದ ಹಾಗೆ, ರಾತ್ರಿ ಕಮಲಕ್ಕೆ ಚಂದ್ರನ ಕಿರಣಗಳು ಜೀವವಿದ್ದ ಹಾಗೆ,ಅಕ್ಕರತೆ ತೋರುವವರ ಸಹವಾಸದಲ್ಲಿ ಪ್ರೀತಿಯ ಮಣಿಕಟ್ಟು ಮುಖ್ಯವಿದ್ದ ಹಾಗೆ, ಪ್ರೇಮವಿದ್ದಲ್ಲಿ-ದೃಷ್ಟಿ ದೃಷ್ಟಿಯನ್ನರಿಯುವ ತಿಳಿ ನೋಟವೇ ಪ್ರೇಮಿಗಳ ರಸದೂಟವಿದ್ದ ಹಾಗೆ, ನನಗೆ ಕೂಡಲ ಸಂಗಮದೇವನ ಶರಣರು ಬರುವುದೇ ಒಂದು ಸುದಿನ.

**೩೬೭ ಜಲವ ತಪ್ಪಿದ ಮತ್ಸ್ಯ ಬದುಕುವುದೇ ಸೋಜಿಗ;**
**ಗಣ ತಿಂಥಿಣಿಯೊಳಗಿರಿಸೆನ್ನನು, ಲಿಂಗವೇ;**
**ಶಿವ, ಶಿವಾ, ಕೂಡಲಸಂಗಮ ದೇವಾ;**
**ಸೆರಗೊಡ್ಡಿ ಬೇಡುವೆನು.**

ನೀರಿನಿಂದ ಹೊರಗೆ ತೆಗೆದ ಮೀನವು ಬದುಕಿ ಉಳಿಯುವದೇ ಆಶ್ಚರ್ಯ. ಆದ್ದರಿಂದ ಕೂಡಲ ಸಂಗಮದೇವಾ ನಿನಗೆ ದೈನ್ಯನಾಗಿ ಅನನ್ಯಭಾವದಿಂದ ಬೇಡುವೆ. ನನ್ನನ್ನು ಗಣಂಗಳ-ಶರಣರ ಬಳಗದೊಳಗೆ ಇರಿಸು.

**೩೬೮ ಅಯ್ಯಾ ನಿಮ್ಮ ಮಹಾವ್ರತಗಳನಗಲಿ ಬರ್ದುಂಕಲಾರೆನು;**
**ಶಿವಧೋ, ಶಿವಧೋ, ಕಂಗಳಶ್ರುಗಳಲ್ಲಿ ಮುಂದುಗಾಣೆನು;**
**ಲಿಂಗಸಂಗಿಗಳನಗಲಿ ನಾನೆಂತು ಬರ್ದುಂಕುವೆ**
**ಕೂಡಲ ಸಂಗಮ ದೇವಾ ?**

ತಂದೆಯೇ ಕಟ್ಟುನಿಟ್ಟಾಗಿ, ನಿನ್ನ ಒಲುಮೆ ಪಡೆಯಲು ಪಂಚಾಚಾರ ವ್ರತಗಳನ್ನು ಆಚರಿಸುವವರನ್ನಗಲಿಯೂ ಲಿಂಗದೊಡನೆ ಆತ್ಮ ಸಂಬಂಧ ಮಾಡಿಕೊಂಡಿರುವ ಭಕ್ತರನ್ನಗಲಿ ನಾನು ಈ ಪ್ರಪಂಚದಲ್ಲಿ ಬದುಕಲಾರೆ ಕೂಡಲಸಂಗಮದೇವಾ.

**೩೬೯ ಜಜ್ಜನೆ ಜರಿದೆನು, ಜಜ್ಜನೆ ಜರಿದೆ ನೋಡಯ್ಯಾ !**
**ಬಿಬ್ಬನೆ ಬಿರಿದೆನು, ಬಿಬ್ಬನೆ ಬಿರಿದೆ, ನೋಡಯ್ಯಾ !**
**ನಾನೊಬ್ಬನೆ ಉಳಿದೆನು, ನಾನೊಬ್ಬನೆ ಉಳಿದೆ,**
**ಕೂಡಲ ಸಂಗಮ ದೇವಾ, ನಿಮ್ಮ ಶರಣರನಗಲಿದ ಕಾರಣ!**

ಕೂಡಲ ಸಂಗಮ ದೇವನೆ ನಿನ್ನ ಶರಣರ ಸಂಗ ಬಿಟ್ಟು ಹೊರಗೆ ಬಂದ ಕಾರಣ ಬಿಸಿಲಿಗೆ ಬೆಂದು ಬಿರಿತ ಸವುತೆಯ ಹಣ್ಣಿನಂತೆ, ಮಹಡಿಯ ಮನೆ ಏಕಾಏಕಿ ಕುಸಿದು ಬಿದ್ದು ಜರ್ಜರಿತವಾದ ಪ್ರಾಣಿಗಳಂತೆ ನಾನು ಮಾನಹೀನ-ಬಲಹೀನನಾಗಿ ಉಳಿದಿರುವೆ.

**೩೭೦ ಕಂಡರೆ ಮನೋಹರವಯ್ಯಾ: ಕಾಣದಿದ್ದರೆ ಅವಸ್ಥೆ ನೋಡಯ್ಯಾ !**
**ಹಗಲಿರುಳಹುದು: ಇರುಳು ಹಗಲಹುದು !**
**ಎಂತಯ್ಯಾ ! ಆಳವಾಡಿ ಕಳೆವೆನು ?**
**ಒಂದು ಜುಗ ಮೇಲೆ ಕೆಡೆದಂತೆ !**
**ಕೂಡಲ ಸಂಗನ ಶರಣರನಗಲುವ ಧಾವತಿಯಿಂದ**
**ಮರಣವೇ ಲೇಸು ಕಂಡಯ್ಯಾ.**

ಉದಯದೊಳು ನಯನ ಮಂಗಲಕರವಾದ, ಮನ್ಮನೋಹರವಾದ ಶರಣರ ವದನ ಸೂರ್ಯನ ದರ್ಶನವಾಗದಿದ್ದರೆ ಒಂದು ಯುಗಮಾನ

ದಷ್ಟು ಭಾರ ವ್ಮೈಮೇಲೆ ಬಿದ್ದು ಮತಿಗೆಟ್ಟು ದಿನ ರಾತ್ರಿಗಳ ಅಂತರ ತಿಳಿಯದೆ ತಿರುಗುವೆ. ಕೂಡಲ ಸಂಗಮದೇವಾ, ನಿನ್ನ ಪ್ರತಿಬಿಂಬಗಳಾದ ಶರಣರ ಕೂಟ ತಪ್ಪಿ ಬಳಲುವದಕ್ಕಿಂತ ಸಾಯುವದೇ ಉತ್ತಮ.

**೩೭೧ ಅಂಗೈ ತಿಂದುದೆನ್ನ, ಕಂಗಳು ಕೆತ್ತಿಹುವಯ್ಯಾ :**
**ಬಂದಹರಯ್ಯಾ ಪುರಾತರೆನ್ನ ಮನೆಗೆ,**
**ಬಂದಹರಯ್ಯಾ ಶರಣರೆನ್ನ ಮನೆಗೆ !**
**ಕಂಡ ಕನಸು ದಿಟವಾಗಿ ಜಂಗಮ ಮನೆಗೆ ಬಂದರೆ,**
**ಶಿವಾರ್ಚನೆಯ ಮಾಡಿಸುವೆ,**
**ಕೂಡಲ ಸಂಗಮದೇವಾ ನಿಮ್ಮ ಮುಂದೆ.**

ನನ್ನ ಕನಸಿನಲ್ಲಿ ಅಂಗೈ ತಿಂಡಿ ಬಿಟ್ಟು,ಕಣ್ಣುಗಳು ಹಾರತೊಡಗಿ ಪುರಾತರು, ಶರಣರು ಬಂದ ಹಾಗೆ ಆಯ್ತು. ಈ ಕನಸು ನನಸಾಗಿ ನಿಜವಾಗಿಯೂ ಜಂಗಮ ಸ್ವಾಮಿ ನನ್ನ ಮನೆಗೆ ಬಂದರೆ ಕೂಡಲ ಸಂಗಮದೇವಾ, ನಿನ್ನ ಪಾದದಾಣೆಯಾಗಿ-ನಾನು ಶಿವಪೂಜೆ ಆರೋಗಣೆ ಮಾಡಿಸುವೆ.

**೩೭೨ ಲಿಂಗವ ಪೂಜಿಸುತ್ತ ಜಂಗಮದ ಮುಖವ ನೋಡುತ್ತಿಪ್ಪ**
**ಸುಖವ ಕೊಡು, ಕಂಡಾ, ಲಿಂಗವೇ-**
**ಪರಮ ಸುಖವ ಕೊಡು, ಕಂಡಾ, ಲಿಂಗವೇ-**
**ಕೂಡಲ ಸಂಗಮದೇವಾ, ಇದೇ ವರವ ನಿಮ್ಮಲ್ಲಿ ಬೇಡುವೆ.**

ಇಷ್ಟಲಿಂಗವೇ ಶಿವಲಿಂಗ ಪೂಜೆ ಮಾಡುತ್ತಿದ್ದಾಗ್ಯೂ ಸಹ ಜಂಗಮಾರ್ಚನೆ. ಅತಿಥಿ ಸತ್ಕಾರ ಮಾಡುವ ಸುಬುದ್ಧಿ ನೀಡಿ ಪರಮ ಸುಖವ ಕೊಡು. ಕೂಡಲ ಸಂಗಮ ದೇವಾ ನಿನ್ನಲ್ಲಿಯೂ ನಾನು ಬೇಡುವ ವರ ಇದೊಂದೆ.

**೩೭೩ ಮನ ದೈವ, ಕುಲದೈವ ಎನಗೆ ನಿಮ್ಮವರಯ್ಯಾ !**
**ತನು ಮೀಸಲು, ಮನ ಮೀಸಲು, ನಯನ ಮೀಸಲು ಎನ್ನಾ,**
**ಕೂಡಲ ಸಂಗಮದೇವಾ, ನಿಮ್ಮ ಶರಣರಿಗೆ.**

ಕೂಡಲ ಸಂಗಮದೇವಾ, ಸಾಕಾರ ರೂಪ ಸಾಂಬರಾದ ನಿನ್ನ ಶರಣರ ಹಾಗೂ ನನ್ನ ಆರಾಧ್ಯ ದೇವತಾ, ಕುಲದೇವತಾಗಳಾದ ಅವರಿಗೆ ನನ್ನ ಶರೀರ, ಮನಸ್ಸು ದೃಷ್ಟಿಗಳು ಅವರ ಪೂಜಾ ಸೇವೆಗೆ ಮೀಸಲಾಗಿವೆ.

**೩೭೪ ಗಿಳಿಯು ಹಂಜರವಿಕ್ಕಿ, ಸೊಡರಿಂಗೆಣ್ಣೆಯು ನೆರೆದು, ಬತ್ತಿಯು ನಿಕ್ಕಿ**
**ಬರವ ಹಾರುತ್ತಿದ್ದೆ ನೆಲಗವ್ವಾ.**
**ತರಗೆಲೆ ಗಿರಕೆಂದೊಡೆ ಹೊರಗನಾಲಿಸುವೆ;**
**ಅಗಲಿದೆನೆಂದೆನ್ನ ಮನ ಧಿಗಿಲೆಂದಿತ್ತೆಲಗವ್ವಾ !**
**ಕೂಡಲ ಸಂಗನ ಶರಣರು ಬಂದು, ಬಾಗಿಲ ಮುಂದೆ ನಿಂದು**
**'ಶಿವಾ' ಎಂದರೆ, ಸಂತೋಷ ಬಟ್ಟೆ ನೆಲಗವ್ವಾ !**

ತಲ ಬಾಗಿಲ ಮುಂದೆ ಗಿಳಿಯ ಪಂಜರ ತೂಗು ಹಾಕಿ, ದೀಪಕ್ಕೆ ಎಣ್ಣೆ ಹಾಕಿ ಬತ್ತಿಯನ್ನು ನೆಟ್ಟಗೆ ಕುಡಿಯಾಗಿ ಚಾಚಿ ಜಂಗಮತಿಥಿಗಳ ದಾರಿಯನ್ನು ಕಾಯತ್ತಲಿದ್ದೇನೆ. ಹೊರಗೇನಾದರೂ ಒಣಗಿದ ಎಲೆಯು 'ಸರಕ್' ಎಂದು ಸರಿದರೂ ಶರಣರು ಬಂದರೆಂದು ಹೊರಗೆ ಬಂದು ನೋಡುತ್ತೇನೆ. ಬರಲಿಲ್ಲವೆಂದು ತಿಳಿದೊಡನೆ ನನಗೆ ಗಾಬರಿಯಾಗಿ ಎದೆ ನಡುಗುತ್ತದೆ. ಆ ಹೊತ್ತಿಗೆ ಶರಣರು ಬಂದು 'ಶಿವಾ' ಎಂದು ಅಮೃತ ನುಡಿ ಹಾಡಿದರೆ ನಾನು ಸಂತೋಷಪಡುವೆನು ಕಲ್ಯಾಣದೇವಾ.

**೩೭೫ ಅಡವಿಯಲ್ಲೊಬ್ಬ ಕಡು ನೀರಡಿಸಿ,**
**ಎಡೆಯಲ್ಲಿ ನೀರ ಕಂಡಂತಾಯಿತ್ತಯ್ಯಾ !**
**ಕುರುಡ ಕಣ್ಣ ಹಡೆದಂತೆ,**
**ಬಡವ ನಿಧಾನವ ಕಂಡಂತಾಯಿತ್ತಯ್ಯಾ !**
**ನಮ್ಮ ಕೂಡಲ ಸಂಗನ ಶರಣರ ಬರವೆನ್ನ ಪ್ರಾಣ, ಕಂಡಯ್ಯಾ !**

ಬಿಸಿಲಗಾಲದಲ್ಲಿ ಓರ್ವ ದಾರಿಕಾರ ಅರಣ್ಯಮಧ್ಯದಲ್ಲಿ ನೀರಡಿಸಿ ದಾಗ ತನ್ನ ಪಕ್ಕದಲ್ಲಿಯೇ ಕೆರೆ ಕಂಡು ಹಿಗ್ಗಿ ಅವನ ಪ್ರಾಣ ಚಿಗಿತಂತೆ,

ಕುರುಡನಿಗೆ ಕಂಣುಬಂದಂತೆ, ಬಡವನಿಗೆ ಕೊಡ ಹೊನ್ನು ಸಿಕ್ಕು ಆನಂದ ವಾದಂತೆ- ನನಗೆ ನಿನ್ನ ಶರಣರ ಆಗಮನದಿಂದ ಜೀವ ಕಳೆ ಏರಿದಂ ತಾಗುತ್ತದೆ.

**೩೭೬ ಇಂದೆನ್ನ ಮನೆಗೆ ಪ್ರಮಥರು ಬಂದಹರೆಂದು**
**ಗುಡಿ ತೋರಣವ ಕಟ್ಟಿ, ಷಡು ಸಮ್ಮಾರ್ಜನೆಯ ಮಾಡಿ,**
**ರಂಗವಾಲಿಯ ನಿಕ್ಕಿ "ಉಘೆ, ಚಾಂಗು ಭಲಾ" ಎಂಬೆ:**
**ತಮ್ಮ ಒಕ್ಕುದನಿಕ್ಕಿ ಸಲಹುವರಾಗಿ,**
**ಕೂಡಲ ಸಂಗನ ಶರಣರು.**

ಈ ದಿನ ನನ್ನ ಮನೆಗೆ ಪ್ರಮಥರು ಆದ್ಯರು ಬಂದಿರುವರೆಂದು ತಳಿ ರು ತೋರಣಗಳಿಂದಲಂಕರಿಸಿ ಮನೆಯ ಮುಂದೆ ಝೆಂಡಾ ಏರಿಸಿ ಮನೆ ಯಲ್ಲಿ ಸಾರಿಸಿ ರಂಗವಲ್ಲಿ ಬರೆದು ಸಿಂಗರಿಸಿ, ಪಂಚ ಪಕ್ವ ಪರಮಾನ್ನದ ಡಿಗೆ ಮಾಡಿಸಿ ಯತಿಗಳಿಗೆ ಬಿನ್ನಣವಿತ್ತು 'ಉಘೆ, ಚಾಂಗು, ಭಲಾ' ಎಂದು ಬೇಡಿಕೊಳ್ಳುವೆ. ಕೂಡಲ ಸಂಗನ ಶರಣರು ತಮ್ಮ ಪ್ರಸಾದ ನೀಡಿ ಕಾಯುತ್ತಾರೆ.

**೩೭೭ ಸಾಸವೆಯ ಮೇಲೆ ಸಾಗರವರಿದಂತಾಯಿತ್ತಯ್ಯಾ;**
**ಆನಂದದಿಂದ ನಲಿ ನಲಿದಾಡುವೆ,**
**ಆನಂದದಿಂದ ಕುಣಿ ಕುಣಿದಾಡುವೆ:**
**ಕೂಡಲ ಸಂಗನ ಶರಣರು ಬಂದರೆ,**
**ಉಬ್ಬಿ, ಕೊಬ್ಬಿ ಹರುಷದಿ ಓಲಾಡುವೆ !**

ಸಾಸವಿ ಕಾಳಿನ ಮೇಲೆ ಸಮುದ್ರರಾಜನು ಕೃಪೆ ಮಾಡಿ ಅದರ ಮೇಲೆ ಹರಿದು ಹಾಯ್ದು ಪಾವನಗೊಳಿಸಿದಂತೆ, ಸಂಗಮ ದೇವನ ಕೃಪಾ ಸಮುದ್ರದ ಹೆದ್ದೆರೆಗಳಾದ ಶರಣರು ಬಂದು ನನ್ನ ಮನ-ದೇಹಗಳನ್ನಾಕ್ರ ಮಿಸಿದರೆ ನಾನು ಉಬ್ಬಿ ಉಳ್ಳೆಯಾಗಿ ಹರುಷೋತ್ಸಾಹಗಳಿಂದ ಕುಣಿ ಕುಣಿದು ನಲಿದಾಡುವೆ.

೩೭೮ ಮನ ಮನ ಬೆರಸಿದಲ್ಲಿ ತನು ಕರಗದಿದ್ದರೆ,
ಸೋಂಕಿನಲ್ಲಿ ಪುಳಕಂಗಳು ಹೊರಹೊಮ್ಮದಿದ್ದರೆ,
ಕಂಡಾಗಳಶ್ರು ಜಲಂಗಳು ಸುರಿಯದಿದ್ದರೆ,
ನುಡಿವಲ್ಲಿ ಗದ್ಗದಂಗಳು ಹೊರಹೊಮ್ಮದಿದ್ದರೆ-
ಕೂಡಲ ಸಂಗಮದೇವರ ಭಕ್ತಿಗಿದು ಚಿಹ್ನ, -
ಎನ್ನಲ್ಲಿ ಎಲ್ಲವಾಗಿ, ಆನು ಡಂಭಕ ಕಾಣಿರೇ !

ಮನಸ್ಸು ಲಿಂಗನಲ್ಲಿ ಬೆರೆತು ಇಲ್ಲವೆ ಮನಸ್ಸು ಶರಣರ ಮನಧಾರೆಯಲ್ಲಿ ಮಿಂದು ಬೆರೆತರೂ- ಹೃದಯದಲ್ಲಿ ಅಂತಃಕರುಣೆ, ಪ್ರೇಮಗಳ ಉತ್ಪನ್ನವಾಗದಿದ್ದರೆ, ಶರಣರ ಪಾದಸ್ಪರ್ಶದಿಂದ ಮೈ ನವಿರೇರದಿದ್ದರೆ, ಅವರ ಆನಂದಾಶ್ರುಗಳು ಮುತ್ತುಗಳನ್ನುದುರಿಸದಿದ್ದರೆ, ದೇವ ಭಜನೆ ಮಾಡುವಾಗ ಹೃದಯಾನುಕಂಪಗಳ ಅಲೆಗಳೆದ್ದು ಕಂಠದಲ್ಲಿ ಭಾವಪೂರ್ಣ ತುಷ್ಟಿಪೂರ್ಣ ಧ್ವನಿ ತರಂಗಗಳು ಏಳದಿದ್ದರೆ- ಈ ಎಲ್ಲ ಭಕ್ತಿಯ ಭಾವಾವೇಶದ ಗುರುತುಗಳು ನನ್ನ ಹತ್ತರ ಇಲ್ಲವೆಂದರ್ಥವಾಗಿ ನಾನು ಕೇವಲ ಬಣ್ಣದ ಬದುಕು ಸಾಗಿಸುವ ಬಾಯ್ಬಡಕ.

೩೭೯ ಅಷ್ಟವಿಧಾರ್ಚನೆ ಷೋಡಶೋಪಚಾರವನು-
ಅರಸರಿಯದ ಬಿಟ್ಟಿಯ ಮಾಡುವೆನು !
ಎನ್ನ ಠಾಗಿದ ಸುಖವ ಜಂಗಮಕ್ಕರ್ಪಿಸಲರಿಯದ ಉಪಚಾರಿಯಾನು,
ಸ್ಥಾವರ-ಜಂಗಮವರಿಯದ ಪೂಜಕ ನಾನು:
ಮತ್ತೆ ನಾಚದೆ ಕೂಡಲ ಸಂಗಮ ದೇವಯ್ಯಾ,
ಜಂಗಮವೆನ್ನ ಪ್ರಾಣಲಿಂಗವೆಂಬೆನು !

ಎಂಟು ವಿಧಾನಗಳಲ್ಲಿ ಪೂಜೆ ಮಾಡುವದು, ಹದಿನಾರು ತರದ ಶೋಭನಾಲಂಕಾರಗಳನ್ನು ಲಿಂಗನಿಗೆ ಸಮರ್ಪಿಸುವದು- ಬಾಹ್ಯಾಡಂಬರದ ಪೂಜೆಯೇ ವಿನಃ ಒಡೆಯನಾದ ಕೂಡಲ ಸಂಗಮ ದೇವನಿಗೆ ಪ್ರೀತ್ಯರ್ಥವಾಗಿ ಮಾಡಿದ ಪೂಜೆಯಲ್ಲ - ,ಲಿಂಗ-ಜಂಗಮರಾರೆಂಬುದು

ಜ್ಞಾನವಿಲ್ಲದ ನಾನು ಜಂಗಮನೆಂದರೆ ನನ್ನ ಪ್ರಾಣವೆಂದು ನಾಚಿಕೆಯಿಲ್ಲದೆ ಹೇಳುವ ಕುಜನ ನಾನು ಕೂಡಲ ಸಂಗಮದೇವಾ.

**೩೮೦ ಆವಗೆಯುಲೊದಗಿದ ಕರ್ಪಿನಂತೆ,**
**ಅಮೃತದೊಳಗಿರ್ದ ಸರ್ಪನ ತನುವಿನಂತೆ,**
**ಇರ್ದೆನಯ್ಯಾ ನಾನು, ಹೊರಗೆ ನುಣ್ಪಾಗಿ !**
**ಸಿಂಗಕ್ಕೊಲಿದ ಮದಕರಿಯಂತೆ**
**ಆನು ಜಂಗಮಕ್ಕೊಲಿದೆನಯ್ಯಾ, ಕೂಡಲಸಂಗಮದೇವಾ !**

ಕುಂಬಾರನು ಮಡಕೆಗಳನ್ನು ಸುಡುವ ಒಲೆಯೊಳಗೆ ಕಪ್ಪು ಬೂದಿ ತುಂಬಿಕೊಂಡಂತೆ, ಅಮೃತದ ಕೊಡದಲ್ಲಿ ಹಾವು ಇದ್ದಂತೆ, ನಾನು ಹೊರಗಿನ ವಾತಾವರಣಕ್ಕೆ ತಕ್ಕಂತೆ ಹಗರಣದ ಹರಿಣನಾಗಿ, ಜಂಬದ ಜೋಗಿಯಾಗಿದ್ದೇನೆ ಆದರೆ ನಿಜವಾಗಿಯೂ ಮದ್ದಾನೆಯು ಸಿಂಹಕ್ಕೆ ಬಾಗಿ ನಮಿಸುವಂತೆ ನಾನು ಜಂಗಮರಿಗಂಜಿ ನಡೆಯುತ್ತಿರುವೆ ಕೂಡಲ ಸಂಗಮದೇವಾ.

**೩೮೧ "ಸ್ಥಾವರ-ಜಂಗಮ ಒಂದೇ" ಎಂದು ಇದಿರು ನುಡಿವೇ**
**ನಾನೆಡಹುತಿಪ್ಪೆ: ಸಹಜನಲ್ಲಯ್ಯಾ !**
**ಆನು ಸಮ್ಯಕ್ಕನಲ್ಲಯ್ಯಾ !**
**'ಆನು ಭಯಲಿಂಗಸಂಗಿ' ಎಂಬೆನು:**
**ಈ ನುಡಿ ಸುಡದಿಹುದೆ, ಕೂಡಲ ಸಂಗಮ ದೇವಾ ?**

'ಚರಾ-ಚರ' 'ಲಿಂಗ-ಜಂಗಮ' ಒಂದೇ ಎಂದು ನುಡಿದು ವಂಚನೆ ಮಾಡುತ್ತಿರುವೆ. ಸಹಜಶೀಲದವನಲ್ಲ ನಾನು. ದಾರಿ ತಪ್ಪಿ ನುಡಿವ ನರಪ್ರಾಣಿ. ನನಗೆ ಸಮ್ಯಕ್ ಜ್ಞಾನವಿಲ್ಲ. ಹೀಗಿದ್ದರೂ ನಾನು ಲಿಂಗ ಜಂಗಮರ ಸಂಸ್ಕಾರ ಪಡೆದು ಪರಮಾನಂದ ವಿಲಾಸಿ ಎಂದು ಹೇಳುತ್ತಿರುವ ಈ ನುಡಿ ನನ್ನನ್ನು ಸುಟ್ಟು ಬೂದಿ ಮಾಡದೇ ಬಿಟ್ಟೀತೆ ಕೂಡಲ ಸಂಗಮದೇವಾ?

**೩೮೨ ಮಸಿಯು ನೇಸು ಕಾಲ ಬೆಳಗಿದರೆ, ಬಿಳಿದಾಗ ಬಲ್ಲುದೆ ?**
**ಕರ್ಮಸ್ಥಿತಿ ಬೆನ್ನ ಬಿಡದು.**
**ಅನಂತ ಕೋಟಿ ಸನ್ಮಾನವ ಮಾಡಿದರೇನು ?**
**ನಿಮಿಷದು ದಾಸೀನ ಕೆಡಿಸಿತ್ತು !**
**ನಿಮ್ಮ ನಂಬಿಯೂ ನಂಬದ ಡಂಭಕ ನಾನಯ್ಯಾ !**
**ಕೂಡಲ ಸಂಗಮದೇವಾ.**

ಇದ್ದಲಿಯನ್ನು ಎಷ್ಟು ತೊಳೆದರೂ ಬೆಳ್ಳಗಾಗದ ದೃಷ್ಟಾಂತದಂತೆ ಕರ್ಮಗಳು ಬಿಡದೆ ಕಾಡುತ್ತಿರುವಾಗ ಏನು ಮಾಡಿದರೇನು. ಎಷ್ಟೇ ವರ್ಷಗಳ ಕಾಲ ನಿರಂತರ ನಿಕಟ ಮನಸ್ಸಿನಿಂದ ಪೂಜೆ ಮಾಡಿ ಒಂದು ದಿನ ಒಂದರೆ ನಿಮಿಷ ದೇವತಾರ್ಚನೆಯಲ್ಲಿ ಉದಾಸೀನ ತಾಳಿದರೆ ಹಿಂದಿನ ಎಲ್ಲ ಪೂಜೆಯ ಫಲವೂ ನೀರಿಗ್ಹಾಕಿದಂತೆ, ಕೂಡಲಸಂಗಮದೇವ ನಿನ್ನ ಚರಣದಲ್ಲಿ ವಿಶ್ವಾಸವಿಟ್ಟು ಕುಲಘಾತಕನಾದ ಕೊಡಲಿಯ ಕಾವು ನಾನು.

**೩೮೩ ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತ್ತೆನ್ನ ಭಕ್ತಿ !**
**ಉಪ್ಪು ಅಪ್ಪುವಿನಲ್ಲಿ ಅದ್ದಿ ನೆಲಿದಂತಾಯಿತ್ತೆನ್ನ ಭಕ್ತಿ !**
**ಕೂಡಲ ಸಂಗಮದೇವಾ, ಆನು ಮಾಡಿದೆನೆಂಬೀ ಕಿಚ್ಚು ಸಾಲದೆ ?**

ಕಂಣು ಕಟ್ಟಿಕೊಂಡು ನೊಗ ಹೊತ್ತು ಗಾಣ ಸುತ್ತುವ ಎತ್ತು ಎಳ್ಳಿದೆ ಇಲ್ಲ ಎಂಬುದನ್ನರಿಯದೆ ಸುತ್ತು ಹಾಕಿದ ಹಾಗೆ ಮತ್ತು ಉಪ್ಪಿನ ಹರಳನ್ನು ನೀರಲ್ಲಿ ಎದ್ದಿ ಮೇಲೆ ತೆಗೆದ ಹಾಗೆ ನಾನು ಭಕ್ತಿಯ ಬೆಳಕನ್ನು ಜ್ಞಾನವನ್ನು-ವಿಧಾನವನ್ನು ಗೊತ್ತು ಮಾಡಿಕೊಳ್ಳದೆ, ಪೂಜೆ ಮಾಡಿದೆ. ಜಂಗಮಕ್ಕೆ ಎಡೆ ಮಾಡಿದೆ ಎಂದು ಸುಳ್ಳು ಹೇಳಿಕೊಳ್ಳುವ ಸುಡುಗಿಚ್ಚು ನನ್ನನ್ನು ದಹಿಸಿ ಕುಟ್ಟರಿ ಮಾಡದೇ ಕೂಡಲ ಸಂಗಮದೇವಾ.

**೩೮೪ ಅಷ್ಟ ವಿಧಾರ್ಚನೆ ಷೋಡಶೋಪಚಾರವ**
**ಮಾಡುವ ಹಮ್ಮಿನಲ್ಲಿ ಬೆಂದೆನಯ್ಯಾ.**
**ಲಿಂಗನೆಂದರಿಯೆ,ಜಂಗಮನೆಂದರಿಯೆ,ಪ್ರಸಾದನೆಂದರಿಯೆ!**

**ಆನು ಬೆಂದೆನಯ್ಯಾ, ಕೂಡಲ ಸಂಗಮದೇವಾ:**
**ಆನು ಮಾಡುವುದೆಲ್ಲಾ ಉಪಚಾರವಯ್ಯಾ !**

ಅಷ್ಟಾಂಗ ಪೂಜೆ, ಹದಿನಾರು ಪ್ರಕಾರಗಳ ಅಲಂಕಾರ (ಸ್ತೈತ್ಯ, ಗಂಧ, ಪುಷ್ಪ, ವಸ್ತ್ರ ಮುಂತಾದ) ಗಳನ್ನು ಮಾಡುತ್ತಿರುವೆನೆಂಬ ಗರ್ವ ದಿಂದ ಉರಿದೆದ್ದು ಬೇಗುದಿಗೊಂಡಿರುವೆ. ಕೂಡಲ ಸಂಗಮದೇವಾ, ನನಗೆ ಲಿಂಗವೆಂದರಾವುದು, ಜಂಗಮವೆಂದರಾರು ಮತ್ತು ಪ್ರಸಾದವೆಂದ ರೇನೆಂಬುದು ಗೊತ್ತಿಲ್ಲ; ಮೂಢ ನಾನು. ನಾ ಮಾಡುವ ಪೂಜೆ ತಂತ್ರ;ಭಕ್ತಿ ಯಲ್ಲಿ-ಭಾವವಿಲ್ಲ-ತತ್ವವಿಲ್ಲ.

**೩೮೫ ಎನ್ನಲ್ಲಿ ಭಕ್ತಿಸಾಸವೆಯ ಷಡ್ಭಾಗದನಿತಿಲ್ಲ:**
**ಎನ್ನ ಭಕ್ತನೆಂಬರು, ಎನ್ನ ಸಮಯಾಚಾರಿಯೆಂಬರು !**
**ನಾನೇನು ಪಾಪವ ಮಾಡಿದೆನೋ:**
**ಬೆಳೆಯದ ಮುನ್ನವೆ ಕೊಯ್ವರೆ ? ಹೇಳಾ ಅಯ್ಯಾ !**
**ಇರಿಯದ ವೀರ ! ಇಲ್ಲದ ಸೊಬಗವ**
**ಎಲ್ಲಾ ಒಡೆಯರ ಏರಿಸಿ ನುಡಿವರು !**
**ಎನಗಿದು ವಿಧಿಯೇ ಕೂಡಲ ಸಂಗಮದೇವಾ ?**

ಸಾಸವೆ ಕಾಳಿನ ಹದಿನಾರನೇ ಭಾಗದಷ್ಟು ಸಹ ಭಕ್ತಿ ಇಲ್ಲದ ನನಗೆ ಭಕ್ತನೆಂದೂ (ಪಂಚಾಚಾರಗಳಲ್ಲೊಂದಾದ) ಸಮಯಾಚಾರಿ- ಹೊತ್ತು ಹೊತ್ತಿಗೆ ನಿಯತ್ತಾಗಿ ಪೂಜೆ ಮಾಡುವವ, ಆರೋಗಣೆಯ ವೇಳೆ ಕಾದು ತಪ್ಪದೆ ಎಡೆ ಕೊಡುವ ಸದಾಚಾರಿ ಎಂದೂ ಕರೆಯುತ್ತಲಿದ್ದಾರೆ. ಇದು ಯಾವ ಪಾಪದ ಫಲವೋ? ಬಳ್ಳಿ ಬೆಳೆದು ದೊಡ್ಡದಾಗದ ಮುಂಚೆಯೇ ಅದನ್ನು ಕಿತ್ತಿ ಹಾಕಬೇಕೆ? ಭಕ್ತನಾಗದ ನನಗೆ ಭಕ್ತನೆಂದುಸಿರಿ- ಒಬ್ಬ ರನ್ನೂ ಆಹುತಿ ತೆಗೆದುಕೊಳ್ಳದ ವೀರನಿಗೆ ಏನಿಲ್ಲದ ಬಿರುದುಗಳಿಂದ ಹೊಗಳಿದಂತೆ,ಈ ಜನರ ವೃತ್ತಿ ನನಗೆ ಕಟ್ಟಳೆಯೆ ಕೂಡಲಸಂಗಮದೇವಾ.

**೩೮೬ ಎನ್ನವರೊಲಿದು ಹೊನ್ನಶೂಲದಲ್ಲಿಕ್ಕಿದರೆನ್ನ ಹೊಗಳಿ, ಹೊಗಳಿ !**
**ಎನ್ನ ಹೊಗಳತೆ ಎನ್ನ ನಿಮ್ಮೆಯ್ದಲೊಂಡಿತ್ತಲ್ಲಾ !**

**ಅಯ್ಯಾ, ನಿಮ್ಮ ಮನ್ನಣೆಯೇ ಮಸೆದಲಗಾಗಿ ತಾಗಿತ್ತಲ್ಲಾ!**
**ಅಯ್ಯೋ! ನೊಂದೆನು ಸೈರಿಸಲಾರೆನು:**
**ಕೂಡಲ ಸಂಗಮದೇವಾ; ನೀನೆನಗೊಳ್ಳಿದನಾದರೆ,**
**ಎನ್ನ ಹೊಗಳಿ ತೆಗಡ್ಡಬಾರಾ, ಧರ್ಮೀ!**

ನನ್ನವರೆಂಬುವರೆ ನನ್ನ ಗುಣಗಾನ ಮಾಡಿ ನನ್ನನ್ನು ಕೊಂದರು. ಅವರು ನನ್ನನ್ನು ಹೊಗಳುವದರಿಂದ ನನ್ನ ನಿನ್ನ ಸಂಬಂಧ ದೂರವಾಗುತ್ತದೆ ಪ್ರಭುವೆ. ಆಗ್ಗೆ ನಿನ್ನ ದಯಾದೃಷ್ಟಿಯೇ ಹದನಾದ ಚೂರಿಯಾಗಿ ನನ್ನ ಕರುಳು ಕೊಯ್ಯುತ್ತದೆ. ನಾನು ಸತ್ತೆ, ಸತ್ತೆ ಗುರುಲಿಂಗ! ಕೂಡಲ ಸಂಗಮ ದೇವನೆ ನೀನು ನಿಜವಾಗಿಯೂ ನನ್ನ ಕಲ್ಯಾಣ ಕರ್ತೃವಾಗಿದ್ದರೆ ನನ್ನನ್ನು ಕೊಂಡಾಡಿ ಕುಣಿಯುವ ಜನರ ಹೊಗಳಿಕೆಗಳಿಗೆ ಭೈಷಜನಾಗುವದು ನಿನ್ನ ಧರ್ಮ.

**೩೮೭ ಎನ್ನವರೆನಗೊಲಿದು ಹೊನ್ನಶೂಲವನಿಕ್ಕಿದರಯ್ಯಾ!**
**ಅಹಂಕಾರ ಪೂರಾಯ ಘಾಯದಲ್ಲಿ**
**ಆನೆಂತು ಬದುಕುವೆನೆಂತು ಜೀವಿಸುವೆ?**
**ಜಂಗಮವಾಗಿ ಬಂದು ಜರೆದು ಶೂಲವನಿಳುಹಿ**
**ಪ್ರಸಾದದ ಮದ್ದನಿಕ್ಕಿ, ಸಲಹು,**
**ಕೂಡಲ ಸಂಗಮದೇವಾ.**

ನನ್ನ ಹಿತ ಬಂಧುಗಳೇ ನನ್ನನ್ನು ಅತಿಯಾಗಿ ಪ್ರೀತಿಸಿ-ಮುದ್ದಿಸಿ, ಬಂಗಾರದ ಶೂಲದ ಮೇಲೆ ಕೂಡ್ರಿಸಿದ್ದಾರೆ. ಅಹಂಕಾರವೆಂಬ ಪೂರ್ಣ ಹುಣ್ಣಾಗಿ, ಅದರ ನೋವಿನ ನರಳಿಕೆಯಲ್ಲಿ ನಾನು ಬದುಕಿ ಉಳಿಯುವದು ಹೇಗೆ? ಕೂಡಲಸಂಗಮದೇವಾ ಕರುಣಾಕರನಾದ ನೀನು ಜಂಗಮ ರೂಪದಲ್ಲಿ ಬಂದು ಕಿಂಕರನಾದ ನನಗೆ ಹೊರಿಸಿದ ಈ ಶೂಲದ ನೋವನ್ನು ಹೋಗಲಾಡಿಸಿ-ಕೃಪೆದೋರಿ ಪಾಲಿಸು.

**೩೮೮ ಎಡದ ಕೈಯಲು ಹಾಲ ಬಟ್ಟಲಬಟ್ಟಲು, ಬಲದ ಕೈಯಲ್ಲಿ ಓಜುಗಟ್ಟಿಗೆ:**
**ಆವಾಗ ಬಂದಾನೋ ನಮ್ಮಯ್ಯ,**

**ಬಡಿದು ಹಾಲ ಕುಡಿಸುವ ತಂದೆ?**
**(ಶ್ಲೋಕ) ದಂಡ ಕ್ಷೀರ ದ್ವಯು ಹಸ್ತಂ। ಜಂಗಮಂ ಭಕ್ತಿಮಂದಿರಂ**
**ಅತಿಭಕ್ತಿ ಲಿಂಗ ಸಂತುಷ್ಟಂ। ಅಪಹಾಸ್ಯಂ ಯಮದಂಡನಂ**
**ಎಂದುದಾಗಿ ಕೂಡಲ ಸಂಗಮ ದೇವಯ್ಯಾ, ತಾನೇ,**
**ಭಕ್ತಿಪಥವ ತೋರುವ ತಂದೆ!**

ಎಡಗೈಯಲ್ಲಿ ಹಾಲು ತುಂಬಿದ ಬಟ್ಟಲ ಹಿಡಿದು ಬಲಗೈಯಲ್ಲಿ ಕೋಲು ಹಿಡಿದು ಮಗುವಿಗೆ ಹೊಡೆದು ಬಡಿದು ಹಾಲು ಕುಡಿಸುವ ತಂದೆ ಯಾವಾಗ್ಗೆ ಬರುತ್ತಾನೋ! ಹೀಗೆ ಶಿಕ್ಷೆ ಮಾಡಿ ಹಾಲು ಕುಡಿಸುವದು ಅಪಹಾಸ್ಯ. ಆದ್ದರಿಂದ ಭಕ್ತಿಗೆ ಸಂತೋಷಗೊಳ್ಳುವ ಕೂಡಲ ಸಂಗಮ ದೇವನು ತಾನೇ ಸ್ವತಃ ಭಕ್ತಿಯ ಮಾರ್ಗ ತೋರಿಸಿ ಕೊಡುವ ಸಹೃದಯ ತಂದೆಯಾಗಿದ್ದಾನೆ.

**೩೮೯ ಎನ್ನ ಆಪತ್ತು, ಸುಖ-ದುಃಖವಿನ್ನಾರಿಗೆ ಹೇಳುವೆ,**
**ಶರಣಸ್ಥಳದವರಿಗೆ ಹೇಳಿದರೆ ಮಚ್ಚರ!**
**ಸವತಿ ಸಕ್ಕರೆ - ಬೇವು ಬೆಲ್ಲ ಉಂಟೆ?**
**ಇನ್ನಾರಿಗೆ ಹೇಳುವೆ?**
**ಕೂಡಲ ಸಂಗಮದೇವಾ, ಜಂಗಮನಾಗಿ ಬಂದು**
**ಎನ್ನ ಮನದ ಸೂತಕವ ಕಳೆಯೊ.**

ನನ್ನ ಸುಖ ದುಃಖಗಳನ್ನು ಕೂಡಲಸಂಗಮದೇವಾ ನಿನ್ನ ಮುಂದೆ ಹೇಳಿಕೊಳ್ಳದೆ ಇನ್ನಾರಿಗೆ ಹೇಳಲಿ. ಶರಣರ ಸ್ಥಳದಲ್ಲಿದ್ದ ಭಕ್ತರನೇಕರಿಗೆ ಶರಣರಿಗೆ ಈ ನನ್ನ ಕಷ್ಟ ದುಗುಡು ದುಮ್ಮಾನಗಳನ್ನು ಹೇಳಿದರೆ ಅದು ಹೊಟ್ಟೆಕಿಚ್ಚಿಗೆ-ದ್ವೇಷಕ್ಕೆ ದಾರಿ. ಸವತಿಯಾದವಳು ಎಂದಾದರೂ ಹಿತ ಮಾಡುವ ತಾಯಾಗಬಹುದೇ? ಬೇವು ಬೆಲ್ಲದ ರುಚಿ-ಸವಿ ಕೊಡಬಹುದೇ? ನೀನೇ ಜಂಗಮರೂಪದಲ್ಲಿ ಬಂದು ನನ್ನ ಮನದ ಹೊಲಸು ಕಳೆದು ನೀಲಾಕಾಶದ ಸೊಬಗು ದಯಪಾಲಿಸು.

೩೯೦ ನಾನಾ ಸ್ಥಾನಂಗಳಲ್ಲಿ ಬಂದು ಕುಳ್ಳಿರ್ದುದು ತೆರಳುವುದೆ, ಅಯ್ಯಾ
ಉಭಯ ಕುಳಕ್ಕಲ್ಲದೆ ತೆರಳದು.
ಬೀದಿಯಲ್ಲಿ ಬಿದ್ದ ಶಿಶುವನು
ಹೆತ್ತ ತಾಯಿ ಹತ್ತಿರ ಬಂದು ಎತ್ತುವಂತೆ !
ಎನ್ನನಾರು ಜನ್ಮಕ್ಕೆ ತಂದು ಅಘೋರ ನರಕದಲ್ಲಿಕ್ಕಿದುದ ನಾ ಬಲ್ಲೆ:
ಕೂಡಲ ಸಂಗಮದೇವಾ ನಿಮ್ಮ ಹಂಗೇನು ? ಹರಿಯೇನು?
ಆನು ಭಯಲಿಂಗ ಜಂಗಮದ ಮರೆಹೊಕ್ಕು ಬದುಕಿದೆನು.

ಅನೇಕಾನೇಕ ಅವಸ್ಥೆಗಳನ್ನು ತಿರುಗಿ ತಿರುಗಿ ಬಂದು ಸಾಕಾಗಿ ಬಂದ ಈ ಜನ್ಮವು ಎಲ್ಲಿಗೆ ಹೋಗುತ್ತದೆ? ಹೋಗುವದಾದರೆ ಲಿಂಗ ಕುಲಕ್ಕೆ ಇಲ್ಲವೆ ಜಂಗಮ ಕುಲಕ್ಕೆ. ಈ ಎರಡು ಕುಲಾಚಾರಗಳನ್ನು ಬಿಟ್ಟು ಬೇರೆ ಎಲ್ಲಿಯೂ ಹೋಗಲು ಸಾಧ್ಯವಿಲ್ಲ. ದಾರಿಯ ಮೇಲೆ ದಿಕ್ಕಿಲ್ಲದ ಕೂಸಾಗಿ ಬಿದ್ದು ಗೋಳಿಡುವ ಕೂಸನ್ನು ಜನ್ಮ ಕೊಟ್ಟ ತಾಯಿ ಬಂದು ಎತ್ತಿಕೊಂಡು ಹೋಗುವ ಹಾಗೆ, ಜನ್ಮ ಕೊಟ್ಟು ಈ ನರಕದಲ್ಲಿ ತಂದು ಬಿಟ್ಟವರಾರೆಂಬುದು ನನಗೆ ಗೊತ್ತಿದೆ. ಆದರೆ ಪಾರಾಗಲು ನಿಮ್ಮ ಹಂಗನ್ನು-ನಾನು ಕೇಳಲಿಲ್ಲ. ಲಿಂಗ ಜಂಗಮರ ಬೆನ್ನಿಗೆ ಬಿದ್ದು ಬೇಡಿ ಬದುಕಿದೆನು ನಾನು.

೩೯೧ ಅಯ್ಯಾ, ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ:
ಮೀನಜ, ರೋಮಜ ಮಹಾಮುನಿಗಳ
ಲಯವ ಮಾಡಿದುದ ನಾ ಬಲ್ಲೆನಾಗಿ.
ಅಯ್ಯಾ, ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ:
ನವಕೋಟಿ ಬ್ರಹ್ಮರಿಗೆ
ಪ್ರಳಯವ ಮಾಡುವುದ ಬಲ್ಲೆನಾಗಿ.
ಅಯ್ಯಾ, ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ:
ದಶಕೋಟಿ ನಾರಾಯಣರಿಗೆ

ಮರಣವ ಮಾಡುವದ ನಾ ಬಲ್ಲೆನಾಗಿ
ಅಯ್ಯಾ, ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ:
ಅನಂತ ಕೋಟಿ ರುದ್ರರಿಗೆ
ಲಯುವ ಮಾಡುವುದ ನಾ ಬಲ್ಲೆನಾಗಿ
ಅಯ್ಯಾ, ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ!
ಎನ್ನನೇಳೇಳು ಭವಕ್ಕೆ ತಂದಲ್ಲಿ
ಆನುಭಯುಲಿಂಗ ಜಂಗಮದ ಮರೆ ಹೊಕ್ಕು
ಭವಂನಾಸ್ತಿಯಾಗಿ, ಬದುಕಿದೆನಯ್ಯಾ,
ಕೂಡಲ ಸಂಗಮದೇವಾ.

ಕೂಡಲ ಸಂಗಮ ದೇವನೆ ನಿನನ್ನು ದೇವರೆಂದು ನಂಬಿ—ಭಕುತಿ ಮಾಡಿ ಪೂಜಿಸಲು ಬಾರದಂತಿದೆ. ನೀನು ಮೀನದಿಂದ ಹುಟ್ಟಿದ ಮತ್ತು ಬೆವರಿನಿಂದ ಹುಟ್ಟಿದ ಕೀಟಕ ಜೀವಿಗಳಿಂದ ಮೊದಲುಮಾಡಿ ಒಂಭತ್ತು ಕೋಟಿ ಬ್ರಹ್ಮದೇವತೆಗಳನ್ನೂ ಹತ್ತು ಕೋಟಿ ನಾರಾಯಣರೂಪಿಗಳನ್ನೂ, ಅಪಾರವಾದ ರುದ್ರಗಣಂಗಳನ್ನೂ ನಾಶಮಾಡಿದ ಕಾರಣ ಅಲ್ಲದೆ ನನ್ನನ್ನು ಏಳೇಳು ಜನ್ಮಾಂತರಗಳಲ್ಲಿ ಹುಟ್ಟಿ ಬರುವಂತೆ ಮಾಡಿ ಗೋಳಿಡಿಸಿದ್ದಕ್ಕಾಗಿ; ಆದ್ದರಿಂದ ನಾನು ಭವಬಂಧನ ಹರಿಯಲು ಲಿಂಗ ಜಂಗಮರೀರ್ವರಿಗೂ ಶರಣು ಹೋದೆ. ಅವರು ಆಶೀರ್ವಾದ ಮಾಡಿದರು, ಸಂಸಾರದಿಂದ ಬಿಡುಗಡೆ ಹೊಂದಿ ಮುಕ್ತಿ—ಸದ್ಗತಿ ಹೊಂದಿಬದುಕಿದೆ ದೇವಾ.

೩೯೨ ಲಿಂಗದರುಶನ ಕರಮುಟ್ಟಿ ಜಂಗಮದರುಶನ ಸಿರಮುಟ್ಟಿ
ಆವುದು ಘನವೆಂಬೆ, ಆವುದು ಕಿರಿದೆಂಬೆ ?
ತಾಳ ಸಂಪುಟಕ್ಕೆ ಬಾರದ ಘನವ ಅರ್ಪಿಸ ಹೋದರೆ,
ಅರ್ಪಣ ಮುನ್ನವೇ ಇಲ್ಲ: ಗಮನ ನಿರ್ಗಮನವಾಯಿತ್ತು!
ಈ ಉಭಯ ಭೇದವನರಿಯುರಾಗಿ:
ಜಂಗಮವೇ ಲಿಂಗ, ಕೂಡಲ ಸಂಗಮದೇವಾ.

ಕೈಗಳಿಂದ ಪೂಜಿಸಿ ಕೈಲಾಶಪತಿಲಿಂಗನ ಪ್ರತ್ಯಕ್ಷತೆಯನ್ನು ಕಾಣಬೇಕು. ತಲೆವಾಗಿ ನಮಿಸಿ ವಿರಕ್ತಿಯುರಳಿ ಹೂವಾದ ಜಂಗಮರ ಅಂತ

ರಂಗ ಪ್ರೇಮ ಪಡೆಯಬೇಕು. ಜಂಗಮ ಲಿಂಗರ ತಾರತಮ್ಯ ತಿಳಿಯದ ಮೂಢರು ಭಕ್ತಿಗೆ ಹೊಂದದ-ಬಾರದ ಭಕ್ತಿಯ ಮಾಡಿದರೆ ಅದು ಭಕ್ತಿಯ ಸೇವೆ ಸಲ್ಲಿಸುವ ದಾರಿಯಲ್ಲ. ಅಲ್ಲದೆ ಮುಕ್ತಿಯ ಮಾರ್ಗವೂ, ವೈರಾಗ್ಯದ ಹಾದಿಯೂ ಕೆಟ್ಟು ಹೋಗುತ್ತದೆ. ಕೂಡಲ ಸಂಗಮದೇವಾ ಜಂಗಮವೇ ಲಿಂಗವೆಂದು ನಂಬಬೇಕು.

**೩೯೩ ಶಿವಭಕ್ತರೆ ಅಧಿಕರು, ನೋಡಯ್ಯಾ, ಎಲ್ಲರಿಂದವು:**
**ಇದಕ್ಕೆ ಅಧಿಕವಾಗಿ ಜಂಗಮವ ಕಂಡೆ,**
**ಈ ದ್ವಿವಿಧವನೊಂದೇ ಎಂದು ನಂಬಿದೆ;**
**ಕೂಡಲ ಸಂಗಮದೇವಾ.**

ಶಿವನಾಮ ಸಂಕೀರ್ತನೆ ಮಾಡಿಕೊಂಡಿರುವ ಭಕ್ತರೆ ಎಲ್ಲರಿಗಿಂತ ಉಚ್ಚರೆಂದು ಭಾವಿಸಿದರೆ, ಅವರಿಗಿಂತಲೂ ಶ್ರೇಷ್ಠರಾದ, ವಿರಕ್ತಿಯ ವೀರರಾದ ಜಂಗಮರನನ್ನು ಮನಗಂಡೆ. ಹೀಗೆ ಲಿಂಗ-ಜಂಗಮ ಲಿಂಗ-ಭಕ್ತ ಎಂಬ ಎರಡು ಬಗೆಯ ಭಾವನೆ ಒಂದೇ ಎಂಬುದನ್ನು ಕಂಡು ಕೊಂಡೆ ಕೂಡಲ ಸಂಗಮದೇವಾ.

**೩೯೪ ಕೃತಯುಗದಲ್ಲಿ ಕೇ(ದಾ)ರವೆಂಬ ಮೂಲಸ್ಥಾನ;**
**ತ್ರೇತಾಯುಗದಲ್ಲಿ ವಾರಣಾಸಿಯೆಂಬ ಮೂಲಸ್ಥಾನ;**
**ದ್ವಾಪಾರದಲ್ಲಿ ವಿರೂಪಾಕ್ಷನೆಂಬ ಮೂಲಸ್ಥಾನ;**
**ಕಲಿಯುಗದಲ್ಲಿ ಪರ್ವತವೆಂಬ ಮೂಲಸ್ಥಾನ,**
**ನಾನಾ ಸ್ಥಾನಂಗಳ ಮುಟ್ಟದೆ ಜಂಗಮವೇ ಲಿಂಗವೆಂದು ನಂಬಿದೆ,**
**ಕೂಡಲ ಸಂಗಮದೇವಾ.**

ಕೃತಯುಗದಲ್ಲಿ ಕೇದಾರಲಿಂಗನ ಧ್ಯಾನವೇ ಶ್ರೇಷ್ಠವಾದರೆ, ತ್ರೇತಾ ಯುಗದಲ್ಲಿ ಕಾಶೀ ವಿಶ್ವೇಶ್ವರನ ಪೂಜೆ ಮಾಡುವದು ಮಹತ್ವವಾಗಿತ್ತು; ದ್ವಾಪಾರದಲ್ಲಿ ವಿರುಪಾಕ್ಷನೇ ಚಿನ್ಮಯನೆಂದು ಅವನ ಭಕ್ತಿಯನ್ನು ಮಾಡು ವದೇ ಸದ್ಗತಿದಾಯಕವಾಗಿದ್ದರೆ, ಕಲಿಯುಗದವರಿಗೆ ಶ್ರೀ ಶೈಲ ಮಲ್ಲಿಕಾ

ಜರ್ನೇಶ್ವರನನ್ನು ಹಾಡಿ ಹರಸುವದೇ ಯಮ ಭಯ ಕಳೆಯುವ ಉನ್ನತ ಭಕ್ತಿಯಾಗಿದೆ. ಆದರೆ ಕೂಡಲ ಸಂಗಮದೇವಾ ನಾನು ಈ ಯಾವ ದಾರಿಗಳನ್ನೂ ಅನುಸರಿಸದೆ ಜರಾಮರಣ ಮುಕ್ತರಾದ ಜಂಗಮನೇ ಲಿಂಗವೆಂದು ಘನವಾಗಿ ಅಪ್ಪಿ ಘನತೆ ಹೊಂದುವೆ.

**೩೯೫ ಭಕ್ತದೇಹಿಕ ದೇವನಪ್ಪ ದೇವನು ಸದ್ಭಕ್ತರ ಬಳಿಯಲು ಬಪ್ಪನಾಗಿ,**
**ಅಳ್ದನು ಬರಲು ಆಳು ಮಂಚದ ಮೇಲಿಪ್ಪುದು ಗುಣವೇ? ಹೇಳಾ.**

**ಕೂಡಲ ಸಂಗಮ ದೇವರು—**
**ಜಂಗಮ ರೂಪಾಗಿ ಸಂಗಯ್ಯ ಬಂದಾನೆಂದು**
**ಎಂದೆಂದೂ ನಾನು ಮಂಚವನೇರದ ಭಾಷೆ!**

ದಯಾಮಯನಾದ ದೇವನು ಘನವಂತರಾದ ಭಕ್ತರ ಬಳಿಗೆ ಬರುವದರಿಂದ ಬೇಡಿಕೊಂಡು ಭಯಭೀತನಾಗಿ ನಿಂದ ಭಕ್ತನು ದೇವನೆಂದೂ ಆಗಲಾರನು. ಕೂಡಲ ಸಂಗಮದೇವಾ, ನೀನೇ ಜಂಗಮ ವೇಷದಲ್ಲಿ ಬಂದು ನಿಂತಿರುವಾಗ ಸೇವಕನಾದ ನಾನು ಗದ್ದಿಗೆಯ ಮೇಲೆ ಕುಳಿತುಕೊಂಡೇ ಬೆಸಗೊಳ್ಳುವುದು ಹೇಗೆ? ಅದು ಸರಿಯೇ? ಅದು ಎಂದಿಗೂ ಆಗದ ಮಾತು.

**೩೯೬ ಜಂಗಮದ ಸನ್ನಿಧಿಯಲ್ಲಿ ನಾನು**
**ವಾಹನವನೇರಲಮ್ಮೆ ಏರಿದರೆ ಭವ ಹಿಂಗದು,**
**ಅದೇನು ಕಾರಣ: ಮುಂದೆ ಸೂಲವನೇರುವ ಪ್ರಾಪ್ತಿ ಯುಂಟಾದ ಕಾರಣ!**
**ಜಂಗಮ ಬರಲಾಸನದಲ್ಲಿರಲ್ಲಮ್ಮೆ: ಇದ್ದರೆ ಭವಹಿಂಗದು!**
**ಏನು ಕಾರಣ: ಮುಂದೆ ಕಾಯಿಟ್ಟಿಗೆಯ ಮೇಲೆ**
**ಕುಳ್ಳಿರಿಸುವ ಪ್ರಾಪ್ತಿಯುಂಟಾದ ಕಾರಣ.**
**ಜಂಗಮದ ಮುಂದೆ ದಿಟ್ಟತನದಲ್ಲಿ ಬೆರೆತು ನಿಂದಿರಲಮ್ಮೆನು:**

**ನಿಂದರೆ ಭವಹಿಂಗದಾಗಿ:**
**ಏನು ಕಾರಣ: ಮುಂದೆ ಹೆಡಗುಡಿಯು ಕಟ್ಟಿ**
**ಕುಳ್ಳಿರಿಸುವ ಮುಂದೆ ಪ್ರಾಪ್ತಿಯುಂಟಾದ ಕಾರಣ.**
**ಇಂತೀ ಬಾಧೆ ಭವಂಗಳಿಗಂಜುವೆನಯ್ಯಾ.**
**ನಿನ್ನವರ ಸುಳುವು ನೀನೆಂದೇ ಭಾವಿಸಿ, ತೊತ್ತು-ಭೃತ್ಯ ನಾಗಿಪ್ಪೆನಯ್ಯಾ**
**ಕೂಡಲಸಂಗಮದೇವಾ.**

ಜಂಗಮರೆದುರಿಗೆ— ನಾನು ವಾಹನವೇರಲು, ಉಚ್ಚಸ್ಥಾನದಲ್ಲಿ ಕುಳ್ಳಿರಲು, ಅಂಜದೆ, ಅಳುಕದೆ ನಿಂತು ನುಡಿಯಲು, ಹೆದರುತ್ತೇನೆ. ನನ್ನ ಬಳಿ ಅಷ್ಟು ಧೈರ್ಯವಿಲ್ಲ. ಏಕಂದರೆ ಹಾಗೆಲ್ಲ ವರ್ತಿಸಿದರೆ- ಸೂಲಕ್ಕೇರುವವ್ಯಥೆ, ಕಾದ ಮಳಲ ಮೇಲೆ ನಿಲ್ಲುವ ನಿರ್ದಯ ಶಿಕ್ಷೆ, ಹೆಡಮುರಿಗೆ ಕಟ್ಟಿಸಿಸಿಕೊಂಡು ಗೋಳಿಡುವ ಪರಿತಾಪ, ಈ ಎಲ್ಲ ಹೇಯವಾದ ಕಷ್ಟಗಳನ್ನು ಉಪಭೋಗಿಸಲು ನನಗಂಜಿಕೆಯಾಗುತ್ತದೆ. ನಿನ್ನ ಶರಣರು, ಭಕ್ತರು, ಜಂಗಮರು ಎಲ್ಲರ ಮನಾದಾಣ್ಮ ನೀನೆ ಎಂದು ತಿಳಿದು ಅವರ ಆಳಾಗಿ ಕಾಲಿಗೆರಗುವ ಕುಳನಾಗಿರುವೆ ಕೂಡಲ ಸಂಗಮದೇವಾ.

**೩೯೭ ಜಂಗಮವಿರಹಿತ ಲಿಂಗಾರ್ಚನೆ ಓಡಬಲಲೆರೆದ ಜಲದಂತೆ!**
**ಜಂಗಮ ಸನ್ನಿಹಿತ ಲಿಂಗಾರ್ಚನೆ: ಇದೇ ಭಕ್ತಿಗೆ ಪಥ ವಯ್ಯಾ.**
**ಜಂಗಮ ಪ್ರಸಾದ ಭೋಗೋಪಭೋಗವು:**
**ಎನಗಿದೇ ಲಿಂಗಾರ್ಚನೆ.**
**ಬೇರೆ ಮತ್ತೊಂದರಿದೆನಾದರೆ,**
**ಕೂಡಲ ಸಂಗಮದೇವ ನರಕದಲ್ಲಿಕ್ಕುವ.**

ಜಂಗಮಾರ್ಚನೆ ಮಾಡದೆ ಲಿಂಗಾರ್ಚನೆ ಮಾಡುವದು ಬಂಡೆಗಲ್ಲ ಮೇಲೆ ನೀರು ಸುರಿದಂತೆ ಜಂಗಮಪೂಜೆಮಾಡಿ ಲಿಂಗಸಂಗಿಗಳಾದರೆ— ಅದುವೇ ಭಕ್ತಿಯ ಮಾರ್ಗ; ಜಂಗಮರ ನಿಜ ಪ್ರೇಮದ ಸುಖವನ್ನು ಪಡೆ

ಯುವದೇ ಲಿಂಗ ಆರಾಧನೆ; ಜಗವು ಸೇವೆಯನ್ನುಳಿದು ಬೇರೆ ಏನನ್ನಾದರೂ ಮಾಡಿದರೆ ಕೂಡಲ ಸಂಗಮ ದೇವನು ನರಕ ದಲ್ಲಿರಿಸುವನು.

**೩೯೮ ಭಿತ್ತಿಯಿಲ್ಲದೆ ಬರೆಯಬಹುದೆ ಚಿತ್ತಾರವ ?**
**ಬಿತ್ತಿ ಬೆಳೆಯಬಹುದೆ ಧರೆಯಿಲ್ಲದೆ ?**
**ಜಂಗಮವಿಲ್ಲದೆ ಮಾಡಬಹುದೆ ?**
**ರೂಢೀಶನ ಭೇದಿಸಬಹುದೆ ?**
**ಒಡಲಿಲ್ಲದ ನಿರಾಳ ಕರ್ತೃ, ಕೂಡಲ ಸಂಗಮದೇವಾ**
**ಜಂಗಮ ಮುಖವಾದನಾಗಿ ಮತ್ತೊಂದನರಿಯನಯ್ಯಾ.**

ಗೋಡೆಯಿಲ್ಲದೆ ಚಿತ್ರ ಬರೆಯಲು ಬಾರದಂತೆ, (ಹೊಲ) ನೆಲವಿಲ್ಲದೆ ಬೀಜ ಬಿತ್ತಿ ಪೈರು ಪಡೆಯಲು ಸಾಧ್ಯವಿಲ್ಲದ ಹಾಗೆ ಜಂಗಮನನ್ನು ಬಿಟ್ಟು ದೂರ ಮಾಡಿ ಲಿಂಗ ಪೂಜೆಮಾಡುವದು ಅಸಾಧ್ಯ. ಜಗದೀಶ್ವರನಲ್ಲಿ ಭೇದ ಭಾವ ಮಾಡುವದು ಯಾರಿಗಾದರೂ ಶಕ್ಯವಿರುವದೆ ? ಹಸಿವೆ ತೃಷೆಗಳ ತೊಡಕಿಲ್ಲದ ಲೋಕ ಕರ್ತೃ ಕೂಡಲ ಸಂಗಮ ದೇವನು ಜಂಗಮ ಮುಖ ಲಾಕ್ಷಣನಾಗಿರುವಾಗ ಅನ್ಯ ಕಲ್ಪನೆ ಮಾಡುವ ಗೊಡವೆಗೆ ಹೋಗುವದಿಲ್ಲ.

**೩೯೯ ಸಮಯೋಚಿತದಲ್ಲಿ ಲಿಂಗಾರ್ಚನೆಯ ಮಾಡುತ್ತಿಪ್ಪನಾ ಭಕ್ತನು:**
**ಮಾಡಿದರೆ ಮಾಡಲಿ: ಮಾಡಿದರೆ ತಪ್ಪೇನು ?**
**ಆ ಜಂಗಮದ ಶಬ್ದವ ಕೇಳಿ ಪ್ರಸಾದಕ್ಕೆ ಕೈ ದುಡುಕಿದರೆ**
**ಅದು ಪ್ರಸಾದವಲ್ಲ: ಕಿಲ್ಬಿಷ !**
**ಆ ಸಮಯೋಚಿತದಲ್ಲಿ ಬಂದ ಜಂಗಮದ ಶಬ್ದವ ಕೇಳಿ**
**ಪ್ರಸಾದಕ್ಕೆ ಕೈದೆಗೆದರೆ, ಅದು ಲಿಂಗಕ್ಕೆ ಬೋನ.**
**ಇದು ಕಾರಣ, ಕೂಡಲ ಸಂಗಮದೇವಾ,**
**ಇಂತಪ್ಪ ಸದಾಚಾರಿಗಳನೆನಗೆ ತೋರಾ.**

"ಸಂಕಟ ಬಂದಾಗ ವೆಂಕಟರಮಣ" ಎನ್ನುವ ಹಾಗೆ ಸಮಯಾನು ಸಾರ-ಲಿಂಗಕ್ಕೆ ನೀರು ಸುರಿದು ಅಲಂಕರಿಸುವನು ಆ ಭಕ್ತನು; ಆದರೆ ಆ ವೇಳೆಗೆ "ಶಿವ ಶಿವಾ ಕೋರಾಣದಲ್ಲಿ" ಭಿಕ್ಷೆ ಎಂದು ಬಂದ ಜಂಗಮದೇವನ ಮಧುರಾಲಾಪವ ಕೇಳಿ ಜಂಗಮನ ಪ್ರಸಾದಕ್ಕೆ ಕೈಅಡ್ಡಮಾಡಿದ್ದೇ ಆದರೆ ಅದುಪ್ರಸಾದಕ್ಕಲ್ಲ. ನರವಿಷ ನರಕಕ್ಕೆ; ಆಹೊತ್ತಿನಲ್ಲಿ ಜಂಗಮ ಪ್ರಸಾದಕ್ಕೆ ಕೈ ಅಡ್ಡ ಮಾಡದೆ ಎಡೆ ನೀಡಿದರೆ ಆದು ಲಿಂಗಕ್ಕೆ ಊಟಹಾಕಿದಂತೆ; ಕೂಡಲ ಸಂಗಮ ದೇವಾ ಜಂಗಮರಿಗೆ ನಿರ್ವಂಚನೆಯಿಂದ ಎಡೆಮಾಡಿ ಕಳಿಸುವ ಸದ್ಗುಣಿಗಳ – ನಿರ್ಮಲಾಚಾರಿಗಳನ್ನು ನಗಗೆ ತೋರಿಸು.

**೪೦೦ ಉತ್ತಮ, ಮಧ್ಯಮ, ಕನಿಷ್ಟವೆಂದು ಬಂದ ಜಂಗಮವ ನೆಂದೆನಾದರೆ**
**ನೊಂದೆನಯ್ಯಾ, ಬೆಂದೆನಯ್ಯಾ, ಎನ್ನ ಕಿಚ್ಚು ಎನ್ನ ಸುಟ್ಟಿತ್ತು !**
**ಸು(ಖಿ) ಜಂಗಮ, ಸಾಮಾನ್ಯ ಜಂಗಮವೆಂದುಂಟೆ, ಕೂಡಲಸಂಗಮದೇವಾ ?**

ಉಚ್ಚ, ಮಧ್ಯಮ, ನೀಚವೆಂದು ಜಂಗಮರಲ್ಲಿ ಅಂತರವೆಣಿಸಿದರೆ— (ನನ್ನ ಅಹಂಕಾರದ, ಅಜ್ಞಾನದ ಬೆಂಕಿಯು ಬೇಗೆಗೆ ಬೆಂದು ಸುಟ್ಟುಹೋ ಗುವೆನು.) ದರೆಯಲ್ಲಿ ಒಳ್ಳೆಯ ಜಂಗಮ — ಸಾಮಾನ್ಯ ಜಂಗಮವೆಂ ದುಂಟೆ ? ಕೂಡಲ ಸಂಗಮ ದೇವಾ.

**೪೦೧ ಲಾಂಛನವ ಕಂಡು ನಂಬುವೆ: ಅವರಂತರಂಗವ ನೀನೇ ಬಲ್ಲೆ !**
**ತೊತ್ತಿಂಗೆ ತೊತ್ತುಗೆಲಸವಲ್ಲದೆ, ಅರಸರ ಸುದ್ದಿ ಎನಗೇ ಕಯ್ಯಾ ?**
**ರತ್ನ ಮೌಕ್ತಿಕದಚ್ಚು, ಕೂಡಲ ಸಂಗಮದೇವಾ, ನಿಮ್ಮ ಶರಣರು.**

ಕಣ್ಣಿಗೆ ಹಬ್ಬದೂಟ ಮಾಡಿಸುವ ಲಿಂಗರೂಪಿ ಜಂಗಮರನ್ನು ನೆಟ್ಟ ನೋಟದಿಂದ ನಿರುಕಿಸಿ, ತಲೆವಾಗಿ ಅವರ ಚರಣ ಕಮಲಗಳನ್ನು ನಂಬಿ ಕೊಂಡು ಆಳಾಗಿ ದುಡಿದುಕೊಂಡು ಬೇರೆ ಉಪಾಧಿಯ ತಂಟಿಗೆ ಹೋಗು ವದಿಲ್ಲ. ಕೂಡಲ ಸಂಗಮದೇವಾ, ರನ್ನದ ಕೆಚ್ಚಿನ ಅಚ್ಚಾದ ನಿನ್ನ ಶರಣರ ಹೃದಯಾಂತರಾಳದಲ್ಲಿರುವ ತೇಜದ ಮಹಿಮೆಯನ್ನು ನೀನೇ ಬಲ್ಲೆ.

**೪೦೨ ಆರಾರ ಮನದಲ್ಲಿ ಏನೇನಹುದೆಂದರಿಯೆ:**
**ಒಳ್ಳಿಹರೆಂದೆನಲಮ್ಮೆ: ಹೊಲ್ಲಹರೆಂದೆನಲಮ್ಮೆ!**
**ಶಿವಭಕ್ತರಾದ ಕಾರಣ, ಜಂಗಮವೇ ಲಿಂಗ,**
**ಕೂಡಲ ಸಂಗಮದೇವಾ.**

ಯಾವ ಯಾವ ಜಂಗಮರ ಮನ ಬುದ್ಧಿಗಳು ಹೇಗಿವೆ ಎಂತಿವೆ ಎಂಬುದನ್ನು ತಿಳಿದುಕೊಳ್ಳುವ ತ್ರಾಣ ನನಗಿಲ್ಲ. ಅವರು ಒಳ್ಳೆಯವರು ದುಷ್ಟರೆಂದು ಅನ್ನಲು ನನಗೆ ಧೈರ್ಯವಿಲ್ಲ. ಏಕೆಂದರೆ ಅವರು ಶಿವಭಕ್ತರು. ಅಷ್ಟಲ್ಲದೇ ಜಂಗಮನೇ ಲಿಂಗವೆಂದು ದೃಢ ನಂಬಿಗೆ ನನ್ನಲ್ಲಿದ್ದ ಕಾರಣ ಕೂಡಲಸಂಗಮದೇವಾ ಅವರಲ್ಲಿ ಅಂತರ ಮಾಡಲಾರೆ.

**೪೦೩ ಸಂಗ ಸಹಿತ ಶರಣರು ಬಂದರೆ ನಂಬುವದೆನ್ನ ಮನವು,**
**ನಚ್ಚುವದೆನ್ನ ಮನವು!**
**ಹಾವು ನೇಣೆಂಬ ಭ್ರಾಂತುಳ್ಳನ್ನಕ್ಕ ನಾನು ಭಕ್ತನೆಂತಪ್ಪೆನು?**
**ಅಂಗ ಲಿಂಗ ಸಹಿತವಾಗಿ ಬಂದರೆ**
**ಸಂಗ ನೀನೆಂದು, ಮತ್ತೆ ಮನದಲ್ಲಿ ಸಂದೇಹ ಹೊಳಿದರೆ**
**ಬೆಂದೆನಲ್ಲಾ ನಾನು, ಕೂಡಲ ಸಂಗಮದೇವಾ!**

ಭಕ್ತಗಣಂಗಳೊಂದಿಗೆ ಸಂಗಮ ದೇವನು ಮತ್ತು ಶರಣರು ದಯ ಮಾಡಿಸಿದರೆ ನನ್ನ ಮನ ಮಯೂರ ಗರಿ ಹರಡಿ ಬಣ್ಣದುಡಿಗೆಯ ನಿರೆಬೀಸಿ ಕೇಕಾರವ ಮಾಡಿಮೈಯುಬ್ಬಿ ಕುಣಿಯುತ್ತದೆ. ಹಾವು ಕಂಡು ಉರುಲು ಹಾ ಕುವ ನೂಲೆಂದು ಭ್ರಾಂತನಾಗಿ ಓಡಿ ಹೋಗುವವನ ಹಾಗೆ ನಾನಿದ್ದರೆ ಭಕ್ತ ನಾಗುವದ್ಹೇಗೆ? ಕಾಯ ಕಾಂತಿ-ಲಿಂಗ ತೇಜ, ಓಜಗಳನ್ನು ಅಳವಡಿಸಿ

ಕೊಂಡು ಭಕ್ತಿಯ ಬಲ ತೋರಿದರೆ ಕೂಡಲ ಸಂಗಮದೇವನೆ ಆ ಬಂದ ಜಂಗಮನೆಂದು ಭಾವಿಸಿ ಮತ್ತೆ ಮನದಲ್ಲಿ ಸಂಶಯದಗ್ನಿ ಉಳಿದರೆ ಸುಟ್ಟು ಹೋಗುವೆನಲ್ಲಾ ಕೂಡಲಸಂಗಮದೇವಾ ನಾನು.

**೪೦೪ ಕೆಂಡದಲ್ಲಿಟ್ಟರೆ ನೈ ಬೆಂದುದೆಂಬರು:**
**ಕೊಂಡಿಟ್ಟವನ ಕೈ ಮುನ್ನವೇ ಬೆಂದುದು !**
**ನೊಂದೆ ನಾನು ನೊಂದೆನಯ್ಯಾ, ಬೆಂದೆ ನಾನು ಬೆಂದೆನಯ್ಯಾ !**
**ಕೂಡಲ ಸಂಗನ ಶರಣರ ಕಂಡು ಕಾಣದಂತಿದ್ದರೆ**
**ನಾನಂದೇ ಬೆಂದೆನಯ್ಯಾ !**

ಕೆಂಡದಲ್ಲಿ ದೇಹವಿಟ್ಟರೆ ಸುಟ್ಟು ಹೋಗುತ್ತದೆಂಬುದು ಜನಸಾಮಾನ್ಯರ ಮಾತು, ಆದರೆ ಸುಡುವದೆಂಬ ಕಲ್ಪನೆ, ಸಂಶಯದಿಂದ ಕೂಡಿಕೊಂಡವನ ಕೈ ಬೆಂಕಿಯಲ್ಲಿಡದಿದ್ದರೂ-ಸಮೀಪದಲ್ಲಿಟ್ಟರೂ ಸುಡುತ್ತದೆ. ಶರಣರನ್ನು ನೋಡಿಯೂ ನೋಡದಂತೆ ಕಪಟ ನಟನೆ ಮಾಡಿದ ಗಳಿಗೆಯಲ್ಲಿಯೇ ನಾನು ಸುಟ್ಟು ಭಸ್ಮನಾಗುವೆ ಭಸಾಸುರನಂತೆ.

**೪೦೫ ಎಡದ ಕೈಯಲಿ ನಿಗಳವನಿಕ್ಕಿ**
**ಬಲದ ಕೈಯ ಕಡಿದುಕೊಂಡರೆ ನೋಯದಿಪ್ಪುದೆ ?**
**ಪ್ರಾಣವೊಂದಾಗಿ ದೇಹ ಬೇರಿಲ್ಲ:**
**ಲಿಂಗವ ಪೂಜಿಸಿ ಜಂಗಮವನುದಾಶೀನವ ಮಾಡಿದರೆ**
**ಬೆಂದೆನಯ್ಯಾ ನಾನು, ಕೂಡಲಸಂಗಮದೇವಾ !**

ಎಡಗೈಯೊಳಗೆ ತುಂಬ ಆಭರಣವಿಟ್ಟುಕೊಂಡು ಬಲಗೈ ಕತ್ತರಿಸಿಕೊಂಡರೆ ನೋವಾಗದೆ ಇರುತ್ತದೆಯೇ ? ದೇಹಗಳೆರಡಾದರೂ ಜೀವಾತ್ಮನು ಒಬ್ಬನೆ; ಕಾರಣ ದ್ವೈತವಾದ ಮಾಡುವದು ತಪ್ಪು. ಆದ್ದರಿಂದ ಲಿಂಗ ಪೂಜೆ ಮಾಡಿ ಆರೋಗಣಿಗಿತ್ತು ಜಂಗಮನನ್ನು ಮರೆತರೆ- ಜಂಗಮನು ಬೇರೆ ಎಂದು ಎರಡು ಬಗೆದರೆ- ಅಂದೇ ನಾನು ಸಂಕಟ ಸಂದಿಯಲ್ಲಿ ಇರುಕಿ ತಳಮಳಗೊಳ್ಳುವೆ ಕೂಡಲ ಸಂಗಮದೇವಾ.

೪೦೬ ತನುವ ನೋಯಿಸಿ ಮನವ ಬಳಲಿಸಿ,
ನಿಮ್ಮ ಪಾದವಿಡಿದವರೊಳರೆ ?
ಈ ನುಡಿ ಸುಡದಿಹುದೆ ?
ಕೂಡಲ ಸಂಗಮದೇವಾ,
ಶಿವಭಕ್ತರ ನೋವೇ ಅದು ಲಿಂಗದ ನೋವು.

ದೇಹಕ್ಕೆ ಅನಂತ ಯಾತನೆಗಳನ್ನು ಕೊಟ್ಟು ಮನಸ್ಸನ್ನು ಕತ್ತಲೆ ಕವಿದ ಹವೆಯೂ ಬರದ ಗುಹೆಯಲ್ಲಿ ಬಂಧಿಸಿಟ್ಟು ತೊಳಲಿಸಿ, ವಿಲಿವಿಲಿಯನ್ನಾಗಿ ಮಾಡಿ ದೇವರ ಪಾದಾಬ್ಜಗಳ ಮೇಲೆರಗಿದವರು ಸದ್ಭಕ್ತರೆ ? ಎಂದು ಕೇಳುವವರ ಆ ಸೊಲ್ಲು ಅವರನ್ನು ಶೂಲಕ್ಕೇರಿಸದೆ. ? ಶಿವಭಕ್ತರ ಸುಖದುಃಖಗಳೇ ಲಿಂಗದ ಸುಖದುಃಖಗಳು ಕೂಡಲಸಂಗಮದೇವಾ. ಪ್ರಜೆಗಳ ಹಿತದಲ್ಲಿಯೇ ರಾಜನ – ಆಡಳಿತೆಗಾರರ ಹಿತವಿದೆ.

೪೦೭ ಆತ್ಮಸ್ತುತಿ ಪರನಿಂದೆಯ ಕೇಳಿಸದಿರಯ್ಯಾ, ನಿಮ್ಮ ಧರ್ಮ!
ಆನು ಭಕ್ತನೆನ್ನಲ್ಲಿ ಲೇಸುಂಟೆಂದು ಪರಿಣಮಿಸಿದರೆ
ನಿಮಗಾನು ದ್ರೋ(ಹಿಯ)ಯ್ಯಾ!
ಕೂಡಲ ಸಂಗಮದೇವಾ,
ನಿಮ್ಮ ಶರಣರ ಲೇಸೇ ಎನ್ನ ಲೇಸಯ್ಯಾ !

ನನ್ನ ಆತ್ಮ ಹೊಗಳಿ ಬೇರೆಯವರನ್ನು ಹಳಿಯುವದು ನನ್ನ ಕಿವಿಗೆ ಬೀಳದಂತೆ ಮಾಡುವದು ನಿನ್ನ ಧರ್ಮ ಜ್ಞಾನಲಿಂಗವೆ. ನಾನು ಭಕ್ತನೆಂದು ಹೇಳಿಕೊಂಡು ನಾನು ಉತ್ತಮನೆಂದು ಜನರಿಗೆ ಬಿಂಬಿಸುವಂತೆ ಮಾಡಿದೆನಾದರೆ ನನ್ನಂತಹ ಲಿಂಗದ್ರೋಹಿ, ವಂಚಕ ಮತ್ತಾರೂ ಇಲ್ಲ. ಕೂಡಲ ಸಂಗಮದೇವಾ ನಿನ್ನ ಶರಣರ ಉತ್ತಮಿಕೆ, ಒಳ್ಳೆಯತನಗಳೇ ನನ್ನ ಒಳ್ಳೆಯತನ.

೪೦೮ ನಡೆಯಲರಿಯದೆ, ನುಡಿಯಲರಿಯದೆ,
ಲಿಂಗವ ಪೂಜಿಸಿ ಫಲವೇನು ?
ಅವರ ಸುಖವೆನ್ನಸುಖ; ಅವರ ದುಃಖವೆನ್ನ ದುಃಖ!

**ಕೂಡಲ ಸಂಗನ ಶರಣರ ಮನ ನೊಂದರೆ**
**ಆನು ಬೆಂದೆನಯ್ಯಾ !**

ನಡೆ-ನುಡಿ, ರೀತಿ-ನೀತಿ, ಆಚಾರ-ವಿಚಾರಗಳ-ಸಂಪರ್ಕಜ್ಞಾನವಿಲ್ಲದೆ ಲಿಂಗ ಪೂಜೆ ಮಾಡಿದರೆ ಏನು ಫಲ? ಜಂಗಮ-ಶರಣರ-ಭಕ್ತರ ಸುಖವೇ ನನ್ನ ಸುಖವೆಂದು, ಅವರ ದುಃಖ ದುಮ್ಮಾನಗಳೇ ನನ್ನವೆಂದು ತಿಳಿದು ನಡೆವವನೇ ಭೃತ್ಯಾಚಾರಿ. ಕೂಡಲ ಸಂಗಮ ದೇವನ ಶರಣರ ಮನಸ್ಸು ಕಿಂಚಿತ್ತಾದರೂ ಕಲಕಿದರೆ ನನ್ನ ಮನಸ್ಸಿಗೆ ಚೇಳು ಕುಟುಕಿ ಉರಿ ಇಟ್ಟಂತಾಗುತ್ತದೆ.

**೪೦೯ ಬಂಜೆ ಬೇನೆಯನರಿಯದಂತೆ**
**ಒಬ್ಬರೊಂದ ನುಡಿವಿರಿ, ಕೇಳಿರಯ್ಯಾ,**
**ಎನ್ನಾಯುಷ್ಯ ಭವಿಷ್ಯ ಎನ್ನ ಭಕ್ತರು, ಕಂಡಯ್ಯಾ;**
**ಎನ್ನಾಯುಷ್ಯ ಭವಿಷ್ಯ ಎನ್ನ ಪ್ರಮಥರು, ಕಂಡಯ್ಯಾ;**
**ಕೂಡಲ ಸಂಗನ ಶರಣರು ಮುಖಲಿಂಗಿಗಳಯ್ಯಾ !**

ಹಡೆಯದ ಹಿಂಗದ ಸ್ತ್ರೀ ಪ್ರಸವ ಕಾಲದ ಬೇನೆಯ ವ್ಯಥೆಯನ್ನೇನು ಬಲ್ಲಳು? ಜಂಗಮಾನುಭವವಿಲ್ಲದವರು ಒಂದೊಂದು ಮಾತು ಹೇಳಿದರೆ ಭಕ್ತರಾಗುವರೆ ? ನನ್ನ ಬದುಕೆಲ್ಲ, ಬಾಳೆಲ್ಲ, ಹಿಂದುಮುಂದುಗಳೆಲ್ಲ, ಆಗುಹೋಗುಗಳೆಲ್ಲ ಹರುಷಕರುಷಗಳೆಲ್ಲ ನನ್ನವರಾದ ಭಕ್ತಶಿರೋಮಣಿಗಳು, ಮತ್ತು ಕುಲಾದ್ಯರಾದ ಪ್ರಮಥರು. ಕೂಡಲ ಸಂಗನ ಶರಣರು ಲಿಂಗದ ಬಾಯಿಯಾಗಿರುವರಯ್ಯಾ.

**೪೧೦ ಬೇರೂರಲಿದ್ದು ಬಂದ ಜಂಗಮವೇ ಲಿಂಗವೆಂದು,**
**ಮನೆಯಲಿದ್ದ ಜಂಗಮವನುದಾಶೀನವ ಮಾಡಿದರೆ,**
**ನಾನು ಬೆಂದೆನಯ್ಯಾ,**
**ಆನು ಬೆಂದ ಬೇಗೆಯನರಿಯೆ, ಕಾಣಾ,**
**ಕೂಡಲ ಸಂಗಮದೇವಾ.**

“ಹಿತ್ತಲದ ಗಿಡ ಮದ್ದಲ್ಲ’ ಎನ್ನುವವರ ಖೂಳ ಮನದಂತೆ, ಪರವೂರಿಂದ ನಡೆದು ಬಂದ ಜಂಗಮನೇ-ಚರಂತನೇ ದೇವರೆಂದು ನಂಬಿ ಮನೆಯಲಿದ್ದ ಜಂಗಮದೇವನ ಉಪೇಕ್ಷೆ ಮಾಡಿದರೆ, ನಾನು ಅನುಭೋಗಿಸುವ ಕಷ್ಟ ನಷ್ಟಗಳ ಪರಂಪರೆಯನ್ನು ತಿಳಿಯದ ಮೂರ್ಖನಾಗಿರುವೆ ಕೂಡಲ ಸಂಗಮದೇವಾ.

**೪೧೧ ಉಟ್ಟು ತೊಟ್ಟು ಪೂಜ್ಯನಾಗಿ ಬಂದ ಜಂಗಮ ವಿಶೇಷವೆಂದು,**
**ಕಂತೆ-ಬೊಂತೆಯ ಜಂಗಮ ಬಂದರೆ ಹೀನನೆಂದು**
**ಕಂಡೆನಾದರೆ, ಪಂಚ ಮಹಾಪಾತಕ !**
**ಇದು ಕಾರಣ ಅನ್ನ=ವಸ್ತ್ರ-ಧನ ಮಾಟದಲ್ಲಿ**
**ಎರಡಾಗಿ ಕಂಡೆನಾದರೆ, ನರಕದಲ್ಲಿಕ್ಕುವ**
**ಕೂಡಲ ಸಂಗಮದೇವ.**

ಉತ್ತಮ ಕಾಷಾಯ ಧರಿಸಿ, ಕಂಠಾಭರಣ-ಕಂಕಣಾಭರಣ ರುದ್ರಾಕ್ಷಿ ಮಾಲೆಗಳನ್ನು ಹಾಕಿ ಕಟ್ಟಿಕೊಂಡು ಭೂಷಣನಾದ ಜಂಗಮನನ್ನು ಆದರದಿಂದ ಒಳಗೆ ಬರಮಾಡಿಕೊಂಡು—ಸಂತೆ, ಸಂತೆ ತಿರುಗುವ ಹರಕು ಚಿಂದಿಗಳ ಹರಚಿಂತಕ ಬಂದರೆ ನೀಚನೆಂದು ಪಾಮರನೆಂದು ತಿಳಿದು ದೂರ ಮಾಡಿದರೆ ಪಂಚ ಮಹಾ ಪಾತಕ (ಬ್ರಹ್ಮಹತ್ಯೆ, ಸುರಾಪಾನ, ಗುರುಪತ್ನೀ ಗಮನ, ಸ್ವರ್ಣಸ್ತೇಯ ಮತ್ತು ಇಂಥವರ ಗೆಳೆತನ ಮಾಡುವ ಕಾರ್ಯ) ಆದ್ದರಿಂದ ಊಟದಲ್ಲಿ, ವಸ್ತ್ರದಾನದಲ್ಲಿ ದ್ರವ್ಯದಲ್ಲಿ ಭೇದ ಮಾಡಿದರೆ ಕೂಡಲ ಸಂಗಮದೇವನು ರವರವ ನರಕದಲ್ಲಿಡುತ್ತಾನೆ.

**೪೧೨ ಅಡ್ಡ ದೊಡ್ಡ ನಾನಲ್ಲಯ್ಯಾ: ದೊಡ್ಡಬಸರು ಎನಗಿಲ್ಲಯ್ಯಾ:**
**ದೊಡ್ಡವರಲ್ಲದೆ ನಿಮ್ಮ ಶರಣರು ಮನ್ನಿಸರಯ್ಯಾ !**
**ಹಡೆದುಂಬ ಸೂಳೆಯಂತೆ ಧನವುಳ್ಳವರನರಸಿಯರಸಿ,**
**ಬೋಧಿಸಲು ಪ್ರಾರ್ಥಿಸಲು ಮುನ್ನ ನಾನರಿಯೆನಯ್ಯಾ.**
**ದೊಡ್ಡತನ ವೆನಗಿಲ್ಲ: ಅಂಜುವೆನಂಜುವೆ ನಿಮ್ಮ ಪ್ರಮಥರಿಗೆ:**
**ಅನಾಥ ನಾನಯ್ಯಾ, ಕೂಡಲ ಸಂಗಮದೇವಾ.**

ಮನೋವಿಸ್ತಾರದಲ್ಲಿ ದೊಡ್ಡವನು ನಾನಲ್ಲ. ಹೃದಯ ವೈಶಾಲ್ಯ ದಲ್ಲಿ ದೊಡ್ಡ ಹೆಸರು ನನಗಿಲ್ಲ. ಘನ ಪುರುಷರು ನಿನ್ನ ಶರಣರು; ಸಿರಿ ವಂತರನ್ನು ಹುಡುಕಿ ಅವರಿಂದ ಹಣ ಪಡೆದು ಬಾಳುವ ಸೂಳೆಯ ಹಾಗೆ ನಾನು ಉಪದೇಶ ಪಡೆಯಲು ಅವರ ಬಳಿ ಹೋದರೆ ತಿಳಿಯದ ಹೆಡ್ಡನಾದ ನನ್ನನ್ನು ಮಹಾಮನದವರೆಂದು ಹೇಳಿಕೊಳ್ಳುವ ಅವರು ಕ್ಷಮಿಸುವದಿಲ್ಲ. ಲೌಕಿಕಕ್ಕೆ ದೊಡ್ಡವರಾದವರು ಕ್ಷಮಿಸುತ್ತಾರೆ. ಕೂಡಲ ಸಂಗಮದೇವಾ ನಾನು ನಿನ್ನ ಪ್ರಮಥರಿಗೆ ಅಂಜಿ ಸಾಯುತ್ತೇನೆ. ನಾನೊಬ್ಬ ದಿಕ್ಕಿಲ್ಲದ ಪಾಮರ.

**೪೧೩ ಕುದುರೆ-ಸತ್ತಿಗೆಯವರ ಕಂಡರೆ ಹೊರಳಿ ಬಿದ್ದು ಕಾಲ ಹಿಡಿವರು:**

**ಬಡ ಭಕ್ತರು ಬಂದೆ "ಎಡೆಯಿಲ್ಲ, ಅತ್ತ ಸನ್ನಿ" ಎಂಬರು !**<br>**ಎನ್ನೊಡೆಯ ಕೂಡಲ ಸಂಗಯ್ಯನವರ**<br>**ತಡಗೆಡಹಿ ಮೂಗ ಕೊಯ್ಯದೆ ಮಾಣ್ಬನೇ ?**

ಕುದುರೆ ಹತ್ತಿಕೊಂಡು ರಾಜಭಟರು ಬಂದರೆ ಅವರಿಗೆ ಅಡ್ಡಬಿದ್ದು ದೀರ್ಘದಂಡ ನಮಸ್ಕಾರ ಮಾಡುತ್ತಾರೆ. ಧನವಿಲ್ಲದ ಭಕ್ತರು ಬರುವೆ ವೆಂದರೆ— ನಿನಗಿಲ್ಲಿ ಸ್ಥಳವಿಲ್ಲ— ಅತ್ತ ನಡೆ, ದೂರ ಸರಿ ಎಂದು ಕಿರಚಿಕೊ ಳ್ಳುತ್ತಾರೆ. ಇಂಥ ಬೂಟಾಟಿಕೆಯ ಜನರನ್ನು ನನ್ನ ಮಹಿಮಾತೀತನಾದ ಕೂಡಲ ಸಂಗಮರಾಯ ಅಡ್ಡ ಮಲಗಿಸಿ ಮೂಗು ಕೊಯ್ದು ಅವರ ಕೈಯಲ್ಲಿಡುತ್ತಾನೆ.

**೪೧೪ ದೂರದಿಂದ ಬಂದ ಜಂಗಮವನಯ್ಯಗಳೆಂದು,**<br>**ಸಾರಿದ್ದ ಜಂಗಮನ ಪರಿಚಾರಕರೆಂಬ ಕೇಡಿಂಗೆ ಬೆರಗಾದೆ ನಯ್ಯಾ !**<br>**ಸಾರಿದ್ದವರ ದೂರದವರೆಂದು ಬೇರೆ ಮಾಡಿದರೆ**<br>**ಕೂಡಲ ಸಂಗಮದೇವ ಸಿಂಗಾರದ ಮೂಗ**<br>**ಹಲುದೋರೆ ಕೊಯ್ಯದೆ ಮಾಣ್ಬನೆ ?**

'ದೂರಿನ ಗುಡ್ಡ ಕಣ್ಣಿಗೆ ನುಣ್ಣಗೆ' ಎನ್ನುವ ಮಾತಿನಂತೆ ದೂರ ದೇಶದಿಂದ ಬಂದ ಜಂಗಮರು ಉನ್ನತ ಭುಜಗ ಭೂಷಣನ ಶಾಂಭವಿಗ ಳೆಂದು ತಿಳಿದು ಹತ್ತಿರದ ಜಂಗಮರು ಸೇವಕ ವೃತ್ತಿಯ ದಾಸರೆಂದು ಬಗೆದು ಭಾವಭೇದ ತೋರಿಸಿದರೆ, ಕೂಡಲ ಸಂಗಮ ದೇವನು ಮೂಗು ಕೊಯ್ಯುತ್ತಾನೆ.

**೪೧೫ ಹಿಡಿವೆಡೆಯನೆ ಕಾಸಿ, ಹಿಡಿವ ಕೈ ಬೆಂದು,**
**ಮಿಡು ಮಿಡನೆ ಮಿಡುಕುವ ಮರುಳ ಮಾನವನೇ,**
**ಬಡವರೆಂದೆನಬೇಡಾ ಲಾಂಛನಧಾರಿಯನು:**
**ಕಡುಸ್ನೇಹದಿಂದವರ ಪೂಜೆಯ ಮಾಡುವದು,**
**ನಿಜವಡಗಿದ ರೂಪು, ನಿರ್ವಯಲ ಸ್ಥಾನ,**
**ನಡೆಲಿಂಗ, ಜಂಗಮ: ಕೂಡಲ ಸಂಗಮದೇವ !**

ಹಿಡಿಯಲು ಮಾಡಿದ 'ಹಿಡಿ'ಯನ್ನೇ ಕಾಸಿ ಹಿಡಿದುಕೊಂಡು ಕೈ ಸುಟ್ಟುಕೊಂಡು ದುಃಖಿಸುವ ಹುಚ್ಚ ಮನುಜನೇ- ಜಂಗಮನಾಗಿ ಬಂದ ಲಿಂಗವು ಬಡವನೆಂದು ಅನ್ನಬೇಡಾ. ಬಹು ಪ್ರೀತಿಯಿಂದಲೂ ಆದರದಿಂದಲೂ ಆ ಜಂಗಮನ ಪೂಜೆ ಮಾಡಿ, ಸತ್ಯದಲ್ಲಡಕವಾದ ಶೂನ್ಯ ಸ್ಥಾನ ಜಂಗಮಲಿಂಗನೇ ಇರುವದರಿಂದ, ಮುಕ್ತಿ ಸಂಪದವ ಪಡೆಯ ಬೇಕು; ಕೂಡಲಸಂಗಮದೇವಾ.

**೪೧೬ ಹಾಲ ಕಂದಲು, ತುಪ್ಪದ ಮಡಕೆಯ**
**'ಬೋಡು ಮುಕ್ಕೆ'ನ ಬೇಡ—**
**ಹಾಲು ಸಿಹಿ, ತುಪ್ಪ ಕಮ್ಮನೆ: ಲಿಂಗಕ್ಕೆ ಬೋನ!**
**ಕೂಡಲ ಸಂಗನ ಶರಣರ**
**ಅಂಗಹೀನರೆಂದರೆ ನಾಯಕ ನರಕ !**

ಒಂದು ಚಟಿಗೆ ಹಾಲು, ಒಂದು ಚಟಿಗೆ ತುಪ್ಪ ಹಲ್ಲಿಲ್ಲದವನ ಆಹಾ ರವೆಂದು ಕಡೆಗಣಿಸಬೇಡ, ಹಾಲು ಸಿಹಿಯಾಗಿರುತ್ತದೆ. ತುಪ್ಪ ಕಮ್ಮನೆ ವಾಸನೆ ಬೀರುತ್ತದೆ. ಲಿಂಗ ಪ್ರೀತಿಗೆ ಅನ್ನದಾನ ಮೇಲು. ಕಾರಣ

ಕೂಡಲ ಸಂಗನ ಭಕ್ತಿ ಭೈರವರಾದ ಶರಣರು ನಿರ್ವ್ಯಾಜರೆಂದು ನುಡಿದರೆ ನಿನ್ನ ನಾಲಿಗೆ ಕತ್ತರಿಸಿ ಬೀಳುತ್ತದೆ.

**೪೧೭ ಆಚಾರವರಿಯಿರಿ, ವಿಚಾರವರಿಯಿರಿ:**
**ಜಂಗಮ ಸ್ಥಲಲಿಂಗ ಕಾಣಿರಯ್ಯಾ.**
**ಜಾತಿಭೇದವಿಲ್ಲ, ಸೂತಕವಿಲ್ಲ,**
**ಅಜಾತಂಗೆ ಕುಲವಿಲ್ಲ !**
**ನುಡಿದಂತೆ ನಡೆಯದಿದ್ದರೆ**
**ಕೂಡಲ ಸಂಗಯ್ಯ ಮೆಚ್ಚ ಕಾಣಿರಯ್ಯಾ.**

ಆಚಾರ—ವಿಚಾರಗಳನ್ನರಿತು ಜೋಡಿಸಿಕೊಂಡು ಮನಶುದ್ಧಿ, ಹೃದಯಶುದ್ಧಿ ಮಾಡಿಕೊಂಡು ಜಂಗಮಸ್ಥನಾದ ಲಿಂಗದರ್ಶನ ಮಾಡಿಕೊಳ್ಳಿರಿ, ಜಂಗಮ-ಲಿಂಗಕ್ಕೆ ಜಾತಿ-ಹೊಲೆಯೆಂಬವಾವೂ ಇಲ್ಲ. ಜನನ ಮರಣ ಬಾಹ್ಯನಾದವನಿಗೆ ಕುಲವೆಲ್ಲಿಂದ ಬಂದೀತು. ನುಡಿದು ನಡೆಯದಿದ್ದರೆ, ಆಡಿ ಮಾಡದಿದ್ದರೆ ಕೂಡಲ ಸಂಗಮದೇವನು ಎಂದಿಗೂ ಮೆಚ್ಚಿಕೊಳ್ಳುವದಿಲ್ಲ.

**೪೧೮ ಸ್ಥಾವರ ಭಕ್ತಂಗೆ ಸೀಮೆಯುಲ್ಲದೆ—**
**ಘನಲಿಂಗ ಜಂಗಮಕ್ಕೆ ಸೀಮೆಯುಲ್ಲಿಯದು ?**
**ಅಂಬುಧಿಗೆ ಸೀಮೆಯುಲ್ಲದೆ**
**ಹರಿವ ನದಿಗೆ ಸೀಮೆಯುಲ್ಲಿಯದು ?**
**ಭಕ್ತಂಗೆ ಸೀಮೆಯುಲ್ಲದೆ**
**ಜಂಗಮಕ್ಕೆ ಸೀಮೆಯುಂಟೆ ಕೂಡಲ ಸಂಗಮದೇವಾ ?**

ಗುಡಿ ಕಟ್ಟಿಕೊಂಡು ಪೂಜಿಸುವ ಭಕ್ತನಿಗೆ ಮೇರೆಯ ಬಂಧವಿದ್ದಂತೆ ಎಲ್ಲೆಡೆಗೂ ತೊಳಗಿ ಬೆಳಗುವ ಘನ ಲಿಂಗ ಜಂಗಮಕ್ಕೆ ಮೇರೆಯೆಂಬುದೇ ಇಲ್ಲ. ಸಮುದ್ರಕೊಂದು ಮಿತಿ ದಂಡೆಯಿದ್ದರೆ ಹರಿದು ಸಾಗುವ ನದಿಗೆ ಎಲ್ಲಿಯಾದರೂ ಅಡೆತಡೆಗಳು, ದಂಡೆಗಳುಂಟೆ? ಹಾಗೆ ಸರ್ವಾಂತರ್ಯಾಮಿಯಾದ ಜಂಗಮಕ್ಕೆ ಹದ್ದು, ಮೇರೆ ಎಂಬುದೇ ಇಲ್ಲ. ಕೂಡಲ ಸಂಗಮದೇವಾ ಸೀಮಾತೀತನು ಜಂಗಮನು.

**೪೧೯ ಎತ್ತಿಕೊಳ್ಳಲೇಕೆ, ಮತ್ತಿಳುಹಲೇಕಯ್ಯಾ?**
**ದರದುರದ ಭಕ್ತಿಯ ಮಾಡಲೇಕಯ್ಯಾ?**
**ನಿಂದಿಸಲೇಕೆ, ಸ್ತುತಿಸಲೇಕೆ?**
**ಹೋಗ ಬಿಟ್ಟು ಜಂಗಮವ ಹಿಂದೆಯೊಡುವ ಬಾಯಲಿ**
**ಮೆಟ್ಟಿ ಹುಡಿಹೊಯ್ಯದೆ ಮಾಣ್ಬನೆ**
**ಕೂಡಲ ಸಂಗಮ ದೇವಾ?**

ಮೊದಲು ಜಂಗಮರೆನಿಸಿಕೊಂಡು ಪಾದುಕೆಗಳನ್ನು ತಲೆಯ ಮೇಲಿಟ್ಟುಕೊಂಟು ಕುಣಿದು ಅವುಗಳನ್ನು ಮತ್ತೇಕೆ ಕೆಳಗೆ ಬಿಸ್ಡಾಕಲಿ. ಅಂಥ ಕುದಿ ಮನಸಿನ ಮುರುಕು ಭಕ್ತಿ ಮಾಡುವದೇ ಬೇಡಾ. ಎದುರಿಗೆ ಬಂದ ಜಂಗಮನನ್ನು ಹೊಗಳಿ ಹರಿಸಿ ಮುಂದೆ ಹೋಗಲು ಹೇಳಿ ಹಿಂದಿನಿಂದ ಜಂಗಮನಿಂದೆ ಮಾಡುವದೇಕೆ? ಹಾಗೆ ಮಾಡಿದವನ ಬಾಯೊಳಗೆ ಕೂಡಲ ಸಂಗಮ ದೇವನು ಹಿಡಿ ಮಣ್ಣು ಹಾಕುತ್ತಾನೆ.

**೪೨೦ ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರೆರೆದರೆ**
**ಮೇಲೆ ಪಲ್ಲವಿಸಿತ್ತು ನೋಡಾ!**
**ಲಿಂಗದ ಬಾಯಿ ಜಂಗಮನೆಂದು ಪಡಿ ಪದಾರ್ಥ ನೀಡಿದರೆ**
**ಮುಂದೆ ಸಕಲ ಪದಾರ್ಥನೀವನು!**
**ಆ ಜಂಗಮವ ಮರನೆಂದು ಕಂಡು ನರನೆಂದು ಭಾವಿಸಿದರೆ**
**ನರಕ ತಪ್ಪದು, ಕಾಣಾ, ಕೂಡಲಸಂಗಮದೇವಾ!**

ತರು-ಮರಗಳ ಮುಖ ಬೇರೆಂದು ತಳಕ್ಕೆ (ಬೊಡ್ಡೆಗೆ) ನೀರು ಹಾಕಿದರೆ ಗಿಡವು ಮೇಲೆ ಚಿಗಿತು ಹೂವು ಬಿಡುತ್ತದೆ. ಹಾಗೆಯೇ ಲಿಂಗಕ್ಕೆ ಮುಖವಾಗಿರುವ ಜಂಗಮಕ್ಕೆ ಪಂಚ ಪರಮಾನ್ನ ಉಣಬಡಿಸಿದರೆ, ಕಾಮಧೇನುವಾದ ವಿರುಪಾಕ್ಷನು ನಾಳೆಗಾಗಿ ಎಲ್ಲ ವ್ಯಪ್ಟಾನ್ನ ನಿಮಗೆ ಸಿದ್ಧಪಡಿಸುತ್ತಾನೆ. ಜಂಗಮನನ್ನು ಶಿವನೆಂದು ಪೂಜಿಸಿ- ನರನೆಂದು ತುಚ್ಛ ಮಾಡಿದರೆ ಘೋರ ನರಕ ತಪ್ಪದು. ಕೂಡಲ ಸಂಗಮದೇವಾ.

**೪೨೧ ಆರಾಧನೆಯ ಮಾಡಿದಡೆ ಅಮೃತದ ಬೆಳಸು:**
**ವಿರೋಧಿಸಿದಡೆ ವಿಷದ ಬೆಳಸು?**
**ಇದು ಕಾರಣ ಲಿಂಗ ಜಂಗಮಕ್ಕಂಜಲೇ ಬೇಕು.**
**ಸ್ಥಾವರ ಜಂಗಮ ಒಂದೆಯೆಂದರಿದರೆ**
**ಕೂಡಲ ಸಂಗಮದೇವ ಶರಣ ಸನ್ನಿಹಿತ !**

ಉರುಗ ಭೂಷಣ ಕರ ಡಮರು ತ್ರಿಶೂಲಧಾರಿ ರುಂಡ ಮಾಲಾಧರ ಗಜಚರ್ಮ ವಸನಧರ ತ್ರಿಪುಂಡ್ರ ಮುಕ್ಕಣ್ಣನಂಘ್ರಿಕಮಲದ ಪೂಜೆ ಮಾಡಿದರೆ ಅಮೃತ ಬೆಳೆ ಬೆಳೆಯುತ್ತದೆ. ಪೂಜೆ ವಿರೋಧಿಸಿದರೆ ವಿಷದ ಬೋನವನುಣ್ಣ ಬೇಕಾಗುತ್ತದೆ. ಆದ್ದರಿಂದ ಲಿಂಗ-ಜಂಗಮಕ್ಕೆತಗ್ಗಿ ಬಗ್ಗಿ ವಿನೀತರಾಗಿ ನಡೆಯಲೇ ಬೇಕು. ಜಡ-ಚರಗಳೆರಡಲ್ಲವೆಂದು ತಿಳಿದು ಕೊಂಡರೆ ಕೂಡಲ ಸಂಗಮದೇವನು ಆ ಶರಣನ ಬಳಿ ಸಾರಿ ಬರುತ್ತಾನೆ.

**೪೨೨ ಹೊಸತಿಲ ಪೂಜಿಸಿ ಹೊರವಟ್ಟು ಹೋದ**
**ಒಕ್ಕಲತಿಯಂತಾಯಿತ್ತೆನ್ನ ಭಕ್ತಿ !**
**ಜಂಗಮವೆನ್ನೊಡೆಯರೆಂದು ಒಕ್ಕುದ ಕೊಂಡು**
**ಉದಾಸೀನವ ಮಾಡಿದರೆ,**
**ಇಹಲೋಕಕ್ಕೆ ದೂರ, ಪರಲೋಕಕ್ಕೆ ದೂರ !**
**ಕೂಡಲ ಸಂಗಮದೇವ ಅಘೋರ ನರಕದಲ್ಲಿಕ್ಕುವ !**

ಬೆಳಗಿನ ಜಾವದಲ್ಲಿ ಎದ್ದು ಅಂಗಳ ಉಡುಗಿ ಹೊಸತಿಲ ಸಾರಿಸಿ ಕುಂಕುಮವಿಟ್ಟು ಪೂಜಿಸಿ ದೇವರ ಬರುವಿನ ದಾರಿಯನ್ನು ಕಾಯದೆ-ಹೊಟ್ಟೆ ಹೊರೆಯಲು ಕೂಲಿಗೆ ಹೋದ ಒಕ್ಕಲಗಿತ್ತಿಯ ಪರಿ ಭಕ್ತಿಯಲ್ಲಿ ಭಂಜಕನಾಗಿ ಜಂಗಮನೇ ನನ್ನ ಈಶ್ವರನೆಂದು ಭಾವಿಸಿ ಪ್ರಸಾದ ಸ್ವೀಕರಿಸಿ ಕಡೆಗೆ ಅಲಕ್ಷ್ಯ ಮಾಡಿದರೆ ಇಹಪರಲೋಕಕ್ಕೆರಡೂ ಅಯೋಗ್ಯನಾಗಿ ನಾಯಿಯ ಬಾಳು ಬಾಳಬೇಕಾಗುತ್ತದೆ.

**೪೨೩ ಲಿಂಗವ ಪೂಜೆಯ ಮಾಡಿ ಜಂಗಮವ ಕಂಡುದಾಸೀನವ ಮಾಡಿದರೆ**
**ಆ ಲಿಂಗ ಪೂಜಕರಿಗೆ ಮಾಡಿದ ಶಿವದೂತರ ದಂಡವೆಂಬುದು!**

**ಲೋಕದ ಕರ್ಮಿಗಳಿಗೆ ಮಾಡಿದ ಯಮದೂತರ ದಂಡ**
**ವೆಂಬುದು!**
**ಇದು ಕಾರಣ ಲಿಂಗ ಜಂಗಮವನೊಂದೆಯೆಂದರಿಯದರ**
**ಎನಗೆ ತೋರದಿರಯ್ಯಾ, ಕೂಡಲ ಸಂಗಮದೇವಾ.**

ಬರಿ ಲಿಂಗವೊಂದನ್ನೇ ಆರಾಧಿಸಿ ಜಂಗಮನನ್ನು ತುಚ್ಛಮಾಡಿ ನಡೆವುದು ಶಿವಭಕ್ತಿಗೆ ಸಲ್ಲದ ಆಚಾರ. ಹಾಗೆ ಆಚರಿಸುವ ದುಷ್ಕರ್ಮಿಗಳಿಗೆ ಯಮ ಶಿಕ್ಷೆ ಬಿಡದು. ಶಿವದೂತರು ಅವರನ್ನು ಮುಟ್ಟುವದಿಲ್ಲ. ಅಂತಹ ದುರಾಚಾರಿ ದುರ್ಬುದ್ಧಿಯ ಇಬ್ಬಗೆಯ ನರ ಕುರಿಗಳು ನನ್ನ ಕಣ್ಣಿಗೆ ಕಾಣದಂತೆ ಮಾಡು ಕೂಡಲ ಸಂಗಮದೇವಾ.

**೪೨೪ ಜಂಗಮವ ನಿಂದೆಯ ಮಾಡಿ ಲಿಂಗವ ಪೂಜಿಸುವ ಭಕ್ತನ**
**ಅಂಗವಣಿಯಂತೋ ? ಶಿವ, ಶಿವಾ !**
**ನಿಂದಿಸುವ; ಪೂಜಿಸುವ ಪಾತಕವಿದ ಕೇಳಲಾಗದು.**
**' ಗುರುವಿನ ಗುರು ಜಂಗಮ'**
**ಇಂತೆಂದುದು ಕೂಡಲ ಸಂಗಯ್ಯನ ವಚನ.**

ಜಂಗಮಕ್ಕೆ ವೆಗ್ಗಳವಾಗಿ ಬಿರುನುಡಿಯಾಡಿ- ನೊಂಡ ಮನದಿಂದ ಲಿಂಗ ಪೂಜೆ ಮಾಡುವ ದುರ್ಗುಣಿಗಳ ಶರೀರ ಎಷ್ಟು ಹೊಲಸೋ? ಜಂಗಮ ನಿಂದೆಯನ್ನು- ಅದೇ ಬಾಯಿಂದ ಶಿವ ಮಂತ್ರೋಚ್ಚರಣೆಯನ್ನು ಕೇಳಲು ಮೈಗೆ ಮುಳ್ಳು ಬರುತ್ತದೆ. ಗುರುವಿನ ಗುರು ಜಂಗಮನೆಂದು ಕೂಡಲ ಸಂಗಮದೇವನ ಅಮೃತವಾಣಿ ಡಂಗುರ ಸಾರುತ್ತದೆ.

**೪೨೫ ಅರಸನ ಕಂಡು ತನ್ನ ಪುರುಷನ ಮರೆದರೆ**
**ಮರನೇರಿ ಕೈ ಬಿಟ್ಟಂತಾಯಿತ್ತಯ್ಯಾ !**
**ಇಹಲೋಕಕ್ಕೆ ದೂರ, ಪರಲೋಕಕ್ಕೆ ದೂರ,**
**ನಮ್ಮ ಕೂಡಲ ಸಂಗಮ ದೇವ ಜಂಗಮ ಮುಖಲಿಂಗ**
**ನಾದ ಕಾರಣ.**

ಅರಸನ ವೈಭವ-ರೂಪುಲಾವಣ್ಯವ ನೋಡಿ ತನ್ನ ಕೈ ಹಿಡಿದ ಪತಿಯನ್ನು ಮರೆತು ಒಂದು ಗಳಿಗೆ ಮನ ಕಾಮನೆ ತೀರಿಸಿಕೊಂಡರೆ ಮಗದ ತುದಿಯವರೆಗೆ ಏರಿ ಅಲ್ಲಿಂದ ಕೈ ಬಿಟ್ಟರೆ ಎಂತಹ ಗತಿ ಪ್ರಾಪ್ತವಾಗುತ್ತದೆಯೋ ಹಾಗೆ ದೇವ ದೇವನಾದ ಜಂಗಮರೂಪಿ ಕೂಡಲ ಸಂಗಮನ ಕೂಡಿಕೊಂಡು ಅಡಿಯಿಡದಿದ್ದರೆ ಮರ್ತ್ಯ-ಸ್ವರ್ಗಗಳಿಗೆರಡಕ್ಕೂ ಪಾಪಿಯಾಗಿ ತ್ರಿಶಂಕುವಿನ ಗತಿಗೇರಿ ಬದುಕಬೇಕಾಗುತ್ತದೆ.

**೪೨೬ ಜಂಗಮವಿಲ್ಲದ ಮಾಟ, ಕಂಗಳಿಲ್ಲದ ನೋಟ!**
**ಹಿಂಗಿತ್ತು ಶಿವಲೋಕ, ಇನ್ನೆಲ್ಲಿಯದಯ್ಯಾ?**
**ಲಿಂಗಕ್ಕೆ ಮಾಡಿದ ಬೋನವ ಸಿಂಬುಕ ತಿನ್ನುವಂತೆ**
**ಸಮಯೋಚಿತವನರಿಯದೆ ಉದರವ ಹೊರೆವವರ**
**ನರಕದಲ್ಲಿಕ್ಕದೆ ಮಾಣ್ಬನೆ ಕೂಡಲಸಂಗಮದೇವ?**

ಜಂಗಮನಿಗೆ ಸಲ್ಲದ ಭಕ್ತಿ ಕುರುಡನು ಕಂಡ ಆನೆಯ ಕತೆಯಂತೆ. ಅಂತಹರಿಗೆ ಕೈಲಾಸ ದೊರೆಯುವದು ಹೇಗೆ? ಸಾಧ್ಯವೇ ಇಲ್ಲ. ಲಿಂಗಕ್ಕೆ ಮಾಡಿದ ಎಡೆಯ ಊಟವನ್ನು ಸೇವಕನಾದ ಪೂಜಾರಿ ಉಂಡು ತೇಗುವ ಹಾಗೆ ಕಾಲಕ್ಕೆ ತಕ್ಕಂತೆ ವೇಷ ಧರಿಸಿ, ಹೊಟ್ಟೆ ತುಂಬಿಕೊಳ್ಳುವ ಈ ಬೊಜ್ಜು ಬೋಕರನ್ನು ಕೂಡಲ ಸಂಗಮ ದೇವನು ನರಕಕ್ಕೆ ತಳ್ಳದೆ ಬಿಡುವನೇ?

**೪೨೭ ಲಿಂಗದಲ್ಲಿ ದಿಟವ ನರಸುವರೆ ಜಂಗಮವ ನೆರೆನಂಬುವದು:**
**ನಡೆಲಿಂಗ, ನುಡಿಲಿಂಗ, ಮುಖಲಿಂಗವೆಂದೇ ನಂಬೋ!**
**'ಯತ್ರ ಮಾಹೇಶ್ವರಃ ತತ್ರ ಸನ್ನಿಹಿತನಾಗಿ'**
**ಅಧರ ತಾಗಿದ ರುಚಿಯು, ಉದರ ತಾಗಿದ ಸುಖವ**
**ಉಣ್ಬ, ಉಡುವ ಕೂಡಲ ಸಂಗಮ ದೇವ ಜಂಗಮ**
**ಮುಖದಲ್ಲಿ**

ಲಿಂಗದ ಸತ್ಯಾಸತ್ಯತೆಗಳ ಪರೀಕ್ಷೆ ಮಾಡುವದುಂಟೆ? ಜಂಗಮನನ್ನು ಪೂರ್ಣ ನಂಬಿ ನಿಲ್ಲಬೇಕು. ಆಚಾರಲಿಂಗ, ನಿಜಲಿಂಗ, ಕಲ್ಪನಾ

ಲಿಂಗನು ಜಂಗಮನೆಂದು ತಿಳಿ. ಎಲ್ಲಿ ಮಹೇಶ್ವರನು ನೆಲಸುತ್ತಾನೋ ಅಲ್ಲಿಯೇ ಜಂಗಮವಾಸವೂ ಇರುತ್ತದೆ. ತುಟಿ ಮೆದ್ದ ರುಚಿ- ಹೊಟ್ಟೆಗೆ ಸುಖ ಕೊಟ್ಟ ಹಾಗೆ ಕೂಡಲ ಸಂಗಮ ದೇವನು ಭಕ್ತ - ಶರಣರ ನುಡಿ-ಜೇನು, ಹಾಡ ಹಾಲು ಸವಿದು ಜಂಗಮನು ಉಡುವ ಉಡುಪು ಉಟ್ಟು ಆನಂದ ಹೊಂದುವನು.

೪೨೮ **ಜಂಗಮದ ಮನ-ಭಾವದಲ್ಲಿ ಭಕ್ತ(ನೆ) ಭೃತ್ಯನೆಂದು,**
**ಭಕ್ತನ ಮನ-ಭಾವದಲ್ಲಿ ಜಂಗಮ(ವೆ) ಕರ್ತನೆಂದು ಇದ್ದ ಬಳಿಕ,**
**'ಬಂದುದು, ಬಾರದು, ಇದ್ದುದು, ಹೋಯಿತ್ತೆ'ಂಬ**
**ಸಂದೇಹವಿಲ್ಲದಿರಬೇಕು.**
**ಹೋಯಿತ್ತೆಂಬ ಗುಣವುಳ್ಳನ್ನಕ್ಕ**
**ನಿಮಗೆ ದೂರ, ನಿಮ್ಮವರಿಗೆ ಮುನ್ನವೇ ದೂರ!**
**ಶಿವಾಚಾರಕ್ಕಲ್ಲಿಂದತ್ತ ದೂರ!!**
**ಜಂಗಮದ ಹರಿದ ಹರವು, ಜಂಗಮದ ನಿಂದ ನಿಲವು,**
**ಜಂಗಮದ ಗಳ ಗರ್ಜನೆ, ಜಂಗಮದ ಕೋಟಾಟಿಕೆ ಸೈರಿಸದಿದ್ದರೆ**
**ನೀನಂದೇ ಮೂಗ ಕೊಂಬೆ, ಕೂಡಲ ಸಂಗಮದೇವಾ!**

ಜಂಗಮಕ್ಕೆ ಭಕ್ತನು ಸೇವಕನಾಗಿದ್ದು, ಭಕ್ತನ ಎಲ್ಲ ಕಲ್ಯಾಣ ಕಾರ್ಯಗಳಿಗೆ ಜಂಗಮನು ಯಜಮಾನನಾಗಿದ್ದು-ಈ ತರಹದ ಅನ್ಯೋನ್ಯ ಅನುಪಮ ಸ್ವಾಮಿ-ಸೇವಕ ಭಾವನೆ ಬೆಳೆದ ಮೇಲೆ ಬಂದಿದ್ದು ಬರಲಿ. ಬಾರದ್ದು ಬರಲಿ ಮತ್ತು ಇಲ್ಲದ್ದುದು ಬರಲಿ-ಹೋಗಲಿ ಎಂದು ಚಿಂತಕನಾಗಬಾರದು. ಹಾಗೆ ಚಿಂತಾತುರರಾಗಿದ್ದಲ್ಲಿ ಶರಣರಿಂದ, ಭಕ್ತ ವತ್ಸಲ ಗುರುಲಿಂಗನಿಂದ ಅಲ್ಲದೆ ಶಿವಾಚಾರದಿಂದಲೂ ಸಂಬಂಧ ದೂರಾಗುತ್ತದೆ. ಜಂಗಮನ ಶಿವನಾಮ ಗರ್ಜನೆ ಕೇಳಿ ತಾಳ್ಮೆಗೆಟ್ಟರೆ. ಕೂಡಲ ಸಂಗಮದೇವನು ಅಲ್ಲಿಯೇ ಮೂಗು ಕೊಯ್ಯುವನು.

೪೨೯ ನಯನದಾಹಾರವ ಜಂಗಮವ ನೋಡಿಸುವೆ,
ಶ್ರೋತ್ರದಹಾರವ ಜಂಗಮವ ಕೇಳಿಸುವೆ,
ಘ್ರಾಣದಾಹಾರವ ಜಂಗಮವ ವಾಸಿಸುವೆ,
ಜಿಹ್ವೆಯಾಹಾರವ ಜಂಗಮ ನೂಡಿಸುವೆ;
(ತ್ವ)ಚದಾಹಾರವ ಜಂಗಮಕ್ಕೆ ಹೊದ್ದಿಸುವೆ;
ಅಧಿಕ ಪ್ರೇಮ ಪ್ರಾಣವ ಮಾಡುವೆ—
ಸಕಲ ಪದಾರ್ಥಂಗಳ ನೀಡುವೆನು,
ಕೂಡಲ ಸಂಗಾ ನಿಮ್ಮ ಶರಣರಿಗೆ.

ನೋಟಕ್ಕೆ ಪುಷ್ಟಿಕರ ಸತ್ವಯುತ ಆಹಾರವೆಂದು ಜಂಗಮನನ್ನೇ ನೋಡುವೆ. ಕರ್ಣಕ್ಕೆ ಕಿನ್ನರಿಯ ತಂತಿಯ ಮೃದುಧ್ವನಿ- ಸೊಂಪಿನ ಇಂಪಾದ ಆಹಾರವಾಗಿರುವದರಿಂದ ಜಂಗಮನ ಶಿವನುಡಿಯಾಲಾಪ ಕೇಳುವೆ. ಮೂಗಿಗೆ ಸುವಾಸಿಕ ಸುರಗಿಯ ಕಂಪು ಆಹಾರವಾಗಿರುವದ ರಿಂದ ಜಂಗಮನ ಕಾಯ ಸೇವಂತಿಗೆಯನ್ನೇ ಮೂಸಿಸುವೆ. ಆದರೆ ನನ್ನ ನಾಲಿಗೆಯ ಮಿದು ಮಧುರತೆಯ ಮಾತುಗಳಿಂದ ಜಂಗಮನಿಗೆ ಊಟ ಮಾಡಿಸುವೆ' ನನ್ನ ದೇಹದ ಚರ್ಮವನ್ನೇ ಸುಲಿದು ಜಂಗಮನೆಗೆ ಹೊದಿ ಯಲು ಕೊಡುವೆ. ಈ ಪ್ರಕಾರ ಜಂಗಮ ಕಾಯಕ ಸಲ್ಲಿಸಿ ಭಕ್ತ ಭೃತ್ಯಾ ಚಾರದ ಅನುವಂಶೀ ಪದ್ಧತಿಯನ್ನು ಕಾಯ್ದಿರಿಸಿಕೊಳ್ಳುವೆ. ಕೂಡಲ ಸಂಗಯ್ಯಾ ನಿನ್ನ ಶರಣರ ಪೂಜೆಗಾಗಿ.

## ಭಕ್ತನ ಮಹೇಶ ಸ್ಥಲ

೪೩೦ ಎಂಬತ್ತುನಾಲ್ಕು ಲಕ್ಷ ಮುಖದೊಳಗೊಂದೇ ಮುಖವಾಗಿ
ಕಾಡಿ ನೋಡೆನ್ನನು, ಬೇಡಿ ನೋಡೆನ್ನನು:
ಬೇಡದಿದ್ದರೆ, ಅಯ್ಯಾ, ನಿಮಗೆ ಪ್ರಮಥರಾಣೆ!
ನೀನಾವ ಮುಖದಲಿ ಬಂದು ಬೇಡಿದಡೀವೆ,
ಕೂಡಲ ಸಂಗಮದೇವಾ.

ಎಂಬತ್ತು ನಾಲ್ಕುಲಕ್ಷ ಜೀವರಾಶಿಗಳಲ್ಲಿ ವಿಶ್ವತೋಮುಖವಾಗಿದ್ದ ನೀನು, ದೇವಾ ಒಂದೇ ರೂಪದಲ್ಲಿ ಬಂದು ಕಾಡಿ-ಬೇಡಿ-ಪರಕಿಸು. ಹಾಗೆ ಕಾಡಿ ಬೇಡಿ ನನ್ನ ವರೆ ಹಚ್ಚದಿದ್ದರೆ ನಿನ್ನ ಪ್ರಮಥರ ಆಣೆ. ಹಾಗಿಲ್ಲದಲ್ಲಿ ನೀನು ಯಾವದೇ ರೂಪದಲ್ಲಿ ಬಂದು ಬೇಡಿದರೂ ಕೊಡುವೆ—ಕೂಡಲ ಸಂಗಮದೇವಾ.

**೪೩೧ ಕಂದಿದೆನಯ್ಯಾ ಎನ್ನ ನೋಡುವರಿಲ್ಲದೆ,**
**ಕುಂದಿದೆನಯ್ಯಾ ಎನ್ನ ನುಡಿಸುವರಿಲ್ಲದೆ;**
**ಬಡವಾದೆನಯ್ಯಾ ಎನ್ನ ತನು, ಮನ, ಧನವ ಬೇಡುವರಿಲ್ಲದೆ !**
**ಕಾಡುವ ಬೇಡುವ ಶರಣರ ತಂದು**
**ಕಾಡಿಸು, ಬೇಡಿಸಯ್ಯಾ, ಕೂಡಲ ಸಂಗಮದೇವ.**

ನನ್ನನ್ನು ಕರುಣೆಯಿಂದ ನೋಡುವವರಿಲ್ಲದೆ, ಮಮತೆಯಿಂದ ಮಾತನಾಡಿಸುವವರಿಲ್ಲದೆ ನಾನು ಬಹಳ ದುಃಖಿಯಾಗಿರುವೆ. ನನ್ನ ಈ ನಶ್ವರ ದೇಹ ಮನ-ಧನಗಳನ್ನು ಬೇಡುವವರಿಲ್ಲದ್ದಕ್ಕಾಗಿ ನಾನು ಕೊರಗಿ ಮರಗಿ ಹಣ್ಣಾಗಿರುವೆ. ಕೂಡಲ ಸಂಗಮ ದೇವಾ ಮನದಣೀ ಕಾಡಿಸಿ ಕೇಸರಿಡಿಸುವ ಬೇಡಿ ಬೇಸರ ಪಡಿಸುವ ಶರಣರನ್ನು ಕಳಿಸು.

**೪೩೨ ವೇಷ ಅವಿಚಾರದಲ್ಲಿ ನಡೆಯಿತ್ತೆಂದು**
**ಆಸುರದಲ್ಲಿ ಬಗಳುವ ಕುನ್ನಿ, ನೀ ಕೇಳಾ:**
**ಅರಿಯದೆ ದಾಸನ ವಸ್ತ್ರವ? ಉಣ್ಣನೆ ಚೆನ್ನಯ್ಯನ ಸಂಗಾತ?**
**ಹರವಧುವ ಕೊಳ್ಳನೆ ಸಿಂಧು ಬಲ್ಲಾಳನ ?**
**ಬೇಡನೆ ಸಿರಿಯಾಳನ ಮಗನ ?**
**ನಡೆವುದು ನುಡಿವುದು ಅವಿಚಾರವೆಂದು,**
**ಭಾವ ವಿಭಾವವೆಂದು ಕಂಡೆನಾದರೆ**
**ತಪ್ಪೆನ್ನದು, ಮೂಗ ಕೋಯಿ !**
**ಕೂಡಲ ಸಂಗಮದೇವಾ.**

ಸಾಧು ಶರಣರ ವೇಷಹಾಕಿಕೊಂಡು ಕೆಟ್ಟನೀತಿಯಿಂದ ವರ್ತಿಸಿದರೂ ಮುಚ್ಚುತ್ತದೆಂದು ಒಗೆದು ಬೊಗಳುವ ಕುನ್ನಿಯ ಸೊಲ್ಲು ಕೇಳು ದೇವಾ. ಭಕ್ತನ ಅಂತರಂಗ-ಬಹಿರಂಗಗಳನ್ನು ಚೆನ್ನಾಗಿ ಬಲ್ಲ ಚನ್ನಮಲ್ಲಿಕಾರ್ಜುನನು-ಮಾದಾರ ಚೆನ್ನಯ್ಯ ನೊಡನೆ ಸಹ ಭೋಜ ಮಾಡುತ್ತಾನೆ. ದಾರಿತಪ್ಪಿ ಚಲಿಸುವವರ-ಆಚಾರಹೀನರ ಮೂಗು ಕೊಯ್ಯುವನು ಕೂಡಲ ಸಂಗಮದೇವನು.

೪೩೩ ನೀನಿಕ್ಕಿದ ಬೀಯದಲ್ಲಿ ವಂಚನೆಯುಳ್ಳರೆ
ಸಂಗಾ, ನಿಮ್ಮ ತೊತ್ತುತನಕ್ಕೆ ದೂರವಯ್ಯಾ !
ಕದ್ದು ತಿಂದರೆ ಕೈ ಹಿಡಿದೊಮ್ಮೆ ಬಡಿದು
ತುಡುಗಣಿತನವ ಬಿಡಿಸಯ್ಯಾ !
ಜಂಗಮ ಮನೆಗೆ ಬಂದಲ್ಲಿ ಓಸರಿಸಿದರೆ
ಹಿಡಿದ ಮೂಗ ಕೊಯಿಯಯ್ಯಾ! ಕೂಡಲಸಂಗಮದೇವಾ.

ಕೂಡಲ ಸಂಗಮದೇವಾ ನೀನು ಕೊಟ್ಟ ಅನ್ನದಲ್ಲಿ ಜಂಗಮನಿಗೆ ನೀಡುವದಕ್ಕೆ ಕಡಿಮೆ ಮಾಡಿದ್ದಾರೆ ನಿನ್ನಿಂದ ದೂರಸರಿಯ ಬೇಕಾಗುತ್ತದೆ. ನಿನ್ನ ಪಾವನ ಚರಣ ಸೇವೆ ದೊರೆಯದಾಗುತ್ತದೆ.ಅದರಲ್ಲಿ ನಾನು ಕದ್ದು ಮೆದ್ದರೆ ಹಿಡಿದು ಹೆಡಮುರಗಿ ಕಟ್ಟಿ ಬಡೆದು ನನ್ನ ಆ ತುಡುಗತನ ಸ್ವಭಾವ ಬಿಡಿಸು. ಜಂಗಮದೇವನು ಮನೆಗೆ ಬಂದಾಗ ಹಿಂದೆ ಸರಿದು ನೀಡಲು ಅನುಮಾನಿಸಿದರೆ ತಕ್ಕ ಶಿಕ್ಷೆ ವಿಧಿಸು.

೪೩೪ ದೇವ ನಿಂತಹನೆಂದು ತೋರಿ ಕೊಡುವೆ ಗಣಂಗಳಿಗೆ:
ಬಲ್ಲಾಳನ ವಧುವ ಬೇಡಿದಾತ ನೀ ದೇವ !
ದೇವ ನಿಂತಹನೆಂದು ತೋರಿ ಕೊಡುವೆನು ಗಣಂಗಳಿಗೆ:
ದಾಸನ ವಸ್ತ್ರವ ಬೇಡಿದಾತ ನೀ ದೇವ !
ದೇವ ನಿಂತಹನೆಂದು ತೋರಿಕೊಡುವೆನು ಗಣಂಗಳಿಗೆ:
ಸಿರಿಯಾಳ ಮಗನ ಬೇಡಿದಾತ ನೀ ದೇವ !

**ಕೂಡಲ ಸಂಗಮ ದೇವ ಜಂಗಮ ಮುಖಲಿಂಗವಾಗಿ,**
**ಕಾಡಿ ನೋಡುವ, ಬೇಡಿ ನೋಡುವ !**

ಅರಿಯದ ಗಣಗಳಿಗೆ ದೇವರಾರೆಂಬುದನ್ನು ಗುರುತುಮಾಡಿಕೊಡುವೆ ಬಲ್ಲಾಳನ ಹೆಂಡತಿಯನ್ನು, ಸಿರಿಯಾಳನ ಮಗನನ್ನು, ದಾಸೀಮಯ್ಯನ ವಸ್ತ್ರವನ್ನು ರೂಪಾಂತರದಲ್ಲಿ ಬಂದು ಕೇಳಿದವನೇ ದೇವರು. ಅಲ್ಲದೆ ಜಂಗಮ ಮುಖ ಲಿಂಗನಾಗಿ ಕಾಡಿ–ಬೇಡಿ ನೋಡುವ ಕೂಡಲ ಸಂಗಯ್ಯನೇ ದೇವರು.

**೪೩೫ ಹೊನ್ನಿಗೊಳಗೊಂದರೆಯು, ಸೀರೆಯೊಳಗೊಂದೆಳೆಯು**
**ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ,**
**ನಿಮ್ಮಾಣೆ ! ನಿಮ್ಮ ಪುರಾತರಾಣೆ**
**ನಿಮ್ಮ ಶರಣರಿಗಲ್ಲದೆ ಮತ್ತೊಂದನರಿಯೆ,**
**ಕೂಡಲ ಸಂಗಮದೇವಾ.**

ಅನ್ನ–ವಸ್ತ್ರ–ಧನಕನಕಾದಿಗಳಲ್ಲಿ ಇಂದಿಗೆ ನಾಳಿಗೆ ಬೇಕೆಂದು ಬಚ್ಚಿಟ್ಟರೆ ನಿನ್ನ ಆಣೆ–ನಿನ್ನ ಪ್ರಮಥರಾಣೆ ದೇವರ ದೇವ. ಕೂಡಲ ಸಂಗಮ ದೇವಾ ಶರಣರ ಸೇಗೆಯೊಂದು ಬಿಟ್ಟು ಬೇರೆ ಏನೊಂದು ನನಗೆ ಗೊತ್ತಿಲ್ಲ.

**೪೩೬ ಅಲುತ್ತಲು ಹರೆಯ ಹೊಯಿಸಿ ಅಂಕವ ಮಾಡಿದೆನೆಲ್ಲರ ಕಂಡು !**
**ಆನು ಬೇಡೆಂದರೂ ಮಾಣಿ, ಕಲಿತನವ ಮಾಡಿದೆನೆಲ್ಲರ ಕಂಡು !**
**ಅಲ್ಲಿ ಹೋಯಿತ್ತು ಗಳೆಯೆಂದರೆ**
**ಆಸೆ ಮಾಡೆನು, ಕೂಡಲ ಸಂಗಮದೇವಾ.**

ಕೇಕೆ ಹಾಕುತ್ತ ನಗಾರೆ ಬಾರಿಸಿ ವೀರತನದ ವೈರ ಮಾಡಿದೆ. ನನ್ನ ಅಂತರಂಗ ಬೇಡೆಂದರೂ ನನ್ನ ಮನೋಗುದುರೆ ಅವೇಗದಿಂದ ಹೋರಾ

ಡಿದೆ. ಬಾಣ ಬಂದು ಎದೆಗೆ ನಟ್ಟರೂ ಚಿಂತೆಮಾಡುವದಿಲ್ಲ. ಮರಣಕ್ಕೆ ಅಂಜುವದಿಲ್ಲ ಕೂಡಲ ಸಂಗಮದೇವಾ.

**೪೩೭ ಕಾಗೆಯೊಂದಗುಳ ಕಂಡರೆ ಕರೆಯದೆ ತನ್ನ ಬಳಗವನು ?**
**ಕೋಳಿಯೊಂದು ಕುಟುಕ ಕಂಡರೆ ಕೂಗಿ ಕರೆಯದೆ ತನ್ನ ಕುಲವೆಲ್ಲ ?**
**ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದರೆ ಕಾಗೆ ಕೋಳಿಯಿಂದ ಕರಕಷ್ಟ !**
**ಕೂಡಲ ಸಂಗಮ ದೇವಾ**

ಕಾಗೆ–ಕೋಳಿಗಳು ಒಂದು ಕಾಳನ್ನು–ಒಂದು ಹುಳು ಕಂಡರೆ ತಮ್ಮ ತಮ್ಮ ಬಳಗಗಳನ್ನೆಲ್ಲ ಕೂಗಿ ಕರೆಯುವಂತೆ, ನಾನು ಶಿವಭಕ್ತನಾಗಿದ್ದು ಭಕ್ತಿಯ ಪರವಾಗಿ ಬೆಂಬಲವಿತ್ತು ಅನುಮೋದಿಸದಿದ್ದರೆ–ನನ್ನ ಜೀವನ ಕಾಗೆ–ಕೋಳಿಗಳಿಗಿಂತಲೂ ಕಡೆ–ಕೂಡಲ ಸಂಗಮದೇವಾ.

**೪೩೮ ಆವ ನೇ(ಮವಾ)ದರೇನು ? ಹೇಮವಿಲ್ಲದಂಗೈಸಬಹುದೆ ?**
**ಕೊಡಲಿಲ್ಲೆಂಬುದರಿಂದ ಸಾಯಲು ಬಹುದು: ಸೈರಿಸ ಬಾರದು ?**
**ಬೇಡುವವರ ನೋಡಿ ನೋಡಿ, ಈಯಲಿಲ್ಲದವನ ಜೀವನವ ದೇತಕೋ,**
**ಕೂಡಲ ಸಂಗಮ ದೇವಾ ?**

ಯಾವ ನಿಯಮ ವ್ರತಗಳಾದರೇನಂತೆ– ದುಡ್ಡಿಲ್ಲದೆ ಮಾಡಬಹುದೆ? ಹಿತವುಳ್ಳವರು ದುಡ್ಡು ಕಾರ್ಯಪರಿಪೂರ್ಣತೆಗೆ ಕೊಡಲಿಲ್ಲವೆಂದರೆ ಹಸನ್ಮುಖದಿಂದ ಮರಣದೇವಿಯನ್ನು ಎದುರುಗೊಳ್ಳಬಹುದು. ಆದರೆ ಅವರಾಡುವ ದುಷ್ಟನುಡಿಗಳನ್ನು ಕೇಳಿ ಸಹಿಸಲಸಾಧ್ಯ. ಬೇಡಲು ಬಂದ ಭಕ್ತನ ಪರಿಸ್ಥಿತಿ ತಿಳಿದು ತಿಳಿದು ಕೊಡದಿದ್ದವನ ಜನ್ಮ ನಾಯಿಗೂ ಕಡೆ–ಕೂಡಲ ಸಂಗಮದೇವಾ.

**೪೩೯ ಹರಗಣ ಪಂಕ್ತಿಯು ನಡುವೆ ಕುಳ್ಳಿರ್ದು**
**ನಾನು ಒಡೆಯುತನದ ನಾಯು ತೇಜವ ಹೊತ್ತುಕೊಂಡು –**
**ಮಡದಿಯುನ್ನಗಲೊಳಗೆ ಸಕಲ ದೇವಾನ್ನವ**
**ಒಡೆಯರಿಂದಲೂ ಮಿಗಿಲಾಗಿಕ್ಕಲು**
**ತೆಗೆದಿರಿಸಿದೆನು !**
**ಈ ಪರಿಯು ಆಯು ಕಣ್ಣ ತೋರಲು ಕಲ್ಮಷವಾದುವು !**
**ಕರುಣಿ ಚೆನ್ನ ಬಸವಣ್ಣ(ನ) ಮರೆದುಕೊಂಡೆನಾದರೆ**
**ಒಡೆಯು ಕೂಡಲ ಸಂಗಯ್ಯ ಕೆಡಹಿ ನರಕದಲ್ಲಿಕ್ಕುವ !**

ಶಿವಶರಣರ ಸಾಲಿನಡುವೆ ಯಾಜಮಾನ್ಯತ್ವದ ಆಶೆಯ ಮುಖದಿಂದ ನಾನು ಊಟಕ್ಕೆ ಕುಳಿತಿರಲು ನನ್ನ ಹೆಂಡತಿ ಬಂದು ತಟ್ಟೆಯೊಳಗೆ ಜಂಗಮ-ಶರಣರಗಿಂತಲೂ ಹೆಚ್ಚಿಗೆ ಬಡಿಸಲು ಅದನ್ನು ಬದಿಗೆ ತೆಗೆದಿಟ್ಟು ಕುಳಿತೆನು. ಈ ರೀತಿಯ ಹೆಚ್ಚಿಗೆ ದೊರೆತ ಪಾಲು ವಿಷವಾಗಿ ಪರಿಣಮಿಸಿತು. ದಯಾಮಯನಾದ ಚೆನ್ನಬಸವಣ್ಣನನ್ನು ಮರೆತರೆ ಸ್ವಾಮಿ ಕೂಡಲ ಸಂಗಮನು ನರಕ ಕುಂಡದಲ್ಲಿ ಚಲ್ಲುತ್ತಾನೆ.

**೪೪೦ ಭಕ್ತಿ ಸುಭಾಷೆಯು ನುಡಿಯು ನುಡಿವೆ, ನುಡಿದಂತೆ ನಡೆವೆ,**
**ನಡೆಯೊಳಗೆ ನುಡಿಯು ಪೂರೈಸುವೆ—**
**ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ;**
**ಒಂದು ಜವೆ ಕೊರತೆಯೂದರೆ**
**ಎನ್ನನದ್ದಿ ನೀನೆದ್ದು ಹೋಗು,**
**ಕೂಡಲ ಸಂಗಮದೇವಾ.**

ಭಕ್ತಿಯ ಹಿತವಚನಗಳನ್ನು ಇನಿದನಿಯಲ್ಲಿ ಅಳಿಗಿಳಿಗಳಂತೆ ನುಡಿವೆ. ನುಡಿದ ನುಡಿಯುನನುಸರಿಸಿ ಆಚರಿಸುವೆ. ನಡತೆಯಿಂದಲೇ-ಆಚರಣೆಯಿಂದಲೇ ಮಾತಿನ-ವಚನದ ಮಹತ್ವ ಹಿರಿಮೆಗಳನ್ನು ತೋರಿಸುವೆ. ನನ್ನ ನಡೆನುಡಿಗಳನ್ನು ಸಮತೂಕದಲ್ಲಿಡುವ ತಕ್ಕಡಿ ನೀನೇ ಪ್ರಭುಲಿಂಗ. ಅರೆಗುಂಜಿ ಕಡಿಮೆ ಇಲ್ಲ ಹೆಚ್ಚು ಆದರೆ ನನ್ನನ್ನು ಪೂರ್ಣನೀರಿನಲ್ಲಿ ಮುಳುಗಿಸಿ ನೀನು ಮೇಲೇಳು ಕೂಡಲ ಸಂಗಮದೇವಾ.

೪೪೧ ಓಡುವಾತ ಲೆಂಕನಲ್ಲ, ಬೇಡುವಾತ ಭಕ್ತನಲ್ಲ:
ಓಡಲಾಗದು ಲೆಂಕನು, ಬೇಡಲಾಗದು ಭಕ್ತನು.
ಓಡೆನಯ್ಯಾ ಬೇಡೆನಯ್ಯಾ
ಕೂಡಲ ಸಂಗಮದೇವಾ.

ರಣರಂಗದಿಂದ ಕಾಲ್ದೆಗೆದು ಓಡಿಹೋಗುವವನು ವೀರನಲ್ಲ. ಮನೆ ಮನೆಗೆ ಬಂದು ಬೇಡುವವನು--ಭಕ್ತನಲ್ಲ. ಶೂರ–ಧೀರನೆಂಬುವನು ಓಡಿ ಹೋಗಬಾರದು. ಭಕ್ತನೆಂಬುವನು ಕೈಯೊಡ್ಡಿ ಬೇಡಬಾರದು. ಕೂಡಲ ಸಂಗಮದೇವಾ ನಾನು ನಿನ್ನ ಸೇವೆಯಿಂದ ಓಡಿಹೋಗುವದಿಲ್ಲ. ಪರರ ಬೇಡುವದಿಲ್ಲ.

೪೪೨ ಚಂದ್ರ ಶೈತ್ಯದಲು ಬೆಳೆದ ಕಾಯಕ್ಕೆ
ಬೆಳದಿಂಗಳ ಬಯಸುವ ಹಂಗೇಕಯ್ಯಾ ?
ಶರಣರ ಸಂಗದಲಿರ್ದು ಶಿವನ ಬೇಡುವ ಹಂಗೇಕಯ್ಯಾ ?
ಕೂಡಲ ಸಂಗನ ಶರಣರು ಬಂದು ತಮ್ಮವನೆಂದರೆ ಸಾಲದೆ
ಅಯ್ಯಾ.

ಚಂದ್ರನ ತಂಪಿನಲ್ಲಿಯೇ ಬೆಳೆದು ಬಿಣ್ಣಾಡಿದ ದೇಹವು ಪುನಃ ಬೆಳದಿಂಗಳ ಸವಿಗೆ ಹಾತೊರೆಯುವ ಹುಚ್ಚು ಆಶೆ ಏಕೆ? ಅನಗಾಲವೂ ಶರಣರ ಚರಣದಲ್ಲಿ ಧೂಳಾಗಿದ್ದು ಮತ್ತೆ ಶಿವ ಶಂಕರನ ಕಿಂಕರತನಕ್ಕೆ ಆಶೆ ಏಕೆ? ಸ್ವತಃ ಕೂಡಲ ಸಂಗಮನ ವಿನಯ ಶೀಲ ಶರಣರು ಬಂದು ನಾವು ನಿನ್ನವನೆಂದು ಮನಬಿಚ್ಚಿ ನುಡಿದರೆ ಸಾಕಾಗದೆ.

೪೪೩ ದಾಸನ ವಸ್ತ್ರವ ಬೇಡದ ಮುನ್ನ
ತವನಿಧಿಯ ನಿತ್ತರೆ ನಿಮ್ಮ ದೇವರೆಂದೆಂಬೆ !
ಸಿರಿಯಾಳನ ಮಗನ ಬೇಡದ ಮುನ್ನ
ಕಂಚಿಯ ಪುರವ ಕೈಲಾಸಕ್ಕೆಯಿದರೆ ನಿಮ್ಮ ದೇವರೆಂದೆಂಬೆ!
ಬಲ್ಲಾಳನ ವಧುವ ಬೇಡದ ಮುನ್ನ
ಸ್ವಯಂಲಿಂಗವಾದರೆ ನಿಮ್ಮ ದೇವರೆಂದೆಂಬೆ!

**ದೇಹಿ ನೀನು ವ್ಯಾಪಾರಿಗಳು ನಮ್ಮವರು !**
**ಬೇಡು, ಕೂಡಲ ಸಂಗಮದೇವಾ, ಎಮ್ಮವರ ಕೈಯುಲು.**

ದಾಸನಿಂದ ವಸನದಿಚ್ಛೆಮಾಡದ ಮುಂಚೆ ನಿನ್ನ ಕೃಪಾಸಿಧಿಯನ್ನು ಕೊಟ್ಟದ್ದರೆ ನಿನಗೆ ದೇವರೆಂದು ಅನ್ನುತ್ತಿದ್ದೆ. ಸಿರಿಯಾಳನಿಂದ ಅವನ ಚಿಂತಾಮಣಿಯಾದ ಓರ್ವನೇ ಓರ್ವನಾದ ಸುಪುತ್ರನನ್ನು ಕೈಲಾಸಕ್ಕೆ ಕರೆದೊಯ್ದಿದ್ದರೆ ನಿನಗೆ ದೇವರೆಂದು ಕರೆಯುತ್ತಿದ್ದೆ. ಬಲ್ಲಾಳನ ಸತಿಯನ್ನು ಭೋಗಕ್ಕೆಳೆಯದೆ-ನೀನು ಪ್ರಕಟನಾಗಿ ಲಿಂಗ ಮಹಿಮೆ ತೋರಿದ್ದರೆ ನೀನೆ ದೇವರೆಂದು ನಂಬುತ್ತಿದ್ದೆ. ಬೇಡುವ ಭಿಕ್ಷುಕ ನೀನಾದ್ದರಿಂದ ನಮ್ಮ ಭಕ್ತರೆಂಬ ಶೆಟ್ಟರಿಂದ ಬೇಕಾದದ್ದು ಬೇಡಿ ಸುಖಿಸುಲಿಂಗವೆ.

೪೪೪ **ಎಲ್ಲರೂ ವೀರರು, ಎಲ್ಲರೂ ಧೀರರು;**
**ಎಲ್ಲರೂ ಮಹಿಮರು, ಎಲ್ಲರೂ ಪ್ರಮಥರು:**
**ಕಾಳಗದ ಮುಖದಲ್ಲಿ ಕಾಣಬಾರದು,**
**ಓಡುವ ಮುಖದಲ್ಲಿ ಕಾಣಬಹುದು !**
**ನಮ್ಮ ಕೂಡಲ ಸಂಗನ ಶರಣರು ಧೀರರು,**
**ಉಳಿದವರೆಲ್ಲಾ ಅಧೀರರು !**

ಎಲ್ಲ ಜನರೂ ವೀರರೇ — ಎಲ್ಲವರೂ ಬಹದ್ದೂರರೇ. ಆದರೆ ಯುದ್ಧಕ್ಕೆ ಒಬ್ಬರೂ ಬರುವದಿಲ್ಲ. ಎಲ್ಲರೂ ಮಹಿಮಾಧೀಶರೆ, ಎಲ್ಲರೂ ಪ್ರಮಥ ಗುಣಿಗಳೇ. ಆದರೆ ಓಡಿಹೋಗಿ ಅಡಗಲು—ಜಂಗಮನಿಂದೆ ಮಾಡಲು ಸರ್ವರೂ ಸಶಕ್ತರು; ಕೂಡಲಸಂಗನ ಅಚ್ಚ-ಶರಣರೇ ಧೀರರು-ವೀರರು, ಮಹಿಮರು - ಪ್ರಮಥರೂ ಅಹುದು. ಮಿಕ್ಕವರೆಲ್ಲ ಕೈಲಾಗದ ಹೆಣಪಾಪಿಗಳು.

೪೪೫ **ಎಲ್ಲಿ ನೋಡಿದಡಲ್ಲಿ ಮನವೆಳಸಿದರೆ**
**ಆಣೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ !**
**ಪರವಧುವನು ಮಹಾದೇವಿಯೆಂಬೆ,**
**ಕೂಡಲ ಸಂಗಮದೇವಾ.**

ಕಣ್ಣು ಎಳೆದತ್ತ ದೃಷ್ಟಿ ಬೀರಿ ಮನಸ್ಸನ್ನು ಕಾಮಕೇಳಿಗೆಳೆದೆನಾದರೆ ನಿನ್ನ ಪಾದದಾಣೆ, ಪರರ ಹೆಣ್ಣು ಮಕ್ಕಳು — ಸ್ತ್ರೀಯರು ಮೂಲೋಕ ತಾಯಿ ಮಹಾದೇವಿಯರೆಂದು ಭಾವಿಸಿ ಬಾಗುವೆ.

**೪೪೬ ಹರಿವ ಹಾವಗಂಜೆ, ಉರಿಯ ನಾಲಿಗೆಗಂಜೆ,**
**ಸುರಗಿಯ ಮೊನೆಗಂಜೆ !**
**ಒಂದಕ್ಕಂಜುವೆ, ಒಂದಕ್ಕಳಕುವೆ;**
**ಪರಸ್ತ್ರೀ ಪರಧನ ವೆಂಬೀಜೂಬಿಂಗಂಜುವೆ!**
**ಮುನ್ನಂಜದ ರಾವಣನೇ ವಿಧಿಯಾದ!**
**ಅಂಜುವೆನಯ್ಯಾ, ಕೂಡಲ ಸಂಗಮದೇವಾ.**

ಹರಿದು ಮೈಮೇಲೇರಿ ಬರುವ ಕಾಳ ಸರ್ಪನಿಗೆ ಹೆದರುವದಿಲ್ಲ, ಮೈಗೆಲ್ಲ ಉರಿಹತ್ತಿ ದಹಿಸುವ ಜ್ವಾಲೆಗೆ ಅಳಕುವದಿಲ್ಲ; ಚೂಪಾಗಿರುವ ಕಠಾರಿಯ ಇರಿತಕ್ಕೆ ಬೆದರುವದಿಲ್ಲ. ಆದರೆ ಕೂಡಲ ಸಂಗಮದೇವ-ಪರ ಸ್ತ್ರೀ— ಬೇರೆಯವರ ದುಡ್ಡು ಎಂಬ ಬೆಂಕಿಗೆ ಅಂಜುವೆ-ಅಳಕುವೆ-ಮಹಾ ಏಕಪತ್ನೀ ವೀರನಾದ ರಾವಣನ ಬಾಳು ಬೇರು ಕಡಿದ ಮರದಂತೆ ಆಯಿತು ಪರಸತಿಯ ಆಶೆಯಿಂದ; ಆದ್ದರಿಂದ ನನ್ನಂತಹರ ಪಾಡೇನು ? ಅಂಜುವೆ.

**೪೪೭ ಒಂದಕ್ಕೊಂಬತ್ತು ನುಡಿದು, ಕಂಣ ಕೆಂಚನೆಮಾಡಿ,**
**ಗಂಡುಗೆದರಿ,**
**ಮುಡುಹಿಕ್ಕಿ, ಕೆಲೆವರ ಕಂಡ ಡಂಜುವೆ, ಓಸರಿಸುವೆ!**
**ಓಡಿದೆನೆಂಬ ಭಂಗವಾದಡಾಗಲಿ;**
**ನಮ್ಮ ಕೂಡಲ ಸಂಗನ ಶರಣರ ಅನುಭಾವವಿಲ್ಲದವರ**
**ಹೊಲ ಮೇರೆಯ ಹೊಂದೆ, ಹೊಲನ ಬಿಟ್ಟೋಡುವೆ!**

ಒಂದು ಮಾತಿಗೆ ಹಲವು ಸಲ್ಲದ ಮಾತನಾಡಿ ಕಂಣು ಕೆಂಪಗೆ ಮಾಡಿ ಮುಷ್ಟಿ ಕೈಯಿಂದ ಬಡಿಯಲು ಮುತ್ತಿಗೆ ಹಾಕುವ ದುಷ್ಟರನ್ನು ಕಂಡು ಹೆದರುವೆ; ಅವರ ನಡತೆಯನ್ನು ಹೀಯಾಳಿಸುವೆ. ನಾನು ಅಂಜು

ಬುರುಕನೆಂಬ ಹೇಡಿತನದ ಕಲಂಕ ಬಂದರೂ ಚಿಂತೆಯಿಲ್ಲ. ಶರಣರ ಸಹ ವಾಸದಲ್ಲಿ ನುರಿಯದ – ತರಬೇತಿಹೊಂದದ ಕೀಳು ಜನರ ನೆರೆಯುವನಾಗಿರದೆ ದೂರ ಹೋಗಿ ನಿಲ್ಲುವೆ. ಕೂಡಲ ಸಂಗಮದೇವಾ.

**೪೪೮ ಒಡೆಯರು ಬಂದರೆ ಗುಡಿ ತೋರಣವ ಕಟ್ಟಿ:**
**ನಂಟರು ಬಂದರೆ ಸಮಯವಿಲ್ಲೆನ್ನಿ!**
**ಅಂದೇಕೆ ಬಾರರು ನೀರಿಂಗೆ ನೇಣಿಂಗೆ ಹೊರಗಾದಂದು?**
**ಸಮಯಾಚಾರಕ್ಕೊಳಗಾದಂದು?**
**ಪರುಷ ಮುಟ್ಟಲು ಕಬ್ಬುಣ ಸುವರ್ಣವಾಯಿತ್ತು;**
**ಬಳಿಕ ಬಂಧುಗಳುಂಟೆ, ಕೂಡಲ ಸಂಗಮದೇವಾ?**

ನನ್ನ ಪ್ರಾಣದ ಮಾಲಿಕರು – ಶರಣರು – ಜಂಗಮರು ಬಂದರೆ ತಳಿರು ತೋರಣಗಳಿಂದ ಮನೆ ಬಾಗಿಲು - ಅಂಗಣ ಸಿಂಗರಿಸಿ ಸವಿನಯದಿಂದ ಬಿನ್ನಹ ಮಾಡಿಕೊಳ್ಳುವೆ. ಆದೆ ಬೀಗರು ಬಿಜ್ಜರು ಬಂದರೆ ಅವರೊಡನೆ ಮಾತನಾಡಲೂ ಸಹ ವೇಳೆಯಿಲ್ಲ–ತೆರೆವಿಲ್ಲವೆಂದು ಹೇಳಿ ಕಳುಹಿಸುವೆ. ಜಂಗಮ ಜಾತ್ರೆಯ ದಿನ–ಸಾವು ಸುಳಿಯದ ದಿನ ತೀರ್ಥ ಪ್ರಸಾದಗಳಿಗೇಕೆ ಬರಲಿಲ್ಲ ಈ ಬೀಗರು — ಕಬ್ಬಿಣಕ್ಕೆ ಪರುಷಮಣಿ ಮುಟ್ಟಲು ಅದು ಚಿನ್ನವಾಗಿ ಚೊಕ್ಕಟವಾಗಿರುವಂತೆ – ಶರಣರ ಪಾದಸೇವೆ ಬಿಟ್ಟು ಬೀಗರ ಬೀಳು ಮಾತುಗಳಿಗೆ ಕಿವಿಗೊಡಬೇಕೆ? – ಕೂಡಲಸಂಗಮದೇವಾ.

**೪೪೯ ಒಡೆಯರಾಡುವ ಮಾತ ಕಡೆಪರಿಯಂತರ ಕೇಳಿ,**
**ಇದಿರು ಹೋಗಿ ಕಿಂಕರನಾಗಿ ಬಿನ್ನಹವ ಮಾಡುವ**
**ಸದ್ಭಕ್ತರ ತೋರಯ್ಯಾ!**
**ಒಡೆಯರಾಡು ಮಾತ ಕಂಡ ಕರದಲ್ಲಿ ಕೆಡೆನುಟ್ಟಿ**
**ಬಾಯಿ ಘನವೆಂದು ಆಡುವವನ**
**ತೋರದಿರಯ್ಯಾ, ಅವನ ಸಂಗದಲ್ಲಿರಿಸದಿರಯ್ಯಾ,**
**ಅವನ ಸಹ ಪಂಕ್ತಿಯಲ್ಲಿ ಕುಳ್ಳಿರಿಸದಿರಯ್ಯಾ!**
**ಕೂಡಲ ಸಂಗಮದೇವಯ್ಯಾ ನಿಮ್ಮ ಬೇಡುವದೊಂದೇ ವರವು.**

ಜನ ಮನದ ಗುರುಗಳಾಗಿ ಹಿತೋಪದೇಶ ಮಾಡುವ ಗುರುವಿನ ಮಿತನುಡಿ ಕೊನೆಯುವರೆಗೂ ಆಲಿಸಿ— ಅವರ ಪಾದ ಕಮಲಗಳಿಗೆ ಉದ್ದಂಡ ನಮಸ್ಕಾರ ಹಾಕಿ ಉದ್ಧರಿಸು ಗುರುವೆಂದು ಬೇಡುವ ಸದ್ಭಕ್ತರ ಚಿತ್ರನನ್ನ ಕಣ್ಣಾಲೆಗಳಲ್ಲಿ ನಿಲ್ಲಲಿ; ಗುರುವಿನ ಮಾತುಗಳಿಗೆ ಅಪಹಾಸ್ಯ ಮಾಡಿ ನುಡಿದವನ ಮುಖ— ಸಹಭೋಜನ, ಸಂಗಗಳು ನನಗೆ ದೊರೆಯು ದಂತೆ ಮಾಡು ಎಂಬುದೇ ನಾನು ನಿನಗೆ ಬೇಡುವವರ ಕೂಡಲಸಂಗಮ ದೇವಾ.

**೪೫೦ ಬಡ ಹಾರುವನೇ ಸುಭಕ್ತನಾದರೆಯೂ ನೇಣಿನ ಹಂಗ ಬಿಡ !**
**ಮಾಲೆಗಾರನೇ ಸುಭಕ್ತನಾದರೆಯೂ ಬಾವಿಯ ಬೊಮ್ಮನ ಹಂಗ ಬಿಡ !**
**ಬಣಜಿಗನೇ ಸುಭಕ್ತನಾದರೆಯೂ ಒಟ್ಟಿಲ ಬೆನಕನ ಹಂಗ ಬಿಡ !**
**ಕಂಚುಗಾರನೇ ಸುಭಕ್ತನಾದರೆಯೂ ಕಾಳಿಕಾದೇವಿಯ ಹಂಗ ಬಿಡ !**
**ನಾನಾವ ಹಂಗಿನವನಲ್ಲ, ನಿಮ್ಮ ಶರಣರ ಹಂಗಿನವನಯ್ಯಾ ಕೂಡಲ ಸಂಗಮ ದೇವಾ.**

ಬಡ ಬ್ರಾಹ್ಮಣನು ನಿನ್ನ ಉತ್ತಮ ಭಕ್ತನಾದಾಗ್ಯೂ ಜನಿವಾರದ ಸಂಬಂಧ ತಪ್ಪಿಸಿಕೊಳ್ಳಲಾರ; ಮಾಲೆಗಾರನೇ ನಿನ್ನ ಅತ್ಯಂತ ಪ್ರಿಯಭಕ್ತ ನಾದರೂ ಬಾವಿಯ ಭರಮನ ಪೂಜೆ ಬಿಡುವದಿಲ್ಲ. ಬಣಜಿಗನು ನಿನ್ನ ಶ್ರೇಷ್ಠದಾಸನಾದರೂ- ಕಾಳಿನ ರಾಶಿಯ-ಕಾಟಾಕಲ್ಲುಗಳ ಪೂಜೆನಿಲ್ಲಿಸು ವದಿಲ್ಲ. ಕಂಚು ಹಿತ್ತಾಳಿಗಳ ಪಾತ್ರೆಗಳನ್ನು ಮಾರುವ ಕಂಚುಗಾರ ನಿನ್ನ ಸದ್ಭಕ್ತನಾದರೂ ಕಾಳಿಕಾದೇವಿಯ ಆರಾಧನೆ ಬಿಡುವದಿಲ್ಲ. ಕೂಡಲ ಸಂಗಮದೇವಾ ನಾನು ಇಂಥ ಎರಡು ಮುಖದ ವಿಕಟ ಭಕ್ತರಂತೆ ಯಾವ ದೇವನ ಆತಂಕದಲ್ಲಿಯೂ ಇಲ್ಲ; ಕೇವಲ ನಿನ್ನ ಶರಣರಾತಂಕದಲ್ಲಿ ನಂಜಿ ನಲ್ಲಿರುವೆ.

**೪೫೧ ಶ್ರೀ ವಿಭೂತಿ ರುದ್ರಾಕ್ಷಿಯಿದ್ದವರ ಲಿಂಗವೆಂಬೆ:**
**ಇಲ್ಲದವರ ಭವಿಯೆಂಬೆ.**
**ಕೂಡಲ ಸಂಗಮದೇವಾ ಸದ್ಭಕ್ತರ ನೀನೆಂಬೆ.**

ಹಣೆಯ ಮೇಲೆ ಸುಂದರವಾಗಿ ಪವಿತ್ರ ಭಸ್ಮಸುಣ್ಣದ ಗೋಡೆಯ ಶ್ರೀಕಾರದಂತೆ ಒಪ್ಪುತ್ತಿದ್ದು ಕೊರಳಲ್ಲಿ ರುದ್ರಾಕ್ಷಿಮಾಲೆ ಶೋಭಿಸುತ್ತಿದ್ದ ಮಾನವ ಶ್ರೇಷ್ಟನೇ ಲಿಂಗವೆಂದು ಕರೆವೆ. ಇವು ಇಲ್ಲದವರು ಲಿಂಗದ್ರೋಹಿಗಳು. ಕೂಡಲ ಸಂಗಮದೇವಾ ಭಕ್ತಿಪೂರ್ಣರೆನಿನ್ನವತಾರಿಗಳು.

**೪೫೨ ದೇವ ಸಹಿತ ಭಕ್ತ ಮನೆಗೆ ಬಂದರೆ**
**ಕಾಯಕವಾವುದೆಂದು ಬೆಸಗೊಂಡರೆ,**
**ನಿಮ್ಮಾಣೆ ! ನಿಮ್ಮ ಪುರಾತರಾಣೆ ! ತಲೆದಂಡ! ತಲೆದಂಡ !!**
**ಕೂಡಲ ಸಂಗಮದೇವಾ, ಭಕ್ತರ ಕುಲವನರಸಿದರೆ**
**ನಿಮ್ಮ ರಾಣಿವಾಸದಾಣೆ !**

ಗೌರೀಹರ ಕೈಲಾಸಪತಿ ಭಗವಾನ್ ಶಂಕರನೊಂದಿಗೆ ಭಕ್ತನು ಮನೆಗೆ ಬಂದಾಗ ಏನು ಕಾರ್ಯವಾಗಬೇಕು ಹೇಳಿರೆಂದು ಅಪ್ಪಣೆ ಕೇಳಿದರೆ ನಿಮ್ಮ ಪಾದದಾಣೆಗೂ ನನ್ನ ತಲೆ ದಂಡವೆಂದು ನಿನ್ನ ಪಾದಗಳಿಗೆ ಸರ್ಪಿಸುವೆ—ಲಿಂಗುವೆ; ಭಕ್ತರಲ್ಲಿ ಕುಲಾಚಾರ ಭೇದ ಮಾಡಿದರೆ,ಕೂಡಲ ಸಂಗಮದೇವ ನಿನ್ನ ರಾಣಿಯರ--ಆಣೆ.

**೪೫೩ ಲಿಂಗಾಂಗಿಗಳಿಲ್ಲದವರ, ಶರಣಸಂಗವಿಲ್ಲದವರ**
**ಕಂಡರೆ ನಾಚುವೆ.**
**ಅವರ ನುಡಿ ಎನಗೆ ಸಮನಿಸದಯ್ಯಾ**
**ಕೂಡಲ ಸಂಗಮ ದೇವಾ, ಅಲ್ಲಿ ನೀವಿಲ್ಲದ ಕಾರಣ.**

ಲಿಂಗಧಾರಣೆ ಮಾಡದವರ ಹಾಗೂ ಶರಣರ ಸಹವಾಸ- ಸಂಪರ್ಕವಿಲ್ಲದವರ ಮಾತುಗಳು ನನಗೆ ಹಿಡಿಸುವದಿಲ್ಲ; ಅವರನ್ನು ಕಂಡು ನನಗೆ ಲಜ್ಜೆಯಾಗುತ್ತದೆ. ಏಕೆಂದರೆ, ಕೂಡಲ ಸಂಗಮದೇವಾ—ಅವರ ಹೃದಯದಲ್ಲಿ ನಿನ್ನರೂಪ—ಬೆಳಕು ಇಲ್ಲದ ಕಾರಣ.

**೪೫೪ ಶ್ರೀ ವಿಭೂತಿಯ ಹೂಸದವರ, ಶ್ರೀ ರುದ್ರಾಕ್ಷಿಯ ಧರಿಸದವರ,**
**ನಿತ್ಯ ಲಿಂಗಾರ್ಚನೆಯ ಮಾಡದವರ,**
**ಜಂಗಮವೇ ಲಿಂಗವೆಂದರಿಯದವರ**
**ಸದ್ಭಕ್ತರ ಸಂಗದಲ್ಲಿರದವರ ಎನಗೊಮ್ಮೆ ತೋರದಿರು,**
**ಕೂಡಲ ಸಂಗಮದೇವಾ, ಸೆರಗೊಡ್ಡಿ ಬೇಡುವೆನು.**

ದುರಿತಗಳನ್ನು ನಾಶಮಾಡುವ ಪವಿತ್ರವಿಭೂತಿಯನ್ನು ಹಣೆಗೆ ಹಚ್ಚಿ ಕೊಳ್ಳದ, ಪಾಪಗಳನ್ನು ಸುಟ್ಟು ಹಾಕುವ ರುದ್ರಾಕ್ಷಿಯ ಮಾಲೆಯನ್ನು ಹಾಕಿಕೊಳ್ಳದ, ನಿತ್ಯದಲ್ಲಿಯೂ ನಿರಂಜನ ಲಿಂಗವ ಪೂಜೆ ಮಾಡದೆ ಇರುವವರನ್ನು, ಜಂಗಮನೇ ಪರಮಾತ್ಮಲಿಂಗವೆಂದು ತಿಳಿಯದವರನ್ನು, ಒಂದು ಸಲವೂ ನನ್ನ ಕಣ್ಣ ಮುಂದೆ ಹಾಯದಂತೆ—ಬೀಳದಂತೆ ಮಾಡು ಎಂದು ಅಂಗಲಾಚಿ ಬೇಡಿಕೊಳ್ಳುವೆ ಕೂಡಲಸಂಗಮದೇವಾ.

**೪೫೫ ಕೂರ್ಪವರಿಗೆ ಹೇಳುವೆನು ಕುಳಸ್ಥಳಂಗಳೆಲ್ಲವನು;**
**ಕೂರದವರಿಗೆ ಹೇಳಿ ನಾನೇವೆನು ಶಿವನೆ ?**
**ಕರಲ ಭೂಮಿಯಲ್ಲಿ ಕರೆದ ವೃಷ್ಟಿಯ ತೆರನಂತೆ**
**ಅವರೆತ್ತ ಬಲ್ಲರು ಎನ್ನ ಸುಖ ದುಃಖವ ?**
**ಅಂಗತವಿಲ್ಲದ ಸಂಗವು ಅಳಲಿಲ್ಲದ ಹುಯ್ಯಲಂತೆ !**
**ಇದು ಕಾರಣ, ಕೂಡಲ ಸಂಗಮದೇವಾ,**
**ನಿಮ್ಮ ಶರಣರಿಗಲ್ಲದೆ ಬಾಯ್ದೆರೆಯೆನು.**

ಅಕ್ಕರತೆಯಿಂದ ಕೇಳುವವರ ಮುಂದೆ ಎಲ್ಲ ಪವಿತ್ರ ಯಾತ್ರಸ್ಥಳಗಳನ್ನು ಹೇಳುವೆ. ಕಂಡರಾಗದವರ ಮುಂದೆ ಹೇಳಿದರೆ ನನಗೇನು ಲಾಭ; ಹರನೆ ಅದೆಲ್ಲವೂ ಬೆಳೆಬಾರದ ಭೂಮಿಯಲ್ಲಿ ಎಷ್ಟು ಮಳೆಗರೆದರೂ ಅಷ್ಟೆ; ನನ್ನ ಸುಖ ದುಃಖಗಳು ಗೊತ್ತಿಲ್ಲದವರಿಗೆ ಏನು ಹೇಳಿದರೂ ಅಷ್ಟೆ; ಅವರ ಬಾಳು ದಯಾಮಯಾವಿಲ್ಲದ ಕಟುಕಬಾಳು; ಆದ್ದರಿಂದ ಕೂಡಲ ಸಂಗಮದೇವಾ ನಿನ್ನ ಸಕಲ ಗುಣ ಸಂಪನ್ನರಾದ ಶರಣರಿಗೆ ಎಲ್ಲವನ್ನೂ ಹೇಳಿಕೊಳ್ಳುವೆ.

೪೫೬ ಒಡೆದೋಡು ಎನ್ನ ಮನೆಯುಲಿಲ್ಲದಂತೆ ಮಾಡಯ್ಯಾ;
ಕೊಡುದೇವ, ಎನ್ನ ಕೈಯುಲೊಂದು ಕರಿಕೆಯು;
'ಮೃಡದೇವಾ ಶರಣೆ'ಂದು ಭಿಕ್ಷಕ್ಕೆ ಹೋದರೆ, ಅಲ್ಲಿ,
'ನಡೆ ದೇವಾ' ಎಂದೆನಿಸು, ಕೂಡಲ ಸಂಗಮದೇವಾ!

ಈ ಆಲಸ್ಯಮಯವಾದ ನನ್ನ ದೇಹಾಲಯದಿಂದ ಹೊರಗೋಡಿ-ನನ್ನನ್ನು ಅನಾಥನನ್ನಾಗಿ ಮಾಡಿ ನನ್ನ ಕೈಯಲ್ಲಿ ಹುಲ್ಲು ಕಡ್ಡಿಯನಿತ್ತು 'ಶಿವಾ' ಭಿಕ್ಷೆಎಂದು ಭಿಕ್ಷೆ ಬೇಡಲು ಕಳುಹಿಸು. ಅಲ್ಲಿಯೂ ಮುಂದು ನಡೆ ಮನೆಯಲೇನೂ ಇಲ್ಲವೆಂದು ಹೇಳಿಸಿ ಹೊರಗೆನೂಕು ಕೂಡಲ ಸಂಗಮದೇವಾ.

೪೫೭ ಭವ ವಿರಹಿತ ಭಕ್ತನಾದ ಬಳಿಕ
ಭಕ್ತಿ ಭಾಜನದಲ್ಲಿ ಮಾಡಿ ಭವಿಗಿಕ್ಕಲಾಗದಯ್ಯಾ:
ಯುಕ್ತಿ ಶೂನ್ಯರಿಗೆ ಮುಂದೆ ಪ್ರಸಾದ ದೂರ !
ಮುಕ್ತಿಯಿಲ್ಲ ! ಮುಂದೆ ನಾಯು ಬಸುರಲ್ಲಿ
ಬಪ್ಪುದು ತಪ್ಪದು ಪೃಥ್ವಿಯೊಳಗೆ !
ಕೂಡಲ ಸಂಗಮದೇವಾ, ನಿಮ್ಮ ಶರಣರಿಗಲ್ಲದೆ,
ಅನಾಚಾರಕ್ಕೆಲ್ಲಿಯದೋ ?

ಸಂಸಾರ ಜಂಜಾಟದಿಂಡ ಹೊರ ನುಗ್ಗಿ ಭಕ್ತನಾದ ಬಳಿಕ ಭಕ್ತಿಯ ಅಡಿಗೆ ಮಾಡಿ ಗುರುಲಿಂಗ ದ್ರೋಹಿಗೆ ಊಟ ಮಾಡಿಸಬಾರದು. ಅಂತಹ ತಿಳಿಗೇಡಿಗಳಿಗೆ ಮುಕ್ತಿಯೆಂಬುದಿಲ್ಲ- ಅವರಿಗೆ ಪುನಃ ಮರಳಿ ಭವದಲ್ಲಿ ಹುಟ್ಟಿ ಬರುವದು ಕಟ್ಟಿಟ್ಟಮಾತು. ಕೂಡಲ ಸಂಗಮದೇವಾ ನಿನ್ನ ಶರಣರು ಮುಕ್ತರಲ್ಲದೆ ಅನಾಚಾರಿ ಅಲ್ಲ.

## ಭಕ್ತನ ಪ್ರಸಾದಿ ಸ್ಥಳ

೪೫೮ ಅಯ್ಯಾ ನಿಮ್ಮ ಶರಣರ ದಾಸೋಹಕ್ಕೆ
ಎನ್ನ ತನು ಮನ ಧನವಲಸದಂತೆ ಮಾಡಯ್ಯಾ.

**ತನುದಾಸೋಹಕ್ಕುಬ್ಬುವಂತೆ ಮಾಡು,**
**ಮನದಾಸೋಹಕ್ಕೆ ಲೀಯಹುವಂತೆ ಮಾಡು,**
**ಧನ ದಾಸೋಹಕ್ಕೆ ಸವೆದು, ನಿಮ್ಮ ಶರಣರ ಪ್ರಸಾದದಲ್ಲಿ**
**ನಿರಂತರ ಆಡಿ ಹಾಡಿ, ನೋಡಿ, ಕೂಡಿ, ಭಾವಿಸಿ ಸುಖಿಸಿ,**
**ಪರಿಣಾಮಿಸುವಂತೆ ಮಾಡು, ಕೂಡಲ ಸಂಗಮದೇವಾ.**

ಮೂಜಗ ತಂದೆ ಕೂಡಲ ಸಂಗಮದೇವಾ ನನ್ನ ತನು ಮನ ಧನಗಳು ನಿನ್ನ ಶರಣರ ಸೇವೆಯಲ್ಲಿ ವ್ಯಯವಾಗಲಿ. ದೇಹ ಸೇವೆಯಲ್ಲಿ ಉಬ್ಬಿ ಗದ್ದಿಗೆಯಾಗಲಿ ಜಂಗಮರಿಗೆ; ಮನಸ್ಸು ಶರಣರ ಪಾದ ಪಂಕಜಗಳಿಗೆ ಹಚ್ಚುವ ಗಂಧವಾಗಲಿ; ಸದಾವ ಕಾಲ ಶರಣರ ಗುಣಗಾನವ ಮಾಡಿ-ಅವರಲ್ಲಿ ಏಕನಿಷ್ಠೆ ಬೆಳೆದು ಭಾವನೆ ಬುಗ್ಗಿಯಾಗಿ ಭಕ್ತಿರಸ ಪುಡಿದು ಪರಿಣಾಮಕಾರಿಯಾಗುವ ಹಾಗೆ ದಯದೋರು.

**೪೫೯ ಹಾರುವ ಹಾರುವನಪ್ಪೆ ಸದ್ಭಕ್ತರೆನ್ನುವರೆಂದು:**
**ಹಾರುವ ಹಾರುವನಪ್ಪೆ ಶರಣರು ಎನ್ನುವರೆನ್ನುವರೆಂದು;**
**ಕೂಡಲ ಸಂಗನ ಶರಣರ ತನ್ನೊಕ್ಕುದನಿಕ್ಕಿ ಸಲಹುವರಾಗಿ.**

ಮಡಿ ಹುಡಿ ಎಂದು ಜಿಗಿಯುವ ಬ್ರಾಹ್ಮಣನು ನಾನೆಂದು ಸದ್ಭಕ್ತರೆಂದರೆ ಶರಣರು ಹೇಳಿದರೆ ನಾಗೆಂದಗೂ ಬ್ರಾಹ್ಮಣನಾಗುವದಿಲ್ಲ. ಏಕೆಂದರೆ ಕೂಡಲ ಸಂಗಮ ದೇವನ ಶರಣರು ಉಂಡು ಉಳಿದದ್ದನ್ನು ಪ್ರಸಾದವೆಂದು ಸ್ವೀಕರಿಸಿ ಬದುಕುವವನಾನು-ಅವರ ಕರುಣೆಯ ಕಂದ.

**೪೬೦ ಒಕ್ಕುದ ಮಿಕ್ಕಿದನುಂಡು ಕಿವಿವಿಡಿದಾಡುವೆ:**
**ಶರಣರ ಮನೆಯ ಲೆಂಗಿಯ ಡಿಂಗರಿಗ ನಾನು;**
**ಕೂಡಲ ಸಂಗನ ಶರಣರ ಮನೆಯ**
**ಭಕ್ತಿಯ ಮರುಳ ನಾನು.**

ಶರಣರ ಮನೆಯಾಳಾದ ನಾನು ಅವರುಂಡುಳಿಸಿ ಹಾಕಿದ್ದನುಂಡು ಜೀವಿಸಿ ಕಿವಿ ಹಿಡಿದುಕೊಂಡು ಓಡಾಡುವ ಭಕ್ತಿಯ ಹುಚ್ಚ ನಾನು

೪೬೧ **ಗುರುಲಿಂಗ ಜಂಗಮದಿಂದೆ ಪಾದೋದಕ ಪ್ರಸಾದವಾಯಿತು**
**ಆ ಭಾವನೇ ಮಹಾಪ್ರಸಾದವಾಗಿ—**
**ಎನಗೆ ಬೇರೆ ಪ್ರಸಾದವೆಂಬುದಿಲ್ಲ**
**ಕೂಡಲ ಸಂಗಮದೇವಾ.**

ಗುರು ಲಿಂಗ ಜಂಗಮರನ್ನು ಹೊರತು ಪಡಿಸಿ ತೀರ್ಥ ಪ್ರಸಾದಗಳೆಂಬವು ಇಲ್ಲ. ಅವರಿಂದಲೇ ತೀರ್ಥಪ್ರಸಾದವೆಂಬ ಭಾವನೆಯೇ ತಿಳಿವಿನ ಪ್ರಸಾದವಾದ್ದರಿಂದ ನನಗೆ ಮತ್ತೆ ಬೇರೆ ಪ್ರಸಾದ ವೆಂಬುದು ಗೊತ್ತಿಲ್ಲ ಕೂಡಲ ಸಂಗಮದೇವಾ.

೪೬೨ **ಅಹುದೆಂದರಿಯೆ, ಆಗದೆಂದರಿಯೆ,**
**ಆದಿಯ ಪಥವ ತೋರಲರಿಯೆ**
**ಸತ್ಯವನರಿಯೆ, ಸಹಜವನರಿಯೆ,**
**ಸಜ್ಜನ ಶುದ್ಧವ ಮುನ್ನವೇ ಅರಿಯೆ !**
**ನಿಮ್ಮ ಶರಣರ ಒಕ್ಕುದನುಂಡಿಪ್ಪೆ,**
**ಕೂಡಲ ಸಂಗಮದೇವಾ.**

ಅಲ್ಲಾ – ಅಹುದುಗಳ ತಾರ ತಮ್ಯ, ಸಹಜಾ ಸಹಜಗಳ ಅಂತರ, ಮೂಲ ಮಾರ್ಗ, ಸತ್ಯ, ಸಜ್ಜನರಿಗೆ ಸರಿಹೋಗುವ ನಿರ್ಮಲ ಗುಣ ಈ ಯಾವವುಗಳನ್ನೂ ತಿಳಿಯದ ಮೂಢ ನಾನು. ಕೂಡಲ ಸಂಗಮದೇವ ನಿನ್ನ ಶರಣರೆಂಜಲುಂಡು ಬದುಕುವೆ.

೪೬೩ **ಆವನಾದರೇನು, ಶ್ರೀ ಮಹಾದೇವನ ನೆನೆವವನ**
**ಬಾಯ ತಂಬುಲ ಮೆಲುವೆ, ಬೀಳುಡಿಗೆಯ ಹೊದೆವೆ,**
**ಪಾದರಕ್ಷೆಯ ಕಾಯ್ದು ಬದುಕುವೆ,**
**ಕೂಡಲ ಸಂಗಮದೇವಾ.**

ಯಾವ ಜಾತಿ ಪಂಥದವನಾದರೂ ಚಿಂತೆಯಿಲ್ಲ ಅವನು ಶಿವಭಕ್ತನಾಗಿದ್ದರೆ ಸರಿ ಅವನ ಬಾಯೊಳಗಿನ ಎಲೆ ಅಡಿಕೆ ತಿನ್ನುವೆ. ಅವನುಟ್ಟು

ಬಿಟ್ಟಅರಿವೆಗಳನ್ನು ಉಟ್ಟುಕೊಳ್ಳುವೆ ಅವನ ಕೆರಗಳನ್ನು ಕಾಯ್ದಾದರೂ ಅವನ ನೆರಳಲ್ಲಿ ಬದುಕುವೆ ಕೂಡಲಸಂಗಮದೇವಾ.

**೪೬೪ ಒಂದುವನರಿಯದ ಸಂದೇಹಿ ನಾನಯ್ಯಾ,**
**ನಂಬುಗೆಯಿಲ್ಲದ ಡಂಬಕ ನಾನಯ್ಯಾ;**
**ನಿಮ್ಮ ನಂಬಿದ ಶರಣರ ಡಿಂಗರಿಗ ನಾನಯ್ಯಾ,**
**ಕೂಡಲ ಸಂಗಮದೇವಾ.**

ಭಕ್ತಜನ ಭಾಂಡಾರಿ ಕೂಡಲ ಸಂಗಮದೇವಾ, ನಿನ್ನ ಮಹಿಮೆಯ ಒಂದಂಶವನ್ನೂ ತಿಳಿಯದ, ನಿನ್ನ ಲೀಲಾ ಶಕ್ತಿಯಲ್ಲಿ ವಿಶ್ವಾಸ ವಿಲ್ಲದ ಡೌಲುಗಾರ ನಾನು. ಅಲ್ಲದೆ ನಿನ್ನಲ್ಲಿ ಅಚಲ ಭಕ್ತಿ ವಿಶ್ವಾಸವಿಟ್ಟ ಶರಣರ ಮನೆಯ ಕಾಯುವ ಕುನ್ನಿ ನಾನು.

**೪೬೫ ಬಿಡದೆ ಬಾಯಂಗಲ ಎಂಜಲ ಕಾಯ್ದಿಪ್ಪೆನು: ಕಿಂಕರನು:**
**ಕಿಂಕರರ ಮನೆಯಲ್ಲಿ ಕಿಂಕಿಲವನು ಅನು ಹಾರುತಿಪ್ಪೆನು,**
**ನಮ್ಮ ಕೂಡಲ ಸಂಗನ ಶರಣರ ಒಕ್ಕುದ ಮಿಕ್ಕುದ ನುಂಬ**
**ಕಿಂಕರ ನಾನು !**

ಬಾಯಲ್ಲಿ ಸದಾವಕಾಲ ಎಂಜಲು ಕಚ್ಚಿಕೊಂಡಿರುವ ಬಾಗಿಲ ಮುಂದಿನ ನಾಯಿ ನಾನು. ಗಿರಿಜಾರಮಣನ ದಾಸಾನುದಾಸರಾದ ಶರಣರ ಮನೆಯ ಸಮೂಹದಲ್ಲಿ ಹಾರುತ್ತ ಓಡುವ ಬೆಕ್ಕು ನಾನು. ಸಂಗನ ಶರಣರಡಿಯ ಸೇವಕ ನಾನು.

**೪೬೬ ತೊತ್ತಿಂಗೇಕೆ ಲಕ್ಷಣ? ಬಂಟಂಗೇಕೆ ಆಚಾರ?**
**ಆಗಮವೇಕೆ ಡಿಂಗರಿಗಂಗೆ, ಒಕ್ಕುದನುಂಬುವಂಗಯ್ಯಾ?**
**ಕೂಡಲ ಸಂಗಮದೇವಾ,**
**ನಿಮ್ಮ ನಂಬುವದು ಆಚಾರವಯ್ಯಾ:**

ಆಳಾಗಿದುಡಿಯುವವನಿಗೆ ತಾನು ಹಿರಿಯನೆನಿಸಿಕೊಳ್ಳುವ ಗುರುತುಗಳ ಅವಶ್ಯಕತೆ ಏನಿದೆ? ವೀರನಾದವನು ಪಾಪ-ಪುಣ್ಯಗಳ ಭೀತಿ

ಯಿಂದ ಪಂಚಾಚಾರ ಆಚರಿಸುವದು ಹೇಗೆ ಸಾಧ್ಯ. ಸುಮ್ಮನೆ ಹಾಕಿದ್ದ ನ್ನುಂಡು ಸೇವೆ ಮಾಡುವ ಅಲ್ಪ ಪ್ರಾಣಿಗೆ ನಿಗಮಾಗಮಗಳ ತತ್ವವಿಚಾರ ವೇಕೆ? ಆ ಆಳಿಗೆ, ಕೂಡಲ ಸಂಗಮದೇವಾ, ನಿನ್ನನ್ನು ನಂಬಿಕೊಂಡಿರು ವದೇ ಆಚಾರ ಧರ್ಮ.

**೪೬೭ ತೊತ್ತಿಂಗೆ ಲಕ್ಷಣವೇಕಯ್ಯಾ?**
**ಅವರೊಕ್ಕುದನುಂಡು ಮಿಕ್ಕುದ ಕಾಯ್ದುಕೊಂಡಿಪ್ಪುದು.**
**ಸಾರೆ ಹೊರಸೇಕೆ? ಅವಳಿಗೆ ಮಾರುತ್ತರವೇಕೆ?**
**ಕೂಡಲ ಸಂಗನ ಶರಣರೊಡನೆ**
**ಇದಿರುತ್ತರವೇಕೆ ಸಿಂಬಕಂಗೆ?**

ಸೇವಕತನದಲ್ಲಿ ಇದುತ್ತಮ ಇದು ನೀಚವೆಂದು, ಇದು ಮೇಲು-ಇದು ಕೀಳು ಎಂದು ಭೇದಮಾಡುವ ಕುಬುದ್ಧಿ ಏಕೆ? ಧನಿಯರು ಕೊಟ್ಟು ದನ್ನು ಉಂಡು ಮನೆ ಕಾಯ್ದುಕೊಂಡಿದ್ದರೆ ಸಾಲದೆ? ಕೆಟ್ಟ ನುಡಿಗಳ ನ್ನಾಡಿ-ಶರಣರುದ್ದಕ್ಕೂ ಜಗಳ ಕಾಯಬೇಕಾದ ಪ್ರಸಂಗವೇಕೆ ಈ ನಾಯಿ ಕುನ್ನಿಗೆ?

**೪೬೮ ಪಾದೋದಕವ ಕೊಂಬೆ; ಪ್ರಸಾದವ ಕೊಂಬೆ;**
**ಅರ್ಥಪ್ರಾಣಭಿಮಾನ ನಿಮ್ಮದೆಂಬೆ!**
**ರಾತ್ರಿಯಲೊತ್ತೆಯ ಕೊಂಬ ಪಾತಕ ಸೂಳೆಯಂತೆ**
**ಬರಿಯ ಮಾತಿಂಗೊಲೆವನೆ**
**ನಮ್ಮ ಕೂಡಲ ಸಂಗಮದೇವಾ?**

ಶರಣರ ಪಾದನೀರು ತೀರ್ಥವೆಂದು, ಎಡೆಮಾಡಿ ಬಿಟ್ಟದ್ದು ಪ್ರಸಾದ ವೆಂದು ಸೇವಿಸಿದರೆ, ಈ ಧನ-ಮತ್ತು ಜೀವಗಳು ನಿನ್ನದೇದಯಾಘನ ಎಂದು ಮೆತ್ತಗೆ ಸವಿ ಮಾತುಗಳನ್ನಾಡಿ, ಸರಿ ಅರ್ಧರಾತ್ರಿಯಾದ ಮೇಲೆಯೂ ಭೋಗಪುರುಷನನ್ನು ಕರೆದು ದುಡ್ಡು ಪಡೆವ ಹೊಲೆ ಸೂಳೆ ಯಂತೆ ಕುಮಾರ್ಗದಿಂದ ನಡೆದರೆ ಕೂಡಲ ಸಂಗಮ ದೇವನೆಂದಾದರೂ ಪ್ರೀತಿಸಿ ಮುಕ್ತಿಸೌಭಾಗ್ಯವೀಯುತ್ತಾನೆಯೋ?

**೪೭೯ ಪಾತಕ ಮಹಾಪಾತಕವಮಾಡಿದವನು**
**ಸದ್ಭಕ್ತರ ಮನೆಗೆ ಹೋಗಿ,**
**ಅವರೊಕ್ಕ ಪ್ರಸಾದವ ನಾಯ್ದುಂಡರೆ**
**ಸಕಲ ಬ್ರಹ್ಮಹತ್ಯದ ಪಾತಕ ಪರಿಹಾರವು**
**ಒಮ್ಮೆ ಬೇಡಿಕೊಂಡುಂಡರೆ.**
**(ಶ್ಲೋಕ) ಪಾತಕೇಷು ಮನಃಪ್ರಾಪ್ತೇ | ಶಿವಭಕ್ತ ಗೃಹಂ ವ್ರಜೇತ್**
**ಯಾಚಯೇದನ್ನಮಮೃತಂ | ತದಲಾಭೇ ಜಲಂ ಪಿಬೇತ್**
**ಇದು ಕಾರಣ ಕೂಡಲ ಸಂಗಮದೇವಾ,**
**ನಿಮ್ಮ ಸದ್ಭಕ್ತರಿಗೆ 'ನಮೋ ನಮೋ' ಎಂಬೆನು.**

ಎಂತಹ ಪಾಪ ಮಹಾಪಾಪವೆಸಗಿದವನೂ ಸಹಿತ ಶಿವಭಕ್ತರ ಮನೆಗೆ ಹೋಗಿ ಅವರ ಎಂಜಲು, ಪ್ರಸಾದ ರೂಪದಿಂದ ಪಾವನ ಮಾಡಿ ನುಂಗಿ, ಅವರ ಪಾದ ತೊಳೆದ ನೀರು ಕುಡಿದರೆ ಬ್ರಾಹ್ಮಣನನ್ನು ಕೊಂದ ಪಾಪವೂ ಪರಿಹಾರವಾಗುತ್ತದೆ. ಅಷ್ಟು ಬಲವಂತರಾದ ನಿನ್ನ ಶರಣರಿಗೆ ಅನಂತ ನಮಸ್ಕಾರಗಳು ಕೂಡಲ ಸಂಗಮದೇವಾ.

**೪೮೦ ನಾ ಹೊತ್ತ ಹುಳ್ಳಿಯ ಹೊರೆಯ ನಂಬಲಿಗೆ**
**ಕೊಂಬವರಿಲ್ಲ, ನೋಡಯ್ಯಾ.**
**ಆನು ನಿಮ್ಮ ಶರಣರೊಕ್ಕುದನುಂಡು ಬದುಕಿದೆನಯ್ಯಾ.**
**ಮೇರುವ ಸಾರಿದ ಕಾಗೆ ಹೊಂಬಣವಪ್ಪುದು ತಪ್ಪದು.**
**ಕೂಡಲ ಸಂಗಮದೇವಾ.**

ನಾನು ಕಾಯಕಮಾಡಿ ಹೊತ್ತು ತಂದ ಹುಳ್ಳಿಯ ಹೊರೆ (ಹಸರು ತಪ್ಪಲು) ಯನ್ನು ಒಂದು ತುಣುಕು ರೊಟ್ಟಿಗೂ ಕೊಂಡುಕೊಳ್ಳುವವರಿಲ್ಲ. ಆದುದರಿಂದ ನನ್ನ ಜೀವ ನಿನ್ನ ಶರಣರ ಮನೆಯ ಮುಸುರಿ ತಿಂದು ಬದುಕಿದೆ. ಮೇರು ಪರ್ವತವನೇರಿದ ಕಾಗೆಯೂ ಬಂಗಾರ ವರ್ಣ ತಾಳುವದರಲ್ಲಿ ಸಂಶಯವಿಲ್ಲ ಕೂಡಲ ಸಂಗಮದೇವಾ. ಹಾಗೆ ಶರಣರಡಿದಾವರೆಗಳ ಬಳಿ ಸುಳಿದವರಿಗೆ ಮುಕ್ತಿ ಇದೆ.

**೪೭೧ ಭವ ಭವದಲ್ಲಿ ನಿಮ್ಮ ಜಂಗಮವೇ ಶರಣಯ್ಯಾ:**
**ಅವರುಂಡು ಮಿಕ್ಕುದ ಉಡಿಗಿ, ಒಕ್ಕು,**
**ಪ್ರಸಾದವ ನಾಯುಬ್ಬಂಬ ಮರುಳ ನಾನಯ್ಯಾ !**
**ನಮ್ಮ ಕೂಡಲ ಸಂಗನ ಶರಣರ**
**ರಿಣವ ನಾ ಹಿಂಗಲಾರೆ!**

ಜನ್ಮ ಜನ್ಮಗಳಲ್ಲಿಯೂ ನಿನ್ನ ಶರಣರೇ ನನಗೆ ಗತಿ. ಆದರೆ ಕೂಡಲ ಸಂಗಮದೇವಾ, ಅವರು ಊಟ ಮಾಡಿದ ನೆಲ ಬಳಿದು ಚೆಲ್ಲಿ ನಂತರ ಪ್ರಸಾದವೆಂದು ಅದನ್ನು ಆರಿಸಿಕೊಂಡು ಉಣ್ಣುವ ಕಡು ಹುಚ್ಚ ನಾನಾಗಿದ್ದರಿಂದ ಅವರ ಋಣ ಕಳೆದುಕೊಳ್ಳಲು ನನ್ನಿಂದಾಗದು.

**೪೭೨ ದಾಸಿಯ ವರ್ಗದಲ್ಲಿಪ್ಪೆನು ಶಿವ ಶರಣರ ಮನೆಯಲ್ಲಿ:**
**ಅವರೊಕ್ಕುದನುಂಡು ಮಿಕ್ಕುದ ಕಾಯುದ್ದುಕೊಂಡಿಪ್ಪ ಕಾರಣ**
**ಕಾಲ ಮುಟ್ಟಲಮ್ಮವು; ಕಲ್ಪಿತ ತೊಡೆಯಿತ್ತು;**
**ಎನ್ನ ಭವ ಬಂಧನ ಹಿಂಗಿತ್ತು, ಕರ್ಮ ನಿರ್ಮಳ ವಾಯಿತ್ತು !**
**ಅವರ ತೊತ್ತಿನ ತೊತ್ತಿನ ಮರುದೊತ್ತಿನ ಮಗನೆಂದು**
**ಕೂಡಲ ಸಂಗಮದೇವ 'ಇತ್ತ ಬಾ' ಎಂದೆತ್ತಿಕೊಂಡನು!**

ಕಾಲತ್ರಯಗಳಲ್ಲಿಯೂ ವರಪಾವನರಾದ ಶಿವಶರಣರ ಮನೆಯ ದಾಸಿಯಾಗಿದ್ದ ಕಾರಣ ಅವರ ಪಾದ ಸೇವೆಯ ಸುಸಂಧಿ ಸಿಕ್ಕು ನನ್ನ ಎಲ್ಲ ಕರ್ಮಗಳೂ ಕತ್ತರಿಸಿ ಹೋದವು. ಸಂಸಾರದ ಕ್ಲೇಶಗಳು ಕೆರಳದಾದವು. ಹೀಗೆ ಅವರ ದಾಸಿಯ-ದಾಸಿಯ ಅನುದಾಸಿಯ ಮರಿಮಗನೆಂದು ನನ್ನನ್ನು ಕೂಡಲ ಸಂಗಮದೇವನು ತನ್ನ ಬಿಡಾರಕ್ಕೆ ಎತ್ತಿಕೊಂಡು ಹೋದನು.

**೪೭೩ ಜನ್ಮಕ್ಕೆ ಜನ್ಮಕ್ಕೆ ಹೋಗಲೀಯದೆ, 'ಸೋಹಂ' ಎಂದೆನಿಸದೆ,**
**'ದಾಸೋಹಂ' ಎಂದೆನಿಸಯ್ಯಾ.**

**ಲಿಂಗ ಜಂಗಮದ ಪ್ರಸಾದವ ತೋರಿ ಬದುಕಿಸಯ್ಯಾ,**
**ಕೂಡಲ ಸಂಗಮದೇವಾ.**

ಜನ್ಮಾಂತರ ರಾಟವಾಳದಲ್ಲಿ ತಿರುಗಲು ಬಿಡದೆ, ನಾನೇ ದೇವರೆಂದು ನನ್ನಲ್ಲಿ ಭಾವನೆ ಬರದಂತೆ ಮಾಡಿ, ನಾನು ಲಿಂಗಾನುವರ್ತಿ ದಾಸನೆಂದು ನನ್ನಲ್ಲಿ ಕಲ್ಪನೆ ಒಡಮೂಡುವಂತೆ ಮಾಡು. ತದನಂತರ ಲಿಂಗ ಜಂಗಮರನುಗ್ರಹ ತೋರಿ ಕಾಪಾಡು ಕೂಡಲ ಸಂಗಮದೇವಾ.

**೪೭೪ ಕರ್ತರು ನಿಮ್ಮ ಗಣಂಗಳು ಎನ್ನ ತೊತ್ತುಮಾಡಿ**
**ಸಲಹಿದ ಸುಖವು**
**ಸಾಲೋಕ್ಯ, ಸಾಮಿಪ್ಯ, ಸಾರೂಗ್ಯ, ಸಾಯುಜ್ಯ**
**ದಂತುಟಲ್ಲಾ–**
**ಕೇಳಿರಯ್ಯಾ, ಕೂಡಲ ಸಂಗನ ಶರಣರು**
**ತಮ್ಮ ಒಕ್ಕುದ ನಿಕ್ಕಿಸಲಹಿದ ಸುಖವು !**

ಸರ್ವ ಕಾರ್ಯಗಳ ಯಜಮಾನತ್ವ ವಹಿಸಿದ ನಿನ್ನ ಗಣಕೂಟವು ನನ್ನನ್ನು ತಮ್ಮ ಸೇವಾನುವೃತ್ತಿಯನ್ನಾಗಿರಿಸಿಕೊಂಡು— ನಿರ್ವೈರ ದೃಷ್ಟಿ ವಿಶ್ವಬಂಧುತ್ವ, ಮತ್ತು ವಿಶ್ವವೆಲ್ಲ ಭಗವಂತನ ರೂಪ ಎಂದುಪದೇಶಿಸಿ, ಮುಕ್ತಿಮಾರ್ಗ ತೋರಿದ್ದಲ್ಲದೆ ತಮ್ಮ ಅನುಭವದಡಿಗೆಯ ಊಟ ಮಾಡಿಸಿ ತಿಳಿಸಿದರು. ಆ ಸುಖವನೆಂತು ಹೇಳಲಿ ಕೂಡಲಸಂಗಮದೇವಾ.

## ಭಕ್ತನ ಪ್ರಾಣಲಿಂಗಿಸ್ಥಳ

**೪೭೫ ತೊತ್ತಿಂಗೆ ಬಲ್ಲಹನೊಲಿದರೆ ಪದವಿಯ ಮಾಡದೆ**
**ಮಾಣ್ಬನೆ?**
**ಬೇಡರ ದಾಸಯ್ಯಂಗೊಲಿದಾತ ಮತ್ತೊಬ್ಬ ದೇವನೆ,**
**ಅಯ್ಯಾ?**
**ಮಾದರ ಚೆನ್ನಯ್ಯಂಗೆ, ಡೋಹರ ಕಕ್ಕಯ್ಯಂಗೆ,**

**ತೆಲುಗುಬೊಮ್ಮಯ್ಯಂಗೆ ಒಲಿದಾತ ಮತ್ತೊಬ್ಬ ದೇವನೆ, ಅಯ್ಯಾ?**
**ಎನ್ನ ಮನದ ಪಂಚೇಂದ್ರಿಯ ನಿಮ್ಮತ್ತಲಾದರೆ**
**ತನ್ನತ್ತ ಮಾಡುವ ಕೂಡಲ ಸಂಗಯ್ಯಾ.**

ಎಲ್ಲವನು ಬಲ್ಲ ಸ್ವಾಮಿ ತನ್ನ ಸೇವಕನನ್ನು ಮಮತೆಯಿಂದ ಮಗನೆಂದು ಕರೆದರೆ ಅವನಿಗೆ ಉತ್ತಮ ಗತಿ ನೀಡದೆ ಇರುತ್ತಾನೆಯೇ? ಜೇಡರ ದಾಸೀಮಯ್ಯನಿಗೆ, ಮಾದಾರ ಚನ್ನಯ್ಯನಿಗೆ, ಕಕ್ಕಯ್ಯನಿಗೆ ತೆಲಗರ ಬೊಮ್ಮಯ್ಯನಿಗೆ ಅನುಗ್ರಹಿಸಿದ ದೇವನು ನೀನಲ್ಲದೆ ಬೇರೆಯೇ ? ನನ್ನ ಪಂಚೇಂದ್ರಿಯಗಳೆಲ್ಲವೂ ಶಿವಧ್ಯಾನದಲ್ಲಿ ಮಗ್ನವಾದರೆ, ಕೂಡಲ ಸಂಗನು ನನ್ನನ್ನು ತನ್ನ ಕಡೆ ಬರಮಾಡಿಕೊಳ್ಳುತ್ತಾನೆ.

**೪೭೬ ಹೊರಗೆ ಹೂಸಿ ಏನೆನಯ್ಯಾ,**
**ಒಳಗೆ ಶುದ್ಧವಾಗದನ್ನಕ್ಕ?**
**ಮಣಿಯ ಕಟ್ಟಿ ಏನೆನಯ್ಯಾ,**
**ಮನ ಮುಟ್ಟದನ್ನಕ್ಕ?**
**ನೂರನೋದಿ ಏನೆನಯ್ಯಾ,**
**ನಮ್ಮ ಕೂಡಲ ಸಂಗಮದೇವರ ಮನ ಮುಟ್ಟಿ ನೆನೆಯದನ್ನಕ್ಕ ?**

ಅಂತರಂಗ ಸ್ವಚ್ಛವಿಲ್ಲದೆ ಬರಿ ಜಳಕ(ಸ್ನಾನ)ಮಾಡಿ ಏನು ಪ್ರಯೋಜನ? ಜಪಮಾಲೆ ಕೊರಳೊಳು ಧರಿಸಿ, ಶಿವಧ್ಯಾನ ಮನದಲ್ಲಿ ನೆಲೆಸದಿದ್ದರೆ ಏನು ಲಾಭ? ಎಷ್ಟು ಪುರಾಣ ಪುಣ್ಯಕಥೆಗಳನ್ನು ಓದಿದರೂ, ಕೂಡಲ ಸಂಗಮ ದೇವನನ್ನು ಏಕ ಮನದಿಂದ ಭಜಿಸದಿದ್ದರೆ ಎಲ್ಲ ನೀರಿಗೆ ಹಾಕಿದ ಹಾಲಿನಂತೆ.

**೪೭೭ ಸುಚಿತ್ತದಿಂದಲೆನ್ನ ಮನವು**
**ನಿಮ್ಮ ನೆನೆಯಲೊಲ್ಲದು: ಎಂತಯ್ಯಾ ?**
**ಎನಗಿನ್ನಾವುದು ಗತಿ? ಎಂತಯ್ಯಾ?**

**ಎನಗಿನ್ಯಾವುದು ಮತಿ? ಎಂತಯ್ಯಾ?**
**ಹರ ಹರಾ, ಕೂಡಲ ಸಂಗಮದೇವಾ,**
**ಮನವ ಸಂತೈಸೆನ್ನಾ.**

ಶುದ್ಧ ಮನಸ್ಸಿನಿಂದ ನನ್ನ ಮನಸ್ಸು ನಿನ್ನ ನಾಮಾಮೃತ ಪಠಣ ಮಾಡುವದಿಲ್ಲ. ಅದಕ್ಕೇನು ಗತಿ ಶಂಭೋ ಶಂಕರ? ನನ್ನ ಬುದ್ಧಿ ಪ್ರಬುದ್ಧವಾಗಿ ನಿನ್ನ ಚರಣ ನಂಬುವ ಬಗೆ ಹೇಗೆ? ಅಸಂತುಷ್ಟವಾದ ನನ್ನ ಮನಸ್ಸನ್ನು ಸಮಾಧಾನ ಪಡಿಸು ಕೂಡಲ ಸಂಗಮದೇವಾ.

**೪೭೮ ಅಷ್ಟದಳ ಕಮಲವ ಸುತ್ತುವ ಜೀವಾತ್ಮನ**
**ಮೆಟ್ಟಿದ ದಳವ ನರಿಯದೆ**
**ಆನು ಭಕ್ತನೆಂತೆಂಬೆ, ಆನು ಶರಣನೆಂತೆಂಬೆ,**
**ಆನು ಲಿಂಗೈಕ್ಯನೆಂತೆಂಬೆ,**
**ಕೂಡಲ ಸಂಗಮದೇವಾ, ಎನ್ನ ಮನ ಸಮಾಧಾನ**
**ವಾಗದನ್ನಕ್ಕ?**

ಎಂಟು ಪಕಳೆಗಳಿಂದೊಡಗೂಡಿದ ಕಮಲ ಪುಷ್ಪವನ್ನು ಭೃಂಗದಂತೆ ಸುತ್ತುವ ಜೀವಾತ್ಮನ ಮತ್ತು ತಾನು ಮೆಟ್ಟಿದ ಪಕಳೆಯನ್ನೇ ಮರೆತು ಜೀವಿಸುವ ಅಳಿಯಂತೆ – ನನ್ನ ಭಕ್ತಿ ಧರ್ಮವನ್ನೇ ಮರೆತು ಭೂಮಿಗೊರಗಿದ ನಾನು ಶರಣನಾಗುವ ಹಾದಿಯಾವುದು, ಲಿಂಗೈಕ್ಯನಾಗುವ ಬಗೆ ಯೆಂತು? ಈ ರೀತಿ ಚಿತ್ತ ಕದಡಿ ತೊಳಲುವ ನನ್ನ ಮನವನ್ನು ನೆಮ್ಮದಿಗೊಳಿಸು ಕೂಡಲ ಸಂಗಮದೇವಾ.

**೪೭೯ ನಾ ನಿಮ್ಮ ನೆನೆವೆನು: ನೀವೆನ್ನನರಿಯಿರಿ;**
**ನಾ ನಿಮ್ಮ ನೋಲೈಸುವೆನು: ನೀವೆನ್ನ ಕಾಣಿರಿ.**
**ನಾನೆಂತು ಬದುಕುವೆನೆಂತು ಜೀವಿಸುವೆನಯ್ಯಾ?**
**ಕೂಡಲ ಸಂಗಮದೇವಾ,**
**ಎನಗೆ ನೀವೇ ಪ್ರಾಣ ಗತಿ ಮತಿ ನೋಡಯ್ಯಾ!**

ನಾನು ನಿನ್ನನ್ನು ನಿರಂತರ ಭಜಿಸುತ್ತಿರುವೆ. ಆದರೆ ದೇವನೆ ನೀನು ನನ್ನ ದುಃಖಗಳನ್ನು ತಿಳಿಯದವನಾಗಿರುವೆ. ನಾನು ನಿನ್ನ ಕೀರ್ತನೆಯನ್ನು ಶ್ರವಣ ಮಾಡುತ್ತಿರುವೆ. ಆದರೆ ನಿನಗೆ ನಾನು ಕಾಣದಾಗಿರುವೆನು. ಈ ರೀತಿ ನೀನು ನನ್ನನ್ನು ತಾತ್ಸಾರ ಮಾಡಿದರೆ ನಾನು ಜೀವಿಸಿರುವದು ಹೇಗೆ? ಕೂಡಲ ಸಂಗಮ ದೇವನೆ ನನ್ನ ಪ್ರಾಣ-ಬುದ್ಧಿ ಸಕಲವೂ ನೀನೆ

**೪೮೦ ತಂದೆ ನೀನು, ತಾಯಿ ನೀನು;**
**ಬಂಧು ನೀನು, ಬಳಗ ನೀನು,**
**ನೀನಲ್ಲದೆ ಮತ್ತಾರೂ ಇಲ್ಲಯ್ಯಾ!**
**ಕೂಡಲ ಸಂಗಮದೇವಾ,**
**ಹಾಲಲದ್ದು, ನೀರಲದ್ದು!**

ತಂದೆ-ತಾಯಿ-ಬಂಧು ಬಳಗ ನೀನಲ್ಲದೆ ನನಗೆ ಬೇರೆ ಯಾರೂ ಇಲ್ಲ. ಕೂಡಲ ಸಂಗಮ ದೇವ ನೀನು ನೀರಿಗೆ ಹಾಕಿದರೂ ಸಮ. ಹಾಲಿಗೆ ಹಾಕಿದರೂ ಸಮ. ನಿನ್ನನೇ ನಂಬಿದ ನಂದನ ನಾನು.

**೪೮೧ ಎನ್ನಾಪತ್ತು-ಸುಖ ದುಃಖ ನೀನೇ ಕಂಡಯ್ಯಾ!**
**ಮತ್ತಾರೂ ಇಲ್ಲ: ಹರಹರಾ ನೀನೇ ಕಂಡಯ್ಯಾ!**
**ಎನ್ನ ಮಾತಾಪಿತನೂ ನೀನೇ ಕಂಡಯ್ಯಾ,**
**ಕೂಡಲ ಸಂಗಮದೇವಾ.**

ನನ್ನ ಆಪತ್ಕಾಲದ ಪರಮಮಿತ್ರ-ಸುಖ-ದುಃಖದಲ್ಲಿ ಸಮಭಾಗಿಯಾಗುವ ಗೆಳೆಯ ನೀನಲ್ಲದೇ ಇನ್ನಾರೂ ಎರಡನೇಯವರಿಲ್ಲ. ಹರಹರಾ ಕೂಡಲ ಸಂಗಮದೇವಾ ನನ್ನನ್ನು ಮಮತೆ ಮೋಹಗಳಿಂದ ಸಾಕಿ ಸಲಹುವ ತಂದೆ ತಾಯಿಯರೂ ನೀನೆ.

**೪೮೨ ಎನ್ನ ಜನ್ಮವುವ ತೊಡೆದ ನೀ ಧರ್ಮಿ,**
**ಎನ್ನ ಜನ್ಮವುವನತಿಗಳೆದ ನೀ ಧರ್ಮಿ,**

**ಎನ್ನ ಭವ ಬಂಧನವ ನಿಕರಿಸಿದೆಯಾಗಿ**
**ಶಿವನೇ ಗತಿಮತಿಯೆಂದು ನಂಬಿದೆನಯ್ಯಾ.**
**ಎನ್ನ ಅಷ್ಟಮದಂಗಳ ಸುಟ್ಟುರುಹಿದೆಯಾಗಿ**
**ಕಟ್ಟುಗ್ರದಿಂದ ನಿಮ್ಮ ಶ್ರೀ ಚರಣವ ಕಂಡೆ:**
**ಸೃಷ್ಟಿಪ್ರತಿಪಾಲಕಾ ನಿಮ್ಮನಂಬಿದೆ, ಕರುಣಿಸು,**
**ಕೂಡಲ ಸಂಗಮದೇವಾ.**

ನನ್ನ ಜನ್ಮವನ್ನು ತಡೆದು ಹೀನವಾಗಿ ಮಾಡಿ, ಭವರೋಗದಿಂದ ಮುಕ್ತನನ್ನಾಗಿ ಮಾಡಿದ ಪುಣ್ಯ ಪುರುಷ ನೀನು ಪರಲಿಂಗವೆ. ಆದ್ದರಿಂದ ನೀನೆ ನನಗೆ ಸದ್ಗತಿದಾಯಕನೆಂದು ಸಲೆ ನಂಬಿರುವೆ. ನನ್ನ ಮದ ಮತ್ಸರ ಮೊದಲಾದ ದುಷ್ಟ ಚೇತನಗಳನ್ನು ಸುಟ್ಟು ನಿನ್ನಪಾದ ಪಂಕಜಗಳ ದರ್ಶನವು ಅತಿ ಘೋರ ವ್ರತ ನಿಯಮಗಳನ್ನಾಚರಿಸುವದರಿಂದ ಲಭಿಸಿತು. ಸೃಷ್ಟಿಪಾಲಕನೇ ನಿನ್ನನ್ನೇ ಸರ್ವ ವಿಧದಲ್ಲಿಯೂ ನಂಬಿದ ಈ ಕರುಣೆಯ ಕಂದನನ್ನು ಅನುಗ್ರಹಿಸು ಕೂಡಲ ಸಂಗಮದೇವಾ.

**೪೮೩ ಭವರೋಗದ ವೈದ್ಯನೆಂದು ನಾ ನಿಮ್ಮ ಮರೆಹೊಕ್ಕೆ**
**ಭಕ್ತಾದಾಯಕ, ನೀ ಕರುಣಿಸು, ಲಿಂಗ ತಂದೇ!**
**ಜಯ ಜಯ ಶ್ರೀ ಮಹಾದೇವ, ಜಯ ಜಯ ಶ್ರೀ**
**ಮಹಾದೇವ,**
**ಜಯ ಜಯ ಶ್ರೀ ಮಹಾದೇವ, ಎನ್ನುತಿದ್ದಿತೆನ್ನ ಮನವು.**
**ಕೂಡಲ ಸಂಗಮದೇವಂಗೆ ಶರಣೆಂದಿತ್ತೆನ್ನ ಮನವು!**

ಭವರೋಗವೆಂಬ ಈ ವ್ಯಾಧಿಯನ್ನು ಗುಣಮಾಡಲು–ನೀನು ಉತ್ತಮವೈದ್ಯನೆಂದು ನಂಬಿ–ಔಷಧ ತೆಗೆದುಕೊಳ್ಳಬೇಕೆಂದು ನಿನ್ನ ಬೆನ್ನಿಗೆ ಬಿದ್ದಿರುವೆನಾದ್ದರಿಂದ ಭಕ್ತವತ್ಸಲ ನೀ ಕೃಪೆಮಾಡು ಲಿಂಗ ತಂದೆ. 'ಜಯ ಜಯ ಶ್ರೀ ಮಹಾದೇವ' ಎಂದು ನನ್ನ ಮನವು ಭವರೋಗ ಹರಿಸುವ ಗುಳಿಗೆಯ ನಾಮ ಉಚ್ಚರಿಸುತ್ತಲಿದೆ. ಕೂಡಲ ಸಂಗಮದೇವಾ ನೀನೇ ಗತಿ ಎಂದು ನಿನ್ನ ಅಡಿಗಳಿಗೆರಗುತ್ತಲಿದೆ ನನ್ನ ಮನಸ್ಸು.

# ಭಕ್ತನ ಶರಣ ಸ್ಥಳ

೪೮೪ ಅಂಗೈಯೊಳಗಣ ಲಿಂಗವ ನೋಡುತ್ತ
ಕಂಗಳು ಕಡೆಗೋಡಿವರಿವುತ್ತ ಸರಿಯುತ್ತ ಎಂದಿಪ್ಪೆನೋ?
ನೋಟವೆ ಪ್ರಾಣವಾಗಿ ಎಂದಿಪ್ಪೆನೋ?
ಕೂಟವೆ ಪ್ರಾಣವಾಗಿ ಎಂದಿಪ್ಪೆನೋ;
ಎನ್ನಂಗ ವಿಕಾರದ ಸಂಗವಳಿದು,
ಕೂಡಲ ಸಂಗಯ್ಯಾ 'ಲಿಂಗಯ್ಯಾ' ಲಿಂಗ ಲಿಂಗವೆನ್ನುತ್ತ?

ಅಂಗೈಯಲ್ಲಿ ಪೂಜಾ ಲಿಂಗವನ್ನು ಹಿಡಿದು ನೋಡುತ್ತ ನನ್ನ ಕಂಣುಗಳು ದೃಷ್ಟಿಯು ಎಲ್ಲೆಮೀರಿ ಸರಿಯುತ್ತಲಿದೆ. ನಿನ್ನನ್ನು ನೋಡುವದು, ಕೂಡುವದೆಂದರೆ ನನಗೆ ಪ್ರಾಣ. ಕಾಯವಿಕಾರಗಳು ಕಳೆದದ್ದರಿಂದ ನಾನು, ಕೂಡಲ ಸಂಗಮದೇವಾ, ಲಿಂಗ ಲಿಂಗ ಲಿಂಗವೆಂದು ಪಾವನ ತವ ನಾಮವನ್ನು ಜಪಿಸುತ್ತಿದ್ದೇನೆ.

೪೮೫ ಎದೆ ಬಿರಿವನ್ನಕ್ಕ, ಮನದಣಿವನ್ನಕ್ಕ,
ನಾಲಿಗೆ ನಲಿದಾಡುವನ್ನಕ್ಕ.
ನಿಮ್ಮ ನಾಮಾಮೃತವ ತಂದೆರೆಸು ಕಂಡಯ್ಯಾ
ಎನಗೆನ್ನ ತಂದೆ!
ಬಿರಿ ಮುಗುಳಂದದಿ ಎನ್ನ ಹೃದಯ
ನಿಮ್ಮ ಶ್ರೀ ಚರಣದ ಮೇಲೆ ಬಿದ್ದರಳುಗೆ,
ಕೂಡಲ ಸಂಗಮದೇವಾ.

ನನ್ನ ಎದೆ ಮುಗುಳು ಅರಳಿ ಸುವಾಸನೆ ಕೊಡುವಂತೆ, ಮನಸ್ಸು ಸಂತೃಪ್ತವಾಗುವ ವರೆಗೆ ನಾಲಿಗೆ ಆನಂದದಿಂದ ಕುಣಿಯುವಂತೆ ತವ ನಾಮಾಮೃತ ಧಾರೆ ಧರಗುಟ್ಟಿ ಬರುವಂತೆ ನನಗೆ ಆಶೀರ್ವದಿಸು ದೇವ. ನನ್ನ ಹೃದಯನನೆ ಕಮಲವೋ ನಿಮ್ಮ ಶ್ರೀಪಾದಗಳ ಮೇಲೆ ಬಿದ್ದು ಅರಳುವ ಸುಭಾಗ್ಯ ನೀಡು ಕೂಡಲ ಸಂಗಮದೇವಾ.

**೪೮೬ ಆಡಿಕಾಲು ದಣಿಯವು, ನೋಡಿ ಕಣ್ಣು ದಣಿಯವು**
**ಹಾಡಿ ನಾಲಿಗೆ ದಣಿಯದು: ಇನ್ನೇವೆನಿನ್ನೇವೆ?**
**ನಿಮ್ಮ ಕೈಯಾರೆ ಪೂಜಿಸಿ ಮನದಣಿಯಲೊಲ್ಲದಿನ್ನೇವೆ ನಿನ್ನೇವೆ?**
**ಕೂಡಲ ಸಂಗಮದೇವಾ, ಕೇಳಯ್ಯಾ,**
**ನಿಮ್ಮುದುರವ ಬಗಿದಾನು ಹೋಗುವ ಭರವೆನಗೆ!**

ಕುಣಿ ಕುಣಿದು ಭಾವ ವೈಖರಿದೋರಿದರೂ ನನ್ನ ಕಾಲುಗಳು ದಣಿಯಲಿಲ್ಲ; ನಯನ ಮನೋಹರವಾದ ನಿನ್ನ ಮೂರ್ತಿನೋಡಿ ಕಣ್ಣು ತೃಪ್ತಿ ಹೊಂದಲಿಲ್ಲ; ನಿನ್ನ ನಾಮ ಸಂಕೀರ್ತನೆ ಹಾಡಿ ನಾಲಿಗೆ ತಣಿಯದಾಯ್ತು ಇನ್ನೇನು ಮಾಡಲಿ ಭಕ್ತಪರಿಪಾಲಕಾ ನಿನ್ನ ಪೂಜೆಯನ್ನು ಸ್ವತಃ ತಾನೇ ಮಾಡಿದರೂ ಕೈಗಳಿಗೆ-ದಣಿವಿಲ್ಲ-ಮನಸ್ಸಿಗೆ ಸಾಕಾಗಲೊಲ್ಲದಾಗಿದೆ. ಕೂಡಲ ಸಂಗಮದೇವಾ ಇನ್ನೇನು ಮಾಡಲಿ— ನಿನ್ನ ಹೊಟ್ಟೆಯನು ಇಭ್ಭಾಗಿಸಿ ಐಕ್ಯವಾಗುವ ಶಕ್ತಿಯನ್ನು ಕರುಣಿಸು.

**೪೮೭ ಕಾಮ ಸಂಗ ನಿಸ್ಸಂಗವಾಗಿ ಇನ್ನಾವ ಸಂಗವನರಿಯೆನಯ್ಯಾ.**
**ಮಿಂಗೆ ಮೊಲಿದೆನಾಗಿ ಅಗಲಲಾರೆನು:**
**ನಗೆ ಮೊಗದರಸಾ, ಅವಧಾರು! ಕೂಡಲ ಸಂಗಮದೇವಾ,**
**ಬಗಿದು ಹೋಗುವೆ ನಾ ನಿಮ್ಮ ಮನವನು!**

ಕಾಮನ ಸಹವಾಸದಿಂದ ದೂರುಳಿದು-ಬೇರಾವ ಸಂಸಾರ ಸಂಗದ ಪರಿಣಾಮವೂ ನನಗಿಲ್ಲ. ನಿನ್ನನ್ನು ಅತಿ ಮೆಚ್ಚಿಕೊಂಡ ಕಾರಣ ದೇವಾ ನಿನ್ನನಗಲಿ ಹೋಗಲಾರೆ. ಮನ ಮೋಹಕ ನಗು ಮುಖ ಚಂದ್ರಾ— ಕೂಡಲ ಸಂಗಮದೇವಾ ಕೇಳು. ನಾನು ನಿನ್ನ ಮನಸ್ಸನ್ನಾಕ್ರಮಿಸುವೆ.

**೪೮೮ ನೋಡಿ ನೋಡಿ ಲಿಂಗಧ್ಯಾನವೆನ್ನ ಮನವು,**
**ರಾಗ ರಂಜನೆಯ ಉತ್ಪತ್ತಿ ಸ್ಥಿತಿಲಯ ನಿನಗೆಂದಾದುವು.**
**ರಾಗರಂಜನೆಯ ಪೂಜೆ ಎನ್ನಮನ,**
**ಕೂಡಲ ಸಂಗಮದೇವಾ ಆಹಾ, ಎನ್ನ ಮನ!**

ಬರೀ ನೋಡುವದರಿಂದಲೇ ನನ್ನ ಲಿಂಗಪ್ರೇಮ ಬೆಳೆದು ಲಿಂಗ ಧ್ಯಾನ ಮನದಾಳ ಸೇರಿತು. ದ್ವೇಷಾಸೂಯಗಳ ಹುಟ್ಟು-ಸಾವುಗಳು ನಿನ್ನಲ್ಲಿ ಎಂದು ಕೊನೆಗಂಡವು ಭಕ್ತಪ್ರೇಮ ಲಿಂಗವೆ? ದ್ವೇಷಾಸೂಯಗಳ ಪೂಜಾರಿ ನನ್ನ ಮನಸ್ಸು-ಆಹಾ ನೋಡು ನನ್ನ ಮನದ ಸ್ಥಿತಿಯನ್ನು ಕೂಡಲ ಸಂಗಮದೇವಾ.

**೪೮೯ ವಾರವೆಂದರಿಯೆ, ದಿನವೆಂದರಿಯೆ;**
**ಏನೆಂದರಿಯೆನಯ್ಯಾ!**
**ಇರುಳೆಂದರಿಯೆ, ಹಗಲೆಂದರಿಯೆ;**
**ಏನೆಂದರಿಯೆನಯ್ಯಾ!**
**ನಿಮ್ಮುವ ಪೂಜಿಸಿ ಎನ್ನುವ ಮರೆದೆ,**
**ಕೂಡಲ ಸಂಗಮದೇವಾ.**

ಶುಭವಾರ-ಶುಭದಿನ-ಹಬ್ಬ-ಹರಿದಿನ ವೆಂದೆಣಿಸದೆ, ಹಗಲು ರಾತ್ರಿ ಯೆನ್ನದೆ ನಿನ್ನನ್ನು ಪೂಜಿಸಿ ನನ್ನನ್ನು ನಾನೇ ಮರೆತಿರುವೆ ಕೂಡಲ ಸಂಗಮದೇವಾ.

**೪೯೦ ನಿಮ್ಮ ನೋಟವನಂತ ಸುಖ ಕೂಟ ಪರಮಸುಖ!**
**ಕವುಟು ಕೋಟಿ ರೋಮಂಗಳೂ ಕಂಗಳಾಗಿ**
**ನೋಡುತ್ತಿದ್ದೆನು!**
**ಕೂಡಲ ಸಂಗಮದೇವಯ್ಯಾ, ನಿಮ್ಮ ನೋಡಿ ನೋಡಿ**
**ಮನದಲ್ಲಿ ರತಿ ಹುಟ್ಟಿ ಮಿರ್ದುವೆನ್ನ ಕಳೆಗಳು!**

ನಿನ್ನ ಕಂಗೊಳಿಸುವ ಸುಂದರ ಕಾಯವದನ ನೋಡುವದೊಂದನಂತ ಸುಖ; ಆದುದರಿಂದ ಕೋಟಿ ಕೋಟಿ ರೋಮಗಳೂ ಕಣ್ಣುಗಳಾಗಿ ನಿನ್ನನ್ನು ನೋಡುತ್ತಿದ್ದೆನು ಕೂಡಲ ಸಂಗಮದೇವಾ. ಹಾಗೆ ನೋಡಿದ ಕಾರಣ ಮನದಲ್ಲಿ ನಿನ್ನದೇಹ ಸಂಗದ ಬಯಕೆ ತಲೆದೋರಿ ನನ್ನ ಮೈ ಮೇಲೆ ಕೂದಲುಗಳು ಎದ್ದು ನಿಂತವು.

**೪೯೧ ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ಮೂರುತಿ ತುಂಬಿ,**
**ಮನದಲ್ಲಿ ನಿನ್ನ ನೆನಹು ತುಂಬಿ, ಕಿವಿಯಲ್ಲಿ ಕೀರುತಿ ತುಂಬಿ,**
**ಕೂಡಲ ಸಂಗಮದೇವಾ, ನಿಮ್ಮ ಚರಣಕಮಲದಲಾನು ತುಂಬಿ !**

ನನ್ನ ಪ್ರತಿಯೊಂದು ನುಡಿಯಲ್ಲಿ ನಿನ್ನ ನಾಮಸ್ಮರಣೆಯ ಅಮೃತ ಬಿಂದುಗಳನ್ನು ಹೆಣೆದು, ಕಣ್ಣುಗಳಲ್ಲಿ ನಿನ್ನ ಸದಮಲ ಮೂರುತಿ ನೆಲೆಸಿ ಮನಃಪಟಲದಲ್ಲಿ ಸದಾ ನಿನ್ನ ನೆನವರಿಕೆಯ ಧ್ವನಿ ತುಂಬಿ,ಕಿವಿಯಲ್ಲಿ ನಿನ್ನ ಗುಣ ಕೀರ್ತಿಯ ಗುಂಜಾರವ ನಿನದವಾಗಿದ್ದುಕೊಂಡ ಕಾರಣ ನಾನು, ಕೂಡಲ ಸಂಗಮದೇವಾ ನಿನ್ನ ಪಾದಾರವಿಂದಗಳಲ್ಲಿ ಅಳಿಯಾಗಿ ನಾನು ಒಪ್ಪುತ್ತಿರುವೆ.

**೪೯೨ ಅಡಿಗಡಿಗೆ ಲಿಂಗವನಡರಿಯಡರಿ ನೋಡಿ ನೋಡಿ ಕಂಗಳು,**
**ಕಡೆಗೋಡಿವರಿದು ವೆನಗಯ್ಯಾ ಎನ್ನಶ್ರುಜಲಂಗಳು.**
**ಆಲಿಕಲ್ಲರೂಹಿನಂತೆ, ಅರಗಿನ ಪುತ್ತಳಿಯಂತೆ**
**ತನು ಪುಳಕಿತವಾದ ಬೆವುರು ಬಿಂದುಗಳೆಲ್ಲಾ!**
**ಕೂಡಲ ಸಂಗನ ದರ್ಶನಸ್ಪರ್ಶನದಿಂದ—**
**ಮನವೊಲಿದು ನೆರೆವ ಭರವನೇನ ಹೇಳುವೆನಯ್ಯಾ!**

ಹೆಜ್ಜೆ ಹೆಜ್ಜೆಗೆ ಆತುರ ಕಾತುರಗಳಿಂದ ಲಿಂಗ ವೈಭವ ನೋಡಿ ನೋಡಿ ಆನಂದ ಉಕ್ಕೇರಿ ನನ್ನ ಕಣ್ಣುಗಳಲ್ಲಿ ನೀರು ಕೋಡಿಗಟ್ಟಿ ಹರಿಯಿತು. ಮುಟ್ಟಿದರೆ ಕರಗಿ ಹೋಗುವ ಆಣೆಕಲ್ಲಿನಂತಿರುವ, ಶಾಖಕ್ಕೆ ಕರಗಿ ನೀರಾಗುವ ಅರಗಿನ ಗೊಂಬೆಯಂತಿರುವ ನನ್ನ ತನುಮನಗಳು, ಬೆವರಿನ ಹನಿಗಳು ಹಾರಿ ಹೋಗುವಂತೆ ಕೂಡಲ ಸಂಗನ ದರ್ಶನದಿಂದಲೂ, ಪಾದದಸಂಪರ್ಕದಿಂದಲೂ ಮನಸೋತು ಒಂದಾಗುವ ಪರಿಯ ವೈಭವಾನಂದ ಏನೆಂದು ಹೇಳಲಿ.

೪೯೩ ತಾಳ ಮಾನಸರಿಸವನರಿಯೆ, ಓಜೆಬಜಾವಣೆಯ
ಲೆಕ್ಕವನರಿಯೆ,
ಅಮೃತಗಣ ದೇವಗಣವನರಿಯೆ !
ಕೂಡಲ ಸಂಗಮದೇವಾ, ನಿನಗೆ ಕೇಡಿಲ್ಲವಾಗಿ
ಅನುವಲಿದಂತೆ ಹಾಡುವೆ!

ತಾಳ ಬದ್ಧವಾಗಿ, ಸ್ವರಮೇಳವಾಗಿ, ಅಮೃತಗಣ, ದೇವಗಣ ರಾಗಾಲಾಪಕ್ಕನುಸಾರವಾಗಿ ಹಾಡಲು ನನಗೆ ಬರುವದಿಲ್ಲ. ನನಗೆ ಬಂದಂತೆ ಹಾಡುವೆ. ಇದರಿಂದ ನಿನಗಾವ ಕೇಡಿಲ್ಲವೆಂದು ತಿಳಿದಿರುವೆ ಕೂಡಲ ಸಂಗಮದೇವಾ.

೪೯೪ (ಶ್ಲೋಕ) ವರಂ ಪ್ರಾಣ ಪರಿತ್ಯಾಗ! ಶ್ಛೇದನಂ
ಶಿರಸೋऽಪಿವಾ
ನತ್ವನಭ್ಯರ್ಚ್ಯ ಭುಂಜೀಯಾತ್ | ಭಗವಂತಂ
ತ್ರಿಲೋಚನಂ
ಎಂದುದಾಗಿ, ದೇಹಧರ್ಮ ತನ್ನ ಆದಂತೆ ಆಗಲಿ,
ಕೂಡಲ ಸಂಗನ ಪೂಜಿಸದಲ್ಲದೆ ನಿಲಲಾರೆನು.

ಎಲ್ಲಕ್ಕೂ ಪ್ರೀಯವಾದ ಪ್ರಾಣವನ್ನು ತೃಣೀಕರಿಸಿ, ಇಲ್ಲವೆ ತಲೆಯನ್ನಾದರೂ ಕತ್ತರಿಸಿ ಭಗವಾನ್ ಮುಕ್ಕಣ್ಣನಿಗೆ ಅಡಿಗೆಮಾಡಿ ಉಣಿಸಬೇಕು. ದೇಹಧರ್ಮವು ತನಗಿಷ್ಟವಿದ್ದಹಾಗೆ ಆಗಲಿ, ಆದರೆ ಕೂಡಲ ಸಂಗಮದೇವನನ್ನು ಪೂಜೆಮಾಡದೆ ಒಂದರಗಳಿಗೆ ಈ ಭೂಮಿಯ ಮೇಲೆ ನಿಲ್ಲಲಾರೆ.

೪೯೫ ಸುರರು ಕಿನ್ನರರು ಕಿಂಪುರುಷರೆಂಬವನಾರ ಬಲ್ಲರು?
ಎನ್ನ ಚಿತ್ತವು ನಿಮ್ಮ ಮೇಲೆ, ಸಂಗಯ್ಯಾ;
ಕೂಡಲ ಸಂಗಮದೇವಾ,
ಅನ್ಯವೆಂಬುದನರಿಯೆನಯ್ಯಾ.

ದೇವತೆಗಳು, ಕಿನ್ನರು-ಕಿಂಪುರುಷರೆಂಬ ಅಂತರ್ಗಾಮಿಗಳು ಯಾರಿಗೆ ಗೊತ್ತು ? ನನ್ನ ಸಮಸ್ತ ಧ್ಯಾನ-ಲಕ್ಷ್ಯವು ನಿನ್ನ ಮೇಲೆ ಸಂಗಯ್ಯಾ. ನಿನ್ನ ಮೇಲೆಯೇ ಲಿಂಗಯ್ಯಾ. ಆದ ಕಾರಣ ಬೇರೆ ಏನಿದೆಂಬುದೊಂದೂ ತಿಳಿಯೇ ಕೂಡಲ ಸಂಗಮದೇವಾ.

**೪೯೬ ಮಂಡೆಯ ಬೋಳಿಸಿಕೊಂಡು ಗಂಡುದೊತ್ತು ವೊಕ್ಕೆನಯ್ಯಾ !**
**ಲಜ್ಜೆಗೆಟ್ಟಾದರೂ ಲಿಂಗವನೊಲಿಸುವೆ;**
**ನಾಣುಗೆಟ್ಟಾದರೂ ಲಿಂಗವನೊಲಿಸುವೆ !**
**ಕೆಲದ ಸಂಸಾರಿಗಳು ನಗುತಿರ್ದೊಡಿರಲಿ:**
**ಕೂಡಲ ಸಂಗಮದೇವಾ, ಶರಣಗತಿವೊಕ್ಕೆನಯ್ಯಾ!**

ತಲೆಬೋಳಿಸಿಕೊಂಡು ಗಂಡುಸೇವಕನಾದೆ. ಲಜ್ಜೆಯನ್ನು ಬಿಟ್ಟಾದರೂ ಲಿಂಗಪ್ರೇಮುಗಳಿಸುವೆ. ನನ್ನ ಈ ತೆರನ ಬಾಳ್ವೆನೋಡಿ ಅಕ್ಕಪಕ್ಕದ ಮನೆಯುವರು ನಕ್ಕರೆ ನಗಲಿ; ಜಯಜಗದೀಶ ಕೂಡಲಸಂಗಮದೇವಾ ಶರಣರೆ ಗತಿಯೆಂದು ಬೆನ್ನಿಗೆ ಬಿದ್ದಿರುವೆ.

**೪೯೭ ಎನಗೆ ನಿಮ್ಮ ನೆನಹಾದಾಗಲೇ ಉದಯ:**
**ಎನಗೆ ನಿಮ್ಮ ಮರಹಾದಾಗಲೆ ಅಸ್ತಮಾನ!**
**ಎನಗೆ ನಿಮ್ಮ ನೆನಹವೇ ಜೀವನ:**
**ಎನಗೆ ನಿಮ್ಮ ನೆನಹವೇ ಪ್ರಾಣ, ಕಾಣ: ತಂದೇ. ಸ್ವಾಮೀ!**
**ಎನ್ನ ಹೃದಯದಲ್ಲಿ ನಿಮ್ಮ ಚರಣದುಂಡಗೆಯನೊತ್ತಯ್ಯಾ:**
**ವದನದಲ್ಲಿ ಷಡಕ್ಷರಿಯ ಬರೆಯಯ್ಯಾ, ಕೂಡಲ ಸಂಗಮದೇವಾ.**

ನಿನ್ನ ನಾಮದ ನೆನಪಾದ ಗಳಿಗೆಯೇ ನನಗೆ ಬೆಳಗು; ನಿನ್ನನಾಮದ ಮರವಾದಾಗಲೇ ಸಂಜೆ. ನಿನ್ನ ಸ್ಮರಣೆಯೇ ನನ್ನ ಜೀವನ, ನನ್ನ ಪ್ರಾಣ ಜ್ಯೋತಿ ಸ್ವಾಮಿ! ಆದ್ದರಿಂದ ನನ್ನ ಹೃದಯದಲ್ಲಿ ನಿನ್ನ ಪಾದ ಮುದ್ರೆಯ ನೊತ್ತು- ನಾಲಿಗೆಯ ಮೇಲೆ ಷಡಕ್ಷರೀ ಮಂತ್ರ ಬರೆ-ಕೂಡಲ ಸಂಗಮ ದೇವಾ.

**೪೯೮ ಎನ್ನ ಕಾಯವ ದಂಡಿಗೆಯ ಮಾಡಯ್ಯಾ;**
**ಎನ್ನ ಶಿರವ ಸೋರೆಯ ಮಾಡಯ್ಯಾ;**
**ಎನ್ನ ನರವ ತಂತಿಯ ಮಾಡಯ್ಯಾ;**
**ಎನ್ನ ಬೆರಳ ಕಡ್ಡಿಯ ಮಾಡಯ್ಯಾ!**
**ಬತ್ತೀಸ ರಾಗವ ಹಾಡಯ್ಯಾ; ಉರದಲೊತ್ತಿ ಬಾರಿಸು,**
**ಕೂಡಲ ಸಂಗಮದೇವಾ.**

ಈ ನನ್ನ ದೇಹವನ್ನೇ ತಂಬೂರಿಯ ಕೋಲನ್ನಾಗಿಮಾಡಿ, ತಲೆಯನ್ನೇ ಅದರ ಕುಂಬಳಕಾಯನ್ನಾಗಿಮಾಡಿಕೊಂಡು ನನ್ನ ನರಗಳನ್ನು ತಂತಿಯಂತೆ ಬಿಗಿದು, ಬಾರಿಸುವ ಕಡ್ಡಿಗಾಗಿ ನನ್ನ ಬೆರಳುಗಳನ್ನು ಕಿತ್ತಿ ಹಿಡಿದು, ನನ್ನ ಹೃದಯದಲ್ಲಿ ಒತ್ತಿ ಮೀಟಿ ಧ್ವನಿ ಹೊರಡಿಸಿ ಮೂವತ್ತೆರಡು ನಮೂನೆಯ ರಾಗಾಲಾಪಗಳನ್ನು ಹಾಡು ಕೂಡಲ ಸಂಗಮದೇವಾ.

**೪೯೯ ಕುರುಳು ಬೆರಳು ಮುಡುಹು ಮುಂಬಲ್ಲ ಕೊಳ್ಳಾ;**
**ನಿರಿಯನಿಕ್ಕಿ ದಾಂಟಿದರೆ ಅಂತೆನ್ನ ನಂಬಾ!**
**ಪರ ಪುರುಷರ ಮುಖವ ನೋಡದಂತೆ ಮಾಡಾ;**
**ಬಳಿಕ ನೀ ಹೇಂಗಿರಿಸಿದಂತೆ ಇರಿಸಾ!**
**ಎನ್ನುರದಲ್ಲಿ ಕೂಡಲ ಸಂಗಯ್ಯನೆಂದು ಬರೆಯಾ:**
**ಹರಿ ಬ್ರಹ್ಮರಿಗೆರಗದಂತೆ ಬಳಿನೀರ ನೆರೆಯಾ!**

ಕೂದಲು,ಬೆರಳು,ಮುಂದಿನ ಹಲ್ಲು, ಇವುಗಳನ್ನು ಮುಡುಪೆಂದು ಕೊಳ್ಳು ದೇವಾ. ಗೆರೆಹಾಕಿ ದಾಟಿದರೆ ನನ್ನನ್ನು ನಂಬಬೇಡಾ. ಅಲ್ಲದೆ ಪರಪುರುಷರ ಮುಖವನ್ನು ನೋಡದಂತೆ ನನ್ನ ದೃಷ್ಟಿಯನ್ನು ತಿದ್ದು;ಆ ಮೇಲೆ ನೀ ನಿಟ್ಟಹಾಗೆ ಇರುವೆ; ವಿಷ್ಣುಬ್ರಹ್ಮದೇವರಿಗೆ ತಲೆವಾಗದಂತೆ ನಿನ್ನಕಮಂಡಲ ನೀರು ಚಿಮುಕಿಸಿ ನನ್ನ ಎದೆಯಮೇಲೆ 'ಕೂಡಲ ಸಂಗಯ್ಯ' ಎಂಬ ಮುಂದ್ರೆ ಹಾಕು ಪ್ರಭುಲಿಂಗ.

**೫೦೦ ಕಂಡ ಕನಸು, ನಿಧಾನವ ಕಂಡೆನಯ್ಯಾ:**
**ಬಿಡಲಾರದ ನಿಧಾನವ ಕಂಡೆನಯ್ಯಾ:**
**ಕೂಡಲಸಂಗಯ್ಯನೆಂಬ ನಿಧಾನವ ಕಂಡು ಬಿಡಲಾರೆನಯ್ಯಾ**

ನಾನು ಕಂಡ ಕನಸಿನಲ್ಲಿಯೂ ಸಹಿತ ಗುಪ್ತನಿಧಿ, ನನ್ನ ಪ್ರೇಮನಿಧಿ ಭಕ್ತರ ಮನೋನಿಧಿ, ಶರಣರ ಶಾಂತನಿಧಿ ಆದ ಕೂಡಲಸಂಗಮದೇವನನ್ನು ಕಂಡು ಬಿಡಲಾರದಾಗಿದೆ ನನ್ನ ಮನಸ್ಸು.

**೫೦೧ ಹೊನ್ನ ಹಾವುಗೆಯ ಮೆಟ್ಟಿದವನ, ಮಿಡಿ ಮುಟ್ಟದ ಕೆಂಜೆಡೆಯವನ;**
**ಮೈಯಲ್ಲಿ ವಿಭೂತಿ ಧರಿಸಿದವನ,**
**ಕರದಲ್ಲಿ ಕಪಾಲವ ಪಿಡಿದವನ,**
**ಅರ್ಧನಾರಿಯಾದವನ, ಬಾಣನ ಬಾಗಿಲಕಾಯ್ದವನ;**
**ನಂಬಿಗೆ ಕುಂಟಿಣಿಯಾದವನ,**
**ಚೋಳಂಗೆ ಹೊನ್ನ ಮಳೆಯ ಕರೆದವನ;**
**ಎನ್ನ ಮನಕ್ಕೆ ಬಂದವನ, ಸದ್ಭಕ್ತರ ಹೃದಯದಲ್ಲಿಪ್ಪವನ;**
**ಮಾಡಿದ ಪೂಜೆಯ ಲೊಪ್ಪುವನ, ಕೂಡಲ ಸಂಗಯ್ಯ ನೆಂಬವನ!**

ಬಂಗಾರದ ಪಾದುಕೆಗಳನ್ನು ಮೆಟ್ಟಿ, ಹಿಮ್ಮಡದವರೆಗೂ ಕೆಂಜೆಡೆಗಳು ಇಳಿಬಿದ್ದು, ಭಸ್ಮಧೂಲಿತದಿಂದಲೂ ಕರ ಕಪಾಲ ಧರನಾಗಿಯೂ, ಅರ್ಧ ನಾರೀನಟೇಶ್ವರನಾಗಿಯೂ ಬಾಣಾಸುರನ ಬಾಗಿಲ ಕಾಯುವ ದಂಡಧಾರಿಯಾಗಿಯೂ ನಂಬಿದವರ ಮನಾಲಂಬನಾಗಿಯೂ, ಭಕ್ತಿಗೆ ಮೆಚ್ಚಿ ಚೋಳರಾಜನಿಗೆ ಚಿನ್ನದ ಮಳೆಸುರಿಸಿದ ಸುಯೀಂದ್ರನಾಗಿಯೂ ನನ್ನ ಮನಸ್ಸಿಗೆ ಒಪ್ಪಿದ ವಲ್ಲಭನಾಗಿಯೂ; ಭಕ್ತರ ಹೃದಯದಲ್ಲಿರುವ ತೇಜನೂ, ಯಾವ ಪೂಜೆ ಮಾಡಿದರೂ ಸುಂದರನಾಗಿ ತೋರುವ ಸುಂದರಾಂಗನಾಗಿಯೂ ಶೋಭಿಸುವವನೇ, ಹೊಳೆವವನೇ ನಮ್ಮ ಕೂಡಲ ಸಂಗಮದೇವ.

**೫೦೨ ಮನಕ್ಕೆ ಮನೋಹರವಲ್ಲದ ಗಂಡರು**
**ಮನಕ್ಕೆ ಬಾರರು, ಕೇಳವ್ವಾ ಕೆಳದೀ.**
**ಪನ್ನಗ ಭೂಷಣರಲ್ಲದ ಗಂಡರು**
**ಇನ್ನೆನಗಾಗದ ನೊರೆ, ನೋಡವ್ವಾ!**

**ಕನ್ನೆಯಂದಿನ ಕೂಟ: ಚಿಕ್ಕಂದಿನ ಬಾಳುವೆ,**
**ನಿಮ್ಮಾಣೆಯಯ್ಯಾ, ಕೂಡಲ ಸಂಗಮದೇವಾ!**

ನನ್ನಪ್ರಿಯಗೆಳತಿ ಕೇಳು-ಮನಸ್ಸಿಗೆ ಹಿಡಿಸದ-ಮನೋಹರನಲ್ಲದ ಗಂಡರು ಬೇಸರದ ಗಂಡರು. ಸರ್ಪದುಡಿಗೆ ತೊಡಿಗೆಗಳನ್ನಿಟ್ಟುಕೊಂಡು ಕಂಗೊಳಿಸದ ಗಂಡರು-ನನಗೆಂದೂ ಸೇರರು-ಆಗದ ದುಃಖವೇಸರಿ. ಚಿಕ್ಕಂದಿನಿಂದಲೂ ಹರನೊಡನೆ ಬಾಳಿದ ಸುಖ, ಹರೆತನದಲ್ಲಿ ಲಿಂಗಸಂಗಿಯಾಗಿ ಕೂಡಿದ ಕೂಟದ ಸುಖ; ಅಹಾ! ಈಗ ಬಿಟ್ಟೆನಾದರೆ ನಿನ್ನಾಣೆ! ಕೂಡಲ ಸಂಗಮದೇವಾ. (ಸತಿಪತಿಭಾವ).

**೫೦೩ ಜಗವೆಲ್ಲಾ ಅರಿಯಲು ಎನಗೊಬ್ಬ ಗಂಡನುಂಟು:**
**ಆನು ಮುತ್ತೈದೆ, ಆನು ನಿಟ್ಟೈದೆ.**
**ಕೂಡಲ ಸಂಗಯ್ಯನಂತಪ್ಪ ಎನಗೊಬ್ಬ ಗಂಡನುಂಟು!**

ಜಗತ್ತಿನ ನಾನಾ ಬಗೆಯ ವ್ಯಾಪಾರ, ರೂಪಾರೂಪ, ಭೇದಾಭೇದ, ಬಾಹ್ಯಾಂತರ, ಸ್ಥಿರ-ಚರ-ಗತಿ-ನಿರ್ಗತಿಗಳನ್ನು ತಿಳಿಸಿಕೊಡಲು ನನಗೊಬ್ಬ ಗಂಡನುಂಟು ನಾನು ಮುತ್ತೈದೆ-ಅಖಂಡ ಮುತ್ತೈದೆ ಕೂಡಲ ಸಂಗನ ಸಾದೃಸ್ಯನಾದ ಸಕಲಗುಣ ಸಂಪನ್ನನಾದ ನನಗೊಬ್ಬ ಗಂಡನಿದ್ದಾನೆ.

**೫೦೪ ಸಂಸಾರವೆಂಬ ಶ್ವಾನನಟ್ಟಿ ಮೀಸಲ ಬೀಸರ ಮಾಡದಿರಯ್ಯಾ.**
**ಎನ್ನ ಚಿತ್ತವು ನಿಮ್ಮ ಧ್ಯಾನವಯ್ಯಾ:**
**ನೀವಲ್ಲದೆ ಮತ್ತೇನನೂ ಅರಿಯೆನು.**
**ಕನ್ನೆಯಲ್ಲಿ ಕೈವಿಡಿದೆನು, ನಿಮ್ಮಲ್ಲಿ ನೆರೆದೆನು,**
**ಮನ್ನಿಸು, ಕಂಡಾ, ಮಹಾಲಿಂಗವೇ.**
**ಸತಿಯಾನು, ಪತಿ ನೀನು, ಅಯ್ಯಾ:**
**ಮನೆಯೊಡೆಯ ಮನೆಯ ಕಾಯ್ದಿಪ್ಪಂತೆ**
**ನೀನೆನ್ನ ಮನವ ಕಾಯ್ದಿಪ್ಪ ಗಂಡನು!**
**ನಿಮಗೋತ ಮನವ ನಸ್ಯಕ್ಕೆ ಹರಿಸಿದರೆ**
**ನಿನ್ನಭಿಮಾನ ಹಾನಿ, ಕೂಡಲ ಸಂಗಮದೇವಾ.**

ದಯಾನಿಧೆ ಶಿವಲೀಲಾ ಲಿಂಗವೆ, ಸಂಸಾರವೆಂಬ ನಾಯಿಯನ್ನು ಛೂ ಬಿಟ್ಟು ನನ್ನ ಬೇಟೆಯಾಡಬೇಡ. ನಿರಂತರ ನಿನ್ನನ್ನೇ ನೆನೆಯುತ್ತೇನೆ. ನಾನು ಒಲವಿನೆಣ್ಣಾಗಿ ಕೈಹಿಡಿದರೂ, ನಿನ್ನನ್ನೇ ನಾನು ಕೂಡಿಕೊಂಡಿರುವೆ. ಕರುಣಿಸು ಮಹಾಲಿಂಗ. ನಾನು ಸತಿ. ನೀನು ಪತಿ. ನೀನು ನನ್ನ ಮನಸ್ಸನ್ನು ಹರಿದಾಡದಂತೆ ಒಂದೆಡೆ ನಿಲ್ಲುವಂತೆ ಮಾಡುವ ಮಾಟಗಾರ ಗಂಡನಿನ್ನನ್ನು ಬಿಟ್ಟು ಬೇರೆಡೆಗೆ ಮನ ಹರಿಬಿಟ್ಟರೆ ನಿನ್ನ ಕುಲದಭಿಮಾನಕ್ಕೆ ಕುಂದು ಕೂಡಲ ಸಂಗಮದೇವಾ.

## ಭಕ್ತನೈಕ್ಯಸ್ಥಳ

೫೦೫ ನೀನೊಲಿಯಿತ್ತೇ ಪುಣ್ಯ: ನೀನೊಲ್ಲುದುದೇ ಪಾಪ,
ಕಂಡಯ್ಯಾ
ಸಕಲ ಜಗದೊಳಗೆ ಅನುಶ್ರುತನಾಗಿಪ್ಪೆಯಯ್ಯಾ;
ನೀನೊಲಿದವನೇ ನಿಮ್ಮನರಿವನು:
ನೀನೊಲಿದವನೇ ಧನ್ಯ, ಜಗಕ್ಕೆ ಪಾವನ,
ಕೂಡಲ ಸಂಗಮದೇವಾ.

ಕೂಡಲ ಸಂಗಮದೇವಾ ನಿಮಗೆ ಬೇಕಾದುದೇ ಪುಣ್ಯ, ಬೇಡಾದ ವಸ್ತುವೇ ಪಾಪ; ನಿನ್ನ ಧ್ವನಿ ಕೇಳಲು ಬರುವಂತಿಲ್ಲ; ಆದ ಕಾರಣ ನಿನ್ನ ಕೃಪೆ ಯಾರಿಗೆ ಇದೆಯೋ ಅವನಿಗೇ ನಿಮ್ಮನ್ನು ತಿಳಿಯಲು ಸಾಧ್ಯವಾಗುತ್ತದೆ; ಆ ಶರಣನೇ ಧನ್ಯನು; ಮತ್ತು ಜಗಕ್ಕೆ ಪಾವನನು.

೫೦೬ ಅಷ್ಟವಿಧಾರ್ಚನೆ ಷೋಡಶೋಪಚಾರವ,
ಅಂದಂದಿನ ಕೃತ್ಯವನಂದಂದಿಗೆ ಆನು ಮಾಡಿ
ಶುದ್ಧನಯ್ಯಾ !
ಹಂಗ ಹರಿಯಿಲ್ಲದ ಕಾರಣ,
ಕೂಡಲ ಸಂಗಮದೇವ ನಿಷ್ಫಲದಾಯಕನಾಗಿ,
ಆನು ಮಾಡಿ ಶುದ್ಧನಯ್ಯಾ!

ಎಂಟು ಪ್ರಕಾರಗಳ ಪೂಜೆ ಮಾಡಿ ಹದಿನಾರು ಉಪಚಾರಗಳನ್ನು ಮಾಡಿ ನಿತ್ಯ ನಿತ್ಯ ಕರ್ಮಗಳನ್ನು ಚಾಚೂ ತಪ್ಪದೆ ಮಾಡಿ ನಾನು ಶುದ್ಧ ನಾಗಿರುವೆನು; ಕೂಡಲಸಂಗಮದೇವಾ, ಫಲಾಪೇಕ್ಷೆಯಿಲ್ಲದೆ ಪೂಜೆ ಮಾಡಿದ ಕಾರಣ ನನಗೆ ಯಾರ ಹಂಗೂ ಇಲ್ಲ. ನಾನು ಪವಿತ್ರನಾಗಿರು ವೆನು.

**೫೦೭ 'ಮಾಟ-ಕೂಟ-ಫಲಪ್ರಾಪ್ತಿ' ಎಂಬ ಮಾತ**
**ಕೇಳಲಾಗದು, ಶಿವ ಶಿವಾ**
**ನಿಮ್ಮ ಭಕ್ತರಿಗೆ 'ಮಾಡಿದೆ' ನೆನ್ನದಿರೆಂದು**
**ಶ್ರೀ ಗುರು ಲಿಂಗವು ಕೃಪೆಯ ಮಾಡಿದ ಕಾರಣ,**
**ಅಲ್ಲಿ ಮಾಡುವರೂ ಮಾಡಿಸಿ ಕೊಂಬುವರೂ ನೀವೇ,**
**ಕೂಡಲ ಸಂಗಮದೇವಾ.**

ಭಕ್ತಿಯ ಮಾಡಿ ಅದರ ಫಲವೆಂದು ತಿಳಿದು ನಿಮ್ಮಲ್ಲಿ ನಾನು ಕೂಡುವೆ ನೆಂದು ಬಾಯಿಂದ ನುಡಿಯಬಾರದು, ಮಹಾ ಪಾತಕವಾಗುತ್ತದೆ. ಭಕ್ತ ರಿಗೆ ಮಾಡಿದೆನೆಂದು ಅನ್ನಬಾರದೆಂದು ಹಾಗೆ ನುಡಿಯದಂತೆ ಗುರು ಕರು ಣಿಸಿ ಉಪದೇಶ ಕೊಟ್ಟ ಕಾರಣ– ಮಾಡುವವರೂ ಮಾಡಿಸಿಕೊಳ್ಳುವವರೂ ನೀವೇ ಎಂದು ತಿಳಿದುಕೊಂಡೆನು, ಕೂಡಲ ಸಂಗಮದೇವಾ !

**೫೦೮ ಅಯ್ಯಾ, ನಿಮ್ಮ ಅನುಭಾವದಿಂದ ಎನ್ನ ತನು**
**ಹಾಳಾಯಿತ್ತಯ್ಯಾ!**
**ಅಯ್ಯಾ, ನಿಮ್ಮ ಅನುಭಾವದಿಂದ ಎನ್ನ ಮನ**
**ಹಾಳಾಯಿತ್ತಯ್ಯಾ!**
**ಅಯ್ಯಾ ನಿಮ್ಮ ಅನುಭಾವದಿಂದ ಎನ್ನ ಕರ್ಮ**
**ಛೇದನವಾಯಿತ್ತಯ್ಯಾ!**
**ನಿಮ್ಮವರು ಹೇಳಿ ಅಡಿಗಡಿಗೆ ಭಕ್ತಿಯೆಂಬ ಒಡವೆಯ**
**ದಿಟಮಾಡಿ ತೋರಿದರು, ಕೂಡಲ ಸಂಗಮದೇವಾ.**

ತಂದೆಯೇ ನಿಮ್ಮ ಶಕ್ತಿಯ ಸೂಕ್ಷ್ಮಜ್ಞಾನವಾದುದರಿಂದ ನನ್ನ ಟೊಳ್ಳುದೇಹವು ನಾಶವಾಯಿತು; ನನ್ನ ಹುಳುಕು ಮನಸ್ಸು ಹಾಳಾ

ಯಿತು; ಅಲ್ಲದೆ ನನ್ನ ಸರ್ವ ಕರ್ಮಗಳೂ ಕತ್ತರಿಸಿ ಹೋದವು; ಹೆಜ್ಜೆ-ಹೆಜ್ಜೆಗೆ ಭಕ್ತಿಯೆಂಬ ಭಕ್ತನ ಆ ಭರಣವನ್ನು ಸತ್ಯವಾಗಿರಿಸಿ ತೋರಿದರು ನಿಮ್ಮ ಶರಣರು ಕೂಡಲಸಂಗಮದೇವಾ !

**೫೦೯ ಭಕ್ತನೆಂತೆಂಬೆನಯ್ಯಾ ಭವಿಸಂಗ ಬಿಡದನ್ನಕ್ಕ?**
**ಮಾಹೇಶ್ವರನೆಂತೆಂಬೆನಯ್ಯಾ ಪರಸ್ತ್ರೀಯು ಪರರರ್ಥ ಬಿಡದನ್ನಕ್ಕ?**
**ಪ್ರಸಾದಿಯೆಂತೆಂಬೆನಯ್ಯಾ ಆಧಿ ವ್ಯಾಧಿನಷ್ಟವಾಗದನ್ನಕ್ಕ?**
**ಪ್ರಾಣಲಿಂಗಿಯೆಂತೆಂಬೆನಯ್ಯಾ ಪ್ರಾಣಸ್ವಸ್ಥಿರ ವಾಗದನ್ನಕ್ಕ?**
**ಶರಣನೆಂತೆಂಬೆನಯ್ಯಾ ಪಂಚೇದ್ರಿಯು ನಾಸ್ತಿಯಾಗದನ್ನಕ್ಕ?**
**ಐಕ್ಯನೆಂತೆಂಬೆನಯ್ಯಾ ಜನನ ಮರಣ ವಿರಹಿತ ವಾಗದನ್ನಕ್ಕ?**
**ಇಂತಪ್ಪ ಭಾಷೆ ವ್ರತನೇಮಗಳ ನಾನರಿಯೆನಯ್ಯಾ!**
**ಅಘಟಿತ ಘಟಿತ ವರ್ತಮಾನವ ನಾನರಿಯೆನಯ್ಯಾ!**
**ನಿಮ್ಮ ಶರಣರ ತೊತ್ತು, ಭೃತ್ಯಾಚಾರವ ಮಾಡುವೆ,**
**ಕೂಡಲ ಸಂಗಮದೇವಾ.**

ನಾಸ್ತಿಕರ ಸಹವಾಸ ಬಿಡದ ಹೊರತು ಭಕ್ತನಾಗುವುದು ಸಾಧ್ಯವಿಲ್ಲ; ಪರರ ಹೆಂಡತಿ ಮತ್ತು ದ್ರವ್ಯದ ಮೇಲಿನ ಆಶೆ ತಪ್ಪದೆ ಅವನು ಮಹೇಶ್ವರನಾಗಲು ಸಾಧ್ಯವಿಲ್ಲ; ಪೂರ್ವಜನ್ಮದ ಪಾಪಗಳೂ ಮತ್ತು ಸಂಸಾರ ಜಂಜಡವೂ ಕಳಚಿ ಬೀಳದ ಹೊರತು ಪ್ರಸಾದಿಯಾಗಲು ಸಾಧ್ಯವಿಲ್ಲ; ಪ್ರಾಣವು ಪರಮಾತ್ಮನಲ್ಲಿ ಲೀನವಾಗದೆ ಅವನು ಪ್ರಾಣಲಿಂಗಿಯಾಗಲು ಸಾಧ್ಯವಿಲ್ಲ. ಪಂಚೇಂದ್ರಿಯಗಳಗುಣ ನಾಶವಾಗದ ಹೊರತು ಶರಣನಾಗುವುದು ಕಠಿಣ. ಪುನರ್ಜನ್ಮನಾಸ್ತಿಯಾಗುವವರೆಗೆ ಐಕ್ಯನಾಗಲು ಬರುವುದಿಲ್ಲ; ಈ ಎಲ್ಲ ವ್ರತನೇಮಗಳು ನನಗೆ ತಿಳಿದಿಲ್ಲ; ಆಗಬಾರದ್ದು ಆಗುವ ಈ ಕಾಲದ ವರ್ತಮಾನ ನಾನು ತಿಳಿಯಲಾರೆ; ಕೂಡಲ ಸಂಗಮದೇವಾ ನಾನು ಶರಣರ ಮನೆಯ ಆಳು.

೫೦೦ ತನು ಸಾರಾಯರ, ಮನ ಸಾರಾಯರ, ಜ್ಞಾನಸಾರಾಯರ
ತೋರಯ್ಯಾ, ನಿಮ್ಮ ಧರ್ಮ!
ಭಾವ ಸಾರಾಯರ, ಭಕ್ತಿ ಸಾರಾಯರ,
ತೋರಯ್ಯಾ, ನಿಮ್ಮ ಧರ್ಮ!
ನಿಮ್ಮ ನರಿಯದವಗುಣಿಗಳ ತೋರದಿರಯ್ಯಾ ನಿಮ್ಮ
ಧರ್ಮ !

ದೇಹಭಾವದಲ್ಲಿರುವವರನ್ನು, ಮನಭಾವದಲ್ಲಿರುವವರನ್ನು, ಜ್ಞಾನ ಭಾವದಲ್ಲಿರುವವರನ್ನು, ಭಾವನೆಗಳಲ್ಲಿರುವವರನ್ನು ಮತ್ತು ಭಕ್ತಿರಸದಲ್ಲಿರು ವವರನ್ನು ನನಗೆ ತೋರಿಸು ದೇವಾ; ಅದು ನಿಮ್ಮ ಧರ್ಮ! ಅಲ್ಲದೆ ನಿಮ್ಮಲ್ಲಿ ಭಕ್ತಿ ವಿಶ್ವಾಸವಿಲ್ಲದ ದುರ್ಜನರು ನನ್ನ ಕಣ್ಣಿಗೆ ಬೀಳದಂತೆ ಮಾಡುವುದು ನಿಮ್ಮ ಧರ್ಮ ಕೂಡಲಸಂಗಮದೇವಾ !

೫೧೧ ಅಭ್ಯಾಸವೆನ್ನ ವರ್ತಿಸಿತ್ತಯ್ಯಾ:
ಭಕ್ತಿ ಸಾಧ್ಯವಾಗದು, ನಾನೇವೆನಯ್ಯಾ?
ಆ ನಿಮ್ಮ ಮನ ಬೊಗುವನ್ನಕ್ಕ ನೀವೆನ್ನ ಮನ
ಬೊಗುವನ್ನಕ್ಕ
ಕಾಯಗುಣಂಗಳ ಕಳೆದವರಿಗೆ ಶರಣೆಂಬೆ,
ಕೂಡಲ ಸಂಗಮದೇವಾ.

ಪ್ರಪಂಚದ ನಿತ್ಯ ಕರ್ಮಗಳ ರೂಢಿಯು ನನ್ನನ್ನು ಸುತ್ತುಗಟ್ಟಿದೆ; ಕಾರಣ ಭಕ್ತಿಯನ್ನು ಮಾಡುವುದು ಕಠಿಣವಾಗಿದೆ; ನಾನು ನಿಮ್ಮ ಧ್ಯಾನ ದಲ್ಲಿ ತಲ್ಲೀನನಾಗುವ ತನಕ ಮತ್ತು ನೀವು ನನ್ನ ಮನದಲ್ಲಿ ನಿಲ್ಲುವ ತನಕ ಬಲು ಕಷ್ಟ. ದೇಹದಲ್ಲಿರುವ ದುರ್ಗುಣಗಳನ್ನು ದೂರು ಮಾಡಿಕೊಂಡ ಶರಣರಿಗೆ ಶಿರಬಾಗುವೆನು; ಕೂಡಲ ಸಂಗಮದೇವಾ !

೫೧೨ ಸಂಚುವಿಲ್ಲದ, ಭಕ್ತಿವಂಚನೆಯಿಲ್ಲದ
ಮಹಂತನ ತೋರಾ,
ತನುಶುಚಿಗಳ ಮನಶುಚಿಗಳ ತೋರಾ.

**ಇಂತಪ್ಪ ಶಿವಲಿಂಗೈಕ್ಯರ ತೋರಿ, ಬದುಕಿಸು,**
**ಕೂಡಲ ಸಂಗಮದೇವಾ.**

ಮೋಸಗಾರನಲ್ಲದ ಮತ್ತು ಭಕ್ತಿಯನ್ನು ನಿರ್ವಂಚನ ಬುದ್ಧಿಯಿಂದ ಮಾಡುವ ಮಹಾತ್ಮನ ದರ್ಶನ ಮಾಡಿಸು. ಈ ರೀತಿ ಶಿವಲಿಂಗರಲ್ಲಿ ಬಯಲಾ-ದಐಕ್ಯರ ಪಾದಗಳ ದರ್ಶನ ಲಾಭ ಮಾಡಿಸಿ ನನ್ನನ್ನು ಕಾಪಾಡು ಕೂಡಲ ಸಂಗಮದೇವಾ!

**೫೧೩ ಕಾಮಸಂಗವಳಿದು ಅನುಭಾವ ಸಂಗದಲುಳಿದವರ**
**ಅಗಲಲಾರೆನು.**

**ಶಿವಂಗೆ ಮಿಗೆ ಯೊಲಿದವರನು ನಾನಗಲಲಾರೆನು, ಕಾಣಾ,**
**ಕೂಡಲ ಸಂಗಮದೇವಾ.**

ಕಾಮನನ್ನು ಸುಟ್ಟು ಲಿಂಗಸಾಕ್ಷಾತ್ಕಾರ ಪಡೆದವರ ಸಂಗದಿಂದಲೂ ಮತ್ತು ಶಿವನ ಅತ್ಯಂತ ಮೆಚ್ಚಿಗೆಗೆ ಪಾತ್ರರಾದವರ ಸಹವಾಸದಿಂದಲೂ ನಾನು ಒಂದು ಅರೆನಿಮಿಷವಾದರೂ ಬಿಟ್ಟು ಅಗಲಲು ಸಾಧ್ಯವಿಲ್ಲ; ಕೂಡಲ ಸಂಗಮದೇವಾ!

**೫೧೪ ಭಕ್ತಿರತಿಯಂ ವಿಕಳತೆಯ ಯುಕ್ತಿಯನೇನ**
**ಬೆಸಗೊಂಬಿರಯ್ಯಾ?**

**ಕಾಮಿಗುಂಟೆ-ಲಜ್ಜೆ ನಾಚಿಕೆ? ಕಾಮಿಗುಂಟೆ**
**ಮಾನಾಪಮಾನವು?**

**ಕೂಡಲ ಸಂಗನ ಶರಣರಿಗೊಲಿದ ಮರುಳನನೇನ**
**ಬೆಸಗೊಂಬಿರಯ್ಯಾ?**

ಭಕ್ತಿಯೆಂಬ ಶುದ್ಧವಾದ ರತಿ ಸುಖದ ಜಾಣತನದ ಬಗೆಗೆ ಏನೆಂದು ಹೇಳುವಿರಿ ? ಕಾಮುಕ ಸ್ತ್ರೀಗೆಂದಾದರೂ ಲಜ್ಜೆ ನಾಚಿಕೆ ಎಂಬುದು ಇರುವುದೆ ? ಅವಳಿಗೆ ಮಾನಾಪಮಾನಗಳೂ ಒಂದೆ. ಕೂಡಲ ಸಂಗನ ಶರಣರನ್ನು ಬಹುವಾಗಿ ಮೆಚ್ಚಿಕೊಂಡು ಹುಚ್ಚನಾದ ನನ್ನನ್ನು ಏನೆಂದು ಕರೆಯುವಿರಿ ?

೫೧೫ ಇಂದು ಹುಟ್ಟಿದ ಕೂಸಿಂಗೆ ಇಂದೆ ಜವ್ವನವಾಯಿತ್ತಯ್ಯಾ!
ಆ ಕೂಸು ಬೀದಿಯಲ್ಲಿ ಒತ್ತೆಯಕೊಳ್ಳಲು ನಿಂದಿತ್ತಯ್ಯಾ!
ಇದರ ಸಂಗ ಸುಖದನುಭಾವವನು
ಕೂಡಲ ಸಂಗಮದೇವ ತಾನೇ ಬಲ್ಲ!

ಈ ದಿನ ಹುಟ್ಟಿದ ಹೆಂಗೂಸು ಈ ದಿನವೇ ತರುಣಿಯಾದಳು; ಮತ್ತು ದಾರಿಯಲ್ಲಿ ಹೋಗು ಬರುವ ವಿಟರಿಂದ ದುಡ್ಡು ಕಿತ್ತತೊಡಗಿದ್ದಾಳೆ; ಇವಳ ಸಖ್ಯದ ಸುಖವನ್ನು ಕೂಡಲ ಸಂಗಮ ದೇವರೆ ಬಲ್ಲ !

೫೧೬ ಸಕ್ಕರೆಯ ಕೊಡನ ತುಂಬಿ ಹೊರಗೆ ಸವಿದರೆ
ರುಚಿಯುಂಟೆ?
ತಕ್ಕೈಸಿ ಭುಜ ತುಂಬಿ ಲಿಂಗಸ್ಪರ್ಶನವ ಮಾಡದೆ
ಅಕ್ಕಟಾ! ಸಂಸಾರ ವೃಥಾ ಹೋಯಿತ್ತಲ್ಲಾ!
ಅದೇತರ ಭಕ್ತಿ? ಅದೇತರ ಮುಕ್ತಿ?
ಕೂಡಿಕೋ ಕೂಡಲ ಸಂಗಮದೇವಾ.

ಕೊಡದೊಳಗೆ ಸಕ್ಕರೆ ತುಂಬಿಟ್ಟು ಅದರ ಹೊರಮೈಯನ್ನು ನೆಕ್ಕಿದರೆ ಅದು ರುಚಿಯೇನು ಕೊಟ್ಟೀತು ? ಲಿಂಗವನ್ನು ಎರಡೂ ತೋಳುಗಳಿಂದ ಬಲವಾಗಿ ಆಲಿಂಗಿಸದೆ ಹೋದರೆ ಅವನ ಬಾಳ್ವೆ ಕೊಡದ ಹೊರಮೈ ನೆಕ್ಕಿದಂತಾಗುತ್ತದೆ. ಅದು ಭಕ್ತಿಯೂ ಅಲ್ಲ; ಮುಕ್ತಿಯೂ ಅಲ್ಲ !

೫೧೭ ಕಾಳಿದಾಸಂಗೆ ಕಣ್ಣನಿತ್ತೆ, ಓಹಿಲಯ್ಯನ
ನಿಜಪುರಕ್ಕೊಯಿದೆ;
ನಂಬಿ ಕರೆದೊಡೆ ಓ ಎಂದೆ,
ತೆಲುಗ ಬೊಮ್ಮಯ್ಯಂಗೆ ಒಲಿದೆ, ದೇವಾ.
ಕೂಡಲ ಸಂಗಮದೇವಾ,
ಎನ್ನನೇಕೆ ಒಲ್ಲೆಯಯ್ಯಾ ?

ಕಾಳಿದಾಸನಿಗೆ ಜ್ಞಾನದ ಕಣ್ಣುಗಳನ್ನು ಕೊಟ್ಟೆ; ಓಹಿಲೇಶ್ವರನನ್ನು ಕೈಲಾಸಕ್ಕೆ ಕರೆನುಕೊಂಡು ಹೋದಿ, ತೆಲುಗರ ಬೊಮ್ಮಯ್ಯನಿಗೆ ಮೆಚ್ಚಿ

ದರ್ಶನ ಕೊಟ್ಟಿ, ದೇವಾ, ನನ್ನನ್ನೇಕೆ ನೀನು ಒಲ್ಲೆ ಹೇಳು ಕೂಡಲ ಸಂಗಮದೇವಾ ?

೫೧೮ **ಪರಚಿಂತೆ ಎನಗೇಕಯ್ಯಾ ? ನಮ್ಮ ಚಿಂತೆ ನಮಗೆ ಸಾಲದೆ?**
**'ಕೂಡಲ ಸಂಗಯ್ಯ ಒಲಿದಾನೋ, ಒಲಿಯನೋ' ಎಂಬ ಚಿಂತೆ**
**ಹಾಸಲುಂಟು, ಹೊದೆಯಲುಂಟು !**

ನನಗೆ ಹಾಸಲಿಕ್ಕೆ ಹೊದೆಯಲಿಕ್ಕೆ ಬಟ್ಟೆ ಬರೆಗಳಿವೆ; ಕೂಡಲ ಸಂಗಮದೇವರು ನನಗೆ ಕೃಪೆ ಮಾಡುವನೋ ಇಲ್ಲವೋ ಎಂಬ ಚಿಂತೆ ಬಲವಾಗಿರುವಾಗ ಬೇರೆಯವರ ಹಿತಚಿಂತನೆ ಮಾಡುವುದೆಲ್ಲಿಯ ಮಾತು ?

೫೧೯ **ಕಣ್ಣಕೋಪಕ್ಕೆ ಮುಂದರಿಯದೆ ನುಡಿದೆ;**
**ಮನ ಮೆಚ್ಚಿ ಮರುಳಾದೆ, ನೋಡವ್ವಾ !**
**ಕೇಳು, ಕೇಳವ್ವಾ, ಕೆಳದೀ,**
**ಸಖಿಯರಿಲ್ಲದೆ ಸುಖವ ಬಯಸುವರುಂಟೆ ? ಹೇಳಾ.**
**ಎನ್ನ ಮುನಿಸು ಎನ್ನಲ್ಲಿಯೆ ಅಡಗಿತ್ತು:**
**ಇನ್ನು ಬಾರಯ್ಯಾ, ಕೂಡಲ ಸಂಗಮದೇವಾ.**

ಒಡೆಯನು ಕಣ್ಣಿನಿಂದ ಮಾಡಿದ ಸಿಟ್ಟಿಗಾಗಿ ನಾನು ಯಾವದನ್ನು ತೆಗೆದುಕೊಳ್ಳದೆ ಮಾತನಾಡಿದೆ; ಆದರೆ ನಾನು ಮನಸಾ ಪ್ರೀತಿಸಿ ಮೆಚ್ಚಿಕೊಂಡು ಹುಚ್ಚನಾಗಿರುವೆನು; ಸಖಿಯರಿಲ್ಲದೆ ಯಾರಾದರು ರತಿ ಸುಖವನ್ನು ಇಚ್ಛಿಸುವದುಂಟೆ? ನನ್ನ ಸಿಟ್ಟು ನನ್ನಲ್ಲಿಯೇ ಮಾಯವಾಗಿದೆ; ಇನ್ನು ಬಂದು ನನ್ನನ್ನು ಕೂಡಿಕೊಳ್ಳು ಕೂಡಲ ಸಂಗಮದೇವಾ!

೫೨೦ **ಲಜ್ಜೆಗೆಟ್ಟೆನು, ನಾಣಗೆಟ್ಟೆನು;**
**ಕುಲಗೆಟ್ಟೆನು ಛಲಗೆಟ್ಟೆನು:**
**ಸಂಗಾ ನಿನ್ನ ಪೂಜಿಸಿ ಭವಗೆಟ್ಟೆನು, ನಾನಯ್ಯಾ !**
**ಕೂಡಲ ಸಂಗಮ ದೇವಯ್ಯಾ,**
**ನಿಮ್ಮ ಮುಟ್ಟಿ ಹುಟ್ಟುಗೆಟ್ಟೆನಯ್ಯಾ ನಾನು !!**

ಕುಲವೆಂಬ ಬಂಧನದಿಂದಲೂ, ಮಾನ-ಅಪಮಾನಗಳೆಂಬ ಕಲ್ಪಿತ ಸಮಾಜದ ನಿಯಮಗಳಿಂದಲೂ, ಹಟವೆಂಬ ಅಹಂಕಾರದಿಂದಲೂ ನಾನು ಬಲು ದೂರವಾಗಿದ್ದೆನು; ದೇವಾ, ನಿಮ್ಮನ್ನು ಪೂಜಿಸಿ ನಾನು ನನ್ನ ಸಂಸಾರ ಬಂಧನಗಳನ್ನು ತೊಡೆದು ಹಾಕಿದನು; ನಿಮ್ಮಪಾದ ಮುಟ್ಟಿ ಮುಕ್ತಿಯನ್ನು ಹೊಂದಿದೆನು ಕೂಡಲ ಸಂಗಮದೇವಾ!

**೫೨೧ ಮಾಡುವ ಭಕ್ತನ ಕಾಯ ಬಾಳೆಯ ಕಂಬದಂತಿರಬೇಕು:**
**ಮೆಲ್ಲಮೆಲ್ಲನೆ ಹೊರೆಯೆತ್ತಿ ನೋಡಿದರೆ**
**ಒಳಗೆ ಕೆಚ್ಚಿಲ್ಲದಿರಬೇಕು.**
**ಮೇಲಾದ ಫಲವ ನಮ್ಮವರು ಬೀಜ ಸಹಿತ ನುಂಗಿದರು.**
**ಎನಗಿನ್ನಾವ ಭಯವಿಲ್ಲ ಕಾಣಾ,**
**ಕೂಡಲ ಸಂಗಮದೇವಾ.**

ಭಕ್ತಿಯನ್ನು ಮಾಡುವ ಭಕ್ತನ ದೇಹವು ಬಾಳೆಯದಿಂಡಿನಂತೆ ತಂಪಾಗಿರಬೇಕು; ಶಾಂತಿರಸ ತುಂಬಿರಬೇಕು; ಒಳಗೆ ಸಿಟ್ಟೆಂಬ ಬೆಂಕಿಯ ಸುಳುವು ಇರಕೂಡದು; ನನ್ನಕರ್ಮದ ಫಲಗಳನ್ನು ಶರಣರು ತಿಂದು ನನ್ನನ್ನು ಸಾಯುಜ್ಯಪದವಿಗಟ್ಟಿದರು ಕೂಡಲ ಸಂಗಮದೇವಾ!

**೫೨೨ ಹರಿವ ನದಿಯ ತೆರನ ಹೋಲಬಲ್ಲದೆ ಭಕ್ತಿ;**
**ಕೂಡಿ ಮಯಿದಾನವ ನೀಡಬಲ್ಲರೆ ಭಕ್ತಿ;**
**ನೀಡಿ ಮಿಕ್ಕುದ ಕಾಯ್ದು ಕೊಂಡಿರಬಲ್ಲರೆ**
**ಕೂಡಿ ಕೊಂಡಿಪ್ಪ ನಮ್ಮ ಕೂಡಲ ಸಂಗಮದೇವ !**

ಹರಿಯುತ್ತಿರುವ ನದಿಯಂತೆ ನಿರ್ಮಲವಾಗಿರುವದೇ ಭಕ್ತಿ; ಸತಿಪತಿಗಳಿಬ್ಬರೂ ಏಕಮನದಿಂದ ದಾಸೋಹವ ಮಾಡುವುದೇ ಭಕ್ತಿ; ಜಂಗಮರಿಗೆ ನೀಡಿ ಉಳಿದುದನ್ನು ಸಂರಕ್ಷಿಸಿ ಕೊಂಡಿರುವರೇ ಕೂಡಲ ಸಂಗಮದೇವರಲ್ಲಿ ನಿಜವಾಗಿ ಕೂಡಿಕೊಳ್ಳುತ್ತಾರೆ.

**೫೨೩ ಏನು ಮಾಡುವೆ ಎನ್ನ ಪುಣ್ಯದ ಫಲವು !**
**ಶಾಂತಿಯ ಮಾಡ ಹೋದರೆ, ಕೂಡೆ ಬೇತಾಳನಾಯಿತ್ತು !**
**ಕೂಡಲ ಸಂಗಮ ದೇವನ ಪೂಜಿಸಿದೆನೆಂದರೆ**
**ಭಕ್ತಿ ಎಂಬ ಮೃಗವೆನ್ನನಟ್ಟಿ ಬಂದು ನುಂಗಿತ್ತಯ್ಯಾ !**

ಎಲ್ಲವೂ ನನ್ನ ಭಾಗ್ಯ! ನಾನು ಮಾಡುವುದೇನೂ ಇಲ್ಲ; ಶಾಂತಿಯನ್ನು ಮಾಡಲು ಹೋದರೆ ಅದು ಭೂತವಾಗಿ ನಿಂತಿತು; ಕೂಡಲ ಸಂಗಮದೇವರನ್ನು ಪೂಜಿಸಿ ಫಲ ಪಡೆಯ ಬೇಕೆಂದರೆ ಭಕ್ತಿಯು ನನ್ನ ಮುಸುಕಿಟ್ಟಿತು.

**೫೨೪ ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ**
**ಲಿಂಗವೆಂಬ ಎಲೆಯಾಯಿತ್ತು.**
**ಲಿಂಗವೆಂಬ ಎಲೆಯ ಮೇಲೆ**
**ವಿಚಾರವೆಂಬ ಹೂವಾಯಿತ್ತು,**
**ಆಚಾರವೆಂಬ ಕಾಯಾಯಿತ್ತು;**
**ನಿಷ್ಪತ್ತಿಯೆಂಬ ಹಣ್ಣಾಯಿತ್ತು.**
**ನಿಷ್ಪತ್ತಿಯೆಂಬ ಹಣ್ಣು ತೊಟ್ಟು ಬಿಟ್ಟು ಕಳಚಿ ಬೀಳುವಲ್ಲಿ**
**ಕೂಡಲ ಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ.**

ಭಕ್ತಿಯ ನೆಲದಲ್ಲಿ ಗುರುವೆಂಬ ಬೀಜವು ಬೆಳೆದು ಲಿಂಗವೆಂಬ ಎಲೆಗಳಾದವು; ಎಲೆಗಳ ಮೇಲೆ ವಿಚಾರವೆಂಬ ಹೂವು ಬಿಟ್ಟಿತು; ಹೂವಿಗೆ ಆಚಾರದ ಕಾಯಿಗಳಾದವು; ಈ ಕಾಯಿಗಳು ಮಾಗಿ ಮುಕ್ತಿಯೆಂಬ ಹಣ್ಣುಗಳಾದವು. ಈ ಮುಕ್ತಿಯ ಹಣ್ಣು ತುಂಬಿನಂತಿರುವ ಸಂಸಾರವನ್ನು ಬಿಟ್ಟು ಬೀಳುತ್ತಿರುವಾಗ ಕೂಡಲ ಸಂಗಮದೇವರು ತನ್ನಂತರಂಗದಲ್ಲಿಟ್ಟುಕೊಂಡನು.

**೫೨೫ ಜಂಗಮವ ಕೂಡಿಕೊಂಡು ಲಿಂಗಾರ್ಚನೆಯ**
**ಮಾಡುವುದು ಲೇಸಯ್ಯಾ ಭಕ್ತಂಗೆ**

**ಆ ಭಕ್ತನ ಕೂಡಿಕೊಂಡು ಲಿಂಗಾರ್ಚನೆಯ**
**ಮಾಡುವುದು ಲೇಸಯ್ಯಾ ಜಂಗಮಕ್ಕೆ.**
**ಆ ಜಂಗಮದ ಕರ್ತವ್ಯವೇ ಆ ಭಕ್ತಂಗೆ ದಾಸೋಹ !**
**ಆ ಭಕ್ತನ ಕಿಂಕಲವೆ ಆ ಜಂಗಮಕ್ಕೆ ದಾಸೋಹ !**
**ಆ ಭಕ್ತನೊಳಗೆ ಜಂಗಮವಡಗಿ,**
**ಆ ಜಂಗಮನೊಳಗೆ ಭಕ್ತನಡಗಿ–**
**ಇದೇನೆಂದು ಹವಣಿಸುವೆನಯ್ಯಾ ಎರಡೊಂದಾದ ಘನವ?**
**ಇದೇನೆಂದುಪಮಿಸುವೆನಯ್ಯಾ ತೆರಹಿಲ್ಲದ ಘನವ ?**
**ಈ ಎರಡಕ್ಕೆ ಭವವಿಲ್ಲೆಂದು ಕೂಡಲ ಸಂಗಯ್ಯಾ,**
**ನಿಮ್ಮ ಶೃತಿಗಳು ಹೇಳಿದುದಾಗಿ,**
**ನಿಮ್ಮ ಕರುಣ ವೆನಗಾಯಿತ್ತು.**

ಜಂಗಮ ಮತ್ತು ಭಕ್ತನು ಒಬ್ಬರಲ್ಲೊಬ್ಬರು ಅನ್ಯೋನ್ಯವಾಗಿ ಕೂಡಿಕೊಂಡಿರುವ ಕಾರಣ ಜಂಗಮನಿಗೆ ಸಲ್ಲಿಸಬೇಕಾದ ಪೂಜೆಯೇ ಭಕ್ತನಿಗೆ ದಾಸೋಹವಾಗುತ್ತದೆ; ಭಕ್ತನು ಭೃತ್ಯನಾಗಿ ಜಂಗಮನಸೇವೆ ಮಾಡುವುದೇ ಜಂಗಮಗೆ ದಾಸೋಹವಾಗುತ್ತದೆ; ಇವರೀರ್ವರ ಅಂತರಂಗ ಏಕರೂಪತೆಯೇ ಆ ಪರಮಾತ್ಮ ವಸ್ತುವು: ಕಾರಣ ಇವರಿಬ್ಬರೂ ಸಂಸಾರ ಮುಕ್ತರೆಂದು ಕೂಡಲ ಸಂಗಮದೇವಾ ನಿಮ್ಮ ವಚನ ಹೇಳುತ್ತದೆ. ಆದ್ದರಿಂದ ನಿಮ್ಮ ಕರುಣೆಯು ನನಗೆ ಲಭಿಸಿತು.

# ಮಾಹೇಶ್ವರ ಸ್ಥಳ

## ಮಾಹೇಶ್ವರ ಜ್ಞಾನಿ ಸ್ಥಳ

**೩೨೬ 'ಸ್ವಾಮಿ ನೀನು, ಶಾಶ್ವತ ನೀನು: '**
**ಎತ್ತಿದೆ ಬಿರುದ ಜಗವೆಲ್ಲರಿಯಲು.**
**'ಮಹಾದೇವ, ಮಹಾದೇವ: '**
**ಇಲ್ಲಿಂದ ಮುಂದೆ ಶಬ್ದವಿಲ್ಲ !**

**ಪಶುಪತಿ ಜಗಕ್ಕೆ ಏಕೋದೇವ:**
**ಸ್ವರ್ಗ ಮರ್ತ್ಯ ಪಾತಾಳದೊಳಗೆ**
**ಒಬ್ಬನೇ ದೇವ ಕೂಡಲ ಸಂಗಮದೇವ.**

ಸ್ವಾಮಿಯೇ ನೀನು ಶಾಶ್ವತನು; ಮಹಾದೇವನೆಂಬ ನಾಮಾಂಕಿತವನ್ನು ಧರಿಸಿದಿ; ಇನ್ನು ನಿನ್ನನ್ನು ವರ್ಣಿಸಲು ಶಬ್ದಗಳೇ ಇಲ್ಲ; ಈ ಗೇಳು ಲೋಕಗಳಿಗೂ ಹರನೊಬ್ಬನೇ ದೇವರು; ಕೂಡಲ ಸಂಗಮನೊಬ್ಬನೇ ದೇವರು !

**೫೨೭ ಶ್ರುತಿಗಗಮ್ಯ ದ್ವಾದಶಾಂತ್ಯನಪ್ರತಿಮ ಮಹಿಮಂಗೆ ಪ್ರತಿಯುಂಟೆ ?**
**'ಸೋಮಃ ಪವತೇ' ಎಂಬ ಶ್ರುತಿಯನರಿತು,**
**ಶಿವ 'ನೇಕೋ ದೇವ, ರುದ್ರನದ್ವಿತೀಯನೆ'ಂದು**
**ನಂಬುವುದು ಕಾಣಿರಣ್ಣಾ.**
**'ಕೂಡಲ ಸಂಗಮದೇವನಲ್ಲದೆ ಇಲ್ಲ' ವೆಂದೆತ್ತಿದೆ**
**ಬಿರುದ ಜಗವೆಲ್ಲರಿಯಲು.**

ಶ್ರುತಿಗಳಿಗೂ ತಿಳಿಯಲಾರದವನು ಮತ್ತು ಹನ್ನೆರಡು ಚಿಹ್ನನರಿಗೂ ಅಪ್ರತಿಮನೂ ಆದಶಿವನಿಗೆ ಪ್ರತಿಯುಂಟೆ? ಸೋಮರಸವನ್ನು ಕುಡಿದು ಅಜರಾಮರನಾದ ಶಿವನೊಬ್ಬನೇ ದೇವರು, ರುದ್ರನು ಅದ್ವಿತಿಯನು; ಕೂಡಲ ಸಂಗಮದೇವರಲ್ಲದೆ ಬೇರೆ ದೇವರಿಲ್ಲ.

**೫೨೮ ಉಪ್ಪರ ಗುಡಿ, ನಂದಿವಾಹನ ಸದ್ಯೋಜಾತನ**
**ಬಾಗಿಲ ಮುಂದೆ ಸಾರುತ್ತೈದಾನೆ, ನೋಡಾ:**
**ಶ್ರುತಿಗಳೂ ನಾಲ್ಕು ವೇದವೂ ಹುಸಿಯದೆ**
**'ಭರ್ಗೋ ದೇವಸ್ಯ ಧೀ ಮಹಿ' ಎಂಬುದಾಗಿ**
**ಕೂಡಲ ಸಂಗಮನಲ್ಲದಿಲ್ಲೆಂದುದು ವೇದ.**

ಬಾವುಟವನ್ನು ಮೇಲೇರಿಸಿಕೊಂಡು ನಂದಿಕೇಶ್ವರನ ಮಹಿಮೆಯನ್ನು ಬಾಲ ಬಸವರು ಮನೆಯ ಮುಂದೆ ಹೇಳುತ್ತ ಸಾಗಿದ್ದಾರೆ; ಶ್ರುತಿ

ಗಳೂ, ವೇದಗಳೂ ಸಹಿತ ಜಗವೆಲ್ಲವೂ ಪರಮಾತ್ಮನ ಚಿಚ್ಛಕ್ತಿಯಿಂದ ಭರಿತವಾಗಿದೆ; ಕೂಡಲ ಸಂಗಮ ದೇವರಿಲ್ಲದ ಜಗತ್ತಿಲ್ಲ.

**೫೨೯ 'ವೇದ ಸ್ವಯಂಭು' ವೆಂಬ ವಾದಿ ನೀ ಕೇಳೆಲವೋ:**
**ಏಕೋ ದೇವ ರುದ್ರನ ದ್ವಿತೀಯ' ನೆಂದು**
**ನಂಬುವುದು ಕಾಣಿರಣ್ಣಾ.**
**'ಓಂ ದ್ಯಾವಾ ಭೂಮೀಜನಯಂ ದೇವ ಏಕೋ ದೇವ**
**ಏಕೋ ಹಿ ರುದ್ರೋ ನದ್ವಿತೀಯಾಯ ತಸ್ತುಃ'**
**ಎಂದು ನಂಬುವುದು ಕಾಣಿರಣ್ಣಾ.**
**'ಚಕಿತ ಮಭಿದತ್ತೆ' ಎಂದು ಶೃತಿ ಸಾರುತ್ತೈದಾವೆ.**
**ಜಗದ ಕರ್ತ ಕೂಡಲ ಸಂಗಮದೇವನೊಬ್ಬನೇ, ಕಾಣಿರಣ್ಣಾ**

ವೇದವು ತನ್ನಿಂದ ತಾನೇ ಹುಟ್ಟಿದೆ ಎಂದು ವಾದಿಸುವ ಅಣ್ಣಗಳಿರಾ ಕೇಳಿರಿ; ರುದ್ರದೇವನೊಬ್ಬನೇ ಅದ್ವಿತೀಯನೆಂದು ತಿಳಿಯಿರಿ; ಸೃಷ್ಟಿ ಕರ್ತೃವಾದ ರುದ್ರದೇವನೊಬ್ಬನೇ ದೇವರು; ಬೇರೆ ದೇವರಿಲ್ಲ; ಇದು ಆಶ್ಚರ್ಯವಾದುದೆಂದು ಶೃತಿ ಹೇಳುತ್ತದೆ; ಕಾರಣ ಸೃಷ್ಟಿಕರ್ತನು ಕೂಡಲ ಸಂಗಮದೇವನೊಬ್ಬನೇ ನಿಜ.

**೫೩೦ ಶೃತಿ ತತಿಶಿರದ ಮೇಲೆ 'ಅತ್ಯತಿಷ್ಠದ್ದಶಾಂಗುಲ' ನ**
**ನಾನೇನೆಂಬೆನಯ್ಯಾ,**
**ಘನಕ್ಕೆ ಘನಮಹಿಮನ, ಮನಕ್ಕಗೋಚರನ ?**
**'ಅಣೋರಣೀಯಾನ್ ಮಹತೋ ಮಹೀಯಾನ್'**
**ಮಹಾದಾನೀ ಕೂಡಲ ಸಂಗಮದೇವ.**

ಚೇತನಾಯುಕ್ತ ಘನಕ್ಕೆ ಜ್ಞಾನಘನನಾಗಿರುವವನೂ ಮತ್ತು ಮನಸ್ಸಿಗೂ ಕಾಣದವನೂ, ಅಣುವಿಗಿಂತ ಅಣುವಾಗಿರುವವನೂ, ದೊಡ್ಡವಸ್ತುಗಳಲ್ಲಿ ಅತ್ತಿ ದೊಡ್ಡದೂ ಆಗಿದ್ದರೂ, ಕೇವಲ ಹತ್ತು ಅಂಗುಲ ಜಾಗದಲ್ಲಿರುವ ಮತ್ತು ಶೃತಿಗಳ ತಲೆಯಮೇಲೇರಿದವನನ್ನು ಏನೆಂದು ವರ್ಣಿಸಲಿ. ಅವನೇ ನಮ್ಮ ಮಹಾದಾನಿ ಕೂಡಲ ಸಂಗಮದೇವರು.

೫೩೧ ಸಕಲ ನಿಷ್ಕಲವ ಕೂಡಿಕೊಂಡಿಪ್ಪೆಯಾಗಿ
ಸಕಲ ನೀನೇ, ದೇವಾ; ನಿಷ್ಕಲ ನೀನೇ ಕಂಡಯ್ಯಾ.
ವಿಶ್ವತಸ್ ಚಕ್ಷು ನೀನೇ, ದೇವಾ; ವಿಶ್ವತೋ ಮುಖ ನೀನೇ, ದೇವಾ;
ವಿಶ್ವತೋ ಬಾಹು ನೀನೇ ದೇವಾ, ಕೂಡಲ ಸಂಗಮದೇವಾ.

ಸೃಷ್ಟಿಯ ಚೇತನಾಚೇತನ ಪದಾರ್ಥಗಳಲ್ಲಿ ನೀನಿರುವದರಿಂದ ನಿನ್ನ ರೂಪವೇಆ ಎಲ್ಲ ಪದಾರ್ಥಗಳು. ಜಗದ ಕಣ್ಣು, ಜಗದ ಮುಖಮಂಡಲವು, ಮತ್ತು ಜಗದನಂತ ಶಕ್ತಿ ನೀನೇ ಆಗಿರುವಿ ಕೂಡಲ ಸಂಗಮದೇವಾ !

೫೩೨ ಎತ್ತೆತ್ತ ನೋಡಿದತ್ತತ್ತ ನೀನೇ ದೇವಾ;
ಸಕಲ ವಿಸ್ತಾರದ ರೂಹು ನೀನೇ, ದೇವಾ;
ವಿಶ್ವತಸ್ ಚಕ್ಷು ನೀನೇ, ದೇವಾ; ವಿಶ್ವತೋ ಮುಖ ನೀನೇ, ದೇವಾ;
ವಿಶ್ವತೋ ಬಾಹು ನೀನೇ ದೇವಾ;
ವಿಶ್ವತಃ ಪಾದ ನೀನೇ, ದೇವಾ; ಕೂಡಲ ಸಂಗಮದೇವಾ.

ವಿಶ್ವವನ್ನೆಲ್ಲ ವ್ಯಾಪಿಸಿರುವ ಆತ್ಮವು ನಿನ್ನದೇ ದೇವಾ; ಆದುದರಿಂದ ವಿಶ್ವರೂಪನಾಗಿರುವ ಕೂಡಲ ಸಂಗಮದೇವಾ ನೀನೆಲ್ಲಕಡೆಗೂ ಕಾಣುತ್ತಿರುವಿ.

೫೩೩ ಜಲಕೂರ್ಮ ನಾಗಮೇದಿನಿ ಸಪ್ತಸಾಗರ
ಅಜಾಂಡ ಭಾಂಡ ಹರಿವಿರಂಚಿಗಳು
ನಿಮ್ಮ ಉದರದ ಕೊನೆಯ ಪ್ರಾಣಿಗಳಯ್ಯಾ !
ಕೂಡಲ ಸಂಗನ ಮಹಾ ಮನೆಯೊಳು ಅಸ್ತಿಗ್ರಾಹಕನೆಂಬ ಗಣೇಶ್ವರನ
ಇಚ್ಛಾಮಾತ್ರದಿಂದೆ ಜಗಜುಗವಯ್ಯಾ ?

ನೀರು, ಆವೆ, ಸರ್ಪ ಪೃಥ್ವಿ, ಏಳು ಸಮುದ್ರಗಳು ಮತ್ತು ಬ್ರಹ್ಮ ವಿಷ್ಣು ಅಂಡಗಳಿಂದ ಹುಟ್ಟಿದವರಲ್ಲ; ಅವರೆಲ್ಲ ನಿಮ್ಮ ಹೊಟ್ಟೆಯಿಂದ

ಹೊರಬಂದ ಪ್ರಾಣಿಗಳು; ಆದರೆ ಕೂಡಲ ಸಂಗಮದೇವರ ಕೃಪಾಛತ್ರ ದಲ್ಲಿರುವ ಜನನ ಮರಣಗಳ ಗಣೇಶ್ವರನ ಇಚ್ಛೆಯಿಂದ ಜಗತ್ತು ಯುಗ ಯುಗಗಳನ್ನು ದಾಟುತ್ತಲಿದೆ.

೫೩೪ ರುದ್ರ ಮುಖದಲ್ಲಿ, ವಿಷ್ಣು ಭುಜದಲ್ಲಿ, ಜಂಘೆಯಲ್ಲಿ ಅಜ ಜನನವು!
ಇಂದ್ರ ಪಾದದಲ್ಲಿ, ಚದ್ರಮನದಲ್ಲಿ, ಚಕ್ಷುವಿನಲ್ಲಿ ಸೂರ್ಯ ಜನನವು!
ಮುಖದಲ್ಲಿ ಅಗ್ನಿಯು, ಪ್ರಾಣದಲ್ಲಿ ವಾಯು
ನಾಭಿಯಲ್ಲಿ ಅಂತರೀಕ್ಷವು.
ಸಿರದಲುದಯ ತೆತ್ತೀಸ ಕೋಟಿ ದೇವತೆಗಳು,
ಪಾದತಳದಲ್ಲಿ ಭೂಮಿ ಜನನವು!
ಶ್ರೋತ್ರದಲ್ಲಿ ದಶದಿಕ್ಕುವೂ!
ಜಗವ ನಿಕ್ಷೇಪಿಸಿದ ಕುಕ್ಷಿಯಲ್ಲಿ ಅಕ್ಷಯನಗಣಿತನು!
ಸಾಸಿರ ತಲೆ, ಸಾಸಿರ ಕಣ್ಣು ಸಾಸಿರ ಕೈ, ಸಾಸಿರ ಪಾದ,
ಸಾಸಿರ ಸನ್ನಿಹಿತ ನಮ್ಮ ಕೂಡಲ ಸಂಗಯ್ಯಾ!

ರುದ್ರತೇಜವು ಮುಖಮಂಡಲದಲ್ಲಿ, ಸಂರಕ್ಷಣಶಕ್ತಿ ಭುಜಗಳಲ್ಲಿ, ಪುಣ್ಯಫಲಗಳು ತೊಡೆಯಲ್ಲಿ ಹುಟ್ಟುತ್ತವೆ; ಚಲನ ಶಕ್ತಿ ಪಾದಗಳಲ್ಲಿ, ಕಾಮನಾಶಕ್ತಿ ಮನದಲ್ಲಿ ಹೊಳಪು ಕಣ್ಣುಗಳಲ್ಲಿ ಹುಟ್ಟುತ್ತವೆ; ಬಾಯಿ ಯಲ್ಲಿ ಉಷ್ಣತೆ, ಪ್ರಾಣದಲ್ಲಿ ವಾಯುಶಕ್ತಿ, ನಾಭಿಯಲ್ಲಿ ಬಯಲುಶಕ್ತಿ ಹುಟ್ಟುತ್ತವೆ; ಶಿರಸ್ಸಿನಲ್ಲಿ ಹುಟ್ಟುವರು ಮೂವತ್ತು ಮೂರು ಕೋಟಿ ದೇವ ತೆಗಳು; ಪಾತಾಳದಲ್ಲಿ ಭೂಮಿಯ ಹುಟ್ಟು, ಕೇಳುವಿಕೆಯಲ್ಲಿ ಎಂಟು ದಿಕ್ಕುಗಳು ಜನಿಸುತ್ತವೆ. ಹೀಗೆ ಜಗತ್ತನ್ನು ಸೃಷ್ಟಿಸಿದ ಅನಂತ ಶಕ್ತಿಯ ರೂಪವು ನಮ್ಮ ಕೂಡಲ ಸಂಗಮ ದೇವರು.

೫೩೫ ಆರು ಕೊಟಿ ಬ್ರಹ್ಮರು ಮಡಿವಲ್ಲಿ ನಾರಾಯಣಗೆ ಒಂದು ದಿನವಾಯ್ತು.
ನಾರಾಯಣರೊಂದು ಕೋಟಿಮಡಿವಲ್ಲಿ ರುದ್ರನ ಕಣ್ಣೆವೆ ಹಳಚಿತ್ತು.

ರುದ್ರಾವತಾರ ಹಲವಳಿದಲ್ಲಿ
ನಮ್ಮ ಕೂಡಲ ಸಂಗಮ ದೇವನೇನೆಂದೂ ಅರಿಯನು.

ಆರು ಕೋಟಿ ಜೀವಿಗಳು ಸಾಯುವುದಕ್ಕೆ ಹಿಡಿಯುವ ವೇಳೆ ನಾರಾಯಣನಿಗೆ ಒಂದು ದಿನವಾಗುತ್ತದೆ; ಒಂದು ಕೋಟಿ ನರಪ್ರಾಣಿಗಳು ಸಾಯುವುದಕ್ಕೆ ಹತ್ತುವ ವೇಳೆಗೆ ರುದ್ರನು ತನ್ನ ಕಣ್ಣು ತೆರೆದನು (ನಿದ್ರೆ ಮುಗಿಯಿತು.) ರುದ್ರಾವತಾರದ ಶಕ್ತಿ ಮುಕ್ತಾಯಗೊಂಡಾಗ ಕೂಡಲ ಸಂಗಮದೇವರಿಗೇನೂ ತಿಳಿದಿಲ್ಲ.

೫೩೬ ವಿಶ್ವಾಧಿಕೋರುದ್ರನ ಹೊಗಳುವ ಶೃತಿಗಳು:
ಪರಮ ರೂಪನೇ ನಮೋ, ಪರತತ್ತ್ವನೇನಮೋ,
ಆದಿಯಾರೂಢಭಯಂಕರನೇ ನಮೋ
ಹರಿಯನು ಹರಿಸಿದನೇ
ಎಂದು ಶೃತಿಯು ಸಾರುತ್ತಿರಲು—
ಸಂಸಾರ ಕಾರಣನೇ ನಮೋ, ನಮ್ಮ ಕೂಡಲ ಸಂಗಮ ದೇವಾ,
ಮಹನ್ ಮಹದ್ ಭ್ಯೋನಮಃ

ಜಗತ್ತಿಗೆ ಅತಿ ಶ್ರೇಷ್ಠನೆಂದು ರುದ್ರನನ್ನು ಶೃತಿಗಳು ಹೊಗಳುತ್ತವೆ ಸುಂದರರೂಪನೇ ಸುಗುಣನೇ ನಿನಗೆ ನಮಸ್ಕಾರ; ವಿಷ್ಣುವಿಗೆ ಆಶೀರ್ವಾದ ಮಾಡಿರುವಿ ಎಂದು ಶೃತಿಗಳು ಹೇಳುತ್ತವೆ; ಸಂಸಾರಕ್ಕೆ ಕಾರಣೀಭೂತನಾದ ಮತ್ತು ಘನವಂತನಾದ ಕೂಡಲ ಸಂಗಮ ದೇವರಿಗೆ ಅನಂತ ನಮಸ್ಕಾರಗಳು.

೫೩೭ ಅದುರಿತು ಪಾದಾ ಘಾತದಿಂದ ಧರೆ;
ಬಿದಿರುದುವು ಮುಕುಟ ತಾಗಿ ತಾರಕೆಗಳು;
ಉದುರಿದವು ಕೈತಾಗಿ ಲೋಕಂಗಳೆಲ್ಲಾ!
ನಮ್ಮ ಕೂಡಲ ಸಂಗಮನಿಂದು ನಾಟ್ಯವನಾಡೆ.

ಕೂಡಲ ಸಂಗಮ ದೇವರು ನಾಟ್ಯವನಾಡಲು ಈ ದಿನ, ಹೆಜ್ಜೆಗಳ ಘಟ್ಟಣೆಯಿಂದ ಭೂವಲಯ ನಡುಗಿತು; ತೆರೆಗಳು ಉಬ್ಬಿವಿಸಿ ರಾಜ ಮಹಾ ರಾಜರ ಕಿರೀಟಗಳು ಕೆಳಗುರುಳಿದವು; ಹಾವ ಭಾವ ವ್ಯಕ್ತಪಡಿಸುವಾಗ ಕೈ ತಾಕಿ ಲೋಕಗಳೆಲ್ಲ ಉರುಳಿದವು!

**೫೩೮ ಯುಗ ಜುಗ ಪ್ರಳಯವಹಂದೂ ಕಾಣೆನಿಂದೂ ಕಾಣೆ!**
**ಧಿಗಿಲು ಭುಗಿಲೆಂದುರಿವಂದೂ ಕಾಣೆನಿಂದೂ ಕಾಣೆ!**
**ಕೂಡಲ ಸಂಗಮ ದೇವನಲ್ಲದೆ ತಲೆದೋರುವ**
**ದೈವಂಗಳನಂದೂ ಕಾಣೆನಿಂದೂ ಕಾಣೆ!**

ಯುಗ ಯುಗಗಳಲ್ಲಿ ಪ್ರಳಯಗಳನ್ನು ಅಂದೂ ನೋಡಲಿಲ್ಲ ಇಂದೂ ನೋಡುವುದಿಲ್ಲ; ಗಳ ಗರ್ಜನೆ ಮಾಡುತ್ತ ಉರಿಯುವ ಅಗ್ನಿಯನ್ನೂ ಅಂದೂ ನೋಡಲಿಲ್ಲ ಇಂದೂ ನೋಡುವುದಿಲ್ಲ; ಕೂಡಲ ಸಂಗಮ ದೇವ ರನ್ನು ಬಿಟ್ಟು ಅನ್ಯ ದೇವರನ್ನು ಈ ವರೆಗೂ ನಾನು ಕಂಡಿಲ್ಲ.

**೫೩೯ ಒಬ್ಬ ಕೆಂಚನೊಬ್ಬ ಕರಿಕನೊಬ್ಬ ಶುದ್ಧ ಧವಳಿತನೆಂತಯ್ಯಾ ಲಿಂಗವೇ ?**
**ಒಬ್ಬರಿಗೊಬ್ಬರು ಘನನೆಂಬರು: ಅದೆಂತಯ್ಯಾ**
**ಒಬ್ಬರಿಗೊಬ್ಬರು ಹಿರಿದೆಂಬರು; ಎಂತಯ್ಯಾ?**
**ಬ್ರಹ್ಮಪ್ರಳಯ, ವಿಷ್ಣುಮರಣ ಉಂಟು,**
**ನಮ್ಮ ಕೂಡಲ ಸಂಗಂಗಿಲ್ಲ!**

ಒಬ್ಬನು ಕೆಂಪಗಿದ್ದರೆ ಇನ್ನೊಬ್ಬನು ಕಪ್ಪಾಗಿದ್ದಾನೆ; ಪೂರ್ಣ ಬಿಳಿ ಬಣ್ಣದವನಾರು ಲಿಂಗವೇ ? ಆದರೆ ಇವರಿಬ್ಬರೂ ತಮ್ಮ ತಮ್ಮಲ್ಲಿ ದೊಡ್ಡವರೆಂದೂ ಶ್ರೇಷ್ಠರೆಂದೂ ವಾದಿಸುತ್ತಾರೆ; ಇದು ಹೇಗೆ ? ವಿಷ್ಣು ವಿಗೆ ಮರಣ ಬರುತ್ತದೆ; ಬ್ರಹ್ಮನಿಗೆ ಪ್ರಳಯವಾಗುತ್ತದೆ; ಆದರೆ ನಮ್ಮ ಕೂಡಲ ಸಂಗಮ ದೇವರಿಗೆ ಇದಾವುದೂ ಇಲ್ಲ !

**೫೪೦ ಹರಿ ಹರನೊಂದೆ ಎಂದರೆ ಸುರಿಯವೆ ಬಾಯಲ್ಲಿ ಬಾಲ ಹುಳುಗಳು?**
**ಹರಿಗೆ ಹತ್ತು ಪ್ರಳಯ! ಬ್ರಹ್ಮಂಗನಂತ ಪ್ರಳಯ!**

**ಹರಂಗೆ ಪ್ರಳಯವುಂಟೆಂಬುದ ಬಲ್ಲರೇ ನೀವು ಹೇಳಿರೆ!**
**ಪ್ರಳಯ, ಪ್ರಳಯ ಅಂದಂದಿಗೆ!**
**ಹಳೆಯ ಕೂಡಲ ಸಂಗಮದೇವ!!**

ಹತ್ತು ಪ್ರಳಯಗಳೊಂದಿಗೆ ಹತ್ತು ಅವತಾರ ತಾಳಿದ ಹರಿಯು ಪ್ರಳಯಾತೀತನಾದ ಹರನಿಗೆ ಸರಿಯೆನ್ನಲಾಗದು. ಬ್ರಹ್ಮನಿಗೆ ಅಗಣಿತ ಪ್ರಳಯಗಳುಂಟು. ಪ್ರಳಯಗಳು ಬಂದು ಹೋದಂತೆಲ್ಲ ಕೂಡಲ ಸಂಗಮ ದೇವನು ಅತಿ ಪೂರ್ವಜನಾಗುತ್ತಾನೆ.

**೫೪೧ ವಿಷ್ಣು ಕರ್ಮಿ, ರುದ್ರ ನಿಷ್ಕರ್ಮಿ;**
**ಕ್ರಮವನರಿಯದೆ ನುಡಿವಿರೋ!**
**ವೇದ ಶ್ರುತಿಗಳ ತಿಳಿಯಲರಿಯದೆ**
**ವಾದವ ಮಾಡುವರೆಲ್ಲಾ ಕೇಳಿರಿ:**
**ವಿಷ್ಣು ನಾನಾಯೋನಿಗಳಲ್ಲಿ ಬಾರದ ಭವಂಗಳಲ್ಲಿ ಬರುತಿಪ್ಪ:**
**ರುದ್ರನಾವಯೋನಿಯಲ್ಲಿ ಬಂದನೆಂದು ನೀವು ಹೇಳಿರೋ!**

ಯಾವ ಪದ್ಧತಿಗನುಸರಿಸಿಯೂ ನೀವು ಮಾತನಾಡುವುದಿಲ್ಲ; ಹೇಳಬೇಕೆಂದರೆ ವಿಷ್ಣುವು ಕರ್ಮಮಾರ್ಗದಲ್ಲಿ ಚಲಿಸುವನು; ರುದ್ರನು ಕರ್ಮಗಳನ್ನೇ ತಿಳಿಯಲಾರನು; ವಿಷ್ಣು ನಾನಾ ಯೋನಿಗಳಲ್ಲಿ ಹುಟ್ಟಿ ಬಂದು ಸಂಸಾರ ಮಾಡಿದನು; ರುದ್ರನು ಅಯೋನಿಜನಿದ್ದಾನೆ. ಸುಮ್ಮಸುಮ್ಮನೆ ವಾದ ಹಾಕಬಾರದು.

**೫೪೨ ಅಮೃತವತಿ ಸೋಮಶಂಭುವಿಂಗೆ ಹುಟ್ಟಿದಾತ ಇಂದ್ರ;**
**ಸತ್ಯಋಷಿ ಜ್ಯೇಷ್ಠಾದೇವಿಗೆ ಹುಟ್ಟಿದಾತ ಬ್ರಹ್ಮ;**
**ವಸುದೇವ ದೇವಕಿಗೆ ಹುಟ್ಟಿದಾತ ವಿಷ್ಣು;**
**ನಾಭಿರಾಜ ಮರುತಾದೇವಿಗೆ ಹುಟ್ಟಿದಾತನರುಹ.**
**ಇವರೆಲ್ಲರೂ ಯೋನಿಜರೆಂಬುದ ತ್ರೈಜಗಬಲ್ಲುದು.**

**ಉತ್ಪತ್ತಿ ಸ್ಥಿತಿ ಪ್ರಳಯಕ್ಕೆ ಹೊರಗಾದ ಕೂಡಲ ಸಂಗಮ ದೇವಂಗೆ**
**ಮಾತಾಪಿತರುಳ್ಳರೆ ಹೇಳಿರೋ!**

ದೇವೇಂದ್ರನು, ಬ್ರಹ್ಮದೇವನು, ವಿಷ್ಣುದೇವನು, ಜಿನದೇವನು ಇವರೆಲ್ಲರೂ ಯೋನಿಯಲ್ಲಿ ಹುಟ್ಟಿ ಬಂದವರು. ಹುಟ್ಟು, ಬಾಳ್ವಿಕೆ, ಸಾವುಗಳಿಂದ ದೂರವಿರುವ ಕೂಡಲ ಸಂಗಮ ದೇವರಿಗೆ ತಂದೆತಾಯಿಯೆಂಬುವವರಾರೂ ಇಲ್ಲ; ಅಯೋನಿಜನು.

**೫೪೩ ಇಬ್ಬರು ಮೂವರು ದೇವರೆಂದು ಉಬ್ಬಿ ಮಾತನಾಡಬೇಡ:**
**ಒಬ್ಬನೇ ಕಾಣಿರೋ, ಇಬ್ಬರೆಂಬುದು ಹುಸಿ ನೋಡಾ!**
**ಕೂಡಲ ಸಂಗಮನಲ್ಲದೆ ಇಲ್ಲವೆಂದಿತ್ತು ವೇದ.**

ಹಲವು ದೇವರುಗಳೆಂದು ಸೊಕ್ಕಿನಿಂದ ನುಡಿಯಬಾರದು; ದೇವರೆನ್ನುವವನು ಒಬ್ಬನೇ; ಅವನೇ ಕೂಡಲ ಸಂಗಮ ದೇವರೆಂದು ವೇದವೂ ಹೇಳುತ್ತದೆ.

**೫೪೪ ಹುಟ್ಟಿಸುವಾತ ಬ್ರಹ್ಮನೆಂಬರು; ರಕ್ಷಿಸುವಾತ ವಿಷ್ಣುವೆಂಬರು ನೋಡಾ.**
**ಬ್ರಹ್ಮ ತನ್ನ ಸಿರವನ್ನೇಕೆ ಹುಟ್ಟಿಸಲಾರ?**
**ವಿಷ್ಣು ತನ್ನ ಮಗನನ್ನೇಕೆ ಸಲುಹಲಾರ?**
**ದುಷ್ಟ ನಿಗ್ರಹ ಶಿಷ್ಟಪರಿಪಾಲಕ ನಮ್ಮ ಕೂಡಲ ಸಂಗಮದೇವ.**

ಸೃಷ್ಟಿಯನ್ನು ಉತ್ಪತ್ತಿ ಮಾಡುವವನು ಬ್ರಹ್ಮನೆಂದೂ, ಸೃಷ್ಟಿಯ ಪರಿಪಾಲಕನು ವಿಷ್ಣುವೆಂದೂ ಲೋಕ ಸಾರುತ್ತದೆ; ಆದರೆ ಲೋಕ ಉತ್ಪತ್ತಿ ಮಾಡುವವನಿಗೆ ತನ್ನ ತಲೆಯನ್ನು ನಿರ್ಮಿಸಿಕೊಳ್ಳಲು ಸಾಧ್ಯವಾಗಲಿಲ್ಲವೆ? ಜಗದ್ರಕ್ಷಕನಾದ ಹರಿಗೆ ತನ್ನ ಮಗನಾದ ಬ್ರಹ್ಮನನ್ನು ಸಂರಕ್ಷಿಸುವದು ಅಸಾಧ್ಯವಾಯಿತೆ? ಕೂಡಲ ಸಂಗಮ ದೇವರು ದುಷ್ಟರನ್ನು ನಾಶ ಮಾಡಿ ಸದ್ಗುಣಿಗಳನ್ನು ಕಾಪಾಡುತ್ತಾನೆ.

**೫೪೫ 'ಕೇಶವನಲ್ಲದೆ ಅತಃಪರದೈವವಿಲ್ಲೆಂ'ದು**
**ವೇದವ್ಯಾಸಮುನಿ ಭಂಗವಾದುದನರಿಯಿರೆ?**
**"ಅಹಮೇವ ಜಗತ್‌ಕರ್ತಾ| ಮಮಕರ್ತಾಮಹೇಶ್ವರಃ"**
**ಎಂದು ವಿಷ್ಣುವು ಹೇಳಿದ ಮಾತು ಮರೆದಿರಲ್ಲಾ!**
**ಕೂಡಲ ಸಂಗಮ ದೇವರು**
**ದಕ್ಷಯಜ್ಞವ ಕೆಡಿಸಿದುದ ಮರೆದಿರಲ್ಲಾ!!**

ಕೇಶವನನ್ನು ಬಿಟ್ಟು ಮತ್ತೆ ಅನ್ಯ ದೇವರಿಲ್ಲ ಎಂದು ವೇದವ್ಯಾಸ ಮುನಿಗಳು ಹೇಳಿದ ಮಾತು ಸುಳ್ಳಾಯಿತು; ಯಾಕಂದರೆ 'ನಾನು ಜಗತ್ತಿಗೆ ತಂದೆಯಾದರೆ ನನಗೆ ತಂದೆ ಮಹೇಶ್ವರನು' ಎಂದು ವಿಷ್ಣುವು ಹೇಳಿದ ಮಾತನ್ನು ಲಕ್ಷ್ಯದಲ್ಲಿಡಿರಿ; ಹಾಗೆಯೇ ದಕ್ಷನ ಯಜ್ಞವನ್ನು ಕೂಡಲ ಸಂಗಮ ದೇವರು ಭಂಗ ಮಾಡಿದುದನ್ನು ಮರೆಯಬೇಡಿರಿ.

**೫೪೬ ನಾರಾಯಣನೆಂಬುವನ ಕಾಣೆ, ಗೀರಾಯಣನೆಂಬವನ ಕಾಣೆ!**
**ಬೊಮ್ಮನೆಂಬವನ ಕಾಣೆ, ಗಿಮ್ಮನೆಂಬವನ ಕಾಣೆ!**
**ವಿಷವಟ್ಟಿ ಸುಡುವಲ್ಲಿ ವೀರಭದ್ರಕೊಲುವಲ್ಲಿ**
**ಕೂಡಲ ಸಂಗಯ್ಯಂಗೆ ಶರಣೆಂದು ಮೊರೆಯಿಟ್ಟರೆಲ್ಲರೂ.**

ನಾರಾಯಣನೆಂಬುವ ದೇವರನ್ನು ಮತ್ತು ಬ್ರಹ್ಮನೆಂಬ ದೇವನನ್ನು ನಾನು ತಿಳಿಯಲಾರೆ. ವಿಷದ ಬಾಧೆ ಮೀರಿದಾಗ, ವೀರಭದ್ರನು ಪ್ರಳಯವನ್ನೆಬ್ಬಿಸಿದಾಗ ಎಲ್ಲರೂ ಏಕ ಕಂಠದಿಂದಾ ಕೂಡಲ ಸಂಗಮದೇವಾ, ನೀನೇ ಗತಿ ಎಂದು ಮೊರೆಹೊಕ್ಕರು. ಅವನೊಬ್ಬನೇ ದೇವರೆಂದು ನಾನು ನಂಬುವೆನು.

**೫೪೭ ಅಮೃತವ ಕಡೆವಲ್ಲಿ, ವಿಷವಟ್ಟಿಸುಡುವಲ್ಲಿ,**
**ದೇವರೆಂಬವರೆತ್ತ ಹೋದರೇ ನೀಂ ಭೋ?**
**ಅಂದೊಮ್ಮೆ ಓಡಿಹೋಗಿ ಆತನ ಮೊರೆಯ ಹೋಗುವಂದು**
**ದೇವರೆಂಬವರೆತ್ತ ಹೋದರೇ ನೀಂ ಭೋ?**

**ಕೂಡಲ ಸಂಗಯ್ಯದೇವರಿಗೆ ದೇವನು;**
**ನೀವೆಲ್ಲಾ ಆಳೆಂಬುದನರಿಯಿಂಭೋ!**

ಸಮುದ್ರ ಮಥನ ಮಾಡಿ ಅಮೃತ ತೆಗೆಯುವಾಗಲೂ, ವಿಷದ ಬಾಧೆ ಏರಿದಾಗಲೂ ದೇವತೆಗಳೆಂಬುವವರು ಎಲ್ಲಿಗೆ ಹೋಗಿದ್ದರು ? ರಕ್ಕಸರ ಉಪಟಳ ಹೆಚ್ಚಿ ತೊಂದರೆಯಿಂದ ಓಡಿ ಹೋಗಿ ಶಿವನ ಬೆನ್ನಿಗೆ ಬೀಳುವಾಗ ದೇವರೆಂಬುವವರೆಲ್ಲಿ ಹೋಗಿದ್ದರು ? ಕೂಡಲ ಸಂಗಮದೇವರು ದೇವರಿಗೆ ದೇವನೆಂಬುದು ಅರಿತುಕೋ! ನಾವೆಲ್ಲರೂ ಅವನ ಚಾಕರರು.

೫೪೮ **ಮರೆಯಲಾಗದು ಹರಿಯು, ಮರೆಯಲಾಗದು ಬ್ರಹ್ಮನ!**
**ಮರೆಯಲಾಗದು ತೆತ್ತೀಸಕೋಟಿ ದೇವರ್ಕಳ!**
**ನಮ್ಮ ಕೂಡಲ ಸಂಗಮದೇವರ ಮರೆಯಲಿಹುದು!**

ಹರಿ, ಬ್ರಹ್ಮ, ದೇವತೆಗಳನ್ನು ಮರೆಯಲು ಬರುವಂತಿಲ್ಲ; ಒಂದು ವೇಳೆ ಮರೆತರೆ ಅವರು ಮುನಿದುಕೊಂಡು ನನಗೆ ಅವಕೃಪೆ ಮಾಡುತ್ತಾರೆ. ಆದರೆ ಕೂಡಲ ಸಂಗಮ ದೇವರನ್ನು ಮರೆಯಬಹುದು ! ಮರೆತರೂ ನನಗೆ ಕರುಣೆದೋರುವನು !

೫೪೯ **ವಿಷ್ಣು ಬಲ್ಲಿದನೆಂಬನೆ?**
**ದಶಾವತಾರದಲ್ಲಿ ಭಂಗುವಟ್ಟುದಕ್ಕೆ ಕಡೆಯಿಲ್ಲ!**
**ಬ್ರಹ್ಮ ಬಲ್ಲಿದನೆಂಬೆನೆ?**
**ಸಿರಹೋಗಿ ನಾನಾವಿಧಿಯಾದ!**
**ವೇದ ಬಲ್ಲಿತೆಂಬೆನೆ? ನಾನಾಮುಖದಲ್ಲಿಸ್ತುತಿಯಿಸಿತ್ತಲ್ಲದೆ**
**ಲಿಂಗದ ನಿಲುಕಡೆಯ ಕಾಣದು!**
**ಶಾಸ್ತ್ರ ಬಲ್ಲಿತ್ತೆಂಬೆನೆ? ಶಬ್ದಕ್ರಿ**
**ಪುರಾಣ ಬಲ್ಲಿತೆಂಬೆನೇ ಪೂರ್ವಕ್ರಿ,**
**ಆಗಮ ಬಲ್ಲಿತ್ತೆಂಬೆನೆ? ವಾಯು ಹೊಂದಿತ್ತು!**
**ಇದು ಕಾರಣ, ಕೂಡಲ ಸಂಗಯ್ಯನೇ ನಿತ್ಯ:**
**ಉಳಿದ ದೈವವೆಲ್ಲಾ ಅನಿತ್ಯಕಾಣೆ, ಭೋ!**

ದಶಾವತಾರಗಳಲ್ಲಿ ಭವಣೆಪಟ್ಟ ವಿಷ್ಣುವು ಘನಮಹಿಮನನ್ನು ತಿಳಿಯಲಾರನು; ತಲೆ ಕಳೆದುಕೊಂಡು ಅವಮಾನಿತನಾದ ಬ್ರಹ್ಮನು ಪರಮಾತ್ಮನನ್ನು ತಿಳಿಯಲಾರನು; ವೇದವು ಅನೇಕ ರೀತಿಯಿಂದ ದೇವರ ಮಹಿಮೆಯನ್ನು ಕೊಂಡಾಡಲು ತಿಳಿದಿದೆಯೇ ಹೊರತು ಪರಂಜೋತಿಯ ಪೂರ್ಣ ಜ್ಞಾನವನ್ನು ತಿಳಿದಿಲ್ಲ; ಶಾಸ್ತ್ರ ಪುರಾಣ ಆಗಮಾದಿಗಳು ಏನನ್ನೂ ತಿಳಿಯಲಾರವು; ಆದ ಕಾರಣ ಕೂಡಲ ಸಂಗಮ ದೇವರು ನಿತ್ಯನು; ಉಳಿದ ಎಲ್ಲ ದೇವತೆಗಳು ಅನಿತ್ಯರು.

**೫೫೦ ಆಗಳೂ ಲೋಗರ ಮನೆಯ ಬಾಗಿಲ ಕಾಯ್ದುಕೊಂಡಿಪ್ಪವು,**
**ಕೆಲವು ದೈವಂಗಳು;**
**ಹೋಗೆಂದರೆ ಹೋಗವು ಕೆಲವು ದೈವಂಗಳು;**
**ನಾಯಿಂದಲೂ ಕರಕಷ್ಟ ಕೆಲವು ದೈವಂಗಳು;**
**ಲೋಗರ ಬೇಡಿಕೊಂಡುಂಬ ದೈವಂಗಳು**
**ತಾವೇನ ಕೊಡುವುವು, ಕೂಡಲ ಸಂಗಮದೇವಾ?**

ಕೆಲವು ಜೀವಿಗಳು ಯಾವಾಗಲೂ ಪರರ ಮನೆ ಬಾಗಿಲು ಕಾಯುತ್ತಲೇ ಇರುತ್ತವೆ; ಹೋಗೆಂದರೆ ಹೋಗುವುದಿಲ್ಲ. ನಾಯಿ ಜೀವನಕಿಂತಲೂ ಕಡೆ; ಜನರನ್ನು ಭಿಕ್ಷೆ ಬೇಡಿ ಹೊಟ್ಟೆ ಹೊರೆಯುವ ಈ ಪ್ರಾಣಿಗಳು ಏನು ಕೊಡಬಲ್ಲವು ಕೂಡಲ ಸಂಗಮದೇವಾ ?

**೫೫೧ ಬಿದಿರೆಲೆಯ ಮೆಲಿದರೆ ಮೆಲಿದಂತಲ್ಲದೆ,**
**ರಸವನು ಹಡೆಯಲು ಬಾರದು!**
**ಮಳಲ ಹೊಸೆದರೆ ಹೊಸೆದಂತಲ್ಲದೆ,**
**ಸರವಿಯ ಹಡೆಯಲು ಬಾರದು!**
**ನೀರ ಕಡೆದರೆ ಕಡೆದಂತಲ್ಲದೆ,**
**ಬೆಣ್ಣೆಯ ಹಡೆಯಲು ಬಾರದು!**
**ನಮ್ಮ ಕೂಡಲ ಸಂಗಮದೇವನಲ್ಲದೆ,**

ಅನ್ಯದೈವಕ್ಕೆರಗಿದರೆ
ಹೊಳ್ಳೆಕುಟ್ಟಿ ಕೈ ಹೊಟ್ಟೆಯಾದಂತಾಯಿತ್ತಯ್ಯಾ!

ಬಿದಿರ ಎಲೆ ತಿಂದರೆ ಅದರಿಂದ ರಸವನ್ನು ಸವಿಯಲು ಸಾಧ್ಯವಿಲ್ಲ; ಮಳಲನ್ನು ಹೊಸೆದು ಹಗ್ಗವನ್ನು ಮಾಡಲು ಸಾಧ್ಯವಿಲ್ಲ; ನೀರನ್ನು ಕಡೆದು ಬೆಣ್ಣೆಯನ್ನು ತೆಗೆಯಲು ಸಾಧ್ಯವಿಲ್ಲ; ಕಾರಣ ಕೂಡಲ ಸಂಗಮ ದೇವರನ್ನು ಬಿಟ್ಟು ಬೇರೆ ದೇವರಿಗೆ ನಮಸ್ಕಾರ ಮಾಡಿದರೆ ತವುಡು ಕುಟ್ಟಿ ಕೈ ಹುಣ್ಣಾದಂತೆ ನನ್ನ ಗತಿ !

೫೫೧ ಗಾಡಿಗ ಡಿಂಗುಗಂಗೆ ಚಿಕ್ಕ ಮುಟ್ಟಿಗೆ ಹಸುರಂಬಲಿ
ಮುಟ್ಟಿಗೆ ಹುರಿಬುತ್ತಿಯ ಬೇಡಿ,
ಮನುಷ್ಯರ ಹಿಡಿದು, ಪೀಡಿಸಿ ತಮ್ಮ ಬಸುರ್ಗೆ ಕಾಣದೆ,
ಈಡಾಡಿದ ಕೂಳಂಬಲಿಯನಾಯ್ದು ಕುರುಕುವ
ಹೇಸಿ ದೈವಂಗಳ ಬೇಡಿ ಬೇಡಿ ನಿರರ್ಥ ಕೆಡಬೇಡ,
ಎಲವೊ,
ಕೂಡಲ ಸಂಗಮದೇವರ ನೆರೆ ನಂಬುವುದೆಲವೋ!

ಗಾಡಿಹೊಡೆಯುವ ಆಳಿಗೆ, ಸಣ್ಣ ಮನಸ್ಸಿನ ಯಜಮಾನಿ ಕೋಲಿಗೆ ಸವರಲು ಅನ್ನದ ಸರಿ ಬೇಡಿದರೆ ಕೊಡಲಿಲ್ಲ; ಮನುಷ್ಯರನ್ನು ಹಿಡಿದು ಅವರನ್ನು ದಂಡಿಸಿ ತಮ್ಮ ಹೊಟ್ಟೆಗೆ ತಿನ್ನದೆ ಸುತ್ತು ಚೆಲ್ಲಿದ ಭೂತ ಬಲಿ ಅನ್ನವನ್ನು ಎತ್ತಿಕೊಂಡು ತಿನ್ನುವ ಈ ಹೇಸಿ ಪ್ರಾಣಿಗಳನ್ನು ಬೇಡಿ ವ್ಯರ್ಥವಾಗಿ ಕೆಡಬೇಡಾ; ಕೂಡಲ ಸಂಗಮ ದೇವರನ್ನು ದೃಢವಾಗಿ ನಂಬು.

೫೫೨ ಹಾಳು ಮೊರಡಿಗಳಲ್ಲಿ, ಊರ ದಾರಿಗಳಲ್ಲಿ,
ಕೆರೆ ಬಾವಿ ಹೂಗಿಡಮರಂಗಳಲ್ಲಿ,
ಗ್ರಾಮ ಮಧ್ಯಗಳಲ್ಲಿ, ಚೌಪಥಪಟ್ಟಣ ಪ್ರದೇಶದಲ್ಲಿ,
ಹಿರಿಯಾಲದ ಮರದಲ್ಲಿ ಮನೆಯಮಾಡಿ,
ಕರೆವೆಮ್ಮೆಯ, ಹಸುಗೂಸು ಬಸುರಿ ಬಾಣತಿ
ಕುಮಾರಿ ಕೊಡಗೂಸೆಂಬವರ ಹಿಡಿದು ತಿಂಬ, ತಿರಿದುಂಬ

**ಮಾರಯ್ಯ ಬೀರಯ್ಯ ಕೇಚರಗಾವಿ ಅಂತರ ಬೆಂತರ**
**ಕಾಳಯ್ಯ ಮಾರಯ್ಯ ದೂಳಯ್ಯ ಕೇತಯ್ಯಗಳೆಂಬ**
**ನೂರು ಮಡಕೆಗೆ**
**ನಮ್ಮ ಕೂಡಲ ಸಂಗಮದೇವ ಶರಣೆಂಬುದೊಂದು**
**ದಡಿಸಾಲದೆ?**

ಊರಲ್ಲಿ, ದಾರಿಯಲ್ಲಿ, ಅಡವಿಯಲ್ಲಿ,ಎಲ್ಲೆಲ್ಲಿಯೂ ಗುಡಿಸಲು ಹಾಕಿಕೊಂಡು ಹಿರಿಕಿರಿಯರೆನ್ನದೆ ಕಾಡಿ ಬೇಡಿ ಪೀಡಿಸುವ ಈ ಚಾಂಡಾಲ ಅಯ್ಯಗಳನ್ನು ಎದುರಿಸಲು ಕೂಡಲ ಸಂಗಮ ದೇವ ನಿನಗೆ ಶರಣು ಎಂಬ ಒಂದೇ ಒಂದು ನುಡಿ ದಂಡ ರೂಪ ತಳೆದು ಆ ಕಾಡಯ್ಯಗಳನ್ನು ಓಡಿಸುತ್ತದೆ.

**೫೫೪ ಅರಗು ತಿಂದು ಕರಗುವ ದೈವವ,**
**ಉರಿಯ ಕಂಡರೆ ಮುರುಟುವ ದೈವವನೆಂತು**
**ಸರಿಯೆಂಬೆನಯ್ಯಾ?**
**ಅವಸರ ಬಂದರೆ ಮಾರುವ ದೈವವನೆಂತು ಸರಿಯೆಂಬೆ**
**ನಯ್ಯಾ?**
**ಅಂಜಿಕೆಯಾದರೆ ಹೂಳುವ ದೈವವನೆಂತು ಸರಿಯೆಂಬೆ**
**ನಯ್ಯಾ?**
**ಸಹಜ ಭಾವ ನಿಜೈಕ್ಯ ಕೂಡಲ ಸಂಗಮದೇವನೊಬ್ಬನೇ**
**ದೇವ!**

ಅರಗು ತಿಂದು ಕರಗುವ ಸೂಕ್ಷ್ಮ ಪ್ರಾಣಿಗಳನ್ನು, ಉರಿಗೆ ಅಂಜುವ ಜೀವಿಗಳನ್ನು ಕಠಿಣ ಕಾಲ ಬಂದಾಗ ದೇವರ ಒಡವೆಗಳನ್ನು ಮಾರುವ ಜೀವಿಗಳನ್ನು, ಹೆದರಿಕೆ ಬಂದಾಗ ತಮ್ಮಲ್ಲಿದ್ದ ದ್ರವ್ಯವನ್ನು ನೆಲದಲ್ಲಿ ಹೂಳಿಡುವ ಜಿಪುಣರನ್ನು ನಾನೆಂದೂ ಮನ್ನಿಸಲಾರೆನು; ಅವರು ಕುಮಾರ್ಗಿಗಳು; ಸರಳನೂ, ಸತ್ಯವಂತನೂ, ಆದ ಕೂಡಲಸಂಗಮದೇವರೊಬ್ಬನೇ ನನಗೆ ದೇವರು.

**೫೫೫ ಮಾರಿಕವ್ವೆಯ ನೋಂತು ಕೊರಳಲ್ಲಿ ಕಟ್ಟಿಕೊಂಬರು:**
**ಸಾಲಬಿಟ್ಟರೆ ಮಾರಿಕೊಂಬರಯ್ಯಾ!**
**ಸಾಲಬಿಟ್ಟರೆ ಅವರನೊತ್ತೆಯನಿಟ್ಟು ಕೊಂಡುಂಬರಯ್ಯಾ!**
**ಮಾರುವೋಗ ನೊತ್ತೆವೋಗ ನಮ್ಮ ಕೂಡಲ ಸಂಗಮ ದೇವ.**

ದುರ್ಗೆಯ ಪೂಜೆ ಮಾಡಿ ಅವಳ ಪ್ರತಿಮೆಗಳನ್ನು ಕೊರಳಲ್ಲಿ ಕಟ್ಟಿಕೊಳ್ಳುತ್ತಾರೆ; ಇವರು ಕೊಡಬೇಕಾದ ಸಾಲವನ್ನು ರಿಯಾಯಿತಿ ಬಿಟ್ಟರೆ ಅವುಗಳನ್ನೇ ಮಾರಿಕೊಂಡು ತಿನ್ನುತ್ತಾರೆ. ಆದರೆ ಕೂಡಲ ಸಂಗಮ ದೇವರನ್ನು ಮಾರಲು ಒತ್ತೆಯಿಡಲೂ ಸಾಧ್ಯವಿಲ್ಲ!

**೫೫೬ ಉಣಲುಡಲು ಮಾರಿಯಲ್ಲದೆ ಕೊಲಲು ಕಾಯಲು ಮಾರಿಯೆ?**
**ತನ್ನ ಮಗನ ಜವನೊಯ್ದಲ್ಲಿ ಅದೆತ್ತ ಹೋದಳಾಮಾರಿ ಕವ್ವೆ?**
**ಈವಕಾವರೆ ನಮ್ಮ ಕೂಡಲಸಂಗಯ್ಯನಲ್ಲದೆ ಮತ್ತೊಂದು — ದೈವವಿಲ್ಲ**

ಉಣ್ಣಲು ತಿನ್ನಲು ಮಾರಿದೇವಿಯೇ ಹೊರತು ಸಂರಕ್ಷಿಸಲು ಕೊಲ್ಲಲು ಅಲ್ಲ! ಅವಳ ಮಗನನ್ನೇ ಯಮದೇವನು ಎತ್ತಿಕೊಂಡು ಹೋಗುವಾಗ ಎಲ್ಲಿದ್ದಳು ಈ ಮಾರಿಕವ್ವಾ? ಕೊಟ್ಟವರೆಂದೂ ಕಾಯಲಾರರು; ಕೂಡಲ ಸಂಗಮ ದೇವರನ್ನುಳಿದು ಬೇರಾವ ದೇವರು ಕಾಪಾಡಲಾರನು!

**೫೫೭ ಮೊರನ ಗೊಟಗೆ ಬರ್ಪಕಿರುಕುಳ ದೈವಕ್ಕೆ**
**ಕುರಿಯನಿಕ್ಕಿಹೆನೆಂದು ನಲಿನಲಿದಾಡುವರು:**
**ಕುರಿಸತ್ತು ಕಾವುದೆ ಹರಮುಳಿದವರ?**
**ಕುರಿ ಬೇಡ ಮರಿಬೇಡ:**
**ಬರಿಯ ಪತ್ರೆಯ ತಂದು**
**ಮರೆಯದೇ ಪೂಜಿಸು ನಮ್ಮ ಕೂಡಲ ಸಂಗಮದೇವನ.**

ಮರದ ಗೊಂಬೆಗೆ ದೇವರೆಂದು ಬರುವ ಕುಲ್ಲ ಜನರು ಕುರಿ ತಂದಿರುವೆವು ಎಂದು ಸಂತೋಷಪಡುತ್ತಾರೆ. ಹರನ ಅವಕೃಪೆಗೆ ಗುರಿಯಾದವರು ಕುರಿಯನ್ನು ಕೊಂದು ತಾವು ಬದುಕಲುಬಹುದೆ? ನಿಮ್ಮ ಕುರಿ ಮರಿಗಳೇನೂ ಬೇಕಿಲ್ಲ; ಕೇವಲ ಬಿಲ್ವಪತ್ರಿಯನ್ನು ತಂದು ಕೂಡಲ ಸಂಗಮದೇವರನ್ನು ದಿನವೂ ಪೂಜಿಸು ನಿನ್ನ ಮರಣ ದೂರವಾಗುತ್ತದೆ.

**೫೫೮ ಬನ್ನಿರೆ ಅಕ್ಕಗಳು, ಹೋಗಿರೆ ಆಲದ ಮರಕ್ಕೆ!**
**ಕಚ್ಚುವುವೆ ನಿಮ್ಮ ಚಿಪ್ಪಿನ ಹಲ್ಲುಗಳು?**
**ಬೆಚ್ಚಿಸುವುವೆ ನಿಮ್ಮ ಬಚ್ಚಣೆಯ ರೂಹುಗಳು?**
**ನಮ್ಮ ಕೂಡಲ ಸಂಗಮ ದೇವನಲ್ಲದೆ**
**ಪರದೈವಂಗಳು ಮನಕ್ಕೆ ಬಂದುವೆ,**
**ಬಿಕ್ಕನೆ ಬಿರಿವ ದೈವಂಗಳು?**

ಆಲದ ಮರದ ಕೆಳಗೆ ಕುಳಿತು ಪೂಜಿಸುವ ನಿಮ್ಮ ಮಂಗಳಗೌರಿಯ ವಸ್ತುಗಳು ನಿಮ್ಮನ್ನು ಕಚ್ಚುತ್ತವೆಯೋ? ಬೆದರಿಸುತ್ತವೆಯೋ? ಕೂಡಲ ಸಂಗಮ ದೇವರನ್ನು ಪೂಜಿಸುವದನ್ನು ಬಿಟ್ಟು ಈ ಗೊಂಬೆಗಳು ಮನಸ್ಸಿಗೆ ಹಿಡಿಸಿದುವೆ?

**೫೫೯ ಮಡಕೆ ದೈವ; ಮೊರದೈವ, ಬೀದಿಯ ಕಲ್ಲು ದೈವ,**
**ಹಣಿಗೆದೈವ, ಬಿಲ್ಲ ನಾರಿದೈವ, ಕಾಣಿರೋ,**
**ಕೊಳಗದೈವ, ಗಿಣ್ಣಿಲು ದೈವ, ಕಾಣಿರೋ!**
**ದೈವದೈವವೆಂದು ಕಾಲಿಡಲಿಂಬಿಲ್ಲಾ!!**
**ದೈವನೊಬ್ಬನೆ ಕೂಡಲ ಸಂಗಮದೇವ.**

ನೂರೆಂಟು ದೇವರುಗಳನ್ನು ಕಲ್ಪಿಸಿಕೊಂಡು ಹೊರಗೆ ಕಾಲಿಡಲು ಸ್ಥಳವಿಲ್ಲ; ದೇವರೆಂಬುವವನೊಬ್ಬನೇ; ಅವನೇ ಕೂಡಲಸಂಗಮದೇವರು.

**೫೬೦ ರಿಣತಪ್ಪಿದ ಹೆಂಡಿರಲ್ಲಿ, ಗುಣ ತಪ್ಪಿದ ನಂಟರಲ್ಲಿ,**
**ಜೀವವಿಲ್ಲದ ದೇಹದಲ್ಲಿ, ಫಲವೇನೊ?**

**ಆಳ್ದನೊಲ್ಲದ ಆಳಿನಲ್ಲಿ. ಸಿರಿ ತೊಲಗಿದ ಅರಸನಲ್ಲಿ,**
**ವರವಿಲ್ಲದ ದೈವದಲ್ಲಿ ಫಲವೇನೋ?**
**ಕಳಿದ ಹೂವಿನಲ್ಲಿಕಂಪ, ನುಳಿದ ಸೂಳೆಯಲ್ಲಿ ಹಂಪ,**
**ಕೊಳಚಿಯ ನೀರಿನಲ್ಲಿ ಗುಂಪನರಸುವಿರಿ, ಮರುಳೆ-**
**ವರಗುರು ವಿಶ್ವಕ್ಕೆಲ್ಲ ಗಿರಿಜಾಮನೋವಲ್ಲಭ**
**ಪರಮ ಕಾರಣಿಕ ನಮ್ಮ ಕೂಡಲ ಸಂಗಮದೇವ.**

ಆಯುಷ್ಯ ಮುಗಿದ ಹೆಂಡತಿಯಿದ್ದು, ಗುಣಹೀನ ಬಂಧುಗಳಿದ್ದು, ಹೆಣವಿದ್ದು ಏನೂ ಪ್ರಯೋಜನವಿಲ್ಲ; ಒಡೆಯನಿಗೆ ಬೇಡವಾದ ಆಳು ಇದ್ದು ಐಶ್ವರ್ಯವಿಲ್ಲದ ಅರಸು ಬದುಕಿದ್ದು, ಮಹತ್ವವನ್ನು ಕಳೆದುಕೊಂಡ ದೇವರಿದ್ದು ಏನೂ ಉಪಯೋಗವಿಲ್ಲ; ಬಾಡಿದ ಹೂವಿನಲ್ಲಿಯ ಸುಗಂಧ ಮತ್ತು ಮುಪ್ಪಿನ ಸೂಳೆಯಲ್ಲಿಯ ಸೊಗಸುಗಾರಿಕೆ ಮತ್ತು ವೈಯಾರ ಕೊಳಚ ಗುಂಡಿಯಲ್ಲಿ ಮುತ್ತುಗಳನ್ನು ಹುಡುಕಿದಂತೆ ಹುಚ್ಚಗಳಿರಾ! ಪರಮಗುರು ಗಿರಿಜಾರಮಣನು ಈ ಧರೆಗೆ ತಂದೆಯು; ಕಾರಣಕರ್ತ ಕೂಡಲ ಸಂಗಮ ದೇವನು.

**೫೬೧ ಲಿಂಗಶಿವಾಲಯದ ಮುಂ ಸಿಂಹಶೂದ್ರಿಕನಿಲ್ಲ ದಿಲ್ಲ;**
**ನಂದಿಕೇಶ್ವರ ಭೃಂಗಿನಾಟ್ಯ ನಮ್ಮ ಲಿಂಗ ಮುಂದೆ,**
**ಇದಕ್ಕೆ ದಿಷ್ಟದೀವಿಗೆ ನಮ್ಮ ಲಿಂಗನ ಮುಂದೆ!**
**ಅನ್ಯದೈವವೆಂಬುದ ತೋರಿಯು ಕಾಣಬಾರದು:**
**ನೊಸಲ ಕಣ್ಣಭವನೊಬ್ಬನೇ ನಮ್ಮ ಕೂಡಲ ಸಂಗಮ ದೇವ.**

ಲಿಂಗವನ್ನು ಸ್ಥಾಪಿಸಿದ ಶಿವಾಲಯಗಳ ಮುಂದೆಲ್ಲ ಸಿಂಹದ ಗೊಂಬೆಗಳು ಬಾಗಿಲಿಗೆ ನಿಂತಿವೆ; ನಂದಿಯು ಲಿಂಗನ ಮುಂದೆ ಹಾಡುತ್ತ ಕುಣಿಯುತ್ತಲಿದ್ದಾನೆ; ನಂದಾದೀಪವು ಬೆಳಗುತ್ತಲಿದೆ; ಅನ್ಯದೇವರ ವಿಚಾರವನ್ನೂ ಮಾಡಬಾರದು; ಹಣೆಗಣನೊಬ್ಬನೇ ದೇವರು- ನಮ್ಮ ಕೂಡಲ ಸಂಗಮದೇವ.

**೫೬೨ ಗುಡಿಯೊಳಗಿರ್ದು ಗುಡಿಯ ನೇಣ ಕೊಯಿದರೆ**
**ಗುಡಿಯ ದಡಿ ಬಿದ್ದು ಹಲ್ಲು ಹೋಹುದು, ನೋಡಾ!**
**ಪೊಡವಿಗೀಶ್ವರನ ಗರ್ಭಾಸನದೊಳಗಿರ್ದು**
**ನುಡಿವರು ಮತ್ತೊಂದು ದೈವವುಂಟೆಂದು.**
**ತುಡುಗುಣಿ ನಾಯನು ಹಿಡಿತಂದು ಸಾಕಿದರೆ**
**ತನ್ನೊಡೆಯಂಗೆ ಬಗುಳುವಂತೆ, ಕಾಣಾ,**
**ಕೂಡಲ ಸಂಗಮದೇವಾ!**

ಗುಡಿಯೊಳಗೆ ನಿಂತುಕೊಂಡು ಗುಡಿಯ ಕಂಭವನ್ನು ಕತ್ತರಿಸಿದರೆ ಗುಡಿಯ ಮೇಲಿನ ಜಂತಿಗಳು ಬಿದ್ದು ಹಲ್ಲುಗಳು ಮುರಿಯುತ್ತವೆ; ಜಗದೀಶ್ವರನ ಕರುಣೆಯಲ್ಲಿದ್ದುಕೊಂಡು ಅನ್ಯದೇವರನ್ನು ಸ್ತುತಿಸುವರು; ಇವರು, ಓಡಿ ಬಂದ ನಾಯಿಯು ತನ್ನನ್ನು ರಕ್ಷಿಸಲು ಕಟ್ಟಿಹಾಕಿದ ಯಜಮಾನನಿಗೆ ಬಗುಳುವಂತೆ ಇದ್ದಾರೆ ಕೂಡಲ ಸಂಗಮದೇವ.

**೫೬೩ ಅಸಮಾಕ್ಷಲಿಂಗಕ್ಕೆ ಅನ್ಯದೈವವಸರಿಯೆಂಬನ ಬಾಯಲ್ಲಿ**
**ಮಸೆದ ಕೂರಲಗನಿಕ್ಕದೆ ಮಾಣ್ಬನೆ?**
**ಹುಸಿಯಾಗಿ ನುಡಿದವನ ನಾಯಾಗಿ ಬಗುಳಿಸನೆ?**
**ಹಿರಿಯರುತ್ತಮರೆನ್ನದವರ ಕುದುರೆಯಾಗಿ ಕಟ್ಟಿಸನೆ?**
**ಗುರುಲಘುವೆಂಬವರ ಬಾಯಲ್ಲಿ ಮೆಟ್ಟಿಹುಡಿಯ**
**ಹೊಯ್ಯದೆ ಮಾಣ್ಬನೆ?**
**ಪರಸ್ತ್ರೀಗಳುಪಿದವರ ಗಾಣದಲ್ಲಿಕ್ಕಿ ಹಿಳಿಯನೆ?**
**ಪರಧನಕ್ಕಳಿಪಿದವರ ಹಿಡಿಕಂಡಗೊಯ್ಯನೆ?**
**ಕೂಡಲ ಸಂಗಮದೇವಾ, ನಿಮ್ಮ ಹೇಳಿದ ಹೇಳಿಕೆಯಿಂದ**
**ಪಿಂಬೇರ ಮೈಲಿಗೆ ಮೇಳವಾಡುತ್ತಿದ್ದ, ಕಾಣಾ,**
**ತ್ರೈಜಗದೊಳಗೆ!**

ಯಾವಲಿಂಗವು ಅದ್ವಿತೀಯವು ಅಸಾಮಾನ್ಯವು ಆಗಿದೆಯೋ ಅಂಥ ಲಿಂಗಕ್ಕೆ ಪರ ದೈವತೆಗಳನ್ನು ಸರಿಯೆಂದು ಹೋಲಿಸುವುದು ಕಡುಮೂರ್ಖರ

ಕೆಲಸ; ಅವರನಾಲಗೆಯನ್ನು ದೇವರು ಕೊಯ್ಯುತ್ತಾನೆ; ಸುಳ್ಳುಹೇಳಿದವರನ್ನು ನಾಯಿಜನ್ಮ ಕೊಟ್ಟು ಹುಟ್ಟಿಸುತ್ತಾನೆ; ಶರಣರು ಉತ್ತಮರೆಂದು ನುಡಿಯದಿದ್ದರೆ ಕುದುರೆಯಾಗಿ ಹುಟ್ಟಿಸುತ್ತಾನೆ; ಸಣ್ಣದು ದೊಡ್ಡದು ಎಂದು ಭೇದಭಾವ ಮಾಡಿದರೆ ಬಾಯಲ್ಲಿ ಮಣ್ಣು ತುಂಬುತ್ತಾನೆ; ಎರಡನೇಯವರ ಹೆಂಡಿರನ್ನು ಇಚ್ಛಿಸಿದರೆ ಗಾಣದಲ್ಲಿಟ್ಟು ತಿರುಗಿಸುತ್ತಾನೆ; ಕಂಡವರ ದುಡ್ಡಿಗೆ ಕೈಹಾಕಿದರೆ ದೇಹದೊಳಗಿನ ಹಿಡಿಮಾಂಸವನ್ನು ಕೊಯ್ದು ತೆಗೆಯುತ್ತಾನೆ. ಕೂಡಲ ಸಂಗಮದೇವರ ನುಡಿ ಆಲಿಸಿ ನಡೆಯದಿದ್ದರೆ ಸದಾ ಪಾಪದಲ್ಲಿ ಮುಳುಗೇಳಬೇಕಾಗುತ್ತದೆ.

**೫೬೪ ಶಿವಮಯವಿಷ್ಣುವಲ್ಲ, ವಿಷ್ಣುಮಯ ಶಿವನಲ್ಲಾ,**
**ನುಡಿಯದಿರಿಂಭೋ!**
**ನಾರಾಯಣ ಹರನಲ್ಲ: ನುಡಿಯದಿರಿಂಭೋ!**
**ಶಿವನು ವಿಷ್ಣುವಲ್ಲ: ನುಡಿಯದಿರಿಂಭೋ!!**
**ನಮ್ಮ ಕೂಡಲ ಸಂಗಮದೇವನರಿಯದ ಸೂನೆಗಾರರೆಲ್ಲಾ**
**ನುಡಿಯದಿರಿಂಭೋ!!!**

ಶಿವನು ವಿಷ್ಣುವಾಗಲಾರನು; ವಿಷ್ಣುವು ಶಿವನಾಗಲಾರನು; ಒಬ್ಬರನ್ನೊಬ್ಬರೂ ಸೇರಿಕೊಂಡಿಲ್ಲ! ಕೂಡಲ ಸಂಗಮದೇವರನ್ನು ತಿಳಿಯದ ಕಟುಕರು ಹಾಗೆ ನುಡಿಯಬೇಡಿರಿ!

**೫೬೫ ಅವಲಕ್ಷಣ ನಾಯನುಡಿಯ ಸಡಗರ**
**ಡೊವಿಗೆ ಮೃತ್ಯುವಿನ ನುಡಿಗೊಳಗಾಯಿತ್ತು!**
**ಬೇಡವೋ, ಪರವಾದೀ, ಗಳಹದಿರು;**
**ಬೇಡವೋ, ದೂಷಕಾ, ಬಗುಳದಿರು!**
**ಭಕ್ತಿಗೆಯೂ ಬೇಟಕ್ಕೆಯೂ ಜಾತಿಸೂತಕವುಂಟೆ?**
**ಪರುಷಮುಟ್ಟಲು ಕಬ್ಬುನ ಹೊನ್ನಾಯಿತ್ತು, ಕಾಣಾ.**
**ನಮ್ಮ ಕೂಡಲ ಸಂಗನ ಶರಣರನವರಿವರೆಂದರೆ**
**ಕುಂಭಿಯ ಪಾತಕ ನಾಯಕ ನರಕ ತಪ್ಪದು, ಕಾಣಾ.**

ಲಕ್ಷಣಗೇಡಿಯಾಗಿ ಮಾತನಾಡುವುದು ನಾಯಿಯ ಮಾತಿನ ಸಡಗರವಾಗಿ ಪರಿಣಮಿಸಿ ದೇಹವು ಸಾವಿಗೆ ತುತ್ತಾಗುತ್ತದೆ. ಭಕ್ತಿಯ ಬೇಟೆಗೆ ಬೇಟೆಯ ಪ್ರಾಣಿಯಾಗಿ ಬರುವವರಿಗೆ ಜಾತಿಯ ಹೊಲೆತನವುಂಟೆ ? ಪರುಷಮಣಿ ಮುಟ್ಟಲು ಕಬ್ಬಿಣವೂ ಬಂಗಾರವಾಗುವಂತೆ ಭಕ್ತಿಯ ಬೆಳಕು ಹೊಳೆದೊಡನೆ ಜಾತಿಯ ಹೊಲೆತನ ದೂರವಾಗುತ್ತದೆ; ಆದುದರಿಂದ ಶರಣರನ್ನು ಆಡಿಕೊಳ್ಳಬೇಡಾ; ಆಡಿಕೊಂಡರೆ ಗರ್ಭಸ್ತ್ರಿಯನ್ನುಕೊಂದ ಪಾಪ ತಟ್ಟಿ ಘೋರ ನರಕಪ್ರಾಪ್ತಿಯಾಗುತ್ತದೆ.

**೫೬೬ ವಿಷ್ಣುವ ಪೂಜಿಸಿ ಮುಡುಹ ಸುಡಿಸಿಕೊಂಬುದ ಕಂಡೆ.**
**ಜಿನ್ನನ ಪೂಜಿಸಿ ಬತ್ತಲೆಯಿಪ್ಪುದ ಕಂಡೆ;**
**ಮೈಲಾರ ಪೂಜಿಸಿ ನಾಯಾಗಿ ಬಗಳುವುದ ಕಂಡೆ.**
**ನಮ್ಮ ಕೂಡಲ ಸಂಗನ ಶರಣರ ಪೂಜಿಸಿ, ದೇವಾ**
**ಭಕ್ತರೆನಿಸಿಕೊಂಬುದ ಕಂಡೆ.**

ಕೇಶವನನ್ನು ಪೂಜಿಸಿ ದೇಹ ಸುಡಿಸಿಕೊಳ್ಳುತ್ತಾರೆ; ಜಿನದೇವರನ್ನು ಆರಾಧಿಸಿ ಬತ್ತಲೆ ತಿರುಗುತ್ತಾರೆ; ಮೈಲಾರಲಿಂಗನನ್ನು ಪೂಜಿಸಿ ಗೊಗ್ಗಯ್ಯಗಳಾಗುತ್ತಾರೆ; ಆದರೆಸಂಗನ ಶರಣರನ್ನು ಆರಾಧಿಸಿ ಭಕ್ತರಾಗುವುದನ್ನು ಕಂಡೆನು ದೇವಾ !

**೫೬೭ ಆದಿಪುರಾಣ ಅಸುರರಿಗೆ ಮಾರಿ;**
**ವೇದ ಪುರಾಣ ಹೋತಿಂಗೆ ಮಾರಿ;**
**ರಾಮ ಪುರಾಣ ರಕ್ಕಸರಿಗೆ ಮಾರಿ;**
**ಭಾರತ ಪುರಾಣ ಗೋತ್ರಕ್ಕೆ ಮಾರಿ;**
**ಎಲ್ಲಾ ಪುರಾಣ ಕರ್ಮಕ್ಕೆ ಮೊದಲು:**
**ನಿಮ್ಮ ಪುರಾಣಕ್ಕೆ ಪ್ರತಿಯಿಲ್ಲಾ;**
**ಕೂಡಲ ಸಂಗಮದೇವಾ.**

ಆದಿಪುರಾಣವು ರಾಕ್ಷಸಯಜ್ಞ ಮಾಡುತ್ತದೆ; ವೇದಪುರಾಣವು ಯಜ್ಞಯಾಗಾದಿಗಳನ್ನು ಬೋಧಿಸುತ್ತದೆ; ರಾಮನಚರಿತೆ ರಾಕ್ಷಸ ಕುಲಕ್ಕೆ ಕಂಟ

ಕವಾಗಿದೆ; ಭಾರತ ಪುರಾಣವು ದಾಯಾದಿಗಳಿಗೆ ಕಂಟಕವಾಗಿದೆ; ಈ ಎಲ್ಲಾ ಪುರಾಣಗಳು ಕರ್ಮವನ್ನು ಮಾಡಲು ಬೋಧಿಸುತ್ತವೆ; ಕೂಡಲ ಸಂಗಮ ದೇವಾ ನಿಮ್ಮ ಪುರಾಣಕ್ಕೆ ಯಾವ ಕಂಟಕವೂ ಇಲ್ಲ !

**೫೬೮ ನಿಮ್ಮ ವಚನ ಎನ್ನ ಪುಣ್ಯವೆಂಬುದು ಹುಸಿಯಾಯಿತ್ತು, ನೋಡಾ.**
**ಶಾಸ್ತ್ರದ ವಚನ ಹೋತಿಂಗೆ ಮಾರಿ;**
**ಎಂತು ನಂಬುವೆನಯ್ಯಾ?**
**'ನಾನು ಕೊಲ್ಲೆ, ನೇಣು ಕೊಂದಿತ್ತೆಂ'ಬಸೂನೆಗಾರ ನೇನಂಬೆ,**
**ಕೂಡಲ ಸಂಗಮದೇವಾ?**

ಶಾಸ್ತ್ರಹೇಳಿದ ನುಡಿಗಳು ಹೋತಿನ ಮರಣಕ್ಕೆ ಕಾರಣವಾದಂತೆ ನಿಮ್ಮ ವಚನವು ನನ್ನ ಪುಣ್ಯವೆಂದು ತಿಳಿದ ನನಗೆ ಅದು ಸುಳ್ಳಾಗಿ ಪರಿಣ ಮಿಸಿತು; ಹೇಗೆ ನಂಬುವುದು ನಿನ್ನನ್ನು? ನಾನು ಕೊಲ್ಲಲಿಲ್ಲ ಹಗ್ಗವು ಕೊಂದಿತೆಂದು ಉತ್ತರಿಸುವ ಕಟುಕರಿಗೆ ಏನು ಹೇಳಲಿ ಕೂಡಲಸಂಗಮ ದೇವಾ ?

**೫೬೯ ಮಾತಿನ ಮಾತಿಂಗೆ ನಿನ್ನ ಕೊಂದಹರೆಂದು**
**ಎಲೆ ಹೋತೇ, ಅಳು, ಕಂದಾ!**
**ವೇದವನೋದಿದವರ ಮುಂದೆ ಅಳು, ಕಂದಾ!**
**ಶಾಸ್ತ್ರವನೋದಿದವರ ಮುಂದೆ ಅಳು, ಕಂದಾ !!**
**ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲ ಸಂಗಮದೇವ!**

ಮಾತಿನ ಜಾಲಕ್ಕಾಗಿ ನಿನ್ನನ್ನು ಕೊಂದರೆಂದು ಅಳು ಎಲೆಹೋತೆ! ವೇದ ಶಾಸ್ತ್ರಗಳನ್ನು ಓದಿ ಪಂಡಿತರಾದವರ ಮುಂದೆ ರೋದಿಸು ಕಂದಾ ! ನಿನ್ನ ಅಳುವು ಕೇಳಿ ಕರುಣ ಮೂರ್ತಿ ಕೂಡಲಸಂಗಮ ದೇವರು ನಿನಗೆ ಕಲ್ಯಾಣ ಮಾಡುವನು.

**೫೭೦ ದಕ್ಷಯಾಗವ ನಡೆಸಲೆಂದು ಅಜಮುಖ್ಯರಾದ ಸುರರೆಲ್ಲಾ**
**ನೆರೆದು ಬಂದ ಬಾಯು ನೋಡಾ,**

ಬಾಯು ತಪ್ಪಿಸಿ ಉಣ ಬಂದ ದೈವದ ಬೆಂದ ಬಾಯು ನೋಡಾ!
ಉಣ್ಣದೆ, ಉಡದೆ, ಹೊಗೆಯು ಕೈಯಲಿ ಸತ್ತ ಅಣ್ಣಗಳ ಕೇಡ ನೋಡಾ,
ಕೂಡಲ ಸಂಗಮದೇವಾ!

ದಕ್ಷಬ್ರಹ್ಮನು ಯಾಗವನ್ನು ಮಾಡಬೇಕೆಂದು ಅಜನುಮುಖಂಡನಾಗಿ ಬಂದಸುರರ ಮುಖವನ್ನು ನೋಡು, ಪರರ ಬಾಯಿ ಹಾರಿಹೊಡೆದು ಉಣ್ಣಲು ಬಂದ ಪ್ರಾಣಿಗಳ ಮುಖನೋಡು; ಉಣ್ಣದೆ, ಉಡದೆ ಹೊಗೆಯಲ್ಲಿ ಹೊತು ಸತ್ತುಹೋದ ನಿಷ್ಪಾಪಿಗಳ ಗೋಳು ಕೇಳು ಕೂಡಲ ಸಂಗಮದೇವಾ!

೫೭೧ ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ
ಗೌತಮಮುನಿಗೆ ಗೋವೇಧೆಯಾಯಿತ್ತು.
ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ
ಬಲಿಗೆ ಬಂಧನವಾಯಿತ್ತು.
ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ
ಕರ್ಣನ ಕವಚ ಹೋಯಿತ್ತು.
ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ
ದಕ್ಷಂಗೆ ಕುರಿದಲೆಯಾಯಿತ್ತು.
ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ
ಪರುಶುರಾಮನು ಸಮುದ್ರಕ್ಕೆ ಗುರಿಯಾದನು.
ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ
ನಾಗಾರ್ಜುನನ ತಲೆ ಹೋಯಿತ್ತು.
ದೇವಾ, ಭಕ್ತನೆಂದು ನಂಬಿದ ಕಾರಣ
ನಮ್ಮ ಕೂಡಲ ಸಂಗನ ಶರಣರು ಕೈಲಾಸವಾಸಿಗಳಾದರು!

ಸಕಲಕ್ಕೂ ಬ್ರಾಹ್ಮಣನೇ ದೇವರೆಂದು ಭಾವಿಸಿದುದರಿಂದ ಗೌತಮ ಮುನಿಗೆ ಗೋವಧೆಮಾಡಿದ ದೋಷಬಂತು; ಬಲಿಗೆ ಪಾತಾಳ ಬಂಧನ ವಾಯಿತು; ಕರ್ಣನು ತನ್ನ ಕರ್ಣಕುಂಡಲಿಗಳನ್ನು ಕಳೆದು ಕೊಂಡನು; ದಕ್ಷನು ತನ್ನ ತಲೆಕಳೆದುಕೊಂಡು ಕುರಿ ತಲೆ ಇಟ್ಟುಕೊಳ್ಳಬೇಕಾಯ್ತು; ಪರಶುರಾಮನು ಸಮುದ್ರಾಂತರ್ಗತನಾದನು; ನಾಗಾರ್ಜುನನು ಮೃತ್ಯು ವಶನಾದನು; ದೇವರೆ, ಜ್ರಾಹ್ಮಣನೂ ಓರ್ವ ಭಕ್ತನೆಂದು ಭಾವಿಸಿದ ಕಾರಣ ಸಂಗನ ಶರಣರು ಕೈಲಾಸವಾಸಿಗಳಾದರು.

**೫೭೨ ಏನಯ್ಯಾ, ವಿಪ್ರರು ನುಡಿದಂತೆ ನಡೆಯರು:**
**ಇದೆಂತಯ್ಯಾ?**
**ತಮಗೊಂದು ಬಟ್ಟೆ, ಶಾಸ್ತ್ರಕೊಂದು ಬಟ್ಟೆ!**
**ಕೂಡಲ ಸಂಗಮದೇವಾ, ಹೊಲೆಯರ ಬಸುರಲ್ಲಿ**
**ವಿಪ್ರರು ಹುಟ್ಟಿ ಗೋಮಾಂಸವ ತಿಂಬುವರೆಂಬುದಕ್ಕೆ**
**ಇದೇ ದೃಷ್ಟ!**

ಶಾಸ್ತ್ರದಲ್ಲಿ ಹೇಳಿದಂತೆ ವಿಪ್ರರರು ನಡೆಯದೆ ತಮ್ಮ ಆಚರಣೆಗಳನ್ನು ಬೇರ್ಪಡಿಸಿಕೊಂಡಿದ್ದಾರೆ; ಶಾಸ್ತ್ರದಲ್ಲಿರುವಂತೆ ಆಚರಣೆಯಿಲ್ಲದವರೆಲ್ಲರೂ ಹೊಲೆಯರಲ್ಲಿ ಹುಟ್ಟಿಗೋಮಾಂಸ ತಿನ್ನುವವರೆಂಬುದಕ್ಕೆ ಬೇರಾವದೃಷ್ಟಾಂತಗಳೇ ಬೇಕಿಲ್ಲ.

**೫೭೩ ಹೊಲೆಯೊಳಗೆ ಹುಟ್ಟಿ ಕುಲವನರಸುವ,**
**ಎಲವೋ, ಮಾತಂಗಿಯ ಮಗ ನೀನು!**
**ಸತ್ತುದನೆಳೆವ ನೆತ್ತಣ ಹೊಲೆಯು?**
**ಹೊತ್ತುತಂದು ನೀವು ಕೊಲುವಿರಿ.**
**ಶಾತ್ರವೆಂಬುದು ಹೋತಿಂಗೆ ಮಾರಿ;**
**ವೇದವೆಂಬುದು ನಿಮಗೆ ತಿಳಿಯದು.**
**ನಮ್ಮ ಕೂಡಲ ಸಂಗನ ಶರಣರು**

**ಕರ್ಮವಿರಹಿತರು, ಶರಣಸನ್ನಿಹಿತರು ಅನುಪಮ
ಚರಿತ್ರರು:
ಅವರಿಗೆ ತೋರಲು ಪ್ರತಿಯಿಲ್ಲವೋ!**

ರಕ್ತ ಮಾಂಸ ತುಂಬಿದ ಗರ್ಭದಿಂದ ಹುಟ್ಟಿದ ಮಾನವನೇ ಜಾತಿಯನ್ನು ಹುಡುಕುತ್ತಿರುವಿ; ನೀನೇ ಹೊಲೆಯರವಳ ಮಗನಾಗಿರುವಿ; ಸತ್ತ ಪ್ರಾಣಿಗಳನ್ನು ಎತ್ತಿ ಊರು ಶುದ್ಧಮಾಡುವವನು ಹೊಲೆಯನಲ್ಲ. ಯಾವ ವೇದವನ್ನು ತಿಳಿಯದ ಅಜ್ಞಾನಿಗಳೆ, ಕೂಡಲ ಸಂಗನ ಶರಣರು ಇಂದ್ರಿಯಾದಿಗಳನ್ನು ಗೆದ್ದವರು; ಒಳ್ಳೆಯ ಚಾರಿತ್ರ್ಯವುಳ್ಳವರು; ಅವರಿಗೆ ಯಾವುದೂ ವಿರೋಧವಿಲ್ಲ.

**೫೭೪ ಇಪ್ಪೆಯ ಹಣ್ಣ ನರಿ ತಿಂದು ಸೃಷ್ಟಿತಿರುಗಿತೆಂಬಂತೆ
ಮುಟ್ಟಿಯನಿಟ್ಟದ್ವಿಜರ ಮಾತದೇಕೆ?
ಹಗಲುಗಾಣದ ಗೂಗೆ ಇರುಳಾಯಿತ್ತೆಂದರೆ
ಜಗಕ್ಕೆ ಇರುಳಪ್ಪುದೆ, ಮರುಳೆ!
ಹೋಮದನೆವದಲ್ಲಿ ಹೋತನತಿಂಬ
ಅನಾಮಿಕರೊಡನಾಡಿ ಗೆಲುವುದೇನು,
ಕೂಡಲ ಸಂಗಮದೇವಾ?**

ಇಪ್ಪಿಯಹಣ್ಣುತಿಂದು ನರಿಯು ತನ್ನ ತಲೆತಿರುಗುವದನ್ನು ಹೇಳದೆ ಜಗತ್ತು ತನ್ನಸುತ್ತಲೂ ತಿರುಗುತ್ತಲಿದೆ ಎಂದು ಹೇಳುವ ಹಾಗೆ; ಹಗಲನ್ನು ನೋಡದ ಗೂಗೆಯು ಈಗ ರಾತ್ರಿಯಾಗಿದೆ ಎಂದು ಹೇಳಿದರೆ ಆ ಮಾತನ್ನು ಒಪ್ಪಬಹುದೆ? ಹಾಗೆ ಹೋಮಹವನದನೆವಗಳಿಂದ ಹೋತನ ಮರಿಯನ್ನು ತಿನ್ನುವ ಹೆಸರಿಲ್ಲದ ಬ್ರಾಹ್ಮಣರೊಂದಿಗೆ ಮಾತನಾಡಿ ಗೆಲ್ಲುವುದು ಹೇಗೆ? ಕೂಡಲ ಸಂಗಮದೇವಾ!

**೫೭೫ ಮೀಂಬುಲಿಗನ ಹಕ್ಕಿಯಂತೆ ನೀರ ತಡಿಯಲ್ಲಿದ್ದು
ಮೂಗು ಹಿಡಿದು ಧ್ಯಾನಮಾಡುವರಯ್ಯಾ.
ಬಿಟ್ಟ ಮಂಡೆವೆರೆಸಿ ಬಾಯ ಮಿಡುಕಿಸುತ
ಕಣ್ಣುಮುಚ್ಚಿ ಬೆರಳನೆಣಿಸುವರಯ್ಯಾ-**

**ನಿಮ್ಮ ಕೈಯಲ್ಲಿ ಕಟ್ಟಿದ ದರ್ಭೆಯ ಹುಲ್ಲು**
**ಕೂಡಲ ಸಂಗನನರಿಯದೆ ನೊರೆಯಿಡುವಂತೆ**

ಕೆರೆಯ ದಂಡೆಯ ಮೇಲೆ ಮೀನ ತಿನ್ನುವ ಹಕ್ಕಿ ಕುಳಿತಂತೆ ಮೂಗು ಹಿಡಿದುಕೊಂಡು ಕಣ್ಣು ಮುಚ್ಚಿ ಬೆರಳು ಎಣಿಸುವುದು, ಚಿತ್ತ ಚಂಚಲ ವಾಗಿ ಅತ್ತಿತ್ತಮನ ಹರಿದಾಡುತ್ತಲಿದ್ದರೆ ಏನೂಫಲವಿಲ್ಲ. ಬೆರಳಿಗೆ ಸಿಕ್ಕಿಸಿದ ದರ್ಭೆಯ ಪವಿತ್ರವು ಪರಮಾತ್ಮನನ್ನು ತಿಳಿಯದೆ ಅವನಿಗೆ ಅಂಗಲಾಚಿ ಬೇಡುತ್ತಲಿದೆ. ಕೂಡಲಸಂಗಮ ದೇವಾ !

**೫೭೬ ಮಾಣದೆ ಅರಳೆಯ ತಿಟ್ಟನೆ ತಿರುಗುವ ಗಾಣದೆತ್ತಿನಂತೆ**
**ಪೂರ್ವ ಲಿಖಿತ ಮುಂದುಗಾಣಲೀಯದು.**
**ನೀವೆಲ್ಲಾ ಮಾಯಕ್ಕೆ ಕೆಡಬೇಡಾ:**
**ಮಾಣದೇ ಪೂಜಿಸು ಲಿಂಗವ.**
**ಹೆರರ ಗೋಣ ಕೊಯ್ದೆನೆಂದು ಮಂತ್ರವ ನೋದುವ**
**ನೇಣುಗಾರರ ಮೆಚ್ಚ ಕೂಡಲ ಸಂಗಮದೇವ.**

ಒಂದೇ ಸವನೆ ಗಾಣದೆತ್ತು ಕಂಣುಕಟ್ಟಿಕೊಂಡು ಗಾಣದ ಸುತ್ತಲೂ ತಿರು ಗುವಂತೆ ನನ್ನ ವಿಧಿಲಿಖಿತ ದೇವನ ನಿಜ ಭಾವವನ್ನು ತಿಳಿಯಲು ಬಿಡದಾ ಗಿದೆ; ನೀವು ಡಂಭಾಚಾರಗಳಿಗೆ ಮೋಸ ಹೋಗಿ ಕೆಡಬೇಡಿರಿ; ಪ್ರತಿದಿನವೂ ತಪ್ಪದೆ ಲಿಂಗವನ್ನು ಪೂಜಿಸಿರಿ; ಅನ್ಯರನ್ನು ಮೊಸಮಾಡಿದೆನೆಂದು ಮಂತ್ರ ಪಠಿಸುವ ಕಟುಕರನ್ನು ಕೊಡಲ ಸಂಗಮ ದೇವರು ಮೆಚ್ಚಿಕೊಳ್ಳುವುದಿಲ್ಲ.

**೫೭೭ ನೀರಕಂಡಲ್ಲಿ ಮುಳುಗುವರಯ್ಯಾ,**
**ಮರನ ಕಂಡಲ್ಲಿ ಸುತ್ತುವರಯ್ಯಾ!**
**ಬತ್ತುವ ಜಲವನೊಣಗುವ ಮರನ**
**ಮೆಚ್ಚಿದವರು ನಿಮ್ಮನೆತ್ತ ಬಲ್ಲರು**
**ಕೂಡಲ ಸಂಗಮದೇವಾ?**

ನೀರು ಬತ್ತಿಹೋಗುವ ಕೊಳದಲ್ಲಿ ಮುಳುಗಿ, ಒಣಗುವ ಮರಕ್ಕೆ ಪ್ರದಕ್ಷಿಣೆ ಹಾಕಿ ಪೂಜಿಸುವ ಮನುಜರು ಘನಮಹಿಮ ಪರಮಾತ್ಮನನ್ನು ನಂಬುವುದು ಹೇಗೆ ಕೂಡಲ ಸಂಗಮ ದೇವಾ !

**೮೭೮ ಕಣ್ಣಮುಚ್ಚಿ ಕನ್ನಡಿಯ ತೋರುವಂತೆ,**
**ಇರುಳು ಹಗಲಿನ ನಿದ್ರೆ ಸಾಲದೆ**
**ಬೆರಳನೆಣಿಸಿ ಪರಮಾರ್ಥವ ಹಡೆವರೆ ಚೋದ್ಯವಲ್ಲವೆ?**
**ಹೇಳಾ.**
**ಮೂಗ ಮುಚ್ಚಿ ಮುಕ್ತಿಯ ಬಯಸುವ**
**ನಾಚಿಕೆಯಿಲ್ಲದವರ ನಾನೇನೆಂಬೆ,**
**ಕೂಡಲ ಸಂಗಮದೇವಾ?**

ತಾನು ಕಣ್ಣುಮುಚ್ಚಿಕೊಂಡು ಪರರಿಗೆ ಕನ್ನಡಿ ಹಿಡಿದು ಅವರ ಮುಖ ತೋರಿಸುವಂತೆ ಮೂಗು ಮುಚ್ಚಿಕೊಂಡು ಬೆರಳೆಣಿಸುವದು ಮತ್ತು ಮುಕ್ತಿಯನ್ನು ಬಯಸುವುದು ಕಿಡಿಗೇಡಿತನವಲ್ಲವೆ? ಇಂಥ ಲಜ್ಜೆಗೆಟ್ಟವರಿಗೆ ಏನೆಂದು ತಿಳಿಹೇಳಲಿ ದೇವಾ!

**೫೭೯ ನರಜನ್ಮದಲ್ಲಿ ಹುಟ್ಟಿ ಲಿಂಗಮುಖವನರಿಯದೆ**
**ಉದುಮದ ಸೊಕ್ಕೆ ತಲೆಗೇರಿತ್ತೆ, ಅಯ್ಯಾ!**
**'ಜೀವೋ ಜೀವೇನ ಭಕ್ಷ್ಯತೇ' ಕರ್ಮಕರ್ಮದಲ್ಲಿಪ್ಪೆ**
**ಯಯ್ಯಾ !**
**ಅಂದೊಮ್ಮೆ ದಕ್ಷನು ಹೋತನ ಕೊಂದಲ್ಲಿ-**
**ಘೋಳಿಡಲಿ ಘೋಳಿಡಲಿಕೆ ತಂದಿಕ್ಕೆ ಅಕ್ಕಿತ್ತೆ!**
**ನಿಮ್ಮ ವೇದ ಶಾಸ್ತ್ರಂಗಳ ಮೂರುತಿಗೊಂಡಲ್ಲಿ**
**ಚತುರ್ವೇದಿಗಳಿಗೊಮ್ಮೆ ಅಕ್ಕಿತ್ತೆ ಅಯ್ಯಾ!**
**ನಮ್ಮ ಕೂಡಲ ಸಂಗಮನನರಿಯದ ಕಾರಣ**
**ನಾಯಕನರಕದಲ್ಲಿಕ್ಕಿತ್ತೆ ಅಯ್ಯಾ !**

ಕರ್ಮವು ಕರ್ಮದಲ್ಲಿ ಅಡಕವಾಗಿರುವಂತೆ, ಜೀವವು ಜೀವವನ್ನು ತಿಂದು ಬಾಳುವಂತೆ, ಮನುಷ್ಯ ಜನ್ಮದಲ್ಲಿ ಹುಟ್ಟಿಬಂದು ಆ ಲಿಂಗವನ್ನು ಕಂಡಿಲ್ಲ ತಿಳಿದಿಲ್ಲವೆಂದರೇನು? ಏರಿಕೆಯ ಜವ್ವನದ ಸೊಕ್ಕು ತಲೆಗೇರಿತ್ತೆ? ವೇದ ಶಾಸ್ತ್ರಗಳು ಮೂರ್ತಿರೂಪ ತಳೆದಾಗ ದುಃಖವಾಗುತ್ತದೆಯೇ ? ಇಲ್ಲ; ಹಾಗೆ ಕೂಡಲ ಸಂಗಮ ದೇವರನ್ನು ಪೂರ್ಣ ತಿಳಿಯದೆ ಇರುವದರಿಂದ ರವರವನರಕ ತಪ್ಪಲಿಲ್ಲ.

೫೮೦ ಕುಲದಲ್ಲಿ ಹಾರುವನು ಬ್ರಹ್ಮೇತಿಗೆ ಬಾರುವನು:
ಆರೋ ಮಾಡಿದ ಪಾಪಕ್ಕೆ ತಾನೇ ಕೈಯಾನುವನು!
ಸರಿಯೆ ದೇವಭಕ್ತರಿಗಿವನು?
ಸರಿಯೇ ಲಿಂಗ ಭಕ್ತರಿಗಿವನು?
ಬಡಗಿ ಮಾಚಲ ದೇವಿಯು ಕುಲಜೆಯು ಮಾಡಿಹೆನೆಂದು
ಹೊನ್ನ ಕಪಿಲೆಯು ರಾವಣಶಾಖದುಚ್ಛಿಷ್ಟದ ಹಾಲಿನಿಂದ
ಕೂಳನಟ್ಟುಂಬುವವರ ನೇನೆಂಬೆ,
ಕೂಡಲ ಸಂಗಮದೇವಾ?

ಕುಲದಿಂದ ಬ್ರಾಹ್ಮಣನಾದುದರಿಂದ ಇವನು ಯಾರೋ ಮಾಡಿದ ಪಾಪವನ್ನು ತನ್ನ ಕೈಯಿಂದಲೆ ತಾನೇ ಕೊರಳಿಗೆ ಕಟ್ಟಿಕೊಳ್ಳುತ್ತಾನೆ; ಪಾಪಗಳಿಗೆ ಕೈಯೊಡ್ಡಿ ಪೀಡೆಗಳ ಬಳಿ ಹೋಗುತ್ತಲಿದ್ದಾನೆ;ಇವನು ದೇವ ಭಕ್ತರಿಗೆ, ಲಿಂಗಭಕ್ತರಿಗೆ ಸರಿಯಾಗಲಾರನು; ರಾವಣಾಸುರನ ಮೈಯಿಂದ ಹೊರಬಂದ ಹೊಲಸಿನಿಂದ ಅಡಿಗೆಮಾಡಿ ಉಂಬುವ ಕುನ್ನಿಗಳಿಗೆ ಏನೆಂದು ತಿಳಿಹೇಳಬೇಕು ಕೂಡಲ ಸಂಗಮದೇವಾ?

೫೮೧ ಕಿಚ್ಚು ದೈವವೆಂದು ಹವಿಯನಿಕ್ಕುವರು.
ಮನೆಯಲ್ಲಿ ಕಿಚ್ಚೆದ್ದು ಸುಡುವಾಗ,
ಬಚ್ಚಲ ನೀರು ಬೀದಿಯಧೂಳಹೊಯ್ದು ಬೊಬ್ಬಿಟ್ಟೆಲ್ಲರ ಕರೆವರಯ್ಯಾ!
ಕೂಡಲ ಸಂಗಮದೇವಾ,
ವಂದನೆಯ ಮರೆದು ನಿಂದಿಸುತಿರ್ದರಯ್ಯಾ!

ಅಗ್ನಿಯು ದೇವನೆಂದು ಮನ್ನಿಸಿ ಅದಕ್ಕೆ ತುಪ್ಪವನ್ನು ಹಾಕುವರು; ಆದರೆ ಅದೆ ಅಗ್ನಿಯು ಮನೆಗೆ ಹತ್ತಿ ಹೊತ್ತಿಕೊಂಡು ಉರಿಯುತ್ತಿರುವಾಗ ಬಚ್ಚಲಹರಿಯ ನೀರನ್ನು ತಂದು ಸುರಿಯುತ್ತಾರೆ, ಬೀದಿಯ ಮಣ್ಣು ತಂದು ಚೆಲ್ಲುತ್ತಾರೆ; ಅಲ್ಲದೆ ನಮಸ್ಕಾರಾದಿಗಳನ್ನು ಮರೆತು ಅಗ್ನಿಗೆ ಶಪಿಸುತ್ತಾರೆ. ಇದೆಂಥ ಭಕ್ತಿ ಕೂಡಲ ಸಂಗಮದೇವಾ?

೫೮೨ ಬ್ರಹ್ಮಸಭೆ ತೆರೆದಲ್ಲಿ ಬ್ರಹ್ಮವಿತ್ತುಗಳು
ಬ್ರಹ್ಮ ತತ್ತ್ವವಡೆದು ತಮ್ಮ ವಚನ ಬ್ರಹ್ಮರೆಂದೆನಿಸಿಕೊಂಡು
ನೆಮ್ಮುವರು ವಿಷ್ಣುವನು—
ತಮ್ಮ ದೈವವ ಬಿಡುವುದಾವುದುಚಿತ!
ವಿಷ್ಣು ಶಿವಭಕ್ತನಾಗಿ ನಿಷ್ಠೆಯಿಂದ ಕಣ್ಣನಿತ್ತು
ಹಡೆದನು ಶಿವಭಕ್ತಿಯಿಂದ!
ಕಷ್ಟ ಜಾತಿ ಜೀವಿಗಳಿಗೆ ಮುಟ್ಟಿಯೆಂತು ಬಂದಿತ್ತೋ!
ಮುಟ್ಟಿರೊಂದುವನು ಮೂವಿಧಿಬಟ್ಟಿರೂ!
'ಹುಸಿವನೆ ಹೊಲೆಯು' ನೆಂದು ವಚನವುಂಟು ಲೋಕದಲ್ಲಿ:
ಹುಸಿದಜನ ಸಿರ ಹೋಯಿತ್ತಾದಿಯಲ್ಲಿ!
ಎಸವೋದ ಕಿರು ಪಶುವನುಸುರಲೀಯುದೆ
ವಿಧಾನಿಸಿ ತಿಂಬ ಜನ್ಮ ಅದಾವ ಫಲವೋ:
ದಕ್ಷಯಾಗವ ಮಾಡಿ ನಿ ಕ್ಷೇತ್ರನೆರೆದುದಕಟಕಟಾ,
ಕೇಳಿಯುೂ ಏಕೆ ಮಾಣರೋ?
ಮಮಕರ್ತ ಕೂಡಲ ಸಂಗನ ಶರಣರು ಅಕ್ಷಯುರಧಿಕರು:
ವಿಪ್ರರರು ಕೀಳು ಜಗನೆಲ್ಲರಿಯುಲು!

ಬ್ರಾಹ್ಮಣರು ಸಭೆಸೇರಿದಾಗ ತಮ್ಮ ನುಡಿಗಳೇ ಬ್ರಹ್ಮವೆಂದುಸುರಿ ವಿಷ್ಣುದೇವನನ್ನು ಸಹಿತ ತುಚ್ಛಮಾಡುತ್ತಾರೆ; ಆದರೆ ವಿಷ್ಣುವು ಸ್ವತಃ ನಿಷ್ಠೆಯಿಂದ ಶಿವಭಕ್ತಿಯಮಾಡಿ ತನ್ನ ಕಣ್ಣನ್ನು ಅರ್ಪಿಸಿ ಹರನ ಕರುಣೆಯನ್ನು ಪಡೆದನು; ಕಷ್ಟ ಕಾರ್ಪಣ್ಯದ ಜೀವನ ಸಾಗಿಸುವ ಅಂತ್ಯಜರಿಗೆ ಪಾಪವೆಂಬುದಿಲ್ಲ; ಸುಳ್ಳುನುಡಿವವನೇ ಹೊಲೆಯೆಂದು ಸಂಗನ ವಚನ ಸಾರುತ್ತದೆ. ಕಾರಣ ವಿಪ್ರರು ತಮ್ಮಗರ್ವದಿಂದಾಗಿ ಕೀಳಾಗಿದ್ದಾರೆ ಜಗತ್ತಿನಲ್ಲಿ; ಸಂಗನಶರಣರು ಶ್ರೇಷ್ಠರು.

೫೮೩ ವೇದವನೋದಿದ ವಿಪ್ರರರು ಹೊನಲಲ್ಲಿ ಹೋದ ಕೇಡ
ನೋಡಿರೇ !
'ಭರ್ಗೋದೇವಶ್ಯಮಹಿ' ಎಂಬರು:
ಒಬ್ಬರಿಗಾಗಿ ವಿಚಾರವಿಲ್ಲ, ನೋಡಿರೆ,
ಕೂಡಲ ಸಂಗಮದೇವಾ.

ವೇದಾಂತಿಗಳಾದ ಬ್ರಾಹ್ಮಣರು ಹಾಳಾಗಿ ಅಡವಿಯಪಾಲದ ಗತಿಯನ್ನು ನೋಡಿರಿ; ಚಿನ್ಮಯನಾಗಿರುವನು ದೇವರು ಎಂದು ಹೇಳುತ್ತಾರೆ! ಒಬ್ಬರಿಗೂ ತಿಳಿದಿಲ್ಲ ದೇವರ ನಿಜರೂಪ; ಕೂಡಲಸಂಗಮ ದೇವಾ.

೫೮೪ ಎನಿಸನೋದಿದರೇನು? ಎನಿಸ ಕೇಳಿದರೇನು?
ಚತುರ್ವೇದಪಾಠ ತೀವ್ರದಾದರೇನು?
ಲಿಂಗಾರ್ಚನೆ ಹೀನನಾದರೆ, ಶಿವಶಿವಾ,
ಬ್ರಾಹ್ಮಣನೆಂಬೆನೇ? ಎನಲಾಗದು.
ಬ್ರಹ್ಮನಾಸ್ತಿ ಶ್ವಪಚರಥಮುರೆಂದುದಾಗಿ,
ಇದು ಕಾರಣ ಕೂಡಲ ಸಂಗಮದೇವಾ
'ವೇದಭಾರಭರಾಕ್ರಾಂತಾಃ ಬ್ರಾಹ್ಮಣ ಗರ್ವಭಾರಃ
ಎಂಬೆನು.

ನಾಲ್ಕು ವೇದಗಳನ್ನು ಅಲ್ಪ ಕಾಲದಲ್ಲಿಯೇ ಪಾಠ ಮಾಡಿದೆನೆಂದು ಹೆಮ್ಮೆಪಡುವದು, ಎಷ್ಟೋ ತಿಳಿದಿರುವೆ; ಎಷ್ಟೋ ಕೇಳಿ ತಿಳಿದಿರುವೆ, ಎಂದು ಹೇಳಿಕೊಳ್ಳುವದು, ಲಿಂಗ ಪೂಜೆಯನ್ನು ಮಾಡದಿದ್ದರೆ ಎಲ್ಲವೂ ನಿರರ್ಥಕವು. ಅಂಥವರು ಜ್ಞಾನಹೀನರೂ ಚಂಡಾಲರು ಆಗುತ್ತಾರೆ. ಆದಕಾರಣ ಕೂಡಲ ಸಂಗಮದೇವಾ, ವೇದದಹುಚ್ಚು ತಲೆಗೇರಿದ ಬ್ರಾಹ್ಮಣನು ಗರ್ವಿಷ್ಠನಿರುತ್ತಾನೆ.

೫೮೫ ನಿಮ್ಮ ನರಿಯದ ಕಾರಣ ಕೈಯಲ್ಲಿ ಹುಲ್ಲು!
ಸೀಮೆಗೆರಗದ ಕಾರಣ ಕೊರಳಲ್ಲಿ ನೇಣು!
ಹಿಂಡಲೇಕೋ? ತೊಳೆಯ ಲೇಕೋ?

**ಮುಳುಗಿ ಮುಳುಗಿ ಮೂಗ ಹಿಡಿಯಲೇಕೋ**
**ಕೂಡಲ ಸಂಗನ ಶರಣರಲ್ಲಿ**
**ಡೋಹರ ಕಕ್ಕಯ್ಯನಾವ ತೊರೆಯಲ್ಲಿ ಮಿಂದ?**

ನಿಮ್ಮನ್ನು ತಿಳಿಯದುದರಿಂದಲೇ ಕೈಯಲ್ಲಿ ದರ್ಭೆ ಹಿಡಿದಿರುತ್ತಾರೆ; ಕೊರಳಲ್ಲಿರುವ ಜನಿವಾರ-ಶಿವದಾರಗಳು ನಿಮಗೆ ಬಾಗದೆ ಇದ್ದಲ್ಲಿ ನೇಣಿನ ಹಗ್ಗಗಳಾಗುತ್ತವೆ; ನೀರಲ್ಲಿ ಮುಳುಗಿ ಮೂಗು ಹಿಡಿದುಕೊಂಡು ಬರುವುದೇಕೆ? ಶರಣರ ಬಳಗದಲ್ಲಿದ್ದ ಡೋಹರ ಕಕ್ಕಯ್ಯನು, ಕೂಡಲ ಸಂಗಮದೇವಾ, ನಿಮ್ಮನ್ನು ತಿಳಿಯಲು ಯಾವ ನೀರಿನಲ್ಲಿ ಮುಳುಗಿ ಎದ್ದಿದ್ದಾನೆ ಹೇಳು?

**೫೮೭ ವ್ಯಾಸ ಬೋಯಿತಿಯ ಮಗ, ಮಾರ್ಕಂಡೇಯ**
**ಮಾತಂಗಿಯ ಮಗ,**
**ಮಂಡೋದರಿ ಕಪ್ಪೆಯ ಮಗಳು !**
**ಕುಲವನರಸದಿರಿಂಭೋ, ಕುಲದಿಂದ ಮುನ್ನೇನಾದಿ**
**ರಿಂಭೋ ?**
**ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ದುರ್ವಾಸ ಮುಚ್ಚಿಗ,**
**ಕಸ್ಯಪ ಕಮ್ಮಾರ, ಕೌಂಡಿಲ್ಯನೆಂಬ ಋಷಿ**
**ಮೂರು ಭುವನರಿಯೆ ನಾವಿದ ಕಾಣೆಂಭೋ!**
**ನಮ್ಮ ಕೂಡಲ ಸಂಗನ ವಚನವಿಂತೆಂದುದು:**
**'ಶ್ವಪಚೋಽಪಿ'—ಯಾದರೇನು, ಶಿವಭಕ್ತನೇ ಕುಲಜನು.**

ಕುಲ ಜಾತಿಗಳೆಂಬವು ಜ್ಞಾನಿಗಳಿಗೆ ಅಲ್ಲ; ಹಾಗಿದ್ದಲ್ಲಿ ವ್ಯಾಸನು ಮೀನಗಾರ್ತಿಯ ಮಗನು; ಮಾರ್ಕಂಡೇಯನು ಮಾದಿಗರವಳ ಮಗನು; ಕಾರಣ ಋಷಿ ಮೂಲ ನೋಡಬಾರದು; ಶಿವ ಭಕ್ತನೇ ಉತ್ತಮ ಕುಲದವನೆಂದು ಕೂಡಲ ಸಂಗನ ನುಡಿ ಹೇಳಿದೆ.

**೫೮೭ ಕೊಲುವನೇ ಮಾದಿಗ, ಹೊಲಸ ತಿಂಬವನೇ ಹೊಲೆಯ!**
**ಕುಲವೇನೋ ಅವಂದಿರ ಕುಲವೇನೋ?**

**ಸಕಲ ಜೀವಾತ್ಮರಿಗೆ ಲೇಸನೇ ಬಯಸುವ**
**ನಮ್ಮ ಕೂಡಲ ಸಂಗನಶರಣರೇ ಕುಜಲರು.**

ದಯಾ ಹೀನನಾಗಿ ಪ್ರಾಣಿವಧೆ ಮಾಡುವವನೇ ಮಾದಿಗನು; ಮದ್ಯ ಮಾಂಸಾದಿಗಳನ್ನು ತಿನ್ನುವವನೇ ಹೊಲೆಯನು; ಕುಲವೆಂದರೇನೋ? ಎಲ್ಲ ಪ್ರಾಣಿಗಳನ್ನು ದಯಾದೃಷ್ಟಿಯಿಂದ ನೋಡುವ ಸಂಗನ ಶರಣರು ಉತ್ತಮ ಕುಲದವರು.

**೫೪೪ ಹೊಲೆಗಂಡಲ್ಲದೆ ಪಿಂಡದನೆಲೆಗಾಶ್ರಯವಿಲ್ಲ.**
**ಜಲ-ಬಿಂದುವಿನ ವ್ಯವಹಾರವೊಂದೇ:**
**ಆಶೆಯಾಮಿಷ ರೋಷಹರುಷ ವಿಷಯಾದಿಗಳೆಲ್ಲಾ ಒಂದೆ.**
**ಏನನೋದಿ ಏನಕೇಳಿ, ಏನುಫಲ?**
**ಕುಲಜನೆಂಬುದಕ್ಕೆ ಆವುದು ದೃಷ್ಟ?**
**ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ;**
**ಹಾಸನಿಕ್ಕಿ ಸಾಲಿಗನಾದ; ವೇದವನೋದಿ ಹಾರುವನಾದ!**
**ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ?**
**ಇದು ಕಾರಣ, ಕೂಡಲ ಸಂಗಮದೇವಾ,**
**ಅಂಗಸ್ಥಲವನರಿದವನೆ ಕುಲಜನು.**

ಹೊಲೆಯೆಂಬುದು ಕಣ್ಣಿನಿಂದ ಹೊಲಸು ಕಂಡಾಗಲೇ ಹೊರತು ಹುಟ್ಟಿದ ದೇಹಕ್ಕೆ ತವರುಮನೆಯಾಗುವುದಿಲ್ಲ; ನೀರು ಮತ್ತು ನೀರ ಹನಿಯ ನೀತಿಗಣವೊಂದೆಯಾಗಿದೆ; ಏನನೋದಿ, ಏನು ಕೇಳಿ ಏನು ಪಲ; ಯಾಕೆಂದರೆ ಆಶೆ, ವಿಷಯಲಂಪಟತನ, ಮೊದಲಾದವುಗಳು ಮನದಿಂದ ಹಿಂಗದಿದ್ದರೇ ಅವನನ್ನು ಕುಲಜನೆಂದು ಅನ್ನಲು ಯಾವ ಆಧಾರವಿದೆ? ಜಾತಿಗಳು ಆವರವರ ವೃತ್ತಿಗಳಿಗನುಸಾರವಾಗಿವೆಯೋ ಹೊರತು ಹುಟ್ಟಿನಿಂದ ಬಂದುದಲ್ಲ. ಜಾತಿಯಲ್ಲಿ ಮೇಲು ಕೀಳಾಗಲು ಯಾರಾದರೂ ಕಿವಿಯಲ್ಲಿ ಹುಟ್ಟಿಬಂದಿದ್ದಾರೆಯೇ? ಆದ್ದರಿಂದ ಅಂಗದಲ್ಲಿ ಲಿಂಗವನ್ನರಿದವನೇ ಕುಲಜನು.

**೫೮೯ ಹಾರುವನ ಭಕ್ತಿ ಓಡಿನೊಳಗಗೆಯ ಹೊಯಿದಂತೆ:**
**ಕೆಳಯಿಂಕೆ ಬೇರೂರದು, ಮೇಲೆ ಫಲವಾಗದು!**
**ಪ್ರಾಣಲಿಂಗದ ಪ್ರಸಾದವ ಮುಂದಿಟ್ಟುಕೊಂಡು**
**'ಪ್ರಾಣಾಯ ಸ್ವಾಹಾ, ಅಪಾನಾಯ ಸ್ವಾಹಾ, ವ್ಯಾನಾ**
**ಯ ಸ್ವಾಹಾ, ಉದಾನಾಯ ಸ್ವಾಹಾ, ಸಮಾನಾಯ**
**ಸ್ವಾಹಾ.'**
**ಎಂಬ ಕರ್ಮಿಗಳ ನೇನೆಂಬೆ, ಕೂಡಲ ಸಂಗಮದೇವಾ?**

ಬ್ರಾಹ್ಮಣನ ಭಕ್ತಿ, ಕಾದ ಹಂಚಿನಲ್ಲಿ ಸಸಿಗಳನ್ನು ಹಾಕಿ ತೆಗೆದು ನೆಲದಲ್ಲಿ ನೆಟ್ಟರೆ ಕೆಳಗೆ ಬೇರು ನಿಲ್ಲದು, ಮೇಲೆ ಫಲವನ್ನು ಬಿಡದು, ಹಾಗೆ ಇದೆ. ಪ್ರಾಣಲಿಂಗಕ್ಕೆಂದು ತಂದ ನೈವೇದ್ಯವನ್ನು 'ಪ್ರಾಣಾಯ ಸ್ವಹಾ' ಎಂದು ನುಂಗುವ ಕರ್ಮಿಗಳನ್ನು ಏನೆಂದು ಕರೆಯಲಿ ಕೂಡಲ ಸಂಗಮದೇವಾ!

**೫೯೦ 'ನಾನು ಭಕ್ತ, ನಾನು ಪ್ರಸಾದಿ' ಎಂದು**
**ವಿಪ್ರಕರ್ಮವ ಮಾಡುವೆ, ಕರ್ಮೀ:**
**ಲಿಂಗದೇವನ ಮುಟ್ಟಿಮಜ್ಜನಕ್ಕೆರೆವ ಕೈಯಲು**
**ವಿಪ್ರನ ಕಾಲ ತೊಳೆವರೆ**
**ಲಿಂಗೋದಕ ಹೃದಯದಲ್ಲಿ,**
**ವಿಪ್ರನ ಕಾಲತೊಳೆದ ನೀರು ಮಂಡೆಯ ಮೇಲೆ:**
**ಇದು ಕಾರಣ, ಕೂಡಲ ಸಂಗಮಹೇವಾ,**
**ಇಂತಪ್ಪ ದುರಾಚಾರಿಗಳ ಮುಖವ ನೋಡಲಾಗದು**

ನಾನು ಭಕ್ತನಿರುವೆನು, ಪ್ರಸಾದಿಯಿರುವೆನೆಂದು ಹೇಳಿ ಬ್ರಾಹ್ಮಣ ಕರ್ಮವನ್ನು ಮಾಡುತ್ತಾರೆಯೇ? ಲಿಂಗಪೂಜೆಯ ಮಾಡಿದ ಕೈಯಿಂದ ಬ್ರಾಹ್ಮಣನ ಕಾಲು ತೊಳೆಯುತ್ತಾರೆಯೆ? ಲಿಂಗಪೂಜೆಯ ಮಾಡಿದ ತೀರ್ಥವು ಹೃದಯದಲ್ಲಿ ಬ್ರಾಹ್ಮಣ ಪೂಜೆಯಮಾಡಿದ ನೀರು ತಲೆಯ ಮೇಲೆ; ಕೂಡಲ ಸಂಗಮದೇವಾ ಹೀಗಿರುವ ದುರಾಚಾರಿಗಳ ಮುಖವನ್ನು ನೋಡಲಾಗದು.

೫೯೧ ಹೊನ್ನ ನೇಗಿಲಲುತ್ತು ಎಕ್ಕೆಯ ಬೀಜವ ಬಿತ್ತುವರೆ?
ಕರ್ಪುರದ ಮರನ ಕಡಿದು ಕಳ್ಳಿಗೆ ಬೇಲಿಯ ನಿಕ್ಕುವರೆ?
ಶ್ರೀ ಗಂಧದ ಮರನ ಕಡಿದು ಬೇವಿಂಗೆ ಅಡೆಯ
ನಿಕ್ಕುವರೆ?
ನಮ್ಮ ಕೂಡಲ ಸಂಗನ ಶರಣರಿಗಲ್ಲದೆ
ಬೇರೆ ಇಚ್ಛಾಭೋಜನವನಿಕ್ಕಿದರೆ,
ಕಿಚ್ಚಿನೊಳಗೆ ಉಚ್ಚೆಯ ಹೊಯಿದು
ಹವಿಯ ಬೇಳ್ದಂತಾಯಿತ್ತು!

ಬಂಗಾರದ ನೇಗಿಲದಿಂದ ಹೊಲಹೊಡೆದು ಎಕ್ಕೆಯ ಬೀಜವನ್ನು ಬಿತ್ತುತ್ತಾರೆಯೆ? ಕರ್ಪುರದ ಮರ ಕಡಿದು ಕಳ್ಳಿಗೆ ಬೇಲೆಯನ್ನು ಹಚ್ಚುತ್ತಾರೆಯೇ? ಶ್ರೀಗಂಧದ ಮರ ಕಡಿದು ಬೇವಿನಮರದ ತಳಕ್ಕೆಹಾಕುವರೆ? ಕೂಡಲ ಸಂಗನ ಶರಣರಿಗೆ ಇಚ್ಛಾಭೋಜನ ಮಾಡಿಸದೆ ಅನ್ಯರಿಗೆ ನೀಡಿದರೆ ಅದು ಮಹಾ ಪಾಪ.

೫೯೨ ಜಾತಿವಿಡಿದು ಸೂತಕವನರಸುವೆ:
ಜ್ಯೋತಿವಿಡಿದು ಕತ್ತಲೆಯನರಸುವೆ!
ಇದೋಕೋ ಮರುಳ ಮಾನವಾ?
ಜಾತಿಯಲ್ಲಿ ಅಧಿಕನೆಂಬೆ:
ವಿಪ್ರಶತಕೋಟಿಗಳಿದ್ದಲ್ಲಿ ಫಲವೇನು?
'ಭಕ್ತಿ ಶಿಖಾಮಣಿ' ಎಂದುದು ವಚನ.
ನಮ್ಮ ಕೂಡಲ ಸಂಗನ ಶರಣರ ಪಾದ ಪರುಷವ ನಂಬು,
ಕೆಡಬೇಡಾ ಮಾನವಾ.

ಜಾತಿಯ ಭೂತನಾಗಿ ಹೊಲೆತನವನ್ನು ಹುಡುಕುವೆನು; ದೀಪ ಹಿಡಿದುಕೊಂಡು ಕತ್ತಲೆಯನ್ನು ಹುಡುಕುವೆನು; ಹೀಗೆಕೆ ಮರುಳ ಮಾನವಾ? ನಾನು ಜಾತಿಯಲ್ಲಿ ಶ್ರೇಷ್ಠನು; ಭಕ್ತಿಯಲ್ಲಿ ಹಿರಿಯನಾದವನೇ ಉತ್ತಮ ಕುಲಜನು; ಕಾರಣ ಕೂಡಲಸಂಗಮದೇವರ ಶರಣರ ಪಾದವೆಂಬ ಪರುಷ ಮಣಿಯನ್ನು ನಂಬು.

೫೯೩ ಹೊಲೆಯ ಮಾದಿಗ ಭಕ್ತನಾದರೆ
ಆತನ ಮನೆಯ ಸೊಣಗಂಗೆ
ಪಂಚಮಹಾವಾದ್ಯದಲ್ಲಿ ಸನ್ಮಾನನೆಯ ಮಾಡೆನೆ?
ನೆಲನನು ಗ್ಘಡಿಪೆ 'ಉಘೇ; ಚಾಂಗು ಭಲರೆ' ಎಂದು!
ಕುಲಛಲಧಿಕ ಹಾರುವಂಗೆ ಸಿದ್ಧಿಗೆಯ್ಯೈಸಲೆ!
ನಿಮ್ಮ ಶರಣರ ಮಹಿಮೆ ಘನಕ್ಕೆ ಘನ!
ಎಲೆ ಕೂಡಲ ಸಂಗಮದೇವಾ, ನಿಮ್ಮ ನಂಬದವ
ಹೊಲೆಯ !

ಹೊಲೆಯರು ಮಾದಿಗರೆಲ್ಲರೂ ಭಕ್ತರಾದರೆ ಅವರ ಮನೆಯಲ್ಲಿರುವ ನಾಯಿಯನ್ನು ವಾದ್ಯಗಳ ಸಮೂಹದಿಂದ ಸತ್ಕರಿಸುವೆನು; ನಿಮ್ಮ ಶರಣರ ಮಹಿಮೆ ಶ್ರೇಷ್ಠವಾದುದು; ಕೂಡಲ ಸಂಗಮ ದೇವಾ, ನಿಮ್ಮನ್ನು ನಂಬಿ ವಿಶ್ವಾಸ ವಿಡದೇ ಇದ್ದವನೇ ಹೊಲೆಯನು.

೫೯೪ ಕುರಿವಿಂಡು ಕಬ್ಬಿನ ಉಲಿವ ತೋಂಟವ ಹೊಕ್ಕು
ತೆರನನರಿಯದೆ ತನಿರಸದ,
ಹೊರಗಣೆಲೆಯನೆ ಮೇದುವು !
ನಿಮ್ಮನರಿವ ಮದಕರಿಯಲ್ಲದೆ
ಕುರಿ ಬಲ್ಲುದೆ, ಕೂಡಲ ಸಂಗಮದೇವಾ?

ಕುರಿಯ ಹಿಂಡು ಕಬ್ಬಿನ ತೋಟವನ್ನು ಹೊಕ್ಕು ತಂಪಾದ ಮತ್ತು ಸವಿಯಾದ ಕಬ್ಬಿನ ರಸದ ರುಚಿಯನ್ನು ಸವಿಯದೆ ಮೇಲಿನ ಎಲೆಯನ್ನು ತಿಂದವು; ಕಬ್ಬಿನ ರುಚಿ ಸವಿಯಲು ಆನೆಯೇ ಸರಿ; ಹಾಗೆ ನಿಮ್ಮನ್ನು ನಿಜವಾದ ಶರಣರೇ ತಿಳಿಯಬೇಕೇ ಹೊರತು ಕುರಿಗಳಂತಿರುವ ಹುಲು ಮನುಜರು ಅರಿಯಲಾರರು.

೫೯೫ ಪ್ರಣವ ಸುಚ್ಚರಿಸುವ ಅಪ್ರಮಾಣಿಕರೆಲ್ಲರೂ
ಪ್ರಣವ ಮಂತ್ರಾರ್ಥವನೋದಿ, ಮಂತ್ರಾರ್ಥವನರಿಯರು.
ಪ್ರಣವ ಓಂ ನಮಃಶಿವಾಯ, ಪ್ರಣವ ಓಂ ನಮಃ
ಶಿವಾಯ,

**ಪ್ರಣವ ಓಂ ನಮಃಶಿವಾಯ' ಎಂದುವು ಶೃತಿಗಳೆಲ್ಲಾ:**
**ಕೂಡಲ ಸಂಗನನರಿಯದ ದ್ವಿಜರೆಲ್ಲಾ ಭ್ರಮಿತರು!**

ಓಂ ನಮಃಶಿವಾಯ ಎಂಬ ಅಷ್ಟಾಂಗ ನಮಸ್ಕಾರದ ಷಡಕ್ಷರ ಮಂತ್ರ ಪಠಿಸುವವರೆಲ್ಲರೂ ಸುಳ್ಳರು; ಯಾಕೆಂದರೆ ಆ ಮಂತ್ರದ ಅರ್ಥ ಅವರಿಗೆ ತಿಳಿದಿಲ್ಲ. ಕಾರಣ ಕೂಡಲ ಸಂಗಮ ದೇವರನ್ನು ಕಂಡು ತಿಳಿಯದ ಬ್ರಾಹ್ಮಣರೆಲ್ಲರು ಹುಚ್ಚರಂತಾಗಿದ್ದಾರೆ.

**೫೯೬ ವೇದವನೋದಿದರೇನು? ಶಾಸ್ತ್ರವ ಕೇಳಿದರೇನಯ್ಯಾ?**
**ಜಪವ ಮಾಡಿದರೇನು? ತಪವ ಮಾಡಿದರೇನಯ್ಯಾ?**
**ಏನ ಮಾಡಿದರೇನು ನಮ್ಮ ಕೂಡಲ ಸಂಗಯ್ಯನ ಮನ**
**ಮುಟ್ಟದನ್ನಕ್ಕ?**

ಭಗವಂತನಲ್ಲಿ ಮನಸ್ಸು ದೃಢವಾಗಿ ನಿಲ್ಲದೆ ಚಿತ್ತವಿಕಲದಿಂದ ಜಪ ತಪಗಳನ್ನು ಮಾಡಿದರೇನು ಬಿಟ್ಟದರೇನು? ಕೂಡಲ ಸಂಗಮದೇವಾ!

**೫೯೭ ನೀವು ಹಿರಿಯರೆಂಬಿರಿ, ಕರ್ಮಿಗಳು ನೀವು ಕೇಳಿರಿ;**
**ನಿಮ್ಮ ವೇದ ಶಾಸ್ತ್ರಗಳು ಆರ ಹೊಗಳುತ್ತಿದ್ದಾವು?**
**ಓಂ 'ದ್ಯಾವಾ ಭೂಮೀಜನಯಂ ದೇವ ಏಕೋದೇವ'**
**ಎಂದು ಶೃತಿಗಳು ಸಾರುತ್ತಲಿವೆ.**
**'ವರ್ಣಾನಾಂ ಬ್ರಾಹ್ಮಣೋಗುರುಃ' ಎಂಬುದು ಹುಸಿ:**
**ವರ್ಣಾನಾಂ ಗುರು ನಮ್ಮ ಕೂಡಲ ಸಂಗನ ಶರಣರು.**

ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದ ಮಾತ್ರಕ್ಕೆ ಅವನು ಸಕಲರಿಗೂ ಗುರುವಾಗಲಾರನು; ಆಚರಣೆ ಶುದ್ಧನಾಗಿರಬೇಕು; ಆಗ ಹಿರಿಯನಾಗುತ್ತಾನೆ; ವಿಶ್ವಕ್ಕೆ ದೇವರೊಬ್ಬನೇ; ಆದುದರಿಂದ ನಡೆನುಡಿಗಳಲ್ಲಿ ಶುದನಾದ ಶರಣರ ಜಾತಿಯೇ ಸಕಲರಿಗೆ ಗುರು ಕೂಡಲ ಸಂಗಮದೇವಾ!

**೫೯೮ ಆದ್ಯರಿಗಲ್ಲದೆ ವೇದ್ಯವಾಗದು: ಮಾಣಿಭೋ ಮಾಣಿಭೋ!**
**ಶಿವಭಕ್ತನೇ ಕುಲಜ.**

**ಜಾತನಲ್ಲ ಅಜಾತನಲ್ಲ.**
**ಕೂಡಲ ಸಂಗನ ಶರಣರು ನಿಸ್ಸೀಮರಯ್ಯಾ-**

ಪರಮಾತ್ಮನ ಚಿನ್ಮಯ ರೂಪ ಆದ್ಯರಿಗಲ್ಲದೆ ಅನ್ಯರಿಗೆ ಕಾಣಲಾರದು; ಆ ಶರಣನೇ ಉತ್ತಮ ಕುಲದವನು; ಅವನು ಜನನ ಮರಣಗಳ ಚಕ್ರದಿಂದ ಪಾರಾದವನು; ಸೀಮಾತೀತರು ಸಂಗನ ಶರಣರು.

**೫೯೯ ನಿಜಭಾವ ಲಕ್ಷ್ಮಿ ಸರಸ್ವತಿ ವೊಲಿದರೆ ಕುಲವ ನರಸಲದೇಕೆ?**
**ಆ ದೇವನೊಲಿದ ಭಕ್ತಂಗೆ ಇನ್ನಾವ ಮಂತ್ರವೇಕೆಯೋ?**
**ಕಾಮಧೇನು ಮನೆಯಲಿರಲು ಬೇರೆ ಹಯನನರಸಲೇಕೆ?**
**ಮೋಹವುಳ್ಳ ಠಾವಿನಲ್ಲಿ ಲಜ್ಜೆಯನರಸಲದೇಕೆ?**
**ಮಹಾದಾನಿ ಕೂಡಲ ಸಂಗಯ್ಯ ನೊಲಿದು**
**ಮಾದರ ಚೆನ್ನಯ್ಯನ ಮನೆಯಲುಂಡ.**
**ವೇದವ ನೋದಿದವರು, ಲಿಂಗವ ನೊಲಿಸಿ ತೋರಿರೋ.**

ಸದ್ಗುಣ ಸಂಪನ್ನರಿಗೆ ಲಕ್ಷ್ಮಿಸರಸ್ವತಿಯರು ಕರುಣಿಸಿದಗೆ ಅಲ್ಲಿ ಕುಲ ಜಾತಿಗಳನ್ನು ಹುಡುಕುವದು ಏತಕ್ಕಾಗಿ? ದೇವರ ಸಾಕ್ಷಾತ್ಕಾರ ಹೊಂದಿದ ಭಕ್ತನಿಗೆ ಬೇರೆ ಮಂತ್ರಗಳ ಅವಶ್ಯಕತೆಯೇನು? ಮನೆಯಲ್ಲಿ ಕಾಮಧೇನು ಇರಲಿಕ್ಕೆ ಹೆರರ ಮನೆಯ ಹಾಲಿಗೆ ಹೋಗಬೇಕೆ? ದೇವರಲ್ಲಿ ಮೊಹಿತನಾದ ನನಗೆ ಲಜ್ಜೆಯೆಂಬುದೆಂತದು; ಕಾರಣ ಕೂಡಲ ಸಂಗಮ ದೇವರು ಮಾದರ ಚೆನ್ನಯ್ಯನ ಮನೆಯಲ್ಲಿ ಊಟ ಮಾಡಿದನು. ವೇದಾಂತಿಗಳು ಲಿಂಗವನ್ನು ಒಲಿಸಿಕೊಂಡುತೋರಿಸಿರೆ; ಬೇರೆಮಾತುಬೇಡಾ.

**೬೦೦ ಎಮ್ಮವರು ಅಧಿಕರು, ಎಲ್ಲರಿಂದವೂ ಅಧಿಕರು;**
**ಪಾಕವ ಮಾಡುವ ಭಾಂಡ ಸೊಣಗನ ಡವಿಗೆಯಯ್ಯಾ!**
**ಕೆರಹಿನಲ್ಲಿ ಮುಚ್ಚುವುದು ಅವ ಆಗಮವಯ್ಯಾ?**
**ಕೂಡಲ ಸಂಗಮದೇವಾ, ನಿಮ್ಮ ವಚನ ವಿಂತೆಂದುದು:**
**'ಭವಿ ನೋಡಿದ ಓಗರಲಿಂಗಾರ್ಪಿತವಾಗದೆ'ಂದು.**

ನಮ್ಮ ಶರಣರು ಲೋಕಕ್ಕೆಲ್ಲ ಹಿರಿಯರು; ಅಡಿಗೆಯನ್ನು ಮಾಡುವ ಪಾತ್ರೆಯು ನಾಯಿಯ ದೇಹದ್ದು; ಕೆರವುಗಳಲ್ಲಿ ಮುಚ್ಚಿಕೊಂಡಿರುವುದೆಂತಹ ಆಗಮವು? ಲಿಂಗ ವಿಹೀನರು ದೃಷ್ಟಿ ಬೀರಿದ ಅನ್ನ ಲಿಂಗಕ್ಕೆ ಸಮರ್ಪಿಸಲು ಸಾಧ್ಯವಿಲ್ಲ! ಎಂದು ನಿಮ್ಮ ನುಡಿ ಹೇಳಿದೆ; ಕೂಡಲ ಸಂಗಮದೇವಾ.

**೬೦೧ ನಿಮ್ಮ ಶರಣರ ಚಮ್ಮಾವುಗೆಗೆ ಪೃಥ್ವಿಸಮಬಾರದು –**
**ಸರಿಯಲ್ಲಾ ನೋಡಾ, ಕೂಡಲ ಸಂಗಮ ದೇವಾ,**
**ನಿಮ್ಮ ಶರಣರ ಚಮ್ಮಾವುಗೆಗೆ !**

ಕೂಡಲ ಸಂಗಮ ದೇವಾ, ನಿಮ್ಮ ಶರಣರ ಚರ್ಮದ ಎಕ್ಕಡಗಳಿಗೆ ಸಮಾನವಾಗಿ ಲೋಕವೂ ನಿಲ್ಲುವುದಿಲ್ಲ; ಅವುಗಳಿಗೆ ಸರಿಹೊಂದಲಾರದು.

**೬೦೨ ದೇವಾ, ನಿಮ್ಮ ಪೂಜಿಸಿ ಚೆನ್ನನ ಕುಲ ಚೆನ್ನಾಯಿತ್ತಯ್ಯಾ**
**ದೇವಾ, ನಿಮ್ಮ ಪೂಜಿಸಿ ದಾಸನ ಕುಲ ದೇಸೆವಡೆಯಿತ್ತು.**
**ದೇವಾ, ನಿಮ್ಮಡಿಗೆರಗಿದ ಮಡಿವಾಳ ಮಾಚಯ್ಯ**
**ನಿಮ್ಮಡಿಯಾದ !**
**ನೀನೊಲಿದ ಕುಲಕ್ಕೆ ನೀನೊಲ್ಲದೆ ಹೊಲೆಗೆ ಮೇರೆಯುಂಟೆ,**
**ದೇವಾ ?**
**ಜಾತಿ—ವಿಜಾತಿಯಾದರೇನು ?**
**'ಅಜಾತ ಶರಣೆ'ನ್ನದವನು, ಆತನೆ ಹೊಲೆಯ !**
**ಕೂಡಲಸಂಗಮದೇವಾ.**

ದೇವಾ ನಿಮ್ಮ ಆರಾಧನೆ ಮಾಡಿ ಚೆನ್ನನು ಪುನೀತನಾದನು; ದಾಸನ ಕುಲ ಹೆಚ್ಚಿತು; ನಿಮ್ಮ ಪಾದಕ್ಕೆ ನಮಿಸಿದ ಮಡಿವಾಳನು ನಿಮ್ಮ ಪದಾಂಬುಜದಲ್ಲಿ ಐಕ್ಯನಾದನು; ನಿಮ್ಮ ಪ್ರೇಮ ವಿದ್ದ ಕುಲವು ಎಲ್ಲಡೆಗೂ ತುಂಬಿಕೊಳ್ಳುತ್ತದೆ; ಆ ಭಕ್ತರ ಜಾತಿ ಯಾವುದಾದರೇನು? ಅಜಾತನಾದ ನಿನಗೆ ಶರಣು ಬಾರದವನೇ ಹೊಲೆಯನು; ಕೂಡಲ ಸಂಗಮದೇವಾ!

**೬೦೩ ಚತುರ್ವೇದಿಯಾದರೇನು ? ಲಿಂಗವಿಲ್ಲದವನೇ ಹೊಲೆಯ!**
**ಶ್ವಪಚನಾದರೇನು ? ಲಿಂಗವಿದ್ದವನೇ ವಾರಣಾಸಿ-**
**ಆತನ ನುಡಿಗಡಣವೇ ಲೇಸು, ಆತ ಜಗಕ್ಕೆ ಪಾವನನು,**
**ಆತನ ಪ್ರಸಾದವೆನಗೆ ಅಮೃತಸೇವನೆ !**
**ಕೂಡಲ ಸಂಗನನರಿತು ಪೂಜಿಸಿದಾತ**
**ಷಡುದರ್ಶನಕ್ಕಧಿಕ, ಜಗಕ್ಕೆ ಪಾವನ ನೋಡಾ !**

ವೇದಾಂತಿಯಾಗಿದ್ದರೇನಾಯ್ತು ಪ್ರಾಣಲಿಂಗನಲ್ಲಿ ಮನಸ್ಸಿಲ್ಲದವನೇ ಹೊಲೆಯನು; ಚಂಡಾಲನಾಗಿದ್ದರೂ ಅವನಲ್ಲಿ ಪ್ರಾಣಲಿಂಗನು ಸಮಾವಿಷ್ಟನಾಗಿದ್ದರೆ ಅವನೇ ಕೈಲಾಸ ಸ್ವರೂಪನು; ಆತನೆ ಮಾತುಗಳೇ ಹಿತವಚನ; ಅವನೇ ಜಗಕ್ಕೆ ವಂದ್ಯನು; ಅವನ ಪ್ರಸಾದವು ನನಗೆ ಅಮೃತ ಸದೃಶ್ಯವಾಗಿದೆ; ಕೂಡಲ ಸಂಗಮನನ್ನು ಚೆನ್ನಾಗಿ ತಿಳಿದು ಪೂಜೆಮಾಡುವ ಮನುಜನೇ ಲೋಕ ಮಾನ್ಯನು.

**೬೦೪ ಬಂದು ಬಲ್ಲಹ ಬಿಡಲು ಹೊಲಗೇರಿ ಎಂಬ ಹೆಸರೊಳವೆ?**
**ಅಯ್ಯಾ!**
**ಲಿಂಗವಿದ್ದವರ ಮನೆ ಕೈಲಾಸವೆಂದು ನಂಬಬೇಕು.**
**ಲೋಕದ ಡಂಭಕರ ಮಾತು ಬೇಡಾ,**
**ಕೂಡಲ ಸಂಗಮನಿದ್ದುದೇ ಕೈಲಾಸ.**

ವಿಶ್ವೇದೇವನಾದವನು ಬಂದು ಬೀಡಾರ ಮಾಡಲು ಹೊಲಗೇರಿ ಎಂಬ ಹೆಸರು ಈ ಧರೆಗೆ ತಕ್ಕುದೆ? ಯಾವ ಮನೆಯಲ್ಲಿ ಜ್ಯೋತೀರ್ಲಿಂಗದ ಪ್ರತಿಷ್ಠೆಯಾಗಿದೆಯೋ ಆ ಮನೆಯೇ ಕೈಲಾಸ; ಆದುದರಿಂದ ಡಂಭಾಚಾರಿಗಳ ಮಾತು ನಂಬುವುದು ಬೇಡಾ;

**೬೦೫ ಲಿಂಗವಿಲ್ಲದೆ ನಡೆವವರ, ಲಿಂಗವಿಲ್ಲದೆ ನುಡಿವವರ–**
**ಲಿಂಗವಿಲ್ಲದೆ ಉಗುಳು ನುಂಗಿದರೆ–**
**ಅಂದಂದಿಗೆ ಕಿಲ್ಬಿಷವಯ್ಯಾ !**
**ಲಿಂಗವಿಲ್ಲದೆ ನಡೆವರ ಅಂಗ ಲೌಕಿಕ: ಮುಟ್ಟಲಾಗದು:**

**ಲಿಂಗವಿಲ್ಲದೆ ನುಡಿದ ಶಬ್ದಸೂತಕ: ಕೇಳಲಾಗದು!**
**ಲಿಂಗವಿಲ್ಲದೆ ಗಮನಿಸಿದೊಡೆ ಆ ನಡೆ ನುಡಿಗೊಮ್ಮೆ ವ್ರತಗೇಡಿ,**
**ಕೂಡಲ ಸಂಗಮದೇವಾ !**

ಲಿಂಗ ಧರಿಸದೆ ಮಾತನಾಡುವವರ ಮಾತು, ಪೂಜಿಸುವವರ ಪೂಜೆ, ಅವರು ನುಂಗಿದ ಉಗುಳು ಕೂಡಾ ವಿಷವಾಗುತ್ತದೆ; ಅವರ ದೇಹವು ವ್ಯವಹಾರದ ದೇಹವಾದುದರಿಂದ ಅದನ್ನು ಮುಟ್ಟಬಾರದು; ಅವರ ಬಾಯಿಂದ ಬಂದ ಮಾತು ಮೈಲಿಗೆ; ಕೇಳಬಾರದು; ಲಿಂಗವಿಲ್ಲದೆ ವ್ರತಾ ಚರಿಸಿದರೆ ಅವರು ವ್ರತಗೇಡಿಗಳು ಕೂಡಲ ಸಂಗಮದೇವಾ !

**೬೦೬ ಇಪ್ಪತ್ತುನಾಲ್ಕು ತಿಥಿಯಿಂದ ವೆಗ್ಗಳ,**
**ಗ್ರಹಣ ಸಂಕ್ರಾಂತಿಯಿಂದ ವೆಗ್ಗಳ,**
**ಏಕಾದಶಿ ವ್ಯತೀಪಾತದಿಂದ ವೆಗ್ಗಳ,**
**ಸೂಕ್ಷ್ಮ ಶಿವಪಥವರಿದವಂಗೆ**
**ಹೋಮ ಜಪ ತಪ ನೇಮದಿಂದ ವೆಗ್ಗಳ,**
**ಕೂಡಲ ಸಂಗಮದೇವಾ, ನಿಮ್ಮ ಮಾಣದೆ ನೆನೆವಂಗೆ.**

ಕೂಡಲ ಸಂಗಮ ದೇವರೆ ನಿಮ್ಮನ್ನು ನಿರಂತರವಾಗಿ ಧ್ಯಾನಿಸುವವ ರಿಗೆ ಯಾವುದೂ ಕೊರತೆಯಿಲ್ಲ; ಅವರಿಗೆ ಎಲ್ಲ ವ್ರತನೇಮಗಳ, ಮತ್ತು ಹೋಮಹವನ, ಜಪ-ತಪ, ನೇಮಗಳನ್ನು ಮಾಡಿದ ಪುಣ್ಯ ದೊರೆಯು ತ್ತದೆ.

**೬೦೭ ಅಶ್ವಮೇಧಯಾಗವಂತಿರಲಿ, ಜಪಯುಪದೇಶ ಸಮಾಧಿ ಯಂತಿರಲಿ, ಹೋ !**
**ಹೋಮ-ನೇಮ-ಗಾಯತ್ರಿಯ ಜಪವಂತಿರಲಿ, ಹೋ !**
**ಜನಮೋಹನ ಮಂತ್ರವಂತಿರಲಿ, ಹೊ !**
**ಕೂಡಲ ಸಂಗನ ಶರಣರ ನುಡಿಗಡಣೆ**
**ಎಲ್ಲಕ್ಕೂ ಅಧಿಕ ನೋಡಾ !**

ನಿಮ್ಮ ಶರಣರ ಮಾತಿನ ಮಧುರತೆಯು ಯಾಗ, ಜಪ, ಉಪದೇಶ, ಹೋಮ, ನೇಮ, ಗಾಯತ್ರಿಯ ಜಪ, ಜನಾಕರ್ಷಕವಾದ ಮಂತ್ರ ಇವೆಲ್ಲವುಗಳಿಗಿಂತಲೂ ಶ್ರೇಷ್ಠವಾದುದು.

**೬೦೮ ದೇವನೊಬ್ಬ, ನಾಮ ಹಲವು;**
**ಪರಮ ಪತಿವ್ರತೆಗೆ ಗಂಡನೊಬ್ಬ;**
**ಮತ್ತೊಂದಕ್ಕೆರಗಿದರೆ ಕಿವಿ-ಮೂಗ ಕೊಯ್ವನು !**
**ಹಲವು ದೇವರ ಎಂಜಲ ತಿಂಬವರನೇನೆಂಬೆ,**
**ಕೂಡಲ ಸಂಗಮ ದೇವಾ ?**

ಏಕಮೇವ ಅದ್ವಿತೀಯನಾದ ಜಗದೀಶ್ವರನಿಗೆ ಸಹಸ್ರನಾಮಗಳು; ಇದನ್ನು ತಿಳಿಯಬೇಕು; ಪತಿವ್ರತಾಶಿರೋಮಣಿಗೆ ಒಬ್ಬನೇ ಗಂಡನಿರುತ್ತಾನೆ. ಒಬ್ಬದೇವನ ಭಕ್ತನಾಗಿ ಅನೇಕ ದೇವರುಗಳ ಪ್ರಸಾದ ಸೇವಿಸುವವರಿಗೆ ಏನೆಂದು ಹೇಳಲಿ ದೇವಾಧಿ ದೇವ ಕೂಡಲ ಸಂಗಮದೇವಾ?

**೬೦೯ ವೇದ ಶಾಸ್ತ್ರದವರ ಹಿರಿಯರೆನ್ನೆ !**
**ಮಾಯಾ ಭ್ರಾಂತಿ ಕವಿದ ಗೀತಜ್ಞರ ಹಿರಿಯರೆನ್ನೆ !**
**ಇವರು ಹಿರಿಯರುಗಳೇ ? ಯಾಗನಟ್ಟುವಿಗಪಾಣರು !**
**ಇವರಿಂದಧಿಕವ ಸಾಧಿಸುವರೇನು ಕಿರಿಯರೆ ?**
**ಇಂತು ವಿದ್ಯೆಗುಣ ಜ್ಞಾನ ಧರ್ಮ ಆಚಾರ ಶೀಲಂಗಳ**
**ನಮ್ಮ ಕೂಡಲ ಸಂಗನ ಶರಣರು**
**ಸಾಧಿಸಿದ ಸಾಧನೆಯನೇ ಸಾಧಿಸುವುದು.**

ವೇದ ಶಾಸ್ತ್ರಾಗಮಗಳನ್ನು ಕಲಿತವರು, ಗೀತೆಯನ್ನೋದಿದವರು ಮತ್ತು ಅನೇಕವಿದ್ಯೆಗಳನ್ನು ಕಲಿತು ಜ್ಞಾನಧರ್ಮ ಆಚಾರ ಶೀಲಗಳನ್ನು ಸಾಧಿಸುವದನ್ನೇ ನಮ್ಮ ಕೂಡಲ ಸಂಗನ ಶರಣರು ನಿಮ್ಮ ಧ್ಯಾನದಿಂದ ಸಾಧಿಸುತ್ತಾರೆ.

೬೧೦ ಹಾರುವರೆಲ್ಲರೂ ನೆರೆದು ಶೂದ್ರನ ಹಾರುವನ ಮಾಡುವಲ್ಲಿ
ನಂದಿಮುಖವಲ್ಲದೆ ಮಾಡಲಾಗದು;
ವಿಭೂತಿಯಲ್ಲದೆ ಮತ್ತೇನನೂ ಮಾಡಲಾಗದು !
'ಭರ್ಗೋ ದೇವ' ಎಂಬ ಮಂತ್ರವಲ್ಲದೆ ಮತ್ತೇನನೂ
ಮಾಡಲಾಗದು !
ನಿಮ್ಮಿಂದ ಕುಲಜರಾಗಿ ಮತ್ತೆ ಅನ್ಯದೈವಕ್ಕೆರಗುವ
ಜಗದನ್ಯಾಯಿಗಳನೇನೆಂಬೆ, ಕೂಡಲ ಸಂಗಮದೇವಾ?

ಓರ್ವ ಶೂದ್ರನನ್ನು ಶುದ್ಧ ಮಾಡುವುದಕ್ಕೆ ನಂದಿಮುಖ, ವಿಭೂತಿ ಮತ್ತು ಭರ್ಗೋದೇವ ಎಂಬ ಮಂತ್ರಗಳಿಂದಲೇ ಸಾಧ್ಯ; ಕೇವಲ ಬ್ರಾಹ್ಮಣರಿಂದ ಸಾಧ್ಯವಿಲ್ಲ; ನಿಮ್ಮಿಂದ ಪಾವನರಾಗಿ ಉಪದೇವರುಗಳಿಗೆ ಶರಣು ಹೋಗುವ ಅಧರ್ಮಿಗಳಿಗೇನು ಹೇಳಲಿ ಕೂಡಲ ಸಂಗಮದೇವಾ?

೬೧೧ ಕರ್ತಾರನ ಪೂಜಿಸಿ ಕುಚ್ಛಿತ ದೈವಕ್ಕೆರಗುವರು.
ಕತ್ತೆ ಕುದುರೆಗೆ ಹುಟ್ಟಿದ ವೇಸರನಂತೆ !
ಭಕ್ತರೆಂತೆಂಬೆ, ಭೃತ್ಯರೆಂತೆಂಬೆ, ಶರಣರೆಂತೆಂಬೆನವರ ?
ಎರಡುಳ್ಳ ಪ್ರಪಂಚಿಗಳ ಮೆಚ್ಚ
ಕೂಡಲ ಸಂಗಮದೇವ !

ಸೃಷ್ಟಿಗೊಡೆಯನಾದ ಕೂಡಲ ಸಂಗಮನನ್ನು ಪೂಜಿಸಿ ಮತ್ತೆ ಕಿರುಕಳ ದೇವರನ್ನು ಧ್ಯಾನಿಸುವರು; ಈ ಕತ್ತೆ ಮತ್ತು ಕುದುರೆಗಳ ಸಮ್ಮಿಶ್ರಣದಿಂದ ಜನಿಸಿದ ಹೆಸರಗತ್ತೆಗಳಿಗೆ ಏನೆಂದು ಹೇಳಲಿ? ಅವರಿಗೆ ಭಕ್ತರೆನ್ನುವುದು ಹೇಗೆ? ಎರಡು ಮನಸ್ಸಿನ ಡಾಂಭಿಕರಿಗೆ ಮೆಚ್ಚನು ಕೂಡಲ ಸಂಗಮದೇವರು.

೬೧೨ ಕಂಡ ಕಂಡವರೆಲ್ಲರ ಗಂಡರೆಂದೆಂಬ
ದುಂಡೆಯುನವಳ ಸಜ್ಜನೆಯೆಂದೆನ್ನಬಹುದೇ ?

**ಲಿಂಗ ಪ್ರಸಾದವನುಂಡು ಅನ್ಯದೈವಂಗಳ ಕೊಂಡಾಡುವವರ**
**ನಮ್ಮ ಕೂಡಲ ಸಂಗಮ ದೇವನು**
**ಆ ಭಂಡರಿಗೆ ಮಾಡಿದ ಹುಳುಗೊಂಡವನು !**

ಕಂಡ ಗಂಡಸಿರಿಗೆಲ್ಲ ಗಂಡನೆಂದು ಹೇಳುವ ದುಂಡೆಯು ಸಜ್ಜನೆ ಯೆಂದು ಹೇಳಲು ಬರುತ್ತದೆಯೆ? ಈ ರೀತಿ ಲಿಂಗ ಪ್ರಸಾದ ಸೇವಿಸಿ ಬೇರೆ ದೇವರನ್ನು ಭಜಿಸುವುದು—ಭಂಡರ ಮಾತು. ಅವರಿಗಾಗಿ ಕೂಡಲ ಸಂಗ ಮನು ಹುಳುಗೊಂಡವನ್ನು ನಿರ್ಮಾಣಮಾಡಿದ್ದಾನೆ.

**೬೧೩ ನಂಬಿದ ಹೆಂಡತಿಗೆ ಗಂಡನೊಬ್ಬ, ಕಾಣಿರೋ:**
**ನಂಬಬಲ್ಲ ಭಕ್ತಂಗೆ ದೇವನೊಬ್ಬ, ಕಾಣಿರೋ !**
**ಬೇಡ ! ಬೇಡ ! ಅನ್ಯ ದೈವದ ಸಂಗ ಹೊಲ್ಲ !**
**ಬೇಡ! ಬೇಡ! ಅನ್ಯ ದೈವವೆಂಬುದು ಹಾದರ, ಕಾಣಿರೋ !**
**ಕೂಡಲ ಸಂಗಮ ದೇವ ಕಂಡರೆ ಮೂಗ ಕೊಯ್ವ**
**ಕಾಣಿರೋ !**

ನಂಬಿ ಕೈಹಿಡಿದ ಹೆಂಡತಿಗೆ ಒಬ್ಬನೆ ಗಂಡನು. ಅದೇ ರೀತಿಯಾಗಿ ನಂಬಿದ ಭಕ್ತನಿಗೆ ಒಬ್ಬನೇ ದೇವರು. ಬೇರೆ ದೇವರ ಸನ್ನಿಧಾನ ನರಕ; ಅದು ಹಾದರ ಮಾಡಿದಂತೆ. ಕೂಡಲ ಸಂಗಮನಿಗೆ ಈ ಮಾತು ಗೊತ್ತಾದರೆ ಮೂಗು ಕೊಯ್ವನು.

**೬೧೪ ಊಡುವ ಉಡಿಸುವ ಗಂಡನಿದ್ದಂತೆ,**
**ಜೋಡೆ ! ಮಿಂಡಂಗೆ ಕಣ್ಣ ಚೆಲ್ಲುವಳ**
**ಕೇಡಿಂಗೆ ಬೆರಗಾದೆ ನಾನು !**
**ನಮ್ಮ ಕೂಡಲ ಸಂಗಮ ದೇವನು**
**ಸಿಂಗಾರದ ಮೂಗ ಬಣ್ಣಿಸಿ ಹಲುದೋರ ಕೊಯ್ವ !**

ಉಣ್ಣಲು ತೊಡಲು-ಉಡಲು ಕೊಡುವ ಗಂಡನಿದ್ದರೂ ಮಿಂಡನಿಗೆ ಕಣ್ಣುಸನ್ನೆ ಮಾಡಿ ಕರೆಯುವ ಸೂಳೆಯನ್ನು ಮತ್ತು ಅವಳ ಪಾಪ

ವನ್ನು ಕಂಡು ನನಗೆ ಆಶ್ಚರ್ಯವಾಯಿತು; ಕೂಡಲ ಸಂಗಮ ದೇವರು ಅವಳ ಸುಂದರವಾದ ಮೂಗನ್ನು ಕೊಯ್ದನು.

**೬೧೫ ಅಷ್ಟಮಿ ನವಮಿ ಎಂಬ ಕಲ್ಪಿತವೇಕೋ ಶರಣಂಗೆ ?**
**ತಪ್ಪಿತ್ತು ಗಣಪದವಿ! ಲಿಂಗಕ್ಕೆ ದೂರ, ಜಂಗಮಕ್ಕೆ ದೂರ!!**
**ಒಬ್ಬರಿಗಾಳಾಗಿ ಒಬ್ಬರನೋಲೈಸುವ**
**ದುರ್ಬುದ್ಧಿ ಮನುಜರನೇನೆಂಬೆ,**
**ಕೂಡಲ ಸಂಗಮದೇವಾ ?**

ಶರಣನೆಂಬವನು ವಾರ ತಿಥಿಗಳನ್ನನುಸರಿಸಿ ಪೂಜೆ ಮಾಡಿದರೆ ಗಣ ಪದವಿಯನ್ನು ಕಳೆದು ಕೊಳ್ಳುತ್ತಾನೆ, ಅಲ್ಲದೆ ಲಿಂಗ-ಜಂಗಮರಿಬ್ಬರಿಗೂ ಹೊರಗಾಗ ಬೇಕಾಗುತ್ತದೆ; ಒಬ್ಬನಲ್ಲಿ ಆಳಾಗಿದ್ದುಕೊಂಡು ಮತ್ತೊಬ್ಬರ ಮನೆಯ ಕೆಲಸ ಮಾಡುವ ಬುದ್ಧಿಹೀನ ಮನುಷ್ಯರು ಏತಕ್ಕೂಬಾರರು. ಕೂಡಲ ಸಂಗಮದೇವಾ !

**೬೧೬ ಎಲವೊ, ಎಲವೋ, ಪಾಪ ಕರ್ಮವ ಮಾಡಿದವನೇ,**
**ಎಲವೊ, ಎಲವೋ, ಬ್ರಹ್ಮಹತ್ಯವ ಮಾಡಿದವನೇ,**
**ಒಮ್ಮೆ 'ಶರಣೆ'ನ್ನೆಲವೋ**
**ಒಮ್ಮೆ 'ಶರಣೆ'ನ್ನೆಲವೋ ಪಾಪ ಕರ್ಮ ಓಡುವುವು.**
**ಸರ್ವ ಪ್ರಾಯಶ್ಚಿತ್ತಕ್ಕೆ ಹೊನ್ನ ಪರ್ವತಂಗಳೈದವು:**
**ಓರ್ವಂಗೆ ಶರಣೆನ್ನು, ನಮ್ಮ ಕೂಡಲ ಸಂಗಮ ದೇವರಿಗೆ!**

ದ್ವಿಗುಣಿತ ಪಾಪಗಳನ್ನು ಮಾಡಿದವರು. ಬ್ರಹ್ಮಹತ್ಯವನ್ನು ಮಾಡಿದವರು, ಒಮ್ಮೆ ಶರಣೆಂದರೆ ಸರ್ವಪಾಪಗಳೂ ಕಳೆದು ಹೋಗುತ್ತವೆ; ಕೂಡಲ ಸಂಗಮ ದೇವರೊಬ್ಬನಿಗೆ ಶರಣು ಹೋಗು.

**೬೧೭ ಹಲವು ಕೊಂಬಿಗೆ ಹಾಯಬೇಡಾ:**
**ಬರು ಕಾಯಕ್ಕೆ ನೀಡಬೇಡ:**
**ಲೋಗರಿಗೆಡೆ ಕೊಟ್ಟು ಭ್ರಮಿತನಾಗಿರಬೇಡಾ !**

**ಆಚಾರವೆಂಬುದು ಹಾವಸೆಗಲ್ಲು:**
**ಭಾವ ತಪ್ಪಿದ ಬಳಿಕ ಏಗೆಯ್ದೊಡಾಗದು.**
**ಅಂಜದಿರು, ಅಳುಕದಿರು, ಪರದೈವಕ್ಕೆರಗದಿರು:**
**ಕೂಡಲ ಸಂಗನ ಕೈಯುಲು ಈಸುವದೆನ್ನಭಾರ !**

ಅನೇಕ 'ಗಿಡದ ಕೊಂಬೆಗಳಿಗೆ ಹಾರಿ ಹಾರಿ ಹೋಗಬೇಡ ಜೀವವೆ; ಸಿಪ್ಪಿಯಂತಿರುವ ಈ ದೇಹಕ್ಕೆ ಪ್ರಸಾದ ನೀಡಬೇಡ; ಅಲ್ಲದೆ ಸಿಕ್ಕ ಜನರಿಗೆ ಊಟಹಾಕಿ ದೇವರು ನನಗೆ ಕಲ್ಯಾಣ ಮಾಡಲಿಲ್ಲವೆಂದು ಹುಚ್ಚ ನಾಗಬೇಡ; ಆಚಾರವೆಂಬ ಹಾವಸೆಗಲ್ಲಮೇಲೆ ಭಾವವೆಂಬ ಕಾಲು ಜಾರಿ ಕೆಳಗೆ ಬಿದ್ದ ಬಳಿಕ ಏನು ಮಾಡಿದರೂ ಶಿವಕರುಣೆಯಾಗುವದಿಲ್ಲ; ದುಃಖಿಸಬೇಡಾ, ಹೆದರಬೇಡಾ, ಇನ್ನಾದರು ಅನ್ಯ ದೇವರಿಗೆ ಬಾಗುವದನ್ನು ಬಿಡು. ಕೂಡಲ ಸಂಗಮ ದೇವರು ನನ್ನನ್ನು ಕಾಪಾಡುತ್ತಾನೆಂದು ನಂಬುಜೀವವೆ!

**೬೧೮ ಅರಸು ವಿಚಾರ ಸಿರಿಯುು ಶೃಂಗಾರ ಸ್ಥಿರವಲ್ಲ, ಮಾನವಾ:**
**ಕೆಟ್ಟಿತ್ತು ಕಲ್ಯಾಣ, ಹಾಳಾಯಿತ್ತು, ನೋಡಾ !**
**ಒಬ್ಬ ಜಂಗಮುದಭಿಮಾನದಿಂದ**
**ಚಾಳುಕ್ಯರಾಯುನ ಆಳಿಕೆ ತೆಗೆಯಿತ್ತು,**
**ಸಂದಿತ್ತು, ಕೊಡಲ ಸಂಗಮುದೇವಾ, ನಿಮ್ಮ ಕವಳಿಗೆಗೆ !**

ಅರಸುತನ, ಸಿರಿ ಸಂಪತ್ತು, ಶೃಂಗಾರಗಳೆಂಬುವು ಸ್ಥಿರವಲ್ಲ; ಎಲೆ ಮಾನವಾ ಅವುಗಳನ್ನು ನಂಬಿ ನಿನ್ನ ಜೀವನ ಕೆಟ್ಟಿತು; ಕಲ್ಯಾಣ ಹಾಳಾಯಿತು; ಒಬ್ಬ ಜಂಗಮುನ ಮುನಿಸಿನ ಕಾರಣದಿಂದ ಚಾಳುಕ್ಯಸಾಮ್ರಾಜ್ಯ ಕೂಡಲ ಸಂಗಮುದೇವ, ನಿಮ್ಮ ತುತ್ತಿಗೆ ಈಡಾಗಿದೆ.

**೬೧೯ ವಿಪ್ರರ ಕರೆದು 'ನೃಪರುಗಳು ಇಪ್ಪರೆ ತಮ್ಮ ಶಿಶುವಿ**
**ನೊಡನೆ'ಂದು ಬೆಸಗೊಂಡರೆ,**
**"ಇಪ್ಪದು ಇಪ್ಪದು, ತಾವು ಬಿತ್ತಿದ ಫಲಂಗಳ ತಾವು**
**ಉಣ್ಣದವರುಂಟೆ ?**

ಎಂದು ಕಂಣುಕಾಣದೆ ಹೇಳಿದರು, ಅಣ್ಣಗಳು, ಕರ್ಮದ
ಬಟ್ಟೆಯನು!

ಅಂತೆಂದ ಮಾತ ಶಿಶು ಕೇಳಿ
ಕೆಟ್ಟೋಡಿ ಬಂದು ಲಿಂಗ ಹೊಟ್ಟೆಯ ಹೊಗಲು,
ಕಟ್ಟಬಂದು ಖಂಡೆಯಾವ ಕಳಿದುಕೊಂಡು ಮಂಡೆಯ
ನೊಡೆಯಲು
ಮಂಡೆಯೊಡೆದು ಭೂಮಂಡಲವರಿಯೇ ನಾಲ್ಕು
ಪುರವಾಗಲು.

ಘಟಸರ್ಪನ ತುಡುಕಿ ನಾಗನಾಥನಾಗಿ
ಇಪ್ಪತ್ತೇಳು ಬಸತಿಯನೊಡೆಯನೆ?
ಆಗಳಂತೆ, ಎನ್ನ ಮಾಡಿದ ಕರ್ಮ ನಿಮ್ಮಕೈಯಲು
ಕೆಡಿಸುವರು.

ಮುನ್ನೊಬ್ಬ ಕೆಡಿಸಿಹೆನೆಂದು ಬಂದು ಒಂದುತುತ್ತನಿಟ್ಟು
ಮರಳಿ ಕೈಯಿಡ ಹೋದರೆ ತುತ್ತು ಹುಳುಗುಪ್ಪೆಯಾಗದೆ ?
ಶಿವಧರ್ಮವ ಕೆಡಿಸಿದವನು ಅಧರ್ಮಕ್ಕಿಳಿವನು :
ಕೂಡಲ ಸಂಗಮ ದೇವರ ಸಾಕ್ಷಿಯಾಗಿ,
ಮಕರ ಭೋಜನವಾಗನೆ ವಿನಾಶಕ್ತಿರಾಯನು ?

'ರಾಜನು ತನ್ನ ಮಕ್ಕಳೊಂದಿಗೆ ಇರುವನೇ' ಎಂದು ಬ್ರಾಹ್ಮಣರನ್ನು ಕೇಳಿದರೆ 'ಇದ್ದಾರೆ ತಮ್ಮ ಫಲಗಳನ್ನು ಅನುಭೋಗಿಸುತ್ತಲಿದ್ದಾರೆ' ಎಂದು ಲೆಕ್ಕಿಸದೆ ಹೇಳಿದರು; ಆ ಮಾತು ಕೇಳಿ ಒಂದು ಕೂಸು ಲಿಂಗದ ಹೊಟ್ಟೆಯಲ್ಲಿ ಹೋಗಲು, ಓಡಿ ಬಂದು ಲಿಂಗದ ತಲೆಯೊಡೆಯಲು ಆಗ ಜಗಕ್ಕೆಲ್ಲ ತಿಳಿಯುವಂತೆ ನಾಲ್ಕು ಪಟ್ಟಣಗಳು ಹುಟ್ಟಿಕೊಂಡವು; ನಾನು ಮಾಡಿದ ಕರ್ಮಗಳು ನಿಮ್ಮನ್ನು ಕೆಡಿಸುವವು; ಶಿವಧರ್ಮವನ್ನು ಕೆಡಿಸಿದವನು ಹಾಳಾಗುವನು; ವಿನಾಶಕಾರಿಯ ಶಕ್ತಿಯು, ಕೂಡಲ ಸಂಗಮದೇವರ ಆಣೆಯಾಗಿಯೂ ಮೀನ ಮೊಸಳೆಗಳ ಆಹಾರವಾಗುತ್ತದೆ.

೬೨೦ ಎಚ್ಚು ವಾಲಿಯ ಕೊಂದ, ಕಟ್ಟಿದನು ಶರಧಿಯನು;
ಹತ್ತು ತಲೆಯ ರಾವಣನ ಒಂದೆ ಅಂಬಿನಲಿ ಮಡುಹಿದ;
ಛಲದಿಂದ ಲಂಕಾದ್ವಿಪವ ನೆಲವೆಣ್ಣವ ಮಾಡಿದ;
ಕಲಿ ವಿಭೀಷಣಂಗೆ ಪಟ್ಟವ ಕಟ್ಟಿದ:
ರಾಮನ ತೋರಾ!
ಮಾಯದ ಸಂಸಾರವ ನಚ್ಚಿ, ವಾಯಕ್ಕೆ ಕೆಟ್ಟು
ಬರು ದೊರೆ ಪೋಗ ಬೇಡ,
ಕರ್ತೃ ಕೂಡಲ ಸಂಗಯ್ಯಂಗೆ ಶರಣೆನ್ನಿರಯ್ಯಾ!

ಬಾಣ ಹೊಡೆದು ವಾಲಿಯನ್ನು ಕೊಂದನು; ತನ್ನನಾಮದ ಬಲದಿಂದ ಸಮುದ್ರಕ್ಕೆ ಸೇತುವೆ ಕಟ್ಟಿದನು; ದಶಕಂಠನನ್ನು ಒಂದೇ ಬಾಣದಿಂದ ಕೊಂದನು; ಹಟದಿಂದ ಲಂಕಾದ್ವೀಪವನ್ನು ಸುಟ್ಟು ಮಣ್ಣುಗೂಡಿಸಿ, ಸುಧೀರನಾದ ವಿಭೀಷಣನಿಗೆಪಟ್ಟ ಕಟ್ಟಿದಂಥ ರಾಮಚಂದ್ರನನ್ನು ತೋರಿಸು! ಕಾರಣ ಮಾಯೇಯಿಂದ ತುಂಬಿದ ಸಂಸಾರವನ್ನು ನಂಬಿ ಕೆಡಬೇಡ; ಕರ್ತೃ ಕೂಡಲ ಸಂಗಮದೇವರಿಗೆ ಶರಣು ಹೋಗು!

೬೨೧ ಬೇವಿನ ಬೀಜವ ಬಿತ್ತಿ, ಬೆಲ್ಲದ ಕಟ್ಟೆಯ ಕಟ್ಟಿ,
ಆಕಳ ಹಾಲೆರೆದು ಜೇನ ತುಪ್ಪವ ಹೊಯ್ದರೆ,
ಸಿಹಿಯಾಗ ಬಲ್ಲುದೆ, ಕಹಿಯಹುದಲ್ಲದೆ?
ಶಿವಭಕ್ತರಲ್ಲದವರ ಕೂಡೆ ನುಡಿಯಲಾಗದು,
ಕೂಡಲ ಸಂಗಮದೇವಾ.

ವಿಷಕಾರಕವಾದ ಬೇವಿನ ಬೀಜವನ್ನು ಹಾಕಿ ಬೆಲ್ಲದ ಕಟ್ಟೆಕಟ್ಟಿ ಅದರ ಮೇಲೆ ಆಕಳ ಹಾಲ ಸುರಿದು ಹುಲುಸಾಗಿ ಬೆಳೆಯಲೆಂದು ಜೇನ ತುಪ್ಪವನ್ನು ಮತ್ತೆ ಹೊಯ್ದರೆ ಆ ಗಿಡದಿಂದ ಬರತಕ್ಕ ಫಲವು ಸಿಹಿಯಾಗಬಹುದೇ? ಆದಕಾರಣ ಶಿವಭಕ್ತರಾಗದವರೊಡನೆ ಮಾತನಾಡಬಾರದು-ದೇವರಲ್ಲಿ ನಂಬಿಕೆಯುಳ್ಳವರೊಡನೆ ಸಂಬಂಧ ಮಾಡಬೇಕು; ಕೂಡಲ ಸಂಗಮದೇವಾ!

೬೨೨ ಕರ್ತನನರಿಯದವನು ವಿಪ್ರನಾದರೇನು, ಚತುರ್ವೇದಿ
ಯಾದರೇನು?
ಭುಕ್ತಿ ಕಾರಣ ಲೋಕದ ಇಚ್ಛೆಗೆ ನುಡಿದುನಡೆವರಯ್ಯಾ!
ಭವಿ ಮಾಡಿದ ಪಾಕವ ತಂದು ಲಿಂಗಕ್ಕರ್ಪಿಸುವ ಕಷ್ಟರ
ಕಂಡು
ನಾಚಿತ್ತೆನ್ನಮನ!
ಕೂಡಲ ಸಂಗನ ಶರಣರ ಒಕ್ಕುದಕೊಂಡು
ಅನ್ಯವನಾಚರಿಸಿದೊಡೆ ತಪ್ಪದು—
ಸೂಕರ ಶುಚಿಭೂರ್ತತೆಯ ಪ್ರಾಣಿಯಂತೆ!

ಸರ್ವವ್ಯಾಪಿಯಾದ ಈಶ್ವರನನ್ನು ಮನಗಾಣದೆ ಇರುವವರು ಬ್ರಾಹ್ಮಣರಾದರೇನು, ವೇದಾಂತಿಯಾದರೇನು? ಅವರು ಭೋಗಿಗಳಾದ ಕಾರಣ ಜನಮೆಚ್ಚುವಂತೆ ನುಡಿಯುತ್ತಾರೆ; ಲಿಂಗಕ್ಕೆ, ಲಿಂಗವಿಲ್ಲದವರು ಮಾಡಿದ ಅಡಿಗೆಯನ್ನು ಎಡೆ ಮಾಡುವರು; ಅದನ್ನು ಕಂಡು ನನ್ನ ಮನಸ್ಸು ನಾಚಿಕೊಂಡಿದೆ. ಶರಣರ ಪ್ರಸಾದವನ್ನುಂಡ ಮೇಲೆ ಪರಪದಾರ್ಥಗಳನ್ನು ತಿಂದರೆ ನಾಯಿ ಹಂದಿಗಳಂತೆ ಅವರ ಜೀವನ.

೬೨೩ ಉಂಬಲ್ಲಿ ಉಡುವಲ್ಲಿ ಕ್ರೀಯುಳಿಯಿತೆಂಬರು:
ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರು.
ಎಂತಯ್ಯಾ, ಅವರ ಭಕ್ತರೆಂಬೆ?
ಎಂತಯ್ಯಾ ಅವರ ಯುಕ್ತರೆಂಬೆ?
ಕೂಡಲಸಂಗಮ ದೇವ, ಕೇಳಯ್ಯಾ,
ಹೊಲತಿ ಶುದ್ಧನೀರ ಮಿಂದಂತಾಯಿತ್ತಯ್ಯಾ!

ಉಣ್ಣುವದು ಉಡುತೊಡುವದಕ್ಕೆ ದೋಷವಿಲ್ಲವೆನ್ನುತ್ತಾರೆ; ಕೊಡುವಾಗ್ಗೆ ಕುಲಜಾತಿಗಳನ್ನು ಎಣಿಸುತ್ತಾರೆ; ಅವರು ಭಕ್ತರೆ? ಅವರು ಯೋಗ್ಯರೆ? ಹೊಲತಿ ಶುದ್ಧನೀರಿನಿಂದ ಸ್ನಾನಮಾಡಿದರೂ ಅಷ್ಟೆ-ಅವಳ ಹೊಲೆತನ ಹೋಗದ ಹಾಗೆ ಡಾಂಭಿಕರ ಭಕ್ತಿ ಕೂಡಲ ಸಂಗಮದೇವಾ!

೬೨೪ ಭಕ್ತರನಲ್ಲದೆ ಒಲ್ಲೆನೆಂಬಿರಿ:
ಭಕ್ತರಿಗಲ್ಲದೆ ಕೈಯಾನೆನೆಂಬಿರಿದೇನಮಾಡುವಿರಿ ?
ಎಲ್ಲಿಗೊಯ್ದಿರಿ ?
ಪಾವನವಾದುದನು ಲಿಂಗಕ್ಕೆ ಮಾಡುವುದೆ ಆಚಾರ.
ವಿಷಯಕ್ಕೆ ಇಕ್ಕಿ, ಅಸುಗತಿಗಿಳಿಯದಿರಿ,
ಕೂಡಲ ಸಂಗನ ಶರಣರ ಒಡವೆಯು !

ಭಕ್ತರನ್ನುಳಿದು ಅನ್ಯಹುಲು ಮನುಜರನ್ನು ನಿಮ್ಮ ಪಾದದಲ್ಲಿರಿಸಿಕೊಳ್ಳಲು ಒಲ್ಲೆನ್ನುವಿರಿ; ಪವಿತ್ರವಾದ ವಸ್ತುಗಳನ್ನು ಲಿಂಗಕ್ಕೆ ಸಮರ್ಪಿಸುವುದೆ ಸದಾಚಾರ, ಕಾರಣ ವಿಷಯ ಸುಖಕ್ಕೆ ಮನಸ್ಸು ಹರಿಬಿಟ್ಟು ವ್ಯರ್ಥ ಹಾಳಾಗಬೇಡಿರಿ ! ಮನಸ್ಸೆಂಬ ಆಭರಣವು ಶರಣರ ಆಭರಣವು; ಅದನ್ನು ಮಲಿನಗೊಳಿಸಬೇಡಿರಿ.

೬೨೫ ಮಾರಿ ಮಸಣಿ ಯೆಂಬುವು ಬೇರಿಲ್ಲ ಕಾಣಿರೊ !
ಮಾರಿ ಯೆಂಬುದೇನು ? ಕಂಗಳು ತಪ್ಪಿನೋಡಿದರೆ ಮಾರಿ,
ನಾಲಿಗೆ ತಪ್ಪಿನುಡಿದರೆ ಮಾರಿ,
ನಮ್ಮ ಕೂಡಲ ಸಂಗಮದೇವರ ನೆನಹ ಮರೆದರೆ ಮಾರಿ !

ಸಾವುನೋವುಗಳೆಂಬುವುಗಳು ಬೇರೆ ವಸ್ತುಗಳಲ್ಲ; ನಾವು ಕಣ್ಣು ತಪ್ಪಿಯಾದರೂ ಪರಧನ ಪರವಧು ನೋಡಿದರೆ ಅದೇ ಸಾವು ನಮಗೆ; ನಾಲಿಗೆ ತಪ್ಪಿ ಹೆರರಿಗೆ ಸಲ್ಲದ ಮಾತುಗನನ್ನಾಡಿದರೆ ಅದೇ ನಮಗೆ ಸಾವು; ಕೂಡಲ ಸಂಗಮದೇವರ ಧ್ಯಾನವನ್ನು ಮರೆತರೆ ಅದೇ ನಮಗೆಸಾವಾಗಿ ಪರಿಣಮಿಸುತ್ತದೆ.

೬೨೬ ಇರುಳಿಂದೇನೋ ಕುರುಡಂಗೆ, ಹಗಲೆಂದೇನೋ ಕುರುಡಂಗೆ
ತಾಳವ ಬಾರಿಸಿದರೇನೊ,
ಪಂಚಮಹಾಶಬ್ದವ ಬಾರಿಸಿದರೇನೋ ಕಿವುಡಂಗೆ–
ಕೂಡಲ ಸಂಗಯ್ಯನ ಪಥವಿನ್ನಾವುದೆಂದರಿಯದವಂಗೆ ?

ಕುರುಡನಿಗೆ ಹಗಲೂ ಒಂದೆ ರಾತ್ರಿಯೂ ಒಂದೆ; ಕಿವುಡನಿಗೆ ತಾಳ ಬಾರಿಸಿದರೆಷ್ಟು ವಾದ್ಯ ಸಮೂಹಗಳನ್ನು ಬಾರಿಸಿದರೇನು? ಎಲ್ಲವೂ ಅಷ್ಟೆ; ದೇವರನ್ನು ಕಾಣುವ ದಾರಿ ತಿಳಿಯದ ಮನುಷ್ಯನಿಗೆ ಏನಾದ ಭಾಗ್ಯ ವೇನು ?

**೬೨೭ ಸಿಂಗದ ನಡು ಮುರಿಯಲಾ ಸಿಂಗವೇನು ಬಾತೆ ?**
**ಸುಂಡಿಲ ಮುರಿದರೆ ಗಜವೇನು ಬಾತೆ ?**
**ಸಂಗ್ರಾಮದಲ್ಲಿ ವೀರನುಳಿಯಲದೇನು ಬಾತೆ ?**
**ಶೃಂಗಾರದ ಮೂಗುಹೋದರೆ ಶೃಂಗಾರವೇನು ಬಾತೆ?**
**ನಿಜ ತುಂಬಿದ ಭಕ್ತಿ ತುಳುಕಾಡದವರ ಸಂಗವೇನು**
**ಬಾತೆ ?**

**ಕೂಡಲ ಸಂಗಮ ದೇವಾ.**

ಟೊಂಕ ಮುರಿದ ಸಿಂಹದ ಪ್ರಯೋಜನವೇನು ? ಸೊಂಡಿಯಿಲ್ಲದ ಆನೆಯ ಪ್ರಯೋಜನವೇನು ? ಯುದ್ಧದಲ್ಲಿ ಮಡಿಯದೆ ಮರಳಿಬಂದ ವೀರನ ಉಪಯೋಗವೇನು ? ಮೂಗಿಲ್ಲದವರ ರೂಪ ಎಷ್ಟು ಸುಂದರ ವಿದ್ದರೇನು ? ಭಕ್ತಿಭಾವದಿಂದ ತುಂಬಿಯೂ ಹಾಡಿಕುಣಿಯದ ಭಕ್ತರ ಪ್ರಯೋಜನವೇನು ? ಕೂಡಲಸಂಗಮದೇವಾ.

**೬೨೮ ಮುನ್ನಿನ ಆದ್ಯರ ಪಥಂಗಳು ಇನ್ನಾರಿಗೆಯೂ ಅಳವ**
**ಡದು, ನೋಡಾ !**
**ಬಲ್ಲೆನಾಗಿ ಬಲ್ಲೆನು – ಅವರು ಸಲ್ಲದ ಶಿವಪಥಕ್ಕೆ,**
**ಒಳ್ಳಿಹ ಮೈಲಾರನ ಸಿಂಗಾರದಂತೆ,**
**ವೇಶಿಯ ಬಾಯಂಜಲ ತಿಂಬ ದಾಸಿಯ ಸಂಸಾರದಂತೆ—**
**ಕೂಡಲ ಸಂಗನ ಶರಣರನರಿಯದ ಉಳಿದ ಭಂಗಿತರ !**

ಆದ್ಯರು ತೋರಿಸಿದ ದಾರಿಯಾರಿಂದಲೂ ಹೊಂದಿಕೊಂಡು ಹೋಗಲುಸಾಧ್ಯ ವಿಲ್ಲ; ಶರಣರ ದಾರಿಯನ್ನರಿಯದವರ ದುರ್ಗುಣಗಳು ನನಗೆ ಗೊತ್ತಿರುವುದ ರಿಂದಅವರ ಸಹವಾಸ ನನಗೆ ಬೇಡ; ಅವರು ಶಿವತತ್ತ್ವ ಮಾರ್ಗಕ್ಕೆ ಅಯೋ

ಗ್ಯರು; ಉತ್ತಮನೆಂದೆಸಿಕೊಳ್ಳುವ ವ್ಯೈಲಾರ ಶೃಂಗಾರದಂತೆಯೂ, ಸೂಳೆಯು ಯಂಜಲತಿಂದು ಬಾಳುವ ದಾಸಿಯು ಜೀವನದಂತೆಯೂ, ಕೂಡಲ ಸಂಗನ ಶರಣರನ್ನು ತಿಳಿಯದವರ ಮತ್ತು ಉಳಿದ ವೇಷಧಾರಿಗಳ ಸಂಸಾರವಿದೆ.

**೬೨೯ ಗೀಜಗನ ಗೂಡು, ಕೋಡಗದಣಲ ಸಂಚೆ,**
**ಬಾದುಮೆಯು ಮದುವೆ, ಬಾವುಲ ಬಿದ್ದಿನಂತೆ,**
**ಜೂಜುಗಾರನ ಮಾತು, ಬೀದಿಯು ಗುಂಡನ ಸೊಬಗು,**
**ಓಡಿನೊಳಗಗೆಯು ಹೊಯ್ದಂತೆ, ಕಾಣಿರೋ!**
**ಶಿವನಾದಿಯಂತವನರಿಯದವನ ಭಕ್ತಿ**
**ಸುಖಶೋಧನೆಗೆ ಮದ್ದಕೊಂಡಂತೆ,**
**ಕೂಡಲ ಸಂಗಮದೇವಾ!**

ಗೂಗೆಯು ಗೂಡು ಮಂಗನ ಮನೆ ಮತ್ತು ಗೊಂಬೆಯು ಮದುವೆ—ಇವು ತೊಗಲ ಬಾವುಲ ಹಕ್ಕಿ ಜೋತು ಬಿದ್ದ ಹಾಗೆ; ಜೂಜಾಡುವವನ ಮಾತುಗಳು, ಹಾದಿಯಲ್ಲಿ ಭರಮ ದೇವರೆಂದು ಪೂಜೆಗೊಳ್ಳುವ ಕಲ್ಲಿನ ದುಂಡಿಯ ಡೌಲು-ಇವು ಬಿತ್ತುವ ಕಾಳುಗಳನ್ನು ಹಂಚಿನಲ್ಲಿ ಹುರಿದು ಬಿತ್ತಿದಂತೆ-ಮಾತಿಗೆ ಬಾರದವು; ಶಿವನ ಆದಿ ಮತ್ತು ಅಂತ್ಯಗಳನ್ನು ತಿಳಿಯದೇ ಇದ್ದ ಭಕ್ತನ ಭಕ್ತಿಯು ಸುಖವನ್ನು ಹುಡುಕುವದಕ್ಕೆ ಔಷಧಿ ತೆಗೆದು ಕೊಂಡಂತಾಗುತ್ತದೆ; ಕೂಡಲ ಸಂಗಮದೇವಾ!

**೬೩೦ ತೊತ್ತಿನ ಕೊರಳಲ್ಲಿ ಹೊಂಬಿತ್ತಾಳೆಯು**
**ಸಿಂಗಾರವ ಮಾಡಿದಂತೆ**
**ಕುಚ್ಚಿತರ ಸಂಗ ಸುಸಂಗಿಗೆ ಸಂಗಡವಲ್ಲ!**
**ಗುಲಗಂಜಿ ಮಾಣಿಕಕ್ಕೆ ಸರಿಯುಪ್ಪದೆ,**
**ಕೂಡಲ ಸಂಗಮದೇವಾ ?**

ದಾಸಿಯು ಕೊರಳಿಗೆ ಬಂಗಾರದ ತಾಳಿ ಕಟ್ಟಿದರೆ ಅವಳು ಮಡದಿಯಾಗ ಬಲ್ಲಳೆ? ಹಾಗೆ ಉತ್ತಮರಿಗೆ ದುರ್ಜನರ ಸಂಗ ಸರಿಯಲ್ಲ; ಕೂಡಲ ಸಂಗಮದೇವಾ ಗುಲಗಂಜಿ ಕೆಂಪು ಇದ್ದುದಕ್ಕೆ ಮಾಣಿಕಕ್ಕೆ ಸರಿಯಾಗಲಾರದು!

೬೩೧ ಕೆಂಚ ಕರಿಕನ ನೆನೆದರೆ ಕರಿಕನಾಗಬಲ್ಲನೆ?
ಕರಿಕ ಕೆಂಚನ ನೆನೆದರೆ ಕೆಂಚನಾಗಬಲ್ಲನೆ?
ದರಿದ್ರ ಸಿರಿವಂತನ ನೆನೆದರೆ ಸಿರಿವಂತನಾಗಬಲ್ಲನೆ?
ಸಿರಿವಂತ ದರಿದ್ರನ ನೆನೆದರೆ ದರಿದ್ರನಾಗಬಲ್ಲನೇ?
ಮುನ್ನಿನ ಪುರಾತರ ನೆನೆದು ಧನ್ಯನಾದಹೆನೆಂಬ
ರಂಜಕರನೇನೆಂಬೆ, ಕೂಡಲ ಸಂಗಮದೇವಾ?

ಕೆಂಚನು ಕರಿಕನನ್ನು ಕರಿಕ ಕೆಂಚನನ್ನು ನೆನೆದುಕೊಂಡು ಒಬ್ಬರನ್ನೊಬ್ಬರು ಸರಿ ಹೊಂದ ಬಹುದೆ? ದರಿದ್ರನು ಸಿರಿವಂತನನ್ನು ನೆನೆದು ಶ್ರೀ ಮಂತನಾ ಗಲು ಸಾಧ್ಯವೆ? ಈ ರೀತಿ ಹಿಂದೆ ಆಗಿಹೋದ ಪುಣ್ಯವಂತ ಪುರಾತನರನ್ನು ನೆನೆದು ತಾವು ಪುನೀತರಾದೆವೆಂದು ಹೇಳುವ ಮನಹೀನರಿಗೆ ಏನೆಂದು ಹೇಳಲಿ ಕೂಡಲ ಸಂಗಮದೇವಾ?

೬೩೨ ಆನೇಯುನೇರಿಕೊಂಡು ಹೋದಿರೆ ನೀವು,
ಕುದುರೆಯುನೇರಿಕೊಂಡು ಹೋದಿರೆ ನೀವು,
ಕುಂಕುಮ ಕಸ್ತೂರಿಯು ಪೂಸಿಕೊಂಡು ಹೋದಿರೆ, ಅಣ್ಣಾ!
ಸತ್ಯದ ಶೀಲವನರಿಯುದೆ ಹೋದಿರಲ್ಲಾ!
ಸದ್ಗುಣವೆಂಬ ಫಲವ ಬಿತ್ತಿ ಬೆಳೆಯುದೆ ಹೋದಿರಲ್ಲಾ!
ಅಹಂಕಾರವೆಂಬಸದ ಮದಗಜವೇರಿ
ವಿಧಿಗೆ ಗುರಿಯಾಗಿ ನೀವು ಹೋದಿರಲ್ಲಾ!
ನಮ್ಮ ಕೂಡಲ ಸಂಗಮ ದೇವರನರಿಯುದೆ
ನರಕಕ್ಕೆ ಭಾಜನವಾದಿರಲ್ಲಾ!

ಆನೆ ಕುದುರೆಗಳನ್ನು ಹತ್ತಿ, ಕುಂಕುಮ ಕಸ್ತೂರಿ ತಿಲಕ ಹಣೆಗಿಟ್ಟುಕೊಂಡು ಹೋಗುವ ದೊರೆಯಣ್ಣಗಳಿರಾ ಸತ್ಯದ ಅಳವು ನಿಮಗೆ ತಿಳಿಯಲಿಲ್ಲ; ಸದ್ಗುಣಗಳನ್ನು ಬಿತ್ತಿ ಬೆಳೆದು ಕೀರ್ತಿವಂತರಾಗಲಿಲ್ಲ; ಅಹಂಕಾರವೆಂಬ ಅಸತ್ಯದ ಮದ್ದಾನೆಯನ್ನೇರಿ ಸಾವಿಗೆ ತುತ್ತಾದಿರಲ್ಲಾ! ಕೂಡಲ ಸಂಗಮ ದೇವರನ್ನು ತಿಳಿಯದೆ ನರಕನಲ್ಲಿಯ ಹುಳುವಾದಿರಲ್ಲಾ!

**೬೩೩ ಇಂದ್ರಿಯ ನಿಗ್ರಹವ ಮಾಡಿದರೆ ಹೊಂದುವುವು ದೋಷಂಗಳು:**

**ಮುಂದೆ ಬಂದು ಕಾಡುವುವು ಪಂಚೇಂದ್ರಿಯಂಗಳು !**
**ಸತಿ ಪತಿ ರತಿಸುಖವ ಬಿಟ್ಟರೆ ಸಿರಿಯಾಳ-ಚಂಗಳೆಯವರು?**
**ಸತಿ ಪತಿ ರತಿ ಸುಖ ಭೋಗೋಪಭೋಗವಿಳಾಸವ**
**ಬಿಟ್ಟನೆ ಸಿಂಧು ಬಲ್ಲಾಳನು ?**
**ನಿಮ್ಮ ಮುಟ್ಟಿ ಪರಧನ ಪರಸತಿಯರಿಗೆಳಸಿದರೆ**
**ನಿಮ್ಮ ಚರಣಕ್ಕೆ ದೂರ ಕೂಡಲಸಂಗಮದೇವಾ !**

ಇಂದ್ರಿಯಗಳನ್ನು ಅಂಕಿತದಲ್ಲಿಟ್ಟುಕೊಳ್ಳುವುದೇ ದೋಷಗಳನ್ನು ಕಳೆದುಕೊಳ್ಳುವುದು; ಆದರೆ ಕರ್ಮೇಂದ್ರಿಯಗಳು ಮೇಲಿಂದ ಮೇಲೆ ಕಾಡುತ್ತಲಿವೆ; ಸತಿಪತಿಗಳೂ ಸಹಿತ ಭೋಗಸುಖವನ್ನು ತ್ಯಾಗಮಾಡಿದರೆ ಅವರು ಸಿರಿಯಾಳ-ಚಂಗಳೆಯರಂತೆ ಪವಿತ್ರ ಮತ್ತು ಪೂಜ್ಯರಾಗುತ್ತಾರೆ; ಸಿಂಧು ಬಲ್ಲಾಳು ರತಿಸುಖ ವಿಲಾಸವನ್ನು ಬಿಡದೆ ಪರಂಧಾಮವನ್ನು ಹೊಂದಿದನು; ಇದು ಆದರ್ಶ; ಕಾರಣ ಕೂಡಲ ಸಂಗಮದೇವಾ ನಿಮ್ಮಲ್ಲಿ ಕೂಡಿದ ಬಳಿಕ ಪರಸ್ತ್ರೀ ಪರಧನಗಳಿಗೆ ಆಶೆ ಮಾಡಿದರೆ ನಿಮ್ಮಿಂದ ದೂರನಾಗುತ್ತೇನೆ.

**೬೩೪ ಲಿಂಗ ಜಂಗಮರೊಂದೆ ಎಂದು ನಂಬಿದ ಬಳಿಕ**
**ಅವರಂಗನೆಯರು ಲಿಂಗದ ರಾಣಿವಾಸ:**
**ಅಲ್ಲಿಯೂ ಮೇಳ, ಇಲ್ಲಿಯೂ ಮೇಳ,**
**ಚೌಡೇಶ್ವರಿಯಲ್ಲಿಯೂ ಮೇಳ !**
**ಮೊಲೆಯುಂಬ ಭಾವ ತಪ್ಪಿ ಅಪ್ಪಿದವರ**
**ತಲೆಯ ಕೊಂಬ ಕೂಡಲ ಸಂಗಮದೇವ.**

ಲಿಂಗ ಮತ್ತು ಜಂಗಮರು ಒಂದೇ ಎಂದು ಭಾವಿಸಿದವರಿಗೆ ಅವರ ಸತಿಯರು ಕೂಡ ಲಿಂಗದಲ್ಲಿಯೇ ನೆಲೆಸಿರುತ್ತಾರೆ; ಅವರು ಜೀವಾತ್ಮನಲ್ಲಿ, ಅಂತರಾತ್ಮನಲ್ಲಿ ಮತ್ತು ಪರಮಾತ್ಮನಲ್ಲಿಯೂ ಅವಿರತವಾಗಿ ಹೊಂದಿಕೊಂ

ಡಿರುತ್ತಾರೆ. ಆದರೆ ಮೊಲೆಯುಣಿಸುವ ಸ್ತ್ರೀಯನ್ನು ತಾಯಿಯೆಂದು ತಿಳಿಯದೆ ಅವಳನ್ನು ಮೋಹಿಸಿ ಅಪ್ಪಿಕೊಂಡರೆ ಕೂಡಲಸಂಗಮದೇವರು ಅವರಿಂದ ತಲೆಯನ್ನೇ ದಂಡವಾಗಿ ತೆಗೆದುಕೊಳ್ಳುತ್ತಾನೆ.

**೬೩೫ ಒಡೆಯರ ತಮ್ಮ ಮನೆಗೆ ಒಡಗೊಂಡು ಹೋದರೆ,**
**ತುಡುಗುಣಿತನದಲ್ಲಿ ಪರವಧುವನೋಡುವ ಸರಸಬೇಡ,**
**ಕಾಣಿರಣ್ಣಾ! ಒಡೆಯನರಸಿಯ ಸರಸಬೇಡ!**
**ಕೂಳ ಸೊಕ್ಕು ತಲೆಗೇರಿ ರಾಣಿವಾಸದೊಡನೆ ಸರಿಸಬೇಡ;**
**ಕೂಡಲಸಂಗಮದೇವ ಕರ ಸಿತನಗಯ್ಯಾ!**

ಯಜಮಾನನು ತನ್ನ ಹೆಂಡತಿಯೆಡನೆ ಮನೆಗೆ ಹೋದರೆ ಅವರ ರತಿ ಕ್ರೀಡೆಯನ್ನು ಕದ್ದು ನೋಡಬಾರದು; ಮತ್ತು ಯಜಮಾನನ ಹೆಂಡತಿಯೊಡನೆ ಸರಸವಾಡಬಾರದು; ಅವರ ಮನೆಯ ಅನ್ನವನ್ನು ಉಂಡು ಕೊಬ್ಬೇರಿ ಯಜಮಾನಿಯೊಡನೆ ರತಿ ಸುಖ ಹೆಬೆಂದುವದು ಬೇಡ; ಕೂಡಲ ಸಂಗಮದೇವರು ಈ ದೇಹವನ್ನು ಸೀಳಿ ಹಾಕುತ್ತಾನೆ.

**೬೩೬ ನೋಡಲಾಗದು ನುಡಿಸಲಾಗದು ಪರಸ್ತ್ರೀಯ, ಬೇಡ, ಕಾಣಿರೋ!**
**ತಗರ ಬೆನ್ನಲಿ ಹರಿವ ಸೊಣಗನಂತೆ, ಬೇಡ, ಕಾಣಿರೋ!**
**ಒಂದಾಸೆಗೆ ಸಾವಿರ ವರುಷ ನರಕದೊಳದ್ದುವ**
**ಕೂಡಲ ಸಂಗಮದೇವ!**

ಪರರ ಹೆಂಗಸರನ್ನು ನೋಡಬೇಡಾ; ಮತ್ತು ಅವಳನ್ನು ಮಾತನಾಡಿಸುವ ಪ್ರಯತ್ನವನ್ನೂ ಮಾಡಬೇಡ; ನಿಮ್ಮ ಈ ಒಂದು ಆಶೆಗಾಗಿ ಸಾವಿರು ವರುಷಗಳಪರ್ಯಂತ ನರಕದಲ್ಲಿಡುತ್ತಾನೆ ಕೂಡಲ ಸಂಗಮದೇವರು.

**೬೩೭ ತೊರೆಯ ಮೀವಣ್ಣಗಳಿರಾ, ತೊರೆಯೆಮೀವ ಸ್ವಾಮಿಗಳಿರಾ,**
**ತೊರೆಯಿಂ ಭೋ ತೊರೆಯಿಂ ಭೋ,**

**ಪರನಾರಿಯ ಸಂಗವ ತೊರೆಯಿಂ ಭೋ !**
**ಪರಧನದಾಮಿಷವ ತೊರೆಯಿಂ ಭೋ !**
**ಇವ ತೊರೆಯದೆ ಹೋಗಿ ತೊರೆಯ ಮಿಂದರೆ,**
**ಬರುದೋರೆ ಹೋಹುದು, ಕೂಡಲ ಸಂಗಮ ದೇವಾ.**

ನದಿಯಲ್ಲಿ ಸ್ನಾನ ಮಾಡುವ ಅಣ್ಣಗಳಿರಾ, ಸ್ವಾಮಿಗಳಿರಾ, ಪರಸ್ತ್ರೀ ಸಂಗವನ್ನು, ಅನ್ಯರ ಸಂಪತ್ತನ್ನು ಅಪಹರಿಸುವದನ್ನು ಬಿಡದೆ ಕೇವಲ ಪುಣ್ಯನದಿಯೆಂದು ನದಿಯಲ್ಲಿ ಮುಳುಗಿ ಬಂದರೆ ಕೂಡಲ ಸಂಗಮ ದೇವರು ಮೆಚ್ಚುವದಿಲ್ಲ.

**೬೩೮ ಸತ್ಯಶೌಚ ನಿತ್ಯನೇಮವ ತಪ್ಪದೆ ಮಾಡಬಲ್ಲರೆ ಅದು ಲೇಸು,**
**ಮತ್ಸ್ಯ ಕೂರ್ಮ ಮಂಡೂಕ ಜಲದೊಳಗಿದ್ದಲ್ಲಿ ಫಲವೇನು?**
**ಆಗಡವ ಮಾಡಿ ಮಾಗುಡವ ಮಿಂದರೆ**
**ತಾ ಕೊಡಬಲ್ಲನೆ ಕೂಡಲಸಂಗಮದೇವ ?**

ಪ್ರತಿದಿನವೂ ಸ್ನಾನ ಮಾಡಿ ಶುದ್ಧಾಂಗನಾಗಿ ನೇಮ, ಧ್ಯಾನಗಳನ್ನು ಮಾಡಬೇಕು; ಅಂದರೆ ಸದ್ಗತಿ ಸಿಗುತ್ತದೆ; ಮೀನ, ಆವೆ, ಕಪ್ಪೆಗಳು ಸದಾವಕಾಲ ನೀರಲ್ಲಿದ್ದೂ ನಿರರ್ಥಕ. ಅಲ್ಲದ ಸಲ್ಲದ ಕರ್ಮ ಮಾಡಿ ಪುಣ್ಯ ತೀರ್ಥಗಳಲ್ಲಿ ಮುಳುಗಿ ಬಂದರೆ ಕೂಡಲ ಸಂಗಮ ದೇವನು ಮುಕ್ತಿಯನ್ನು ಕೊಡುವದಿಲ್ಲ.

**೬೩೯ ಕುಳ್ಳಿರ್ದಲ್ಲಿ ಲಿಂಗವ ಪೂಜಿಸಿ ಅಲ್ಲದಾಟವನಾಡುವರಯ್ಯಾ:**
**ಬೆಳ್ಳೆತ್ತಿನ ಮರೆಯಲ್ಲಿರ್ದು ಹುಲ್ಲೆಗಂಬ ತೋಡುವಂತೆ !**
**ಕಳ್ಳ ಹಾದರಿಗರ ಕೈಯಲು ಪೂಜೆಯ ಕೊಳ್ಳ**
**ನಮ್ಮ ಕೂಡಲ ಸಂಗಮ ದೇವ !!**

ತಾವು ಕುಳಿತಲ್ಲಿಯೇ ಲಿಂಗಪೂಜೆ ಮಾಡಿ, ಬಿಳಿ ಎತ್ತಿನ ಮರೆಗೆ ನಿಂತು ಚಿಗರೆ ಪಾರಾಗುವಂತೆ ಕೆಟ್ಟ ಕರ್ಮಗಳನ್ನು ಮಾಡುವ ಈ ಕಳ್ಳ ಹಾದರಿಗರ ಕೈಯಿಂದ ಸತ್ಯಸಂಧನಾದ ಕೂಡಲ ಸಂಗಮದೇವರು ಪೂಜೆ ಮಾಡಿಸಿಕೊಳ್ಳುವದಿಲ್ಲ.

೭೪೦ ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ
ಹಿಡಿದಿರ್ದ ಲಿಂಗವು ಘಟಸರ್ಪನಂತೆ !
ನುಡಿಯಲು ಬಾರದು, ನಡೆಯಲು ಬಾರದು,
ಲಿಂಗದೇವನೆ ದಿಬ್ಯವೊ, ಅಯ್ಯಾ !
ಬಡವನ ಕೋಪ ಅವುಡಿಗೆ ಮೃತ್ಯುವಾದಂತೆ
ಕಡೆ ದಾಂಟದು, ಕಾಣಾ, ಕೂಡಲ ಸಂಗಮದೇವಾ.

ಮಾತು ಶುದ್ಧ ಮಾಡಿಕೊಂಡು ನಡತೆಯಲ್ಲಿ ತಪ್ಪಿದರೆ ನಮ್ಮ ಕೈಯಲ್ಲಿದ್ದ ಲಿಂಗವು ಘಟಸರ್ಪವಾಗುತ್ತದೆ; ಲಿಂಗವೇ ದಿವ್ಯ ಮೂರ್ತಿಯಾದುದರಿಂದ ಲಿಂಗದೊಡನೆ ಸರಸ ಸರಿಯಲ್ಲ; ಬಡವನ ಸಿಟ್ಟು ಅವನ ಹೊಟ್ಟೆಗೆ ಪೆಟ್ಟಾದಂತೆ ನಮಗೆ ಮುಕ್ತಿ ದೊರೆಯಲಾರದು ಕೂಡಲಸಂಗಮದೇವಾ.

೭೪೧ ತನು ಶುಚಿಯಿಲ್ಲದವನ ದೇಹಾರವೇಕೆ ?
ದೇವರು ಕೊಂಡನೆಂಬ ಭ್ರಾಂತದೇಕೆ ?
ಮನಕ್ಕೆ ಮನವೇ ಸಾಕ್ಷಿ; ಸಾಲದೆ, ಲಿಂಗ ತಂದೆ ?
ಹೇಂಗೆ ಮನ ಹಾಂಗೆ ನಿಮ್ಮ ಘನ, ತಪ್ಪದು, ಕೂಡಲ
ಸಂಗಮದೇವ.

ತನು ಮನಾದಿಗಳು ಶುದ್ಧವಿಲ್ಲದವರ ತ್ಯಾಗವು ದೇವರಿಗೆ ಬೇಡ; ದೇವರು ನಮ್ಮ ತ್ಯಾಗವನ್ನು ಸ್ವೀಕರಿಸುವನೆಂಬ ಹುಚ್ಚು ಬೇಡ; ನಮ್ಮ ಮನಸ್ಸಿದ್ದ ಹಾಗೆ ನಿಮ್ಮ ರೂಪು ಹೊಳೆಯುತ್ತದೆ. ಮನಸ್ಸಿನಂತೆ ಮಹಾದೇವ; ಕೂಡಲ ಸಂಗಮದೇವ.

೭೪೨ ಶರಣರ ನಿಚ್ಚ ನಿಚ್ಚ ಪೂಜಿಸುವಂಗೆ– ಇದಕ್ಕಿದೆ ದೃಷ್ಟ
ದೀವಿಗೆ–
ಪಾದೋದಕ ಕೋಶಪಾನವಲ್ಲದೆ ಏನೂ ಇಲ್ಲವಯ್ಯಾ.
ಮಜ್ಜನಕ್ಕೆರೆವುದು ಲಿಂಗ–
ಅದು ಲಿಂಗ ಕರಸ್ಥಲದ ದಿಬ್ಯ–
ಗುರುವಚನ ಭಾಷಾಪತ್ರ ಶಿವಕಳದಲ್ಲಿ !

**ಸತ್ಯದಿಂದ ನಡೆವಂಗೆ ನಿತ್ಯನೇಮವಾಗಿ ಸಲಿಸುವನಲ್ಲದೆ,**
**ಹುಸಿವಂಗೆ ಮಡಿಲ ಕಿಚ್ಚಾಗಿ ಸುಡುವ!**
**ಲಿಂಗವ ಪೂಜಿಸಿ ಮರಳಿ ಅನ್ಯಕ್ಕೆರಗಿದಡೆ**
**ಕೂಡಲ ಸಂಗಮದೇವನವರು ಹಲ್ಲ ಕಳೆವ!**

ಶರಣರನ್ನು ಪ್ರತಿದಿನವೂ ನೇಮದಿಂದ ಪೂಜಿಸಿ ಭಜಿಸುವವರಿಗೆ ನಿರ್ವಾಣವು ಸಿಗುತ್ತದೆ; ಸುಳ್ಳು ವ್ರತ ನೇಮಾಚರಣೆ ಮಾಡುವವರಿಗೆ ಆ ಲಿಂಗವು ಬೆಂಕಿಯಾಗಿ ದಹಿಸುತ್ತದೆ. ಕಾರಣ ಅನ್ಯದೇವರಿಗೆ ಬಾಗಿದರೆ ಕೂಡಲ ಸಂಗಮ ದೇವರು ಹಲ್ಲು ಮುರಿಯುತ್ತಾನೆ.

**೬೪೩ ಪಾಪಿಗೆ ಕೋಪಿಗೆ ಭಕ್ತಿಯಾಗೆಂದರಪ್ಪುದೆ?**
**ನಾರಿವಾಣವಕ್ಕುವುದೆ ನಾಯಿಗೆ,**
**ಕೂಡಲ ಸಂಗಮದೇವಾ,**
**ನಿಮ್ಮ ನಂಬಿಯೂ ನಂಬದ ಡಂಭಕಂಗೆ?**

ಪಾಪಿಗಳಿಗೆ ಕೋಪಿಷ್ಠರಿಗೆ ಮತ್ತು ನಿಮ್ಮನ್ನು ನಂಬದವರಿಗೆ ಭಕ್ತಿ ಯೆಂಬುದು ಬರುವುದಿಲ್ಲ; ನಾಯಿಗೆ ಕೊಬ್ಬರಿಯು ರುಚಿಸುವುದೇ? ಕೂಡಲ ಸಂಗಮದೇವ.

**೬೪೪ ಸದಾಚಾರ ಸದ್ಭಭಕ್ತಿಯಿಲ್ಲದವರ ನೊಲ್ಲನಯ್ಯಾ:**
**ಅವರಾರಾಧನೆ ದಂಡ!**
**ನಿಚ್ಚ ನಿಚ್ಚ ಪ್ರಾಯಶ್ಚಿತ್ತರನೊಲ್ಲ,**
**ಕೂಡಲ ಸಂಗಮದೇವ ಭೂ ಭಾರಕರ!**

ಉತ್ತಮ ಆಚಾರ, ಶುದ್ಧ ಭಕ್ತಿ, ಯಾರ ಬಳಿ ಇಲ್ಲವೋ, ಅವರ ಪೂಜೆಪು ನಸ್ಕಾರಗಳು ಲಿಂಗಕ್ಕೆ ಸಮ್ಮತವಾಗುವದಿಲ್ಲ; ಭೂಮಿಗೆ ಭಾರವಾದ ಆಲಸ್ಸಿಗಳನ್ನು ಕುಕರ್ಮಿಗಳನ್ನು ಕೂಡಲಸಂಗಮದೇವರು ಮೆಚ್ಚುವದಿಲ್ಲ!

**೬೪೫ ಕೋಪಿ ಮಜ್ಜನಕೆರೆದರೆ ರಕ್ತದ ಧಾರೆ!**
**ಪಾಪಿ ಹೂವನೇರಿಸಲು ಮಸೆದಡಾಯುಧದ ಗಾಯ!**

ಕೂರ್ಪವರನಾರನೂ ಕಾಣೆನು ಮಾದಾರ ಚೆನ್ನಯ್ಯ
ನಲ್ಲದೆ;
ಕೂರ್ಪವರನಾರನೂ ಕಾಣೆನು ಡೋಹಾರ ಕಕ್ಕಯ್ಯ
ನಲ್ಲದೆ.
ವ್ಯಾಪತ್ತಿಯುಳ್ಳ ನಮ್ಮ ಮಡಿವಾಳ ಮಾಚಯ್ಯ
ನಿನ್ನಾಪತ್ತಿಗರಿವರಯ್ಯಾ, ಕೂಡಲ ಸಂಗಯ್ಯಾ!

ಕೋಪಿಷ್ಠನು ಲಿಂಗಕ್ಕೆ ಸ್ನಾನ ಮಾಡಿಸಲು ಅದು ರಕ್ತ ಧಾರೆಯಾಗಿ ಹರಿಯುತ್ತದೆ; ಪಾಪಿ ಹೂವನೇರಿಸಲು ಚೂರಿಯಿಂದ ಇರಿದ ಗಾಯದಂತೆ ಪರಿಣಮಿಸುತ್ತದೆ; ಲಿಂಗದ ಮೇಲೆ ಪ್ರೀತಿಯುಳ್ಳವರೆಂದರೆ ಮಾದಾರ ಚೆನ್ನಯ್ಯ ಹಾಗೂ ಡೋಹಾರ ಕಕ್ಕಯ್ಯ; ನಿಷ್ಠೆಯುಳ್ಳ ಮಡಿವಾಳ ಮಾಚಯ್ಯನು ನಿಮ್ಮ ಆಪತ್ತಿಗೆ ಅನುವಾಗಿ ನಿಲ್ಲುವನು ಕೂಡಲ ಸಂಗಮದೇವಾ.

೭೪೬ ನೂರ ನೋದಿ ನೂರ ಕೇಳಿದರೇನು?
ಆಶೆ ಹರಿಯದು ರೋಷ ಬಿಡದು,
ಮಜ್ಜನಕ್ಕೆರೆದು ಫಲವೇನು?
ಮಾತಿನಂತೆ ಮನವಿಲ್ಲದ ಜಾತಿಡೊಂಬರ ನೋಡಿ, ನಗುವ
ನಮ್ಮ ಕೂಡಲ ಸಂಗಮದೇವ.

ಮನದ ಆಶೆ-ಸಿಟ್ಟುಗಳು ಕಳೆಯದಿದ್ದರೆ ಎಷ್ಟು ಓದಿದರೇನು? ಎಷ್ಟು ಪುರಾಣ ಶಾಸ್ತ್ರ ಕೇಳಿದರೇನು? ಮಾತನಾಡಿದಂತೆ ಮನಸಾ ನಡೆಯದಿದ್ದರೆ ಕೂಡಲ ಸಂಗಮದೇವರು ನೋಡಿ ನಗುವನು.

೭೪೭ ತಂದೆ ಮಕ್ಕಳಿಗೆ ಬುದ್ಧಿಯ ಹೇಳುವಲ್ಲಿ
ತಪ್ಪಿಂಗೆ ಮುನಿವನಲ್ಲದೆ ಪ್ರಾಣಕ್ಕೆ ಮುನಿಯ.
ಲಿಂಗವಂತನು ಲಿಂಗವಂತರಿಗೆ ಬುದ್ಧಿಯ ಹೇಳುವಲ್ಲಿ
ಅವಗುಣಕ್ಕೆ ಮುನಿವನಲ್ಲದೆ ಲಾಂಛನಕ್ಕೆ ಮುನಿಯ.
ಲಿಂಗ ಭಕ್ತನು ಲಿಂಗಪಥವ ಹೇಳಿದರೆ
ಮಚ್ಚರಿಸುವರ ಮೆಚ್ಚ ಕೂಡಲ ಸಂಗಮದೇವ.

ತಂದೆ ಮಕ್ಕಳ ನಡುವೆ ವ್ಯಾಜ್ಯ ಹುಟ್ಟಿದಾಗ ಬುದ್ಧಿಹೇಳಲು ಶರಣನು ಬಂದು ಅವರ ತಪ್ಪಿಗೆ ಸಿಟ್ಟುಮಾಡುತ್ತಾನಲ್ಲದೆ ಅವರ ಪ್ರಾಣಕ್ಕಲ್ಲ; ಲಿಂಗವಂತನು ಲಿಂಗವಂತರಿಗೆ ಆಚಾರ ಬುದ್ಧಿ ಹೇಳುತ್ತಿರುವಾಗ ಶರಣನು ಬಂದು ಅವರದುರ್ಗುಣಗಳಿಗೆ ಛೀಃ ಹಾಕುತ್ತಾನಲ್ಲದೆ ಲಿಂಗಕ್ಕಲ್ಲ, ಭಕ್ತನು ಲಿಂಗ ತತ್ತ್ವಗಳನ್ನು ಹೇಳಿದರೆ ಅವುಗಳನ್ನು ಕೇಳಿ ಮತ್ಸರಿಸುವವರನ್ನು ಕೂಡಲ ಸಂಗಮದೇವರು ಮೆಚ್ಚುವದಿಲ್ಲ.

**೬೪೮ ಗುರೂಪದೇಶ ಮಂತ್ರವೈದ್ಯ; ಜಂಗಮೋಪದೇಶ**
**ಶಸ್ತ್ರವೈದ್ಯ ನೋಡಾ:**
**ಭವರೋಗವ ಗೆಲುವ ಪರಿಯ ನೋಡಾ.**
**ಕೂಡಲ ಸಂಗನ ಶರಣರ ಅನುಭಾವ**
**ಮಡಿವಾಳನ ಕಾಯಕದಂತೆ!**

ಗುರುವಿನ ಉಪದೇಶವು ವೈದ್ಯವಿದ್ಯೆಯ ಮಂತ್ರದಂತೆ, ಜಂಗಮನ ಉಪದೇಶವು ಶಸ್ತ್ರಚಿಕಿತ್ಸೆಯಿದ್ದಹಾಗೆ; ಭವರೋಗವನ್ನು ಗೆಲ್ಲುವ ಸಾಧನಗಳಿವು; ಕೂಡಲ ಸಂಗಮದೇವರ ಶರಣರ ಅನುಭವವು ಮಡಿವಾಳನ ಕಾಯಕವಿದ್ದಹಾಗೆ !

**೬೪೯ ಶಿವಚಿಂತೆ ಶಿವಜ್ಞಾನ ಭ್ರಮೆ ತಿಳಿದವಂಗಲ್ಲದೆ**
**ಆಚಾರ ಶಿವಾಚಾರ ತನುತಮಗೆ ಸೂರೆಯೆ,**
**ಕೂಡಲ ಸಂಗನ ನೆರೆ ಪೂಜಿಸಿದವಂಗಲ್ಲದೆ?**

ಯಾರು ತಪ್ಪದೆ ಕೂಡಲ ಸಂಗಮ ದೇವರನ್ನು ಪೂಜಿಸುತ್ತಾರೆಯೋ ಅವರಿಗೆ ಆಚಾರ ಶಿವಾಚಾರಗಳು ಕೂಡಿ ಕೊಳ್ಳುತ್ತವೆ; ಮಿಕ್ಕ ಜನ?ಗೆ ದುರ್ಲಭ ವಾಗುತ್ತವೆ.

**೬೫೦ ಕೇಳಿರೆ, ಕೇಳಿರೆ, ಹಿರಿಯರು ಗುರುವಿನುಪದೇಶವನು:**
**ಒಂದು ಗೀಜಗನ ಉಪದೇಶದಿಂದ**
**ಪೌಲಸ್ತ್ಯನಂದು ಹಡೆಯನೆ ದಶಮುಖನ?**
**ಶಿರವ ಹರಿದಿಕ್ಕೆ ಪರಮುನಿದ್ದೆಡೆಯು ಕಾಣದೇನಿಳೆಯಲ್ಲಿ?**

ಕರುಳ ತಂತಿಯುಪದೇಶದಿಂದೆ
ಅಸುರನಂದು ಹಡೆಯನೆ ಸುರಪದವ?
ತರುಣಿ ಹರಿಣಿಯುಪದೇಶದಿಂದೆ ಗತಿಪಥ ಮುಕ್ತಿಯ
ಪಡದು
ಬಟ್ಟೆಯ ಹತ್ತನೆ ವಿನಾಶಕ್ತಿರಾಯನು ?
ರಂಭೆಯುಪದೇಶದಿಂದ
ಶಂಭುವಿನೋಲಗದಲ್ಲಿ ಕುಳ್ಳಿರನೇಶ್ವೇತನು ?
ನಮ್ಮ ಕೂಡಲ ಸಂಗನ ಶರಣರ ಉಪದೇಶವ ಕೇಳಿದ
ವರಿಗೆ
ದುರಿತಪಾಪಂಗಳು ಬಿಟ್ಟು ಹೋಗಿ ಮನನಿರತರಾಗಿಪ್ಪರು
ಲಿಂಗದಲ್ಲಿ

ಹಿರಿಯರು ಮತ್ತು ಗುರುಗಳು ಮಾಡಿದ ಉಪದೇಶದಿಂದ ಏನೇನಾಗಿದೆ ಎಂಬುದನ್ನು ಕೇಳಿರಿ; ಗೂಗೆಯ ಉಪದೇಶದಿಂದ ಪೌಲಸ್ತ್ಯನು ರಾವಣನ್ನು ಹೆತ್ತನು; ಆದರೆ ತಲೆಯನ್ನು ಕತ್ತರಿಸಿ ಪರಮಾತ್ಮನಿದ್ದಲ್ಲಿ ಇಟ್ಟರೆ ಅವನು ಕಾಣುವದಿಲ್ಲವೆ ಈ ಭೂಮಿಯಲ್ಲಿ? ನಾರದನ ಉಪದೇಶದಿಂದ ರಾಕ್ಷಸನು ದೇವೇಂದ್ರನ ಪಟ್ಟಗಳಿಸಿದನು; ಪತಿವ್ರತೆಯರ ಉಪದೇಶದಿಂದ ಎಂಥ ದುಷ್ಟನು ಮುಕ್ತಿಮಾರ್ಗದ ಹಾದಿಯನ್ನು ಹಿಡಿಯುತ್ತಾನೆ; ಕೂಡಲ ಸಂಗಮದೇವರ ಶರಣರ ಉಪದೇಶದಿಂದ ಎಲ್ಲ ಪಾಪಗಳು ದೂರವಾಗಿ ಲಿಂಗದಲ್ಲಿ ಮನಸ್ಸು ತಲ್ಲೀನವಾಗುತ್ತದೆ.

೬೫೧ ಶ್ವಪಚನಾದರೇನು? ಲಿಂಗಭಕ್ತನೇ ಕುಲಜನು
ನಂಬಿ ನಂಬದಿದ್ದರೆ ಸಂದೇಹಿನೋಡಾ !
ಕಟ್ಟಿದರೇನು, ಮುಟ್ಟಿದರೇನು, ಹೂಸಿದರೇನು
ಮನ ಮುಟ್ಟದನ್ನಕ್ಕ ?
ಭಾವ ಶುದ್ಧವಿಲ್ಲದವಂಗೆ ಭಕ್ತಿನೆಲೆಗೊಳ್ಳದು,
ಕೂಡಲಸಂಗಯ್ಯ ನೊಲಿದಂಗಲ್ಲದೆ.

ಲಿಂಗ ಭಕ್ತಿಯನ್ನು ಮಾಡುವವನು ಚಾಂಡಾಲನಾದರೇನು ಅವನೇ ಉತ್ತಮ ಕುಲದವನು; ಮನಸ್ಸು ಶುದ್ಧವಾಗಿ ಪಾಕವಾಗದ ವಿನಃ ಲಿಂಗ

ವನ್ನು ಕಟ್ಟಿಕೊಂಡರೇನು; ಶರಣರ ಪಾದ ಮುಟ್ಟಿದರೇನು, ಭಸ್ಮವನ್ನು ಹಚ್ಚಿಕೊಂಡರೇನು ಎಲ್ಲವೂ ವ್ಯರ್ಥ; ಮನಸ್ಸು ತಿಳಿಯಾಗಿರ ಬೇಕು; ಕೂಡಲ ಸಂಗಮದೇವರ ಪ್ರೇಮವಿದ್ದವರು ಮಾತ್ರ ಭಕ್ತಿಯನ್ನು ಮಾಡಲು ಶಕ್ತರು.

**೬೫೨ ಅವರ ನಡೆಯೊಂದು ನುಡಿಯೊಂದಾದರೆ**
**ಶಿವಾಚಾರಕ್ಕವರು ಸಲ್ಲರಯ್ಯಾ:**
**ಬಲ್ಲನು, ಸಾತ್ವಿಕರಲ್ಲದವರನೊಲ್ಲನು;**
**ಶಿವಾಚಾರವ ಬಲ್ಲನು, ಅಲ್ಲಿ ನಿಲ್ಲನು,**
**ಪ್ರಪಂಚಿಯ ಮನವನೊಲ್ಲನು ಕೂಡಲ ಸಂಗಮ**
**ದೇವನು.**

ನಡೆ-ನುಡಿಗಳಲ್ಲಿ ಹೊಂದಿಕೆ ತಾಳ್ಮೆಯಿಲ್ಲದವರು ಶಿವತತ್ವಕ್ಕೆ ಅಯೋಗ್ಯರು. ಪರಮಾತ್ಮನು ಅವಿಚಾರಿಗಳನ್ನು ಒಲ್ಲನು; ಇಂಥ ಮನ ಹೀನ ಡಾಂಭಿಕರನ್ನು ಮೋಸಗಾರರನ್ನು ಕೂಡಲಸಂಗಮ ದೇವರು ಮೆಚ್ಚಿಕೊಳ್ಳುವದಿಲ್ಲ.

**೬೫೩ ನಿಧಾನವನರಸಿಹೆನೆಂದು ಹೋದರೆ, ವಿಘ್ನ ಬಪ್ಪುದು**
**ಮಾಣ್ಬುದೆ ?**
**ಸದಾಶಿವನೆಂದರೆ ಬೆದರಟ್ಟಿ ಸುಡುವುದು ಮಾಣ್ಬುದೆ?**
**ಹದುಳಿಗನಾಗಿ ಉಳಿದರೆ ಪದವಿಯನೀವ, ಕಾಣಾ,**
**ಕೂಡಲ ಸಂಗಮ ದೇವ**

ನೆಲದೊಳಗಿನದುಡ್ಡು ಕಂಡು ಅಗಿದು ತೆಗೆಯಲು ಹೋದರೆ ನೂರೆಂಟು ವಿಘ್ನಗಳು ಬರುತ್ತವೆ; ಆಗ ಸದಾಶಿವನನ್ನು ಭಜಿಸಿದರೆ ಅಂಜಿಕೆಯು ಅಂಜಿಸುವುದನ್ನು ಬಿಡುವುದಿಲ್ಲ; ನಡೆ—ನುಡಿ, ಆಚಾರ—ವಿಚಾರ ಶುದ್ಧನಾಗಿದ್ದರೆ ಮಾತ್ರ ಮುಕ್ತಿ ಸಂಪದವನ್ನು ಕೂಡಲ ಸಂಗಮ ದೇವರು ಕೊಡುತ್ತಾನೆ.

೬೫೪ ಅಡಿಗಡಿಗೆ ದೇವರಾಣೆ, ಅಡಿಗಡಿಗೆ ಭಕ್ತರಾಣೆ,
ಅಡಿಗಡಿಗೆ ಗುರುವಿನಾಣೆ ಎಂಬ ವಚನವೇ ಹೊಲ್ಲ !
ಮುಂದೆ ಶಿವಪಥಕ್ಕೆ ಸಲ್ಲರು !
ಆದಿಯಿಂದ ಬಂದ ವಚನವೆಂದು ಶರಣರ ಕೂಡೆ ಸರಸ ವಾಡಿದರೆ—
ನಗುತಲಿರಿದುಕೊಂಡರೆ ಅಲಗುನೆಡದಿಹುದೆ,
ಕೂಡಲ ಸಂಗಮ ದೇವಾ ?

ಸೊಲ್ಲು ಸೊಲ್ಲಿಗೆ ದೇವರಾಣೆ, ಭಕ್ತರಾಣೆ ಗುರುವಿನಾಣೆ ಎಂದು ಹಾಕುವ ವಚನವೇ ಹೊಲೆ; ಹಾಗೆ ಆಣೆ ಹಾಕುವವರು ಶಿವಾನುಗ್ರಹಕ್ಕೆ ಹೊರಗಾಗುವರು; ಶರಣರು ಸಂಪನ್ನರೆಂದು ಅವರೊಡನೇ ಸರಸವಾಡ ಬಾರದು; ನಗುತ್ತ ಚೂರಿಯಿಂದ ತಿವಿದುಕೊಂಡರೆ ಅದು ಘಾಯವನ್ನು ಮಾಡದೇ ಇರುತ್ತದೆಯೇ ? ಕೂಡಲ ಸಂಗಮ ದೇವಾ !

೬೫೫ ಅರಗಿನ ಪುತ್ತಳಿಯ ನುರಿಯ ನಾಲಗೆ ಹೊಯಿದು
ಮಾತಾಡುವ ಸರಸ ಬೇಡ !
ಬೆಣ್ಣೆಯ ಬೆನಕಂಗೆ ಕೆಂಡದುಂಡಲಿಗೆಯಮಾಡಿ
ಚಲ್ಲವಾಡಿದರೆ ಹಲ್ಲು ಹೋಹುದು !
ಕೂಡಲ ಸಂಗನ ಶರಣರೊಡನೆ ಸರಸವಾಡಿದರೆ
ಅದು ವಿರಸ ಕಾಣಿರಯ್ಯಾ !

ಅರಗಿನ ಗೊಂಬೆಯನ್ನು ಉರಿಯಲ್ಲಿ ಚೆಲ್ಲಿ ಮೋಜು ಮಾಡುವುದು ಬೇಡ ? ಬೆಂಣೆಯ ಗಣೇಶನಮಾಡಿ ಕೆಂಡದಮೇಲಿರಿಸಿದರೆ ಅದು ಕರಗು ವಂದದಿ ಕೂಡಲ ಸಂಗಮ ದೇವರ ಶರಣರೊಡನೆ ನಗೆಯಾಟವಾಡಿ ದರೆ ಅದು ಮೃತ್ಯು ನನಗೆ.

೬೫೬ ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುರಿಸುವಂತೆ,
ಉರಿವ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕ ಬಿಡಿಸುವಂತೆ,
ಹುಲಿಯ ಮೀಸೆಯ ಹಿಡಿದುಕೊಂಡು

**ಒಲಿದುಯ್ಯಾಲೆಯಾಡುವಂತೆ,**
**ಕೂಡಲ ಸಂಗನ ಶರಣರೊಡನೆ ಮರೆದು ಸರಸವಾಡಿದರೆ**
**ಸುಣ್ಣದ ಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ !**

ಹಾವಿನ ಹೆಡೆಗಳಿಂದ ಗಲ್ಲ ತುರಿಸಿಕೊಳ್ಳುವುದು, ಉರಿವ ಕೊಳ್ಳಿಯಿಂದ ತಲೆಯ ಕೂದಲ ಸಿಕ್ಕ ಬಿಡಿಸಿಕೊಳ್ಳುವುದು, ಹುಲಿಯ ಮೀಸೆ ಹಿಡಿದು ಪ್ರಿತಿಯಿಂದ ಜೋಕಾಲಿಯಾಡುವುದು ಮತ್ತು ಮರೆತು ಶರಣರ ಸಂಗಡ ಹುಡುಗಾಟಿಕೆ ಮಾಡುವುದು; ಸುಣ್ಣದ ಹರಳುಗಳನ್ನು ಹೊಟ್ಟೆಗೆ ಕಟ್ಟಿಕೊಂಡು ನೀರ ಮಡುವನಲ್ಲಿ ಹಾರಿಕೊಂಡ ಪರಿಸ್ಥಿತಿಯಾಗುತ್ತದೆ.

**೬೫೭ ಕೋಣನ ಹೇರಿಂಗೆ ಕುನ್ನಿ ಬಸುಗುತ್ತ ಬಡೆವಂತೆ,**
**ತಾವು ನಂಬರು, ನಂಬುವವರ ನಂಬಲೀಯರು;**
**ತಾವು ಮಾಡರು, ಮಾಡುವವರ ಮಾಡಲೀಯರು !**
**ಮಾಡುವ ಭಕ್ತರ ಕಂಡು ಸೈರಿಸಲಾರದವರ,**
**ಕೂಗಿಡೆ ಕೂಗಿಡೆ, ನರದಲ್ಲಿಕ್ಕುವ**
**ಕೂಡಲ ಸಂಗಮದೇವ !**

ಕೋಣನನ್ನು ಕಂಡು ನಾಯಿಕುನ್ನಿ ಬೊಗಳುವಂತೆ ಜನರು ತಾವು ದೇವರನ್ನು ನಂಬುವುದಿಲ್ಲ. ಮತ್ತು ನಂಬುವವರಿಗೆ ನಂಬಬೇಡಿರೆಂದು ಹೇಳುತ್ತಾರೆ, ಪೂಜೆಯನ್ನು ತಾವು ಮಾಡಲಾರರು; ಮತ್ತು ಪೂಜೆ ಮಾಡುವವರಿಗೆ ಬೇಡವೆಂದು ಹೇಳುತ್ತಾರೆ; ಇದಲ್ಲದೆ ಭಕ್ತರನ್ನು ಕಂಡು ಅಸಹ್ಯಪಡುವವರನ್ನು ಕೂಡಲ ಸಂಗಮದೇವರು ನರಕದಲ್ಲಿಡುತ್ತಾನೆ.

**೧೫೮ ಚೇಳಿಂಗೆ ಬಸುರಾಯಿತ್ತೆ ಕಡೆ; ಬಾಳೆಗೆ ಫಲವಾಯಿತ್ತೆ**
**ಕಡೆ ನೋಡಾ !**
**ರಣರಂಗದಲ್ಲಿ ಕಾದುವ ಓಲೆಯಕಾರಂಗೆ ಓಸರಿಸಿತ್ತೆ**
**ಕಡೆ !**
**ಮಾಡುವ ಭಕ್ತಂಗೆ ಮನ ಹೀನವಾದರೆ ಅದೇ ಕಡೆ,**
**ಕೂಡಲ ಸಂಗಮದೇವಾ !**

ಚೇಳು ಒಂದು ಸಲ ಮರಿಮಾಡಿತೆಂದರೆ ಅದರ ಜೀವನ ಮುಗಿಯಿತು; ಬಾಳೆಯ ಗಿಡವು ಒಂದು ಸಲ ಫಲಕೊಟ್ಟರೆ ಆದರ ಆಯುಷ್ಯ ಮುಗಿಯಿತು; ಯುದ್ಧವಾಡುವವನಿಗೆ ಮರಣವೇ ಕೊನೆಯದು; ಇಲ್ಲವೆ ಸೋಲೇ ಕೊನೆಯದು; ಭಕ್ತನ ಮನಸ್ಸು ಚಂಚಲವಾದರೆ ಅವನಿಗೆ ಮುಕ್ತಿಮಾರ್ಗ ತಪ್ಪಿದಂತೆಯೇ ಸರಿ ! ಕೂಡಲ ಸಂಗಮದೇವಾ !

**೬೫೯ ಹುಲಿಯ ಹಾಲು ಹುಲಿಗಲ್ಲದೆ ಹೊಲದ ಹುಲ್ಲೆಗೆ ಉಣಿಸಬಾರದು;**
**ಕಲಿಯ ಕಾಲತೊಡರು ಛಲದಾಳಿಗಲ್ಲದೆ ಇಕ್ಕಬಾರದು;**
**ಅಳಿಮನದಾಸೆಯುವರ ಮೂಗ ಹಲುದೋರಕೊಯ್ವ**
**ಕೂಡಲ ಸಂಗಮದೇವ.**

ಹುಲಿಯ ಹಾಲನ್ನು ಹುಲಿಯ ಮರಿಯು ಕುಡಿಯ ಬೇಕಲ್ಲದೆ ಹೊಲದಲ್ಲಿರುವ ಚಿಗರಿಯುಮರಿಗೆ ಉಣಿಸಬಾರದು; ವೀರನು ವೀರನೊಂದಿಗೆ ಕಾದಾಡಬೇಕು; ಚಂಚಲ ಮನದವರು ಭಕ್ತಿಯನ್ನು ಮಾಡಿದರೆ ಅವರ ಹಲ್ಲು ಮುರಿಯುತ್ತಾನೆ ಕೂಡಲ ಸಂಗಮ ದೇವರು.

**೬೬೦ "ಅರ್ಥಪ್ರಾಣಾಭಿಮಾನ ನಿಮ್ಮದೆ"ಂಬಿರಿ:**
**ಒತ್ತಿ ನೋಡಿದರೆ ಮುಟ್ಟಲೀಯಿರಿ;**
**ಮುಟ್ಟೆ ಬಂದಲ್ಲಿ ಕಠಾರಿಯ ಕಾಳೆಗವ ನಿವಾಡಿಸುವಿರಲ್ಲದೆ,**
**ಲಿಂಗ—ಜಂಗಮವಂತನಾಗಬಾರದು !**
**ಕೂಡಲ ಸಂಗಮದೇವಾ, ವೇಷಡಂಭಕರಿಗೆ ಭಕ್ತಿಯಂತಪ್ಪುದಯ್ಯಾ?**

ತನು ಮನ ಧನವು ದೇವರಿಗೆ ಸಮರ್ಪಿತವಾಗಿವೆಯೆಂದು ಹೇಳುತ್ತೀರಿ; ಆದರೆ ದೇವರು ಬಂದು ಕೇಳಿದರೆ ಹತ್ತಿರ ಬರಗೊಡುವುದಿಲ್ಲ! ಕಸೆದುಕೊಳ್ಳಲು ಬಂದರೆ ಕಠಾರಿ-ಚೂರಿಗಳನ್ನು ಎಸೆಯುವಿರಿ; ವೇಷದ ಮೋಸಗಾರರಿಗೆ ಏನು ಮಾಡಬೇಕು; ಕೂಡಲ ಸಂಗಮದೇವಾ?

೬೬೧ ಅಲಗಲಗು ಮೋಹಿಸಿದಲ್ಲದೆ ಕಲಿತನವ ಕಾಣಬಾರದು
ನುಡಿದ ನುಡಿ ಜಾರಿದರೆ ಮನಕ್ಕೆ ಮನ ನಾಚಬೇಕು:
ಶಬ್ದ ಘಟ್ಟಯುತನದಲ್ಲಿ ಎಂತಪ್ಪುದಯ್ಯಾ ಭಕ್ತಿ ?
ಪಾಪಿಯು ಕೂಸನೆತ್ತಿದಂತೆ,
ಕೂಡಲ ಸಂಗಮ ದೇವರ ಭಕ್ತಿ
ಅಳಿಮನದವರಿಗೆ ಅಳವಡದಯ್ಯಾ?

ಎರಡು ಖಡ್ಗಗಳು ಮೋಹಗೊಂಡು ಮಸೆಯದೆ ಇದ್ದ ವೀರತ್ವವು ಕಲಿತನವೇ ಅಲ್ಲ; ಆಡಿದ ಮಾತು ಹುಸಿಹೋದರೆ ಮನಸ್ಸು ನಾಚಬೇಕು; ಕೇವಲ ಶಬ್ದ ಜಾಲದಲ್ಲಿ ಭಕ್ತಿಯನ್ನು ಮಾಡುವುದು ಹೇಗೆ? ಚಂಚಲಬುದ್ಧಿಯವರಿಗೆ ಕೂಡಲ ಸಂಗಮ ದೇವರ ಭಕ್ತಿ ಸಿಗಲಾರದು.

೬೬೨ ಹರಬೀಜವಾದರೆ ಹಂದೆ ತಾನಪ್ಪನೆ ?
ಒರೆಗಟ್ಟೆ ಇರಿಯದವರ ಲೋಕ ಮೆಚ್ಚುವುದೆ ?
ಉಟ್ಟ ಚಲ್ಲಣ ಕೈಯಪಟ್ಟೆವಿಡಿದು,
ಗರುಡಿಯ ಕಟ್ಟೆ ಶ್ರವವ ಮಾಡುವಂತೆ
ತನ್ನ ತಪ್ಪಿಸಿಕೊಂಡರೆ, ಶಿವ ಮೆಚ್ಚುವನೆ ?
ಅರಿಯದವರಿಗೆ ಒಳ್ಳೆಯ ಹೆಡೆಯನೆತ್ತಿಯಾಡುವಂತೆ
ಬೊಳ್ಳೆಗನ ಭಕ್ತಿ, ಕೂಡಲ ಸಂಗಮದೇವಾ !

ಜೀವಾತ್ಮನು ಶಿವಾಂಶವೆಂದರೆ ಪಾಪಿಯು ಹಂದೆಯಾಗದೆ ಇರನು; ಕಲಿತನದಿಂದ ಯುದ್ಧ ಮಾಡದಿದ್ದರೆ ಜಗತ್ತು ಒಡಂಬಡುವುದಿಲ್ಲ; ಉಟ್ಟ ಚಣ್ಣವನ್ನು ಬಿಚ್ಚಿ ಶರೀರ ಸಾಧನೆ ಮಾಡಿದರೆ ಬರುವ ಸಾವೇನಾದರೂ ತಪ್ಪುವುದೆ? ಮೋಸದ ಭಕ್ತಿ ಕೂಡಲ ಸಂಗಮದೇವರಿಗೆ ಒಪ್ಪಿಗೆ ಯಾಗುವುದಿಲ್ಲ !

೬೬೩ ನೊನೆತಪ್ಪಿದ ಬಳಿಕ ಅಲಗೇನ ಮಾಡುವುದು ?
ವಿಷ ತಪ್ಪಿದ ಬಳಿಕ ಹಾವೇನ ಮಾಡುವುದು ?

**ಭಾಷೆ ತಪ್ಪಿದ ಬಳಿಕ ಪ್ರಾಣದಾಸೆಯುನು ಹಾರಿದರೆ**
**ಮೀಸಲ ಸೊಣಗ ಮುಟ್ಟಿದಂತೆ, ಕೂಡಲ ಸಂಗಮ**
**ದೇವಾ !**

ಚೂರಿಯ ಹರಿತ ಕಳೆದ ಮೇಲೆ ಅದರಿಂದ ಹೆದರಿಕೆಯಿಲ್ಲ; ವಿಷದ ಹಲ್ಲು ಮುರಿದ ಬಳಿಕ ಹಾವಿನ ಹೆದರಿಕೆಯಿಲ್ಲ; ನುಡಿ ತಪ್ಪಿದ ಮೇಲೆ ಜೀವನ ಆಸೆ ಕಡಿಮೆಯಾದರೆ ನಾಯಿ ಸಹಿತ ಆ ಹೆಣವನ್ನು ಮುಟ್ಟುವದಿಲ್ಲ ಕೂಡಲ ಸಂಗಮ ದೇವಾ!

**೭೬೪ ವೀರ ವ್ರತಿ ಭಕ್ತನೆಂದು ಹೊಗಳಿಕೊಂಬಿರಿ, ಕೇಳಿರಯ್ಯಾ:**
**ವೀರನಾದರೆ ವೈರಿಗಳು ಮೆಚ್ಚಬೇಕು,**
**ವ್ರತಿಯಾದರೆ ಅಂಗನೆಯರು ಮೆಚ್ಚಬೇಕು,**
**ಭಕ್ತನಾದರೆ ಜಂಗಮ ಮೆಚ್ಚಬೇಕು.**
**ನುಡಿಯೊಳಗೆ ತನ್ನ ಬಗೆಯಿರೆ**
**ಬೇಡಿದ ಪದವಿಯ ನೀವ ಕೂಡಲ ಸಂಗಮದೇವ.**

ಶೂರನೆಂದು, ಪತಿವ್ರತೆಯೆಂದು, ಭಕ್ತನೆಂದು ಹೇಳಿಕೊಳ್ಳುವಿರಿ; ನೀನು ವೀರನಾಗಿದ್ದರೆ ವೈರಿಗಳೂ ಮೆಚ್ಚಬೇಕು ನಿನ್ನ ಕಲಿತನಕ್ಕೆ; ನೀನು ಪತಿವ್ರತೆಯಾಗಿದ್ದರಿ ಮಿಕ್ಕಸ್ತ್ರೀಯರು ನಿನ್ನನ್ನು ಆದರಿಸಬೇಕು, ನೀನು ಭಕ್ತನಾಗಿದ್ದರೆ ಶರಣರು ನಿನ್ನನ್ನು ಮನ್ನಿಸಬೇಕು; ಮಾತಿನಲ್ಲಿ ಪರಮಾತ್ಮನ ಬೆಳಕು ತುಂಬಿದರೆ ಕೂಡಲ ಸಂಗಮದೇವರು ನೀವು ಬೇಡಿದ್ದನ್ನು ಕೊಡುತ್ತಾನೆ.

**೭೬೫ ಕಲಿತನ ತನಗುಳ್ಳರೆಸೂಜಿ—ಬಾಳು ಮೊದಲಾಗಿ**
**ಕಾದಲೇಬೇಕು.**
**ಶರಣಪಥ ತನಗುಳ್ಳರೆ ಶಿವಭಕ್ತರ ಮನೆಯ ಶಿವರಸವ**
**ಪಂಚಾಮೃತವ ಮಾಡಿಕೊಳ್ಳಬೇಕು.**
**ಭ್ರಾಂತುವಿಡಿದು ಲಿಂಗಕೋಗರವನರಸುವ**
**ಪಾತಕರ ಮೆಚ್ಚ ಕೂಡಲ ಸಂಗಮದೇವಾ.**

ವೀರನಾದವನು ಸರ್ವರೀತಿಯಿಂದ ಬಾಳನ್ನು ಗೆಲ್ಲಬೇಕು; ಭಕ್ತನು ನಿಜವಾದ ಭಕ್ತನಿದ್ದ ಪಕ್ಷದಲ್ಲಿ ಶಿವಭಕ್ತರ ಮನೆಯ ಅನ್ನವನ್ನು ಪಂಚಾಮೃತವೆಂದು ಸೇವನೆಮಾಡಬೇಕು; ಹುಚ್ಚರಂತೆ ಪ್ರಸಾದವನ್ನು ಹುಡುಕುವ ಪಾಪಿಗಳಿಗೆ ಕೂಡಲ ಸಂಗಮ ದೇವರು ಮೆಚ್ಚುವದಿಲ್ಲ!

**೬೬೬ ಕಟ್ಟಿ ಬಿಡುವನೆ ಶರಣನು? ಬಿಟ್ಟು ಹಿಡಿವನೆ ಶರಣನು ?**
**ನಡೆದು ತಪ್ಪುವನೆ ಶರಣನು? ನುಡಿದು ಹುಸಿವನೆ ಶರಣನು ?**
**ಸಹಜ ಸಜ್ಜನಿಕೆ ತಪ್ಪಿದರೆ,**
**ಕೂಡಲ ಸಂಗಯ್ಯ ಮೂಗ ಹಲುದೊರಕೊಯ್ವ !**

ಲಿಂಗವನ್ನು ಧಾರಣಮಾಡಿ, ಶಿವತತ್ತ್ವ ಪಥವನ್ನು ಆಚರಿಸಿಬಿಟ್ಟವನು ಶರಣನಾಗುವುದಿಲ್ಲ; ನಡೆನುಡಿಗಳಲ್ಲಿ ತಾಳಮೇಳವಿಲ್ಲದವನು ಶರಣನಾಗುವುದಿಲ್ಲ; ಮನುಷ್ಯನಲ್ಲಿರಬೇಕಾದು ಸಾಧುತನವಿಲ್ಲದಿದ್ದರೆ ಕೂಡಲ ಸಂಗಮ ದೇವರು ಮೂಗುಕೊಯ್ಯುತ್ತಾನೆ.

**೬೬೭ ಜಂಬೂದ್ವೀಪ ನವಖಂಡ ಪೃಥ್ವಿಯೊಳಗೆ ಕೇಳಿರಯ್ಯಾ**
**ಎರಡಾಳಿನ ಭಾಷೆಯ—**
**'ಕೊಲುವೆನೆ'ಂಬ ಭಾಷೆ ದೇವನದು:**
**'ಗೆಲುವೆನೆಂ'ಬ ಭಾಷೆ ಭಕ್ತನದು!**
**ಸತ್ಯವೆಂಬ ಕೂರಲಗನೆ ಕಳೆದುಕೊಂಡು**
**ಸದ್ಭಕ್ತರು ಗೆದ್ದರು, ಕಾಣಾ, ಕೂಡಲ ಸಂಗಮದೇವಾ!**

ಜಂಬೂದ್ವೀಪವೆಂಬುದು, ಒಂಭತ್ತು ಖಂಡಗಳು ಪೃಥ್ವಿಯಲ್ಲಿಯೇ ಇವೆ; ಹಾಗೆ ಸಾವು ಗೆಲುವುಗಳ ದೇವರು ಮತ್ತು ಭಕ್ತನ ಸಾಧನಗಳು; ಇವೆರಡೂ ಪ್ರೇಮ ಸಾಧನಗಳು; ಸತ್ಯವಾದ ಪ್ರೇಮಬಲದಿಂದ ಭಕ್ತಶ್ರೇಷ್ಠರು ಸಂಸಾರ ಸಾಗರವನ್ನು ಗೆದ್ದರು; ಕೂಡಲ ಸಂಗಮ ದೇವಾ.

**೬೬೮ ಹುಟ್ಟುವಲ್ಲಿ ಭವಿ, ಮರಳಿ ಭಕ್ತನ ಮಾಡಿ, ಪೂರ್ವಾಶ್ರಮವ ಕಳೆದು**
**ಹೊಂದುವಲ್ಲಿ ಭವಿಯಾಗಿ ಹೋಹರೆ ಮುಟ್ಟಲಾಗದು.**
**ಅವನ ಮುಟ್ಟಿದವ ಮುನ್ನವೆ ವ್ರತಗೇಡಿ,**
**ಅವನ ಶ್ರಾದ್ಧಕಾಲವೆ ಶ್ವಾನಮಾಂಸ,**
**ಕ್ರಿಯಾಕಾರವೆ ಕ್ರಿಮಿಗಳು, ತದ್ದಿನವೆ ಮದ್ಯಮಾಂಸ !**
**ಇದು ಕಾರಣ, ಕೂಡಲ ಸಂಗಮದೇವಾ,**
**ಅವನ ಮನೆಯ ವಿಚಾರಿಸದೆ ಹೊಕ್ಕವಂಗೆ ನಾಯಕನರಕ!**

ಹುಟ್ಟಿದಾಗ ಭವಾಂತರಹೊಂದಿ ಬಂದುದಕ್ಕಾಗಿ ಭವಿಯಾಗಿದ್ದೆ; ಇಲ್ಲಿ ಭಕ್ತಿಯ ಬೆಳಕಿನಿಂದ ಪೂರ್ವಜನ್ಮದ ಕರ್ಮಗಳನ್ನು ತೊಳೆದುಕೊಂಡು ಪವಿತ್ರಾತ್ಮನಾದ ಮೇಲೆ ಮತ್ತೆ ಸಾಯುವಾಗ ನಾಸ್ತಿಕವಾದಿಯಾದರೆ ದೇವರು ನನ್ನನ್ನು ಮುಟ್ಟುವುದಿಲ್ಲ; ಶ್ರಾದ್ಧಕ್ಕಾಗಿ ಮಾಡಿದುದೆಲ್ಲ ನಾಯಿಯ ಮಾಂಸದ ಅಡಿಗೆ; ಉತ್ತರ ಕ್ರಿಯೆಮಾಡುವುದೆಂದರೆ ಅದೊಂದು ಕ್ರಿಮಿಗಳ ಕೂಟ; ಅಂಥ ಕುಕರ್ಮಿಯ ಮನೆಯನ್ನು. ಸಂಪೂರ್ಣವಾಗಿ ತಿಳಿಯದೆ ಊಟಮಾಡಿ ಬಂದರೆ ಅವನಿಗೆ ಘೋರನರಕ ಪ್ರಾಪ್ತವಾಗುತ್ತದೆ.

**೬೬೯ ಒಡನೆ ಹುಟ್ಟಿದುದಲ್ಲ, ಒಡನೆ ಬೆಳೆದುದಲ್ಲ:**
**ಎಡೆಯಲಾದ ಒಂದು ಉಡುಗೆಯನುಟ್ಟು,**
**ಸಡಿಲಿದರೆ ಲಜ್ಜೆ-ನಾಚಿಕೆಯಾಯಿತ್ತೆಂಬ**
**ನುಡಿ ದಿಟವಾಯಿತ್ತು ಲೌಕಿಕದಲ್ಲಿ !**
**ಹಡೆದ ಗುರು ಕರುಣೆಯೊಡನೆ ಹುಟ್ಟಿದ ನೇಮವನು ಬಿಡದಿರೆಲವೋ:**
**ಬಿಟ್ಟರೆ ಕೆಟ್ಟ, ಕೂಡಲ ಸಂಗಮ ದೇವನಡಸಿ ಕೆಡಹುವ**
**ನಾಯಕ ನರಕದಲ್ಲಿ !**

ಹುಟ್ಟುತ್ತಲೆ ಬತ್ತಲೆಯಾಗಿ ಬೆಳೆದು ಮಧ್ಯಂತರದಲ್ಲಿ ಬಟ್ಟೆಯುಟ್ಟುಕೊಂಡು ನಂತರ ಬಟ್ಟೆ ಕಳೆದು ಬತ್ತಲೆಯಾಗಿ ಹರಕರುಣೆ ಪಡೆದರೆ ಲಜ್ಜೆ-

ನಾಚಿಕೆಯೆಂದು ಜನರು ಕೂಗಿ ಕೊಳ್ಳುತ್ತಾರೆ; ಬಟ್ಟೆಯನ್ನು ಬಿಟ್ಟರೇನಾಗಬೇಕಾಗಿದೆ ? ಆದರೆ ಗುರೂಪದೇಶವನ್ನುಮರೆಯದೇ ಇರು; ಬಿಟ್ಟರೆ ಕೂಡಲ ಸಂಗಮ ದೇವರು ಬೆನ್ನಟ್ಟಬಂದು ನರಕದಲ್ಲಿ ದೂಡುವನು.

**೬೭೦ ಛಲಬೇಕು ಶರಣಂಗೆ 'ಪರಧನವನೊಲ್ಲೆಂಬ'**
**ಛಲಬೇಕು ಶರಣಂಗೆ 'ಪರಸತಿಯನೊಲ್ಲೆನೆಂ'ಬ,**
**ಛಲಬೇಕು ಶರಣಂಗೆ 'ಲಿಂಗಜಂಗಮ ಒಂದೆ' ಎಂಬ**
**ಛಲಬೇಕು ಶರಣಂಗೆ 'ಪ್ರಸಾದ ದಿಟವೆ'ಂಬ :**
**ಛಲವಿಲ್ಲದವರ ಮೆಚ್ಚ ಕೂಡಲ ಸಂಗಮದೇವ.**

ಶರಣರಿಗೆ ಎಂಥ ಅಭಿಮಾನ ವಿರಬೇಕೆಂದರೆ— ಹೆರವರ ಸಂಪತ್ತು ಮತ್ತು ಪರಸತಿಯರು ಮತ್ತು ಅನ್ಯ ದೇವರ ಭಕ್ತಿಯು ತನಗೆ ಇವಾವವೂ ಬೇಡ ಎನ್ನಬೇಕು; ಲಿಂಗ ಜಂಗಮ ಒಂದೇ ಎಂದು ಅನ್ನುವ ಸಾಧನ ಹಟ ಮತ್ತು ಪ್ರಸಾದವು ಸತ್ಯವಾದದ್ದೆಂದು ನುಡಿಯುವ ಅಭಿಮಾನ ಶರಣರಲ್ಲಿರಬೇಕು; ಸದಭಿಮಾನವಿಲ್ಲದ ಶರಣರಿಗೆ ಕೂಡಲ ಸಂಗಮದೇವರು ಒಲಿಯುವದಿಲ್ಲ.

**೬೭೧ ಅರ್ಥ ಪ್ರಾಣಾಭಿಮಾನವ ಕೊಟ್ಟೆನೆಂಬವರಲ್ಲದೆ**
**ಕೊಟ್ಟ ಭಕ್ತರನಾರನೂ ಕಂಡುದಿಲ್ಲ.**
**ದಾಸ ತನ್ನ ವಸ್ತ್ರವ ಕೊಟ್ಟನಲ್ಲದೆ ತನ್ನ ಕೊಟ್ಟುದಿಲ್ಲ;**
**ಬಲ್ಲಾಳ ತನ್ನ ವಧುವನ್ನು ಕೊಟ್ಟನಲ್ಲದೆ ತನ್ನ ಕೊಟ್ಟುದಿಲ್ಲ;**
**ಸಿರಿಯಾಳ ತನ್ನ ಮಗನ ಕೊಟ್ಟನಲ್ಲದೆ ತನ್ನ ಕೊಟ್ಟುದಿಲ್ಲ!**
**ಇವೆಲ್ಲ ಹೊರಗಣ ಮಾತು:**
**ಕೂಡಲ ಸಂಗಮ ದೇವರಲ್ಲಿ ತನ್ನ ಕೊಟ್ಟ ಸಿಂಧು ಮರಾಳ !**

ತನು ಮನ ಧನಗಳನ್ನು ಫಲಾಪೇಕ್ಷೆಯಿಲ್ಲದೆ ಪರಮಾತ್ಮನಿಗೆ ಅರ್ಪಿಸಿದ್ದೇವೆಂದು ಗಂಭೀರವಾಗಿ ನುಡಿಯುತ್ತಾರೆ; ಕೊಟ್ಟವರೊಬ್ಬರೂ ಇಲ್ಲ ! ದಾಸನು ತನ್ನಮೈಮೇಲಿನ ಬಟ್ಟೆಕೊಟ್ಟನು; ಬಲ್ಲಾಳನು ತನ್ನಪ್ರಿಯ ಮಡದಿಯನ್ನು ಅರ್ಪಿಸಿದನು; ಸಿರಿಯಾಳ ತನ್ನಮಗನನ್ನು ಕೊಟ್ಟನು; ಆದರೆ

ತಮ್ಮ ಆತ್ಮವನ್ನು ಒಬ್ಬರೂ ಕೊಡಲಿಲ್ಲ; ತನ್ನನ್ನೇ ತಾನು ಮರೆತು ಸಮರ್ಪಿಸಿದವನು ಸಿಂಧುಮರಾಳನು. ಅವನೇ ನಿಜ ಭಕ್ತನು.

೬೭೨ ಮುನ್ನಿನ ಕಲಿ ವೀರ ಧೀರರು ಕಾದಿದ ರಣಗಳನು
ಪರಿಪರಿಯಲಿ ಬಣ್ಣಿಸಿ ಹೇಳಬಹುದಲ್ಲದೆ
ಆ ದಳವಿದಿರಾದಲ್ಲಿ ಬಿರಿದುಪಚಾರಿಸಿ ಕಾದಿ ತೋರಲು ಬಾರದು.

ಮುನ್ನಿನ ಪುರುಷವ್ರತಿಯರು ಓಲಿಸಿದ ಆಯತವ
ಪರಿಪರಿಯಲು ಬಣ್ಣಿಸಲು ಬಹುದಲ್ಲದೆ
ಪುರುಷ ನಿರ್ವಾಣಕ್ಕುರಿವಗ್ನಿಯ
ಬಂದು ಹೊಕ್ಕು ತೋರಲು ಬಾರದು.
ಮುನ್ನಿನ ಪುರಾತರೆಲ್ಲರೂ ತನುಮನಧನವನಿತ್ತು
ಮಾಡಿ ನೀಡಿ ಲಿಂಗವ ಕೂಡಿದ ಪರಿಗಳನು
ಅನುಭಾವದಲರ್ಥಯಿಸಿ ಹೇಳಬಹುದಲ್ಲದೆ
ಮಾಡಿ ನೀಡಿ ತೋರಲು ಬಾರದು.
ಇಂತೀ ಅರಿಬಿರುದಿನ ಬಂಟರು, ಪುರುಷವ್ರತಿಯರು, ಪುರಾತನರು
ಬರಿಯ ಮಾತನಾಡಿ ಹೊರಗೆ ಮೆರೆವರಲ್ಲಾ;
ಪರೀಕ್ಷೆಯುಂಟಾಗಿಯಿದ್ದರೆ, ಒಣಗಣವರ ಹೆಸರ ಹಿಡಿದು,
ಪರಿಪರಿಯಲು ಹೊಗಳುವರು.
ಶರೀರ-ಅರ್ಥ-ಪ್ರಾಣ ಗುರು-ಲಿಂಗ ಜಂಗಮಕ್ಕೆ ಪರೀಕ್ಷೆಯುಂಟಾಗಿಯೆ
'ಆತ ಮಹೇಶ್ವರ ಪುರಾತ-ವಳಿ' ಎಂಬ
ಪರಮಬಂಧುಗಳಾತನ ನೆನೆನೆನೆದು ಬದುಕುವರು
ಇಂತೀ ಅನುಭಾವದ ಓದಿದ ಅಕ್ಷರಾಭ್ಯಾಸವ
ಸಾಧಿಸಿ ತರ್ಕಿಸಿ ನಿಂದಿಸಲಾಗದು.
ಕೂಡಲ ಸಂಗನ ಶರಣರಿಗಲ್ಲದೆ ಅನುಭಾವವಿಲ್ಲ !

ಯುದ್ಧದ ವರ್ಣನೆಯನ್ನು ಮಾಡಬಹುದಲ್ಲದೆ ಯುದ್ಧವನ್ನೂ ಮಾಡಿ ತೋರಿಸಲು ಬರುವುದಿಲ್ಲ; ಪತಿವ್ರತೆಯ ಜೀವನ ಚರಿತ್ರೆಯನ್ನು ಹೇಳಬಹುದಲ್ಲದೆ ವ್ರತಾಚರಣೆ ಮಾಡಿ ತೋರಿಸಲು ಸಾಧ್ಯವಿಲ್ಲ; ಶರಣರ ಪುರಾತನರ ಅನುಭಾವ-ಸಾಕ್ಷಾತ್ಕಾರಗಳು ಎಂಥವೆಂಬುದನ್ನು ಬರೆದು ಹೇಳ ಬಹುದು; ಆದರೆ ಮಾಡಿ ತೋರಿಸಲು ಅಶಕ್ಯ; ಕಾರಣ ಭಕ್ತಿಯ ಅನುಭಾವ ಮತ್ತು ಲಿಂಗ ದರ್ಶನಗಳನ್ನು ತೋರಿಸಲು ಬರುವುದಿಲ್ಲ; ಅನುಭವದಿಂದ ಅಂತರಂಗದಲ್ಲಿ ತಿಳಿಯಬೇಕು; ಇದು ಸಂಗನ ಶರಣರನ್ನುಳಿದು ಮಿಕ್ಕ ವರಿಗೆ ಅಸಾಧ್ಯ!

**೬೭೩ ಕಬ್ಬಿನ ಹಣಿದವನಾಡುವರಲ್ಲದೆ ಕಾಯದ ಹಣಿದವ ನಾಡುವರೆ?**
**ಮೇಲೊಡ್ಡವಾಯಿತ್ತೆಂದು, ಕೂಡಲ ಸಂಗಮದೇವಾ,**
**ನೀನಿಕ್ಕಿದ ಜೂಜಿಂಗೆ ಹೋಯಿದು ಗೆದ್ದ ಸಿರಿಯಾಳ !**

ಸಿಹಿ ಕಬ್ಬಿನಗಾಣವಾಡುತ್ತಾರಲ್ಲದೆ ನರ ದೇಹಗಳನ್ನು ಗಾಣವಾಡು ವುದಿಲ್ಲ; ಒಡ್ಡಾರಾಧನೆಯಾಗಲೆಂದು ನೀನು ಹಾಕಿದ ಜಿದ್ದಿಗೆ ತನ್ನ ಮಗ ನನ್ನು ನಿನಗರ್ಪಿಸಿ ನರಪಾಕ ಮಾಡಿ ಗೆದ್ದನು ಸಿರಿಯಾಳನು; ಕೂಡಲ ಸಂಗಮದೇವ !

**೬೭೪ ಒಂದು ಮಾತೆನ್ನ ಬಹುದೆ ಶಬ್ದ ಸಾರಾಯವನು?**
**ಒಂದು ಮಾತೆನ್ನ ಬಹುದೆ ಶರಣ ಸಂಬಂಧವನು?**
**ಕೂಡಲ ಸಂಗಮದೇವಾ**
**ನಂಬಿಗೆ 'ಓ' ಎಂದರನೊಂದು ಮಾತೆನ್ನ ಬಹುದೆ?**

ಶಬ್ದಗಳ ಸಮೂಹಕ್ಕೆ ಒಂದೆ ಮಾತೆನ್ನಲು ಬರುವುದಿಲ್ಲ; ಅದು 'ಧ್ವನಿ' ಶರಣರ ಬಾಂಧವ್ಯವು ಒಂದೇ ಮಾತೆನ್ನಲು ಬರುವುದಿಲ್ಲ; ಅದು 'ಅವಿಚ್ಛಿನ್ನ' ಕೂಡಲ ಸಂಗಮ ದೇವಾ, ನಂಬಿದವರಿಗೆ 'ಓ' ಎಂಬ ಓಂ ಕಾರವು ಒಂದೇ ಶಬ್ದವೆನ್ನಲು ಬಾಯಿಬಾರದು !

೬೭೫ ಅರೆವನಯ್ಯಾ ಸಣ್ಣವಹನ್ನಕ್ಕ, ಬರೆವನಯ್ಯಾ ಬಣ್ಣಗಾಣ್ಬನ್ನಕ್ಕ.

ಅರೆದರೆ ಸಣ್ಣವಾಗಿ ಒರೆದರೆ ಬಣ್ಣವಾದರೆ
ಕೂಡಲ ಸಂಗಮದೇವನೊಲಿದು ಸಲಹುವನು.

ಭಗವಂತನು ಸಣ್ಣಗಾಗುವ ತನಕ ಅರೆಯುತ್ತಾನೆ; ಬಣ್ಣ ಬರುವವರೆಗೆ ತಿಕ್ಕುತ್ತಾನೆ; ಅರೆದಾಗ ಸಣ್ಣ ಹುಡಿಯಾದರೆ ಮತ್ತು ಉಜ್ಜಿದಾಗ ಬಣ್ಣವಾಗಿ ಹೊಳೆದರೆ ಕೂಡಲ ಸಂಗಮದೇವರು ಒಲಿದು ಕಾಪಾಡುತ್ತಾನೆ.

೬೭೬ ಭಕ್ತರೆ ಸಮರ್ಥರು; ಅಸಮರ್ಥರೆನಲುಂಟೆ?
ಚೆನ್ನನೆತ್ತ, ಚೋಳನೆತ್ತ?
ಚೆನ್ನನೊಡನುಂಡ ಶಿವ ಅಹಾ! ಅಯ್ಯಾ!
ಚೆನ್ನ ಚೋಳನ ಮನೆಯ ಕಂಪಣಿಗನಯ್ಯಾ!
ಕೂಡಲ ಸಂಗಮ ದೇವ ಭಕ್ತಲಂಪಟನಯ್ಯಾ!

ಭಕ್ತರು ಎಲ್ಲ ದೃಷ್ಟಿಯಿಂದಲೂ ಸಮರ್ಥರು; ಆದುದರಿಂದ ಚೋಳ ರಾಜನ ಮನೆಯಾಳಾದರೂ ಚೆನ್ನನು ಶ್ರೇಷ್ಠನು. ಚೆನ್ನನೊಡನೆ ಶಿವನು ಊಟ ಮಾಡಿದನು; ಕಾರಣ ಕೂಡಲ ಸಂಗಮ ದೇವರು ಭಕ್ತಪ್ರೇಮಿ.

೬೭೭ ನಿಸ್ಸೀಮ ಗುಗ್ಗಳವನಿಕ್ಕಿದನೊಬ್ಬ ಶರಣ:
'ಉಘೇ, ಚಾಂಗು-ಭಲಾ' ಎಂಬ ಹೊಗೆ ಗಗನವ ತೀವೆ
ಓಹಿಲನ ಮೆರೆದ ಸೌರಾಷ್ಟ್ರವೆಂಬ ಮಂಡಲದಲ್ಲಿ
ಕೂಡಲ ಸಂಗಮದೇವ ಭಕ್ತವತ್ಸಲನಾಗಿ.

ಓರ್ವ ಶರಣನು ಘನ ಗಂಭೀರವಾದ ಗುಗ್ಗಳವನ್ನು ಹಾಕಿದನು; ಉಘೆ ಚಾಂಗುಭಲಾ ಎಂಬ ಧೂಮ್ರಧ್ವನಿ ಗಗನಾಂಗಣದಲ್ಲಿ ತುಂಬಿತು; ಓಹಿಲೇಶ್ವರನು ರಾಜನಾಗಿ ಮೆರೆದ ಸೌರಾಷ್ಟ್ರದಲ್ಲಿ ಕೂಡಲ ಸಂಗಮ ದೇವರು ಭಕ್ತಪ್ರೇಮಿಯಾಗಿ ಬೆಳಗಿದನು.

**೬೭೮ ಲಿಂಗವಶದಿಂದ ಬಂದ ನಡೆಗಳು, ಲಿಂಗವಶದಿಂದ ಬಂದನುಡಿಗಳು:**
**ಲಿಂಗವಂತರು ತಾವು ಅಂಜಲೇಕೆ,**
**ಲಿಂಗವಿರಿಸಿದಂತಿಪ್ಪುದಲ್ಲದೆ—**
**ಕೂಡಲ ಸಂಗಮದೇವ ಭಕ್ತರಭಿಮಾನ ತನ್ನದೆಂಬನಾಗಿ!**

ನಡೆ ನುಡಿಗಳೆಂಬವು ನಮ್ಮಿಂದ ಬಂದವುಗಳಲ್ಲ; ಸ್ವಯಂ ಲಿಂಗವು ನಮ್ಮ ಅಂತರಂಗದಲ್ಲಿದ್ದುಕೊಂಡು ನಡೆಸುತ್ತಾನೆ, ನುಡಿಸುತ್ತಾನೆ; ಲಿಂಗವಿದ್ದವರು ಹೆದರುವ ಕಾರಣವಿಲ್ಲ; ಕೂಡಲ ಸಂಗಮ ದೇವರು ಭಕ್ತರ ಮಾನ ಮರ್ಯಾದೆ ತನ್ನದೆನ್ನುತ್ತಾನೆ; ಆದುದರಿಂದ ಲಿಂಗನು ಇಟ್ಟಹಾಗೆ ನಾವು ಇರಬೇಕು.

**೬೭೯ ಶಿವಭಕ್ತನಾಗಿ ತನ್ನ ಹಿಡಿದಹೆನೆಂದು ಹೋದರೆ**
**ಸುಗ್ಗುಮಾಡುವ, ನುಸಿಯ ಮಾಡುವ,**
**ಮಣ್ಣಮಾಡುವ ಮಸಿಯ ಮಾಡುವ:**
**ಕೂಡಲ ಸಂಗಮದೇವರ ನೆರೆ ನಂಬಿದನಾದರೆ**
**ಕಡೆಗೆ ತನ್ನಂತೆ ಮಾಡುವ.**

ನಾನು ಶಿವಭಕ್ತನಾಗಿರುವೆನೆಂದು ಅಭಿಮಾನ ತಳೆದು ನಾನೇ ಜಗದಲ್ಲಿ ಶ್ರೇಷ್ಠನೆಂದು ಕೊಬ್ಬಿ ನುಡಿದರೆ ಪರಮಾತ್ಮನು ನಮ್ಮನ್ನು ಮಣ್ಣುಪಾಲು ಮಾಡುತ್ತಾನೆ; ಆದುದರಿಂದ ಕೂಡಲ ಸಂಗಮ ದೇವರನ್ನು ದೃಢವಾಗಿ ನಂಬಿದರೆ ತನ್ನ ಪಾದಗಳಲ್ಲಿ ಪರಮ ಪದ ಕೊಡುವನು.

**೬೮೦ ಅಂಜಿದರಾಗದು, ಅಳುಕಿದರಾಗದು, ವಜ್ರಪಂಜರ ದೊಳಗಿದ್ದರಾಗದು:**
**ತಪ್ಪದುವೋ ಲಲಾಟಲಿಖಿತ!**
**ಕಕ್ಕುಲತೆಗೆ ಬಂದರೆ ಆಗದು, ನೋಡಾ!**
**ಧೃತಿಗೆಟ್ಟು ಮನಧಾತುಗೆಟ್ಟರೆ ಅಪ್ಪುದು ತಪ್ಪುದು,**
**ಕೂಡಲ ಸಂಗಮದೇವಾ.**

ಹಣೆಯಲ್ಲಿ ಬರೆದುದನ್ನು ತಪ್ಪಿಸಿಕೊಳ್ಳಲು ಯಾರಿಂದಲೂ ಸಾಧ್ಯವಿಲ್ಲ; ಧೈರ್ಯಗೆಟ್ಟರೆ ವಿಧಿ ಬಿಡುವದಿಲ್ಲ; ಕಠೋರವಾದ ವಜ್ರದ ಪಂಜರದಲ್ಲಿ ಕುಳಿತರೂ ಸಾವು ಬಿಡದು; ದೇಹದ ಮೇಲಿನ ಮೋಹ ವ್ಯರ್ಥವಾದುದು; ಮೂಢನಾಗಿ ಮನಸ್ಸನ್ನು ಚಂಚಲ ಮಾಡಿಕೊಂಡರೆ ಬರುವ ಕಷ್ಟನಷ್ಟಗಳು ಹಿಂದುರಿಗಿ ಹೋಗುವದಿಲ್ಲ; ಕೂಡಲ ಸಂಗಮದೇವಾ!

**೬೮೧ ಹುಟ್ಟಿದ ಬಳಿಕ ಕೊಟ್ಟ ಭೋಗಂಗಳ ತಪ್ಪಿಸಿಹೆನೆಂದರೆ**
**ತಪ್ಪದು ನೋಡಯ್ಯಾ.**
**'ಎನಗಿನ್ನೆಂತೋ, ಎನಗಿನ್ನೆಂತೋ, ಎನಗಿನ್ನೆಂತೋ' ಎಂದೆನಬೇಡ.**
**"ನಾ ಭೋಕ್ತ್ರಾ ಕ್ರಿಯತೇ ಕರ್ಮ" ಎಂಬ ಶೃತಿ ತಪ್ಪದು;**
**ಕೂಡಲ ಸಂಗಮದೇವಾ.**

ನರಜನ್ಮದಲ್ಲಿ ಹುಟ್ಟಿಬಂದ ಬಳಿಕ ನೀನು ಕೊಟ್ಟ ಭೋಗಗಳನ್ನು ತಪ್ಪಿಸಿಕೊಳ್ಳುವದು ಆಗದು; ಭೋಗಿಸಲೇ ಬೇಕು ಎಲ್ಲ ಕರ್ಮಗಳನ್ನು; ಭೋಗಿಗಳಲ್ಲದವರು ಕರ್ಮಗಳನ್ನೇ ಮಾಡುವುದಿಲ್ಲ ಎಂಬ ಮಾತು ಸತ್ಯ; ಕೂಡಲ ಸಂಗಮದೇವಾ.

**೬೮೨ ಆಯುಷ್ಯ ತೀರಿದಲ್ಲದೆ ಮರಣವಿಲ್ಲ:**
**ಭಾಷೆ ತಪ್ಪಿದಲ್ಲದೆ ದಾರಿದ್ರ್ಯವಿಲ್ಲ.**
**ಅಂಜಲದೇಕೊ ಲೋಕ ನಿಗುರ್ಬಣೆಗೆ,**
**ಅಂಜಲದೇಕೊ, ಕೂಡಲ ಸಂಗಮದೇವಾ, ನಿಮ್ಮಾಳಾಗಿ?**

ಆಯುಷ್ಯ ತೀರಿದ ಮೇಲೆ ಮರಣ ಬರುತ್ತದೆ; ಕೊಟ್ಟಮಾತಿಗೆ ತಪ್ಪಿ ನಡೆದರೆ ಬಡತನ ಬರುತ್ತದೆ, ಜನರ ಮಾತಿಗೆ ಅವರ ದ್ವೇಷಕ್ಕೆ ನಾನು ಹೆದರುವದಿಲ್ಲ; ನಿಮ್ಮ ಪಾದಸೇವಕನಾಗಿಯೂ ನಾನು ಅಂಜಬೇಕೇಕೆ? ಕೂಡಲ ಸಂಗಮ ದೇವಾ.

**೬೮೩ ಮನಕ್ಕೆ ಮನವೊಂದಾಗಿ, ಧನಕ್ಕೆ ಧನವೊಂದಾಗಿ**
**ನಚ್ಚಿದ ಮಚ್ಚು ಅಚ್ಚೊತ್ತಿದಂತಿರಬೇಕು.**

ಪ್ರಾಣಕ್ಕೆ ಪ್ರಾಣವೊಂದಾಗಿ, ಶುಭಸೂಚನೆಯೊಂದಾಗಿರದ
ನಚ್ಚು ಮಚ್ಚು ಪಾರನೈದುವುದೆ?
ಸಿರಿ ಹರಿದರೇನು, ಕೆರಳು ಕುಪ್ಪಳಿಸಿದರೇನು?
ಚಿತ್ತ ಮನ ಬುದ್ಧಿಯೊಂದಾದ ಮಚ್ಚು ಬಿಚ್ಚಿ ಬೇರಾಗದಿದ್ದರೆ
ಮಚ್ಚುವ ನಮ್ಮ ಕೂಡಲ ಸಂಗಮದೇವಾ.

ಮನಸ್ಸು ಮನಸ್ಸುಗಳೆರಡೂ ಕೂಡಬೇಕು, ಸಂಪತ್ತು ಮತ್ತು ಆತ್ಮಸಂಯಮ್ಮಧನವೂ ಬೆರೆಯಬೇಕು; ಆಗ ಅಲ್ಲಿ ಉಂಟಾದ ಪ್ರೀತಿ ಅಚ್ಚುಪಡೆಯಲ್ಲಿ ಒತ್ತಿ ತೆಗೆದ ಗೊಂಬೆಯಂತಿರಬೇಕು; ಪ್ರಾಣವು ಮಹಾ ಪ್ರಾಣನಲ್ಲಿ ಒಂದಾಗಿಯು ಅಲ್ಲಿ ಶುಭ ಸೂಚನೆಗಳು ಇಲ್ಲದಿದ್ದರೆ ಆ ಪ್ರೀತಿ ಮುಕ್ತಿಗೆ ಮುಕ್ಕಾಗುತ್ತದೆ; ಕಾರಣ ಮನಸ್ಸು-ಬುದ್ಧಿಗಳು ಚಿದ್ಘನನಲ್ಲಿ ಕೂಡಿಕೊಂಡು ತಾದಾತ್ಮ್ಯ ಹೊಂದಿದರೆ ಕೂಡಲ ಸಂಗಮ ದೇವರು ಒಲಿಯುವನು.

## (೧೭) ಮಾಹೇಶ್ವರನ ಮಾಹೇಶ್ವರ ಸ್ಥಳ

೭೮೪ ಎನಿಸೆನಿಸೆಂದೊಡೆ ನಾ ಧೃತಿಗೆಡೆನಯ್ಯಾ;
ಎಲುದೋರಿದರೆ ಸರ ಹರಿದರೆ ಕುರುಳು ಕುಪ್ಪಳಿಸಿದರೆ
ನಾ ಧೃತಿಗೆಡೆನಯ್ಯಾ.
ಸಿರ ಹರಿದು ಅಟ್ಟೆ ನೆಲಕ್ಕೆ ಬಿದ್ದರೆ
ನಾಲಗೆ 'ಕೂಡಲ ಸಂಗಾ, ಶರಣೆನ್ನುತ್ತಿದ್ದೀತಯ್ಯಾ!

ದುಃಖದ ಮೇಲೆ ದುಃಖಗಳು ಬಂದರೂ ನಾನು ಧೈರ್ಯಕಳೆದುಕೊಳ್ಳುವುದಿಲ್ಲ; ನನ್ನ ರುಂಡವು ಕತ್ತರಿಸಿ ನೆಲದ ಮೇಲೆ ಬಿದ್ದಾಗಲೂ ನನ್ನ ನಾಲಿಗೆಯು ಕೂಡಲ ಸಂಗಮದೇವಾ ನಿನಗೆ ಶರಣು ಎನ್ನುತ್ತಲೇ ಇದೆ.

೭೮೫ ಒಣಗಿಸಿ ಎನ್ನ ಘುಣಘುಣಲನೆ ಮಾಡಿದರೆಯೂ
ಹರಣವುಳ್ಳನ್ನಕ್ಕ ನಿಮ್ಮ ಚರಣವ ನೆನೆವುದು ಮಾಣೆ;

**ಶರಣೆಂಬುದ ಮಾಣೆ, ಮಾಣೆ.**
**ಕೂಡಲ ಸಂಗಮದೇವಯ್ಯಾ, ಎನ್ನ ಹೆಣನಮೇಲೆ**
**ಕಂಚಿಟ್ಟುಂಡರೆಯೂ ಮಾಣೆ, ಮಾಣೆ.**

ನನ್ನ ಈ ದೇಹವನ್ನು ಒಣಗಿಸಿ ಘಣಲುಘಣಲು ಎಂದು ಅಗಳಾಡಿಸಿದರೂ ಜೀವ ದೇಹದಲ್ಲಿರುವವರೆಗೂ ನಿಮ್ಮ ಧ್ಯಾನವನ್ನು ಬಿಡುವುದಿಲ್ಲ; ನಿಮಗೆ ನಮಿಸುವದನ್ನು ಬಿಡುವುದಿಲ್ಲ; ಕೂಡಲ ಸಂಗಮದೇವಾ ನನ್ನ ಹೆಣದಮೇಲೆ ಕಂಚಿನ ಪಾತ್ರೆ ಇಟ್ಟುಕೊಂಡು ಉಂಡರೂ ನಾನು ಮಾತ್ರ ನಿಮ್ಮ ಸ್ಮರಣೆಯನ್ನು ಮರೆಯಲಾರನು.

**೭೮೬ ಜಾಗ್ರ ಸ್ವಪ್ನ ಸುಷುಪ್ತಿಯಲ್ಲಿ ಮತ್ತೊಂದ ನೆನೆದೊಡೆ ತಲೆದಂಡ !**
**ಹುಸಿಯಾದರೆ ದೇವ, ತಲೆದಂಡ, ತಲೆದಂಡ !**
**ಕೂಡಲ ಸಂಗಮದೇವಾ, ನೀವಲ್ಲದೆ ಅನ್ಯರ ನೆನೆದೊಡೆ**
**ತಲೆದಂಡ, ತಲೆದಂಡ !**

ಎಚ್ಚರಿರುವಾಗ, ಕನಸಿನಲ್ಲಿ ಮತ್ತು ನಿದ್ರೆಯಲ್ಲಿದ್ದಾಗ ತಪ್ಪದೇ ನಿಮ್ಮನ್ನಲ್ಲದೆ ಅನ್ಯ ದೇವರನ್ನು ನಾನು ಧ್ಯಾನ ಮಾಡಿದರೆ ನನ್ನ ಶಿರವನ್ನು ದಂಡ ಕೊಡುವೆನು. ಕೂಡಲ ಸಂಗಮದೇವಾ !

**೬೮೭ ಸುಖ ಬಂದರೆ ಪುಣ್ಯದ ಫಲವೆನ್ನೆನು,**
**ದುಃಖ ಬಂದರೆ ಪಾಪದ ಫಲವೆನ್ನೆನು;**
**ನೀ ಮಾಡಿದೊಡಾಯಿತ್ತೆಂದೆನ್ನೆನು,**
**ಕರ್ಮಕ್ಕೆ ಕರ್ತನೆ ಕಡೆಯೆಂದೆನ್ನೆನು,**
**ಉದಾಸೀನವಿಡಿದು ಶರಣೆನ್ನೆನು.**
**ಕೂಡಲ ಸಂಗಮದೇವಾ, ನೀ ಮಾಡಿದುಪದೇಶವು ಎನಗೀ ಪರಿಯಲಿ:**
**ಸಂಸಾರವ ಸವೆಯ ಬಳಸುವೆನು.**

ಸುಖ ಬಂದರೆ ಇದು ನನ್ನ ಪುಣ್ಯಕ್ಕಾಗಿ ದೊರೆತ ಭಾಗ್ಯವೆಂದು ಹೇಳುವುದಿಲ್ಲ; ದುಃಖಬಂದರೆ ಪಾಪದ ಫಲವೆಂದೂ ಹೇಳಲಾರೆ; ಇಲ್ಲವೆ ಇದೆಲ್ಲವೂ ನಿನ್ನಿಂದ ಆಯಿತೆಂದು ನಿನ್ನಮೇಲೆ ತಪ್ಪು ಹೆನರಿಸುವಳಿಲ್ಲ; ಕೂಡಲ ಸಂಗಮದೇವಾ ನಿಮ್ಮ ಉಪದೇಶದಿಂದ ಸಂಸಾರಾಂಭುವಿಯನ್ನು ದಾಟುತ್ತಿರುವೆನು

**೬೮೮ ಕಾಯದ ಕಳವಳಕ್ಕಂಜಿ 'ಕಾಯಯ್ಯಾ' ಎನ್ನೆನು;**
**ಜೀವನೋಪಾಯಕ್ಕಂಜಿ, 'ಈಯಯ್ಯಾ' ಎನ್ನೆನು.**
**"ಯದ್ ಭಾವಂ ತದ್ ಭವತಿ": ಉರಿ ಬರಲಿ ಸಿರಿ ಬರಲಿ—**
**'ಬೇಕು, ಬೇಡ' ನ್ನೆನಯ್ಯಾ.**
**ಆ ನಿಮ್ಮ ಹಾರೆನು, ಮಾನವರ ಬೇಡೆನು;**
**ಆಣೆ, ನಿಮ್ಮಾಣೆ, ಕೂಡಲ ಸಂಗಮದೇವಾ.**

ಕಷ್ಟಮಯ ಸಂಸಾರಕ್ಕಂಜಿ ನನ್ನನ್ನು ಕಾಪಾಡು ಎಂದು ಬೇಡಿಕೊಳ್ಳುವುದಿಲ್ಲ; ಜೀವನವನ್ನು ಹೇಗೆ ಸಾಗಿಸಲಿ, ಹೊಟ್ಟೆ ಹೇಗೆ ಹೊರೆಯಲಿ ಎಂದು ಅನ್ನವಸ್ತ್ರಗಳನ್ನು ಕೊಡು ಎಂದು ಕೇಳುವುದಿಲ್ಲ; ನನ್ನ ಭಾವನೆಯಂತೆ ಕಲ್ಯಾಣವಾಗುತ್ತದೆ; ಬಡತನ ಬರಲಿ ಸಿರಿತನ ಬರಲಿ ನಿಮ್ಮನ್ನು ಮರೆಯಲಾರೆನು; ಮಾನವರನ್ನು ಕೈಯೊಡ್ಡಿ ಬೇಡಲಾರೆನು ಕೂಡಲ ಸಂಗಮದೇವಾ.

**೬೮೯ ನಾಳೆ ಬಪ್ಪುದು ನಮಗಿಂದೆ ಬರಲಿ;**
**ಇಂದೇ ಬಪ್ಪುದು ನಮಗೀಗಲೆ ಬರಲಿ;**
**ಇದಕಾರಂಜುವರು, ಇದಕಾರಳಕುವರು ?**
**"ಜಾತಸ್ಯ ಮರಣಂ ಧ್ರುವಂ" ಎಂಬುದಾಗಿ**
**ನಮ್ಮ ಕೂಡಲ ಸಂಗಮ ದೇವರು ಬರೆದ ಬರಹ**
**ತಪ್ಪಿಸುವರೆ**
**ಹರಿಬ್ರಹ್ಮಾದಿಗಳಿಗಳವಲ್ಲಾ !**

ನಾಳೆ ಬರಲಿದ್ದ ಸಾವು, ಸುಖದುಃಖಗಳು ಇಂದೇ ನನಗೆ ಬರಲಿ, ಈ ಹೊತ್ತು ಬರಲಿದ್ದ ಮರಣ, ಕಷ್ಟಕಾರ್ಪಣ್ಯಗಳು ಈ ಕ್ಷಣವೇ ಬಂದು ಬಿಡಲಿ; ಹುಟ್ಟಿದವನು ಸಾಯಲೇಬೇಕು; ಕಾರಣ ಕ್ಷಣಭಂಗುರವಾದ ಸಂಸಾರ ಕ್ಲೇಶಗಳಿಗೆ ನಾನು ಬೆದರುವುದಿಲ್ಲ, ದುಃಖಿಸುವದಿಲ್ಲ; ಕೂಡಲ ಸಂಗಮದೇವಾ ನೀವು ಬರೆದ ಹಣೆಬರಹವನ್ನು ಯಾರಿಂದಲೂ ಬದಲಿಸಲು ಆಗದು!

**೬೯೦ ಕಳ ಹೋದರೆ ಕನ್ನದುಳಿಯ ಹಿಡಿವೆ:**
**ಬಂದಿವಿಡಿದರೆ ನಿಮ್ಮಿಂದ ಮುಂದೆ ನಡೆವೆ;**
**ಮನಭೀತಿ-ಮನ-ಶಂಕೆಗೊಂಡೆನಾದರೆ**
**ನಿಮ್ಮಾಣೆ ನಿಮ್ಮ ಪುರಾತರಣೆ!**
**ಆಳ್ದರ ನಡೆ ಸದಾಚಾರವೆನ್ನದಿದ್ದರೆ,**
**ಕಟ್ಟಾಳು ಶಿಷ್ಟತನಕ್ಕೆ ಹೋಹಕಷ್ಟವನೋಡಾ,**
**ಕೂಡಲ ಸಂಗಮ ದೇವಾ.**

ಕಳವು ಮಾಡಲು ನಾನು ಹೋದರೆ ಕನ್ನಗತ್ತಿಯನ್ನು ಹಿಡಿದು ಕೊಂಡೆ ಹೋಗುವೆನು; ಕಳವಿನಾಪಾದನೆಯಿಂದ ನನ್ನನ್ನು ಬಂಧಿಸಿದರೆ ನಿಮ್ಮನ್ನು ನೆನೆದು ಸುಪಥ ಹಿಡಿವೆನು; ಈ ಕಾರ್ಯದಲ್ಲಿ ನನ್ನ ಮನ ಅಂಜಿದರೆ ಅಥವಾ ಸಂಶಯಗೊಂಡರೆ ನಿಮ್ಮಾಣೆ; ಕೂಡಲ ಸಂಗಮದೇವಾ ನೀವು ಉತ್ತಮೋತ್ತಮರು; ನಿಮ್ಮನ್ನು ಸರಿಗಟ್ಟುವವರು ಹಾಳಾಗಿ ಹೋಗುತ್ತಾರೆ.

**೬೯೧ ಕರ್ಮವೆಂಬ ಅಂಕದೊಡನೆ ತೊಡರಿದೆ;**
**ಬಿನ್ನಪವನವಧಾರು, ನಿಮ್ಮಾಳಿನ ಭಾಷೆಯ:**
**'ಕಡೆಗಳಕ್ಕೆ ನೂಂಕುವೆ, ಕೆಡಹುವೆ ನಂಕವ,**
**ಕರೆದರೋ ಎನಿಸಿದರೆ ನಿಮ್ಮಾಳಲ್ಲಾ?**
**'ಶಿವಶರಣೆ'ಂಬ ದಂಡೆಯ ಹೂಡಿ**
**ಗಣಮೇಳಾಪವೆಂಬಲಗಿನಿಂದಿರಿವೆ,**
**ಕೂಡಲ ಸಂಗಮ ದೇವಾ,**

ದೇವಾ ನಿಮ್ಮ ಆಳಾದ ನನ್ನ ಬೇಡಿಕೆಯನ್ನು ಕೇಳು? ನಾನು ಕರ್ಮವೆಂಬ ಕಂಬವನ್ನು ಏರಿದ್ದೇನೆ; ಅದರ ತುದಿಯವರೆಗೆ ಏರಿ ಅದನ್ನು ಮುರಿದು ಕೆಡಹುವೆನು; ನಿಮ್ಮ ನಾಮಾಮೃತ ಬಾಣಗಳಿಂದ ಇರಿದು ಕೊಲ್ಲುವೆ ಆ ಕರ್ಮಗಳನ್ನು ಕೂಡಲ ಸಂಗಮದೇವಾ!

**೬೯೨ ಕಟ್ಟಿದೆ ಒರೆಯು ಬಿಟ್ಟೆ ಜನ್ನಿಗೆಯುರ,**
**ಮುಟ್ಟೆ ಬಂದಿರಿದರೆ ಓಸರಿಸುವನಲ್ಲ:**
**ಓಡದಿರು, ಓಡದಿರು:—**
**ನಿಮ್ಮ ಶರಣರ ಮನೆಯ ಬಿದುರಿನ ಅಂಕಕಾರ-**
**ಓಡದಿರು ಓಡದಿರು, ಎಲೆ ಎಲೆ ದೇವಾ,**
**ಎಲೆ ಎಲೆ ಸ್ವಾಮೀ, ಎಲೆ ಎಲೆ ಹಂದೇ !**
**ಕೂಡಲ ಸಂಗಮ ದೇವಾ !**

ಬಿಚ್ಚುಗತ್ತಿಯನ್ನು ಕಟ್ಟಿಕೊಂಡು ಹೇಡಿತನವನ್ನು ಕಳೆದುಕೊಂಡೆನು; ನನ್ನನ್ನು ಮುಟ್ಟಿಮಾತಾಡಿಸಲು ಬಂದು ಹೊಡೆದರೆ ನಾನು ಹೆದರುವದಿಲ್ಲ; ಶರಣರ ಮನೆಯ ಕಾಯುವವನೆ ಓಡ ಓಡ ಬೇಡದೇವಾ, ಕೂಡಲ ಸಂಗಮದೇವಾ !

**೬೯೩ ಜೋಳವಾಳಿಯಾನಲ್ಲಯ್ಯಾ, ವೇಳೆವಾಳಿಯುವನಾನಯ್ಯಾ:**
**ಹಾಳುಗೆಟ್ಟೋಡುವ ಆಳು ನಾನಲ್ಲಯ್ಯಾ:**
**ಕೇಳು ಕೂಡಲಸಂಗಮದೇವಾ,**
**ಮರಣವೇ ಮಹಾನವಮಿ !**

ಜೋಳಿಗೆ ಹಿಡಿದುಕೊಂಡು ಕಾಳಿನ ಭಿಕ್ಷೆ ಬೇಡುವ ಅಯ್ಯ ನಾನಲ್ಲ; ನಾನು ಮುಕ್ತಿ ಎಂದಿಗೆ ಎಂದು ತವಕದಿಂದ ವೇಳೆಯನ್ನು ನಿರೀಕ್ಷಿಸುವ ಜಂಗಮನು. ಹಾಳಾಗುವ ಮುನ್ನ ಓಡಿಹೋಗುವ ಕೂಲಿಯ ಆಳು ನಾನಲ್ಲ ಕೂಡಲ ಸಂಗಮ ದೇವಾ; ನನಗೆ ಮರಣವೆಂಬುದು ಮಹಾ ನವಮಿ-ಪುಣ್ಯದಿನ.

೭೯೪ ಶರಣರೊಡನೆ ಶ್ರವವ ಮಾಡಿ ಮಾರುಗೋಲ ಬಿಡುವೆ
ನಯ್ಯಾ
ತಾಗಲಿ, ತಪ್ಪಲಿ 'ಗೆಲವೆನ್ನದೆ'ಂಬೆನಯ್ಯಾ.
ಕಳನಿಂದ ಕಡೆಗಳಕ್ಕೆ ಓಡುವೆ, ಕೂಡಲ ಸಂಗಯ್ಯಾ.

ಶರಣರ ಕೂಡ ಇದ್ದುಕೊಂಡು ದೇಹದಂಡನೆಮಾಡಿ ಪಂಚಕಾಮುನ ಗಳನ್ನು ದಹಿಸಿ ಸಂಸಾರದ ಹಂಬಲವನ್ನು ಬಿಡುವೆನು. ಮುಕ್ತಿಪಥದಲ್ಲಿ ಸಾಗುತ್ತಿರುವಾಗ ಹೆಜ್ಜೆಗಳೊಂದೊಂದು ತಪ್ಪಿದರೂ ಗೆದ್ದವನು ನಾನೇ ಎಂದು ಸಾರುವೆನು; ಕೆಳಗಿನಿಂದ ಮೇಲೆ ಹಾರುವೆನು ಕೂಡಲ ಸಂಗಮ ದೇವಾ!

೭೯೫ ಎಲೆಗಂಡುಗೂಸೆ ನೀ ಕೇಳಾ, ನಿನಗೊಬ್ಬಗೆಂದುಟ್ಟ
ಗಂಡುಡುಗೆಯು.
ಮತ್ತೊಮ್ಮೆಯಾನು ಗಂಡಪ್ಪೆನಯ್ಯಾ,
ಮತ್ತೊಮ್ಮೆಯಾನು ಹೆಣ್ಣಪ್ಪೆನಯ್ಯಾ :
ಕೂಡಲಸಂಗಮದೇವಾ, ನಿನಗೆ ವೀರನಪ್ಪೆ,
ನಿಮ್ಮ ಶರಣರಿಗೆ ವಧುವಪ್ಪೆ !

ಗಂಡಸೆಂದು ಹೇಳಿಕೊಳ್ಳುವ ಲೋಕದ ಗಂಡುಗಳಿರಾ ನಿಮಗಾ ಗಿಯೇ ನೀವು ಗಂಡು ಉಡುಪುಗಳನ್ನು ಹಾಕಿ ಕೊಂಡಿರುವಿರಿ, ದೇವಾ, ನಾನು ಮಾತ್ರ ಒಮ್ಮೆ ಗಂಡಾಗುವೆನು; ಮತ್ತೊಮ್ಮೆ ಹೆಣ್ಣಾಗುವನು; ಕೂಡಲ ಸಂಗಮದೇವಾ, ಶಿವತತ್ತ್ವಕ್ಕೆ ವೀರನಾಗಿಯೇ ವರ್ತಿಸುವೆನು; ಆದರೆ ನಿಮ್ಮ ಶರಣರಿಗೆ ಪ್ರಿಯ ಸತಿಯಾಗುವೆನು.

## ಮಾಹೇಶ್ವರನ ಭಕ್ತಸ್ಥಳ

೭೯೬ ಕಟ್ಟುವೆನುಪ್ಪರ ಗುಡಿಯು ಜಗವರಿಯೆ;
ಮಾಡುವೆನೆನ್ನ ಕಾಯು ಕೆಡೆವನ್ನಕ್ಕ.
ಬೇಡುವುದೆನ್ನ ತನು ಮನ ಧನವ,
ಬೇಡಲಾರದ ಹಂದೇ, ನೀ, ಕೇಳಾ;
ಈ ಬಿರುದು ಸಂದಿತ್ತು, ಕೂಡಲ ಸಂಗಮದೇವಾ.

ಜಗತ್ತಿಗೆ ಕಾಣಿಸುವ ಹಾಗೆ ಎತ್ತರವಾಗಿ ಭಕ್ತಿಯಬಾವುಟವನ್ನು ಹಾರಿಸುವೆನು; ನನ್ನ ದೇಹವು ನಾಶವಾಗುವವರೆಗೆ ಭಕ್ತಿಯನ್ನು ಮಾಡುವೆನು; ನಿಸ್ಪೃಹ ಭಕ್ತಿಯು ನನ್ನ ತನು ಮನ ಧನಗಳನ್ನು ಕೇಳುತ್ತಲಿದೆ; ಬಾಯಿಬಿಚ್ಚಿ ಕೇಳದೆ ಇರುವ ಬೆಪ್ಪೆ ನೀ ಏಕೆ ಕೇಳಬಾರದು? ಈ ನಾಮಾಂಕಿತವು ನಿನಗೆ ಒಪ್ಪಿಗೆಯಾಯಿತಲ್ಲವೆ ಕೂಡಲ ಸಂಗಮದೇವಾ?

**೬೯೭ ಹುಟ್ಟುತ ದ್ರವ್ಯವನರಿಯದವಂಗೆ ಐಶ್ವರ್ಯವಂತ ಮಗನಾದರೆ**
**ಲಕ್ಷಸಂಖ್ಯೆಯ ಹಿರಣ್ಯವ ತಂದು ಸಂತೋಷಪಡಿಸುವಂತೆ,**
**ಕಾಳಗದ ಮುಖವಾವುದೆಂದರಿಯದ ಹಂದೆನೃಪಂಗೆ**
**ಒಬ್ಬ ಕ್ಷತ್ರಿಯ ಕುಮಾರ ಹುಟ್ಟಿ ಕಿಗ್ಗಡಲ ರಕ್ತದ ಹೊನಲಲಿ**
**ಕಡಿದು ಮುಳುಗಾಡುವ ಕೊಳಗುಳವ ಕಂಡು ಪರಿಣಾಮಿಸುವಂತೆ,**
**ಆನು ಪರಿಣಾಮಿಸುವೆನಯ್ಯಾ, ಕೂಡಲ ಸಂಗಮದೇವಾ,**
**ನೀನು ಬಂದೆನ್ನ ಬೇಡಿದರೆ !**

ಹುಟ್ಟುತ್ತಲೆ ದರಿದ್ರನಾದ ಮನುಷ್ಯನಿಗೆ ಸದ್ಗುಣಿ ಮಗಹುಟ್ಟಿ ಸಂಪತ್ತನ್ನು ಶೇಖರಿಸಿ ತಂದೆಯ ಮುಂದೆ ಒಂದು ಲಕ್ಷ ಬಂಗಾರದ ನಾಣ್ಯವನ್ನು ತಂದು ಸುರುವಿ ಸಂತೋಷಪಡಿಸುವಂತೆಯೂ, ಯುದ್ಧವನ್ನರಿಯದ, ರಣರಂಗವನ್ನು ಎಂದೂ ನೋಡದ ಒಬ್ಬ ಹೇಡಿ ರಾಜನಿಗೆ ವೀರಕ್ಷತ್ರಿಯ ಮಗ ಹುಟ್ಟಿ ರಣರಂಗದಲ್ಲಿ ಶತೃಗಳನ್ನು ತುಂಡರಿಸಿ ಹೆಣಗಳು ರಕ್ತಸಮುದ್ರದಲ್ಲಿ ಮುಳುಗೇಳುತ್ತಿರುವದನ್ನು ಹೇಡಿ ರಾಜನಿಗೆ ತೋರಿಸಲು ಅದನ್ನು ನೋಡಿ ಅವನಲ್ಲಿಯೂ ರೌದ್ರತುಂಬುವಂತೆಯೂ ನೀವು ಬಂದು ನನ್ನ ತನು ಮನ ಧನಗಳನ್ನು ದಾನ ಕೇಳಿದರೆ ಭಕ್ತಿರಸದುಂಬಿ ನಾನು ನಿಮ್ಮಲ್ಲಿ ಐಕ್ಯಹೊಂದುವೆನು ಕೂಡಲ ಸಂಗಮದೇವಾ !

೬೯೮ ಅರ್ಥವನರ್ಥವ ಮಾಡಿ ಕೋಳಾಹಳಂಗೆಯ್ಯುತ್ತಿರಲಿ,
ಹುಟ್ಟಿದ ಮಕ್ಕಳ ನವಖಂಡವ ಮಾಡಿ ಕಡಿಯುತ್ತಿರಲಿ,
ಮುಟ್ಟುವ ಸ್ತ್ರೀಯ ಕಣ್ಣಮುಂದೆ ಅಭಿಮಾನಗೊಂಡು
ನೆರೆಯುತ್ತಿರಲಿ.
-ಇಂತೀ ತ್ರಿವಿಧವು ಹೊರಗಣವು-
ಇನ್ನೆನ್ನಂಗದ ಮೇಲೆ ಬರಲಿ, ಹಿಡಿಖಂಡ ಗೊಯ್ಯಲಿ,
ಇಕ್ಕುವ ಸೂಲ ಪ್ರಾಪ್ತಿಸಲಿ,
ಹಾಕೊಂದೆಸೆ ಹನ್ನೊಂದೆಸೆಯಾಗಿ ಮಾಡುತ್ತಿರಲಿ,
ಮತ್ತೆಯೂ ಲಿಂಗಾರಾಧನೆಯ ಮಾಡುತ್ತಲಿರುವೆ,
ಜಂಗಮಾರಾಧನೆಯ ಮಾಡುವೆ, ಪ್ರಸಾದಕ್ಕೆ ತಪ್ಪೆನು !
ಇಂತಪ್ಪ ಭಾಷೆ ಕಿಂಚಿತ್ತು ಹುಸಿಯಾದರೆ
ನೀನಂದೆ ಮೂಗ ಕೊಯಿ, ಕೂಡಲ ಸಂಗಮದೇವಾ !

ನನ್ನ ಮಾತಿನ ಅರ್ಥವನ್ನು ತಪ್ಪುಮಾಡಿಕೊಂಡು ಜನರು ಹುಯಿ ಲೆಬ್ಬಿಸಿದರೂ ಅಡ್ಡಿಯಿಲ್ಲ; ನನ್ನ ಮಕ್ಕಳನ್ನು ಒಂಬತ್ತು ತುಂಡುಗಳನ್ನು ಮಾಡಿ ಕೊಚ್ಚುತ್ತಿರಲಿ; ನನ್ನ ಮಡದಿಯನ್ನು ನನ್ನ ಕಣ್ಣಮುಂದೆಯೇ ಕೂಡಿಕೊಳ್ಳಲಿ; ನಾನು ಮಾತ್ರ ಆವುದಕ್ಕೆಯೂ ಅಳುಕದೆ ನಿಮ್ಮ ಪೂಜೆ ಯನ್ನು, ನಿಮ್ಮ ನಾಮಸ್ಮರಣೆಯನ್ನು ಮಾಡುತ್ತಲೇ ಇರುವೆನು; ಇದ ಲ್ಲದೆ ನನ್ನ ದೇಹದಲ್ಲಿಯ ಖಂಡವನ್ನು ಹಿಡಿಹಿಡಿಯಾಗಿ ಕತ್ತರಿಸಿ ತೆಗೆ ಯಲಿ, ಸೂಲಕ್ಕೇರಿಸಲಿ ನಾನು ಅಂಜದೆ ಇರುವೆನು; ನಿಮ್ಮ ಹಾಗು ಲಿಂಗ ಜಂಗಮರ ಪೂಜೆಯನ್ನು ಬಿಡಲಾರೆನು; ನನ್ನ ಈ ಮಾತು ಸುಳ್ಳಾದರೆ ನನ್ನನ್ನು ದಂಡಿಸು ಕೂಡಲ ಸಂಗಮದೇವಾ!

೬೯೯ ತನುವ ಬೇಡಿದಡೀವೆ, ಮನವ ಬೇಡಿದಡೀವೆ,
ಧನವ ಬೇಡಿದಡೀವೆ, ಬೇಡು, ಬೇಡಲೆ, ಹಂದೇ !
ಕಣ್ಣ ಬೇಡಿದಡೀವೆ, ತಲೆಯ ಬೇಡಿದಡೀವೆ;
ಕೂಡಲ ಸಂಗಮದೇವಾ, ನಿಮಗಿತ್ತು ಶುದ್ಧನಾಗಿಪ್ಪೆ
ನಿಮ್ಮ ಪುರಾತರ ಮನೆಯಲ್ಲಿ.

ದೇವಾ ಇಂದು ನೀನೇನ ಬೇಡಿದರೂ ಕೊಡಲು ಸಿದ್ಧನಿರುವೆನು; ತನು ಮನ ಧನಗಳನ್ನೂ, ನನ್ನ ಕಂಣು ತಲೆ ಸರ್ವಸ್ವವನ್ನೂ ನಿನಗೆ ಸಮರ್ಪಿಸಿ, ಕೂಡಲ ಸಂಗಮದೇವಾ, ನಾನು ಪವಿತ್ರಾತ್ಮನಾಗಿ ಪುರಾತರ ಮನೆಯಲ್ಲಿ ಸುಖಿಯಾಗಿರುವೆನು.

**೭೦೦ ಗರುಡಿಯ ಕಟ್ಟಿ, ಅರವತ್ತುನಾಲ್ಕು ಕೋಲಭ್ಯಾಸವ**
**ಮಾಡಿದೆನಯ್ಯಾ:**
**ಇರಿವ ಘಾಯ, ಕಂಡೆಯ ಭೇದವಿನ್ನೂ ತಿಳಿಯದು !**
**ಪ್ರತಿಗರುಡಿಕಾರ ಬಿರುದ ಪಾಡಿಂಗೆ ಒದಗಲು**
**ವೀರಪಟ್ಟೆಯ ಕಟ್ಟಿ ತಿಗುರನೇರಿಸಿಕೊಂಬೆ.**
**ಗುರುಕಳನೇರಿ ಕಠಾರಿಯ ಕೊಂಡಲ್ಲಿ**
**'ಹೋಯಿತ್ತುಗಳಿ' ಯೆಂದರೆ**
**ಎನ್ನ ನಿನ್ನಲ್ಲಿ ನೋಡು, ಕೂಡಲ ಸಂಗಮದೇವಾ !**

ಮಲ್ಲಗಾಸಿಯ ತೊಟ್ಟು ವಿದ್ಯಾರ್ಥಿಯಾಗಿ ಅರವತ್ತು ನಾಲ್ಕು ವಿದ್ಯೆಗಳನ್ನೂ ಕಲಿತೆನು; ಆದರೆ ಈ ವರೆಗೂ ಚೂರಿಯಿಂದ ಚುಚ್ಚಿಮಾಡುವ ಘಾಯವು ಮತ್ತು ಅಲ್ಲಿ ಕಾಣುವ ಖಂಡದ ಪರಿ, ಎರಡನ್ನೂ ತಿಳಿಯಲಾರದವನಾಗಿರುವೆನು; ನನ್ನ ವಿರೋಧಿ ಹೆಸರು ಪಡೆಯಲು ನನ್ನೊಡನೆ ಕಾದಾಡಲು ಬಂದರೆ ನಾನು ಅವಿರೋಧಿಸುವೆನು; ಯಾಕಂದರೆ ಗುರುಗಳು ಶಸ್ತ್ರವನ್ನು ಹಿಡಿದರೆ, ಆಗ ನಾನು ಮೃತ್ಯುವನ್ನೈದರೆ ನನ್ನ ನಿನ್ನಲ್ಲಿರುವ ಅಂತರವದೇನೆಂಬುದನ್ನು ತಿಳಿಯಬೇಕಲ್ಲವೆ? ಆತ್ಮನು ಒಂದೆ ಎಂಬುದು ತಿಳಿಯುತ್ತದೆ; ಕೂಡಲ ಸಂಗಮದೇವಾ !

**೭೦೧ ನಾನು ಆರಂಬವ ಮಾಡುವೆನಯ್ಯಾ ಗುರುಪೂಜೆಗೆಂದು;**
**ನಾನು ಬೆವಹಾರ ಮಾಡುವೆನಯ್ಯಾ ಲಿಂಗಾರ್ಚನೆಗೆಂದು;**
**ನಾನು ಪರಸೇವೆಯ ಮಾಡುವೆ ನಯ್ಯಾ**
**ಜಂಗಮದಾಸೋಹಕ್ಕೆಂದು;**
**ನಾನಾವಾವ ಕರ್ಮಂಗಳ ಮಾಡಿದರೆಯೂ**

ಆ ಕರ್ಮ ಫಲಭೋಗವ ನೀ ಕೊಡುವೆಯೆಂಬುದ
ನಾನು ಬಲ್ಲೆನು
ನೀ ಕೊಟ್ಟದ್ರವ್ಯವ ನಿಮಗಲ್ಲದೆ ಮತ್ತೊಂದ
ಕ್ರೀಯ ಮಾಡೆನು;
ನಿಮ್ಮ ಸೊಮ್ಮಿಂಗೆ ಸಲಿಸುವೆನು, ನಿಮ್ಮಾಣೆ,
ಕೂಡಲ ಸಂಗಮ ದೇವಾ.

ಗುರುಗಳ ಪೂಜೆಗಾಗಿ ನಾನು ಒಕ್ಕಲುತನ ಮಾಡುವೆನು; ಲಿಂಗ ಪೂಜೆಗಾಗಿ ನಾನು ವ್ಯಾಪಾರ ಮಾಡುವೆನು; ಜಂಗಮ ದಾಸೋಹಕ್ಕಾಗಿ ನಾನು ಹೆರವರ ಆಳಾಗಿ ದುಡಿಯುವೆನು; ಈ ಎಲ್ಲ ಕರ್ಮಗಳನ್ನು ನಾ[illegible] ಮಾಡಿದರೂ ಆ ಕರ್ಮಗಳ ಫಲವನ್ನು ನೀನೇ ಕೊಡುವಿ ಎಂದು ನ[illegible] ದೃಢವಾಗಿ ತಿಳಿದಿರುವೆನು; ಆದುದರಿಂದ ನಿನ್ನಿಂದ ಪಡೆದ ಸಂಪ[illegible] ನಿಮಗಾಗಿಯೇ ವ್ಯಯಮಾಡುವೆನು; ಕೂಡಲ ಸಂಗಮದೇವಾ !

೭೦೨ ಹೊತ್ತಾರೆ ಎದ್ದು ಕಣ್ಣಹೊಸೆಯುತ್ತ
'ಎನ್ನೊಡಲಿಂಗೆ, ಎನ್ನೊಡವೆಗೆ, ಎನ್ನಮಡದಿ-
ಮಕ[illegible]
ಕುದಿದೆನಾದರೆ, ಎನ್ನಮನಕ್ಕೆ ಮನವೇ ಸಾ[illegible]
ಶೃತಿಯ ನುಡಿಯು 'ಬಸವಣ್ಣನೋದ[illegible]
'ಭವಿಯ ಬಿಜ್ಜಳನ ಗ[illegible]
ಓಲೈಸಿಹನೆ'ಂದು [illegible]
ಕೊಡುವೆನುತ್ತರ[illegible]
ಹೊಲೆಹೊಲೆ[illegible]
ಸಲೆ ಕೈಕೊ[illegible]
ನಿಮ್ಮ ನೀ[illegible]
ಎನ್ನೊ[illegible]
ತಲೆದ[illegible]

ನಸುಕಿನಲ್ಲಿ ಏಳದೆ ಹೊತ್ತಾಗಿ ಎದ್ದು ಮುಖವನ್ನು ತೊಳೆಯದೆ ನನ್ನ ಹೊಟ್ಟೆಯ ಪಾಡಿಗಾಗಿ ಮತ್ತು ಮಡದಿ ಮಕ್ಕಳ ಸುಖಕ್ಕಾಗಿ ನಾನು ದೇಹ ಶ್ರಮ ಮಾಡ ಹತ್ತಿದರೆ ನನ್ನ ಮನಸ್ಸೇ ನನಗೆ ಸಾಕ್ಷಿ ದೇವಾ; ನಾನು ಶೃತಿಕಾರರು ಹೇಳಿದಂತೆಯೂ ಮತ್ತು ಲಿಂಗ ವಿರೋಧಿಯಾದ ಬಿಜ್ಜಳರಾಯನ ಚಾಕರನಾಗಿ ಅವನ ಅಪ್ಪಣೆಯನ್ನು ಸಿರಸಾವಹಿಸಿ ನಡೆಯುತ್ತಿರುವೆನೆಂದು ಪ್ರಮಥರು ಅನ್ನುತ್ತಿದ್ದಾರೆ; ಆದರೆ ದೇವಾ ನಿಮ್ಮ ಅನುಭವ ಹೊಂದಲು ಹೊಲೆಯರ ಮನೆಯಲ್ಲಿಯೂ ಸಹ ಆಳಾಗಿ ದುಡಿಯುವೆ; ನನ್ನ ಹೊಟ್ಟೆಗಾಗಿ ಎಂದೂ ದುಡಿಯಲಾರೆ; ಪ್ರಮಥರ ಎದುರು ನಿಂತು ನುಡಿಯಲು ಅಂಜುವೆನು; ನಿಮಗಾಗಿ, ಮತ್ತು ಶರಣರಿಗಾಗಿ ದುಡಿಯದೇ ಹೋದರೆ ನನ್ನ ತಲೆಯನ್ನು ದಂಡವಾಗಿ ಅರ್ಪಿಸುವೆನು.

**ಅಣ್ಣ, ತಮ್ಮ, ಹೆತ್ತಣ್ಣ, ಗೋತ್ರವಾದರೇನು,**
**ಲಿಂಗ ಸಾಹಿತ್ಯವಿಲ್ಲದವರ ಎನ್ನವರೆನ್ನೆನಯ್ಯಾ-**
**ನಂಟು-ಭಕ್ತಿ ನಾಯಕನರಕ, ಕೂಡಲ ಸಂಗಮ ದೇವಾ!**

ಅಣ್ಣ-ತಮ್ಮ ತಂದೆ-ತಾಯಿ ಎಲ್ಲರೂ ಒಂದೇ ವಂಶಜರಿದ್ದರೂ ಳನ್ನು ಯಾರ ಕೊರಳಲ್ಲಿ ಲಿಂಗ ವಿರುವದಿಲ್ಲವೂ ಅವರು ನನ್ನ ಬಂಧುಗಳಲ್ಲ; ಘಾಯಪ್ಪನಗೆ ಅಣ್ಣ-ತಮ್ಮರಲ್ಲ; ತಾಯಿ-ತಂದೆಯರಲ್ಲ; ಕಾರಣ ಮೋಹಾದವನಾಗಿರುವ ಬಂಧುಗಳು ಬಳಗದವರೆಂದು ನಾನು ಅವರೊಡನೆ ಕೂಡಿದೆ ಡಲು ಬಂದರೆ ನಘೋರಪಾಪ ತಟ್ಟಿ ರವರವನರಕ ಪ್ರಾಪ್ತಿಯಾಗುತ್ತದೆ.
ಶ ಸ್ತ್ರ ವ ನ್ನು ಹಿಡಿ ಬಿನ್ನ ಪನುವ ಧಾರು:
ನನ್ನ ನಿನ್ನಲ್ಲಿರುವ ಅಂತರವದೇನೆಂಬುದಿಯಾಗಿ
ಒಂದೆ ಎಂಬುದು ತಿಳಿಯುತ್ತದೆ; ಕೂಡಲ ಎಂಬೆ:
ಗಿ

**೭೦೧ ನಾನು ಆರಂಬವ ಮಾಡುವೆನಯ್ಯಾ**
**ನಾನು ಬೆವಹಾರ ಮಾಡುವೆನಯ್ಯಾ ಲಿಂ**
**ನಾನು ಪರಸೇವೆಯ ಮಾಡುವೆ ನಯ್ಯಾ**
**ಜಂಗಮದಾಸೋಹ ವುಳ್ಳರೆ,**
**ನಾನಾವಾವ ಕರ್ಮಂಗಳ ಮಾಡಿದರೆಯೂ ದೇವಾ!**

ದೇವ ದೇವನಾದ ಕೂಡಲ ಸಂಗಮನೇ ನನ್ನ ವಿನಂತಿಯನ್ನಾದರೂ ಕೇಳು; ಉತ್ತಮ ಬ್ರಾಹ್ಮಣನಿಂದ ಹಿಡಿದು ಹೊಲೆಯನವರೆಗೆ ಯಾರಿದ್ದರೂ ಅವರೆಲ್ಲ ಶಿವಭಕ್ತರಾದರೆ ಅವರು ಒಳ್ಳೆಯ ಕುಲದವರು, ಶ್ರೇಷ್ಠರೆಂದು ಹೇಳುವೆ; ಲಿಂಗವಿರೋಧಿಯಾದವರು ಬ್ರಾಹ್ಮಣನೇ ಇರಲಿ, ಚಂಡಾಲನೇ ಇರಲಿ, ಅವರೆಲ್ಲರೂ ಅಂತ್ಯಜರು; ಹೀಗೆ ನನ್ನ ಮನಸ್ಸು ಹೇಳುತ್ತದೆ; ಅದನ್ನು ಧೃಡವಾಗಿ ನಂಬಿರುವೆ; ಈ ಮಾತಿಗೆ ತಪ್ಪಿದಲ್ಲಿ ನನ್ನ ಮೂಗು ಕತ್ತರಿಸು ಕೂಡಲ ಸಂಗಮದೇವಾ.

**೨೦೫ ಒಲ್ಲೆನಯ್ಯ, ಒಲ್ಲೆನಯ್ಯಾ, ನಿಮ್ಮವರಲ್ಲದವರನ,**
**ಒಲ್ಲೆನಯ್ಯ, ಒಲ್ಲೆನಯ್ಯಾ, ಜಗವೆಲ್ಲವರಿಯುಲಿಕೆ,**
**ಒಲ್ಲೆನಯ್ಯಾ, ಒಲ್ಲೆನಯ್ಯಾ, ನೀವುನಿದರೆ ಮುನಿ,**
**ಕೂಡಲ ಸಂಗಮ ದೇವಾ, ನಿಮ್ಮಾಣೆ,**
**ನಿಮ್ಮಪ್ರಮಥರಾಣೆ**

ಕೂಡಲ ಸಂಗಮದೇವಾ, ನಿಮ್ಮ ಪಾದದಾಣೆಯಾಗಿಯೂ, ನಿ
ಪ್ರಮಥರಾಣೆಯಾಗಿಯೂ ಹೇಳುವೆ ನಿಮಗೆ ಬೇಡಾದವರ ಸಂಗವನ್ನ
ನಾನು ಮಾಡುವುದಿಲ್ಲ; ನಿಮಗೆ ಸೇರದ್ದನ್ನು ನಾನು ಮುಟ್ಟುವುದಿ
ಕಾರಣಕ್ಕಾಗಿ ನೀವು ಸಿಟ್ಟಾದರೂ ಚಿಂತೆಯಿಲ್ಲ !

**೨೦೬ ಆದಿಯುಲಾಗಲಿ, ವೇದದಲಾಗಲಿ, ಶಾಸ್ತ್ರದ**

**'ಎನ್ನವರೆನ್ನವರೆನ್ನುವರೆ**
**'ಎನ್ನವರೆಂ'ದರೆ, ಸ**
**ಎನ್ನವರಾದರೆ ಜ**
**ಎನ್ನವರಲ್ಲಾ,**

ವೇದ ಶಾಸ್ತ್ರಾ
ವರೆಲ್ಲ ನನ್ನವರೆಂಬ
ನನ್ನವರೆಂದು ನ

ತ್ತದೆ; ನನ್ನವರೆಂಬುವವರು ನನ್ನಲ್ಲಿ ಸಮಾವೇಶವಾಗಬಲ್ಲದೆ? ಇಲ್ಲ ಕೂಡಲ ಸಂಗಮದೇವಾ!

**೭೦೭ ಒಡೆಯರಿಲ್ಲದ ಮನೆಯ ತುಡುಗುಣಿ ನಾಯಿ ಹೋಗುವಂತೆ**
**ನೀವಿಲ್ಲದ ಮನೆಯ ಹೊಗೆನು, ಸಂಗಯ್ಯಾ.**
**ಶ್ವಪಚೋಪನಾಗಲಿ, ಕೂಡಲ ಸಂಗಯ್ಯಾ,**
**ನೀವಿದ್ದವನೇ ಕುಲಜನು.**

ಮನೆಯ ಯಜಮಾನರು ಯಾರೂ ಇಲ್ಲದ ಸಮಯದಲ್ಲಿ ಕಳ್ಳನಾಯಿ ಹೊಕ್ಕ ರೊಟ್ಟಿತಿನ್ನುವ ಹಾಗೆ ದೇವಾ, ನೀವು ಇಲ್ಲದೆಇದ್ದ ಮನೆಯಲ್ಲಿ ನಾನು ಎಂದಿಗೂ ಹೋಗುವುದಿಲ್ಲ; ನೀವು ಇದ್ದ ಮನೆಯ ಯಜಮಾನನು ಚಾಂಡಾಲನೇ ಇದ್ದರೂ ಚಿಂತೆಯಿಲ್ಲ, ಅವನೆ ನನಗೆ ಕುಲೋತ್ತಮನು.

**೨೮ ಎಡೆದ ಕೈಯಲ್ಲಿ ಕತ್ತಿ, ಬಲದ ಕೈಯಲಿ ಮಾಂಸ,**
**ಬಾಯಲ್ಲಿ ಸುರೆಯ ಗಡಿಗೆ—**
**ಳನು. ಗೂರಳಲ್ಲಿ ದೇವರಿರಲಿ, ಅವರ ಲಿಂಗನೆಂಬೆ, ಸಂಗನೆಂಬೆ,**
**ಘಾಯ... ೂಡಲ ಸಂಗಮದೇವಾ, ಅವರ ಮುಖಲಿಂಗಿಗಳೆಂ**
ದವನಾಗಿರು...
**ಬೆನು!**

ಡಲು ಬಂದರೆ ನ... ಹಿಡಿ, ಚೂರಿಹಿಡಿದುಕೊಂಡು ಇನ್ನೊಂದು ಕೈಯಲ್ಲಿ ಶಸ್ತ್ರವನ್ನು ... ನನ್ನ ನಿನ್ನಲ್ಲಿರುವ ಅಂತರವದೇನೆಂಬ...ಯೊಳಗೆ ಹೆಂಡದ ಮಡಕೆ ಕಚ್ಚಿ ಒಂದೆ ಎಂಬುದು ತಿಳಿಯುತ್ತದೆ; ಕೂಡಲ...ಗನಿದ್ದರೆ ಅವರೇ ಲಿಂಗನೆಂದು ...ವಿಸುವೆನು ಕೂಡಲ ಸಂಗಮ

**೭೦೧ ನಾನು ಆರಂಬವ ಮಾಡುವೆನಯ್ಯಾ.**
**ನಾನು ಬೆವಹಾರ ಮಾಡುವೆನಯ್ಯಾ ಲಿಂ...**
**ನಾನು ಪರಸೇವೆಯ ಮಾಡುವೆನಯ್ಯಾ ...ಯಲ್ಲಿ ಸಿಲುಕಿ**
**ಜಂಗಮದಾಸೋಹಾನಲ್ಲ!**

**ನಾನಾವಾವ ಕರ್ಮಂಗಳ ಮಾಡಿದರೆಯೂ**

**ಹಾರುವನಯ್ಯಾ ಶರಣರ ಬರವ ಗುಡಿಗಟ್ಟಿ,**
**ಕೂಡಲ ಸಂಗಮದೇವನು ವಿಪ್ರಕರ್ಮವ ಬಿಡಿಸಿ,**
**ಅಶುದ್ಧನ ಶುದ್ಧನ ಮಾಡಿನಾಗಿ!**

ಹೊನ್ನು, ಹೆಣ್ಣು, ಮಣ್ಣಿನ ಮೋಹಕ್ಕಾಗಿ ಸಂಸಾರಜಾಲದಲ್ಲಿ ಬಿದ್ದು ಅನ್ಯಾಯವಾಗಿ ಹಾಳಾಗಿ ಹೋಗುವ ಯಜ್ಞಮಾಡುವ ಬ್ರಾಹ್ಮಣ ನಾನಲ್ಲ; ಶರಣರು ಭ[illegible] ಬರುವುದನ್ನು ನೋಡುತ್ತಲಿದ್ದು ಅವರ ಚರಣಸೇವೆ ಎಂದು ಸಿಗುವು[illegible]ಂದು ಬೀಡಾರ ಮಾಡಿಕೊಂಡು ಕುಳಿತಿರುವೆನು; ಯಜ್ಞ ಯಾಗವೆಂಬ ಪಂಚಕರ್ಮಗಳಿಂದ ನನ್ನನ್ನು ಬಿಡಿಸಿ ಕೂಡಲ ಸಂಗಮ ದೇವರು ನನ್ನ ಆತ್ಮವನ್ನು ಪರಿಶುದ್ಧಮಾಡಿದರು.

**೭೧೦ ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ;**
**ತರ್ಕದ ಬೆನ್ನ ಬಾರನೆತ್ತುವೆ,**
**ಆಗಮದ ಮೂಗ ಕೊಯಿವೆ, ನೋಡಯ್ಯಾ.**
**ಮಹಾದಾನಿ, ಕೂಡಲ ಸಂಗಮದೇವಾ,**
**ಮಾದಾರ ಚೆನ್ನಯ್ಯನ ಮನೆಯ ಮಗ ನಾನಯ್ಯಾ.**

ವೇದ, ಶಾಸ್ತ್ರ, ತರ್ಕ, ಆಗಮಗಳನ್ನೆಲ್ಲ ಕಟ್ಟಿಮೂಲೆಗೆ [illegible] ಕೊಳೆಹಾಕುವೆ; ನನಗೆ ಅವುಗಳಲ್ಲಿ ವಿಶ್ವಾಸವಿಲ್ಲ; ನಾನು [illegible] ಚೆನ್ನಯ್ಯನ ಮನೆಯ ಪ್ರೀತಿಯ ಮಗನಿರುವೆನು ಕೂಡಲ[illegible]

**೭೧೧ ಆವ ಕುಲವಾದರೇನು? ಶಿವಲಿಂ[illegible]**
**ಕುಲವನರಸುವರೆ ಶರಣರಲ್ಲಿ [illegible]**
**ಇತ್ತೆಂದು, ಒಕ್ಕುದ[illegible]**
**ಕೂಡಲ ಸಂಗಮ[illegible]**

ಯಾವ ಜಾತಿ[illegible]
ಮನು. ಜಾತಿಸಂಕ[illegible]
ಅವರ[illegible] ಇವನು [illegible]

ಮಾಡುವುದು ತರವಲ್ಲ; ಕಾರಣ ಶರಣರುಂಡ ಎಂಜಲವನ್ನು ನಾನು ಸಿ
ನಾನು ಪುನೀತ ನಾಗುವೆ ಕೂಡಲಸಂಗಮದೇವಾ.

**೭೧೨ ಕಳ್ಳ ಬಂದಿಕಾರ, ಹಾವಡಿಗ, ಹಾದರಿಗ,**
**ಬಂಟನೋಲೆಯು ಕಾರನೆಂದೆನಾದರೆ:—**
**ನೀ ಮುಂತಾಗಿ ಬಂದ ಭಕ್ತರ ನೀಯೆನ್ನದಿದ್ದರೆ,**
**ಅದೇ ದ್ರೋಹ.**
**ನಡೆ ನುಡಿ ಹುಸಿಯುಂಟಾದರೆ**
**ಕೂಡಲ ಸಂಗನ ತೋರಿದ ಚೆನ್ನಬಸವಣ್ಣನಾಣೆ !**

ಕೈದಿಯಾದ ಕಳ್ಳನು, ಹಾವಾಡಿಗ, ಮತ್ತು ಹಾದರ ಮಾಡುವ
ನಿಮ್ಮ ಮನೆಯ ಕಾಯುವ ಆಳುಗಳು ಎಂದು ಹೇಳಿ ನಿಮ್ಮ ಸದ್ಭಕ್ತ
ಚಂಡಾಲಿಗಳೆಂದು ನುಡಿದರೆ ನಾನು ನಿಮಗೆ ದ್ರೋಹಮಾಡಿದಂತೆ ಯಾ
ತ್ತದೆ; ಹೀಗೆ ನನ್ನ ಮಾತು ಮತ್ತು ಆಚರಣೆಗಳು ಒಂದಕ್ಕೊಂದು ಭಿ
ವಾದರೆ ನಿಮ್ಮ ಚೆನ್ನಬಸವಣ್ಣನ ಆಣೆ ಕೂಡಲ ಸಂಗಮದೇವಾ !

**...೩ ಗುಮ್ಮಡಿಯಂತಪ್ಪ ತಾಯಿ ನೋಡೆನಗೆ,**
**...ಕಲಕೇತನಂತಪ್ಪ ತಂದೆ ನೋಡೆನಗೆ,**
**...ಟನಂತಪ್ಪ ಗಂಡ ನೋಡೆನಗೆ!**
**... ಸದೆದು ನೋಡಯ್ಯ:**
**...ೋದರೆ ಹೋಗಲ**
**... ಕೂಡಲ ಸಂಗಾ ನಿಮ್ಮಾಣೆ!**

...ಗಂಡನಂತೂ ಮೊಂಡ
...ಡಿಮೆಯಾಗಿಲ್ಲ; ಮ
...ಂತರಂಗದ ಮೂ
... ಬಿಡಲಾರೆ ಕೂ

೭೧೪ ತನುವ ಬಂದಲೆವರಯ್ಯಾ ಎನ್ನ, ಮನವ ಬಂದು ನೋಡುವರಯ್ಯಾ,
ಎನ್ನ ಧನವ ಬಂದು ಸೂರೆಗೊಂಬರಯ್ಯಾ
ಜಂಗಮುವನರತ !
ಕೂಡಲ ಸಂಗಮದೇವಾ,
ನಿಮ್ಮ ಬಯ್ಕೆಯು ಭಾಂಡಾರಕ್ಕೆ ನಾನು ಶುದ್ಧನಯ್ಯಾ.

ಕೂಡಲ ಸಂಗಮದೇವಾ, ನಿಮ್ಮ ಅಪೇಕ್ಷೆಯನ್ನು ಪೂರೈಸಲು ಸದಾ ಶುದ್ಧವಾದ ಹಾಗೂ ಸಿದ್ಧವಾದ ನನ್ನ ದೇಹವೆಂಬ ಪೆಟ್ಟಿಗೆಯನ್ನು ನಿಮ್ಮ ಶರಣರು ಬಂದು ಒಡೆಯುತ್ತಲಿದ್ದಾರೆ; ಮನಸೆಂಬ ಕೀಲಿಯನ್ನು ತೆಗೆಯಲು ಪ್ರಯತ್ನಮಾಡುತ್ತಲಿದ್ದಾರೆ; ಸಂಯಮ ಎಂಬಧನವನ್ನು ಸೂರೆ ಮಾಡುತ್ತಲಿದ್ದಾರೆ, ಜಂಗಮನು ನಿತ್ಯನೆಂದು ನಂಬಿರುವೆನು.

೭೧೫ 'ಒಡಯರೊಡವೆಯ ಕೊಂಡರೆ ಕಳ್ಳಂಗಳಲಾಯಿತ್ತೆಂಬ ಗಾದೆ ಎನಗಿಲ್ಲಯ್ಯಾ.
ಇಂದೆನ್ನ ವಧುವ, ನಾಳೆನ್ನ ಧನವ ನಾಳಿದ್ದೆನ್ನ ತನುವ ಬೇಡರೇಕಯ್ಯ ?
ಕೂಡಲ ಸಂಗಮದೇವಾ, ಆನುಮಾಡಿದುದಲ್ಲದೆ
ಬಯಸಿದ ಬಯಗ ಸಲುವುದೆ, ಅಯ್ಯಾ ?

ನನ್ನ ಯಜಮಾನರು ನನ್ನ ಆಭರಣಗಳನ್ನು ತೆಗೆದುಕೊಂಡರೆ ಕಳವಾಗಿಹೋದವೆಂದು ಹೇಳಲು ಬರುತ್ತದೆಯೇ ? ಹಾಗೆ ನಿಮ್ಮ ಶರಣರು ಈ ದಿನ ಬಂದು ನನ್ನ ಹೆಂಡತಿಯನ್ನು ಕೇಳಿದರೆ, ನಾಳೆ ಬಂದು ಸಂಪತ್ತನ್ನು ಕೇಳಿದರೆ, ನಾಡದು ಬಂದು ನನ್ನ ದೇಹವನ್ನೇ ಬೇಡಿದರೆ ನಾನು ವಿರೋಧಮಾಡುವುದಿಲ್ಲ; ನಾನು ಮಾಡಿದ ದಾನವು ನನ್ನನ್ನು ಕಾಪಾಡುತ್ತದಲ್ಲದೆ, ನನ್ನ ಬಯಕೆಗಳು, ಕಾಮನೆಗಳು ರಕ್ಷಿಸುವುದಿಲ್ಲ ಕೂಡಲ ಸಂಗಮ ದೇವಾ !

೭೧೬ ಕಲಿ ಕರುಳ ತಕ್ಕೈರ್ಗಸಿ ಹರಿಯ ಬಲ್ಲನಲ್ಲದೆ—
ಸಾಯ ಕಾಡಿಸುವರೆ, ಎಡೆಗೋಲನಿಕ್ಕುವರೆ

**ದಾತಾರ ನಧೀನವಲ್ಲದೆ—**
**ಕೂಡಲ ಸಂಗಮದೇವಾ ನೀ ಮಾಡಿದಂತಹುದಯ್ಯಾ**
**ತನು ಮನ ಧನದಲ್ಲಿ ವಂಚನೆಯು, ನಾನು ಬಯಸಿದ**
**ರೆಂತಯ್ಯಾ ?**

ವೀರಾಧಿವೀರರು ಶತೃಗಳನ್ನು ಬೆನ್ನಟ್ಟಿ ಇರಿದು ಕೊಲ್ಲುತ್ತಾರಲ್ಲದೆಯೆ ತಮ್ಮ ಸಾವನ್ನು ತಡೆಗಟ್ಟಲು ಸಾಧ್ಯವಿಲ್ಲ; ನಮ್ಮ ಸಂರಕ್ಷಣೆಯನ್ನು ಶಸ್ತ್ರಗಳು ಮಾಡಲಾರವು; ಹುಟ್ಟುಸಾವುಗಳು ಲೋಕಪಾಲಕನಾದ ಶಿವನ ಕೈಯಲ್ಲಿವೆ; ಕೂಡಲಸಂಗಮ ದೇವಾ ನಿಮ್ಮ ಸೇವೆಯಲ್ಲಿ ಕೊಂಚವೂ ವಂಚನೆಯ ಮಾಡಲಾರೆನು.

**೭೧೭ ಬಾಲಾಭ್ಯಾಸವ ಮಾಡ ಹೋದರೆ ಎನ್ನ ಸುರಿಗೆ**
**ಎನ್ನನಟ್ಟಿತು:**
**ಎಂತಯ್ಯಾ ಕಡಿಯೊಡನೆ ಶ್ರವವ ಮಾಡುವೆನು?**
**ರಾಯ ರಾಜಗುರು ಜಗದ ಬಿನ್ನಾಣಿಯ ತೊಡಕ**
**ಬಿಡಿಸಬಾರದು:**
**ಸರಿಸದ ಮೇಲೆ ಹಿಡಿಯ; ಹೋದರೆ**
**ಚದುರಂಗದ ಮೇಲೆ ಮಸಿಯ ತೋರಿದ**
**ಕೂಡಲ ಸಂಗಮದೇವ.**

ಹುಡುಗಬುದ್ಧಿಗೆ ತಕ್ಕಂತೆ ನಾನು ಸಂಸಾರದ ಆಟ ಹೂಡಿದರೆ ಈ ಜಗದ ಸಂಸಾರ ಕರ್ಮಗಳು ನನ್ನನ್ನು ಬಂಧಿಸಿದವು: ಈ ಬಂಧನ ಬಿಡಿಸಿಕೊಳ್ಳಲು ಹೆಡಿ ಕಠಿಣವಾದ ವೃತಗಳನ್ನಾಚರಿಸುತ್ತಿರುವೆನು; ದಾಂಭಿಕರ ದುಃಖವನ್ನು ಭಗವಂತನು ಎಂದಿಗೂ ಹೋಗಲಾಡಿಸುವದಿಲ್ಲ; ಈ ಡಾಂಭಿಕರು ಸುಳ್ಳುಮಾರ್ಗದಿಂದ ಹೋದರೆ ಅವರ ಆತ್ಮಕ್ಕೆ ಕಲಂಕವನ್ನು ಕೂಡಲ ಸಂಗಮ ದೇವರು ಹಚ್ಚುತ್ತಾನೆ.

**೭೧೮ ಸಮ ಚಿತ್ತವೆಂಬ ನೇಮದ ಹಲಗೆಯ ಹಿಡಿದು**
**ಶಿವಚಿತ್ತನೆಂಬ ಕೂರಲಗ ಕೊಂಡು**

**ಶರಣಾರ್ಥಿಯೆಂಬ ಶ್ರವವ ಕಲಿತರೆ**
**ಆಳುತನಕ್ಕೆ ದೇಶಿಯಪ್ಪೆ, ನೋಡಾ**
**ಮಾರಂಕ ಜಂಗಮ ಮನೆಗೆ ಬಂದಲ್ಲಿ ಇದಿರೆದ್ದು ನಡೆವುದು**
**ಕೂಡಲ ಸಂಗಮ ದೇವರನೊಲಿಸುವೊಡೆ ಇದು ಚಿನ್ನ!**

ಕೂಡಲ ಸಂಗಮ ದೇವರನ್ನು ಒಲಿಸಿಕೆಬಳ್ಳಬೇಕಾದರೆ ಈ ವ್ರತವನ್ನು ಆಚರಿಸಬೇಕು; ಸಮಾನದೃಷ್ಟಿಯುಳ್ಳವನಾಗಿದ್ದು ಕೊಂಡು ಶಾಂತಿಯಿಂದ ಶಿವನಾಮ ಭಜಿಸಿ ಹರನಿಗೆ ಶರಣು ಹೋದರೆ ಪರಮಾತ್ಮನ ದಾಸಾನುದಾಸನಾಗಿ ಇರಲು ನಾನು ಯೋಗ್ಯನಾಗುವೆನು; ಮತ್ತು ಜನನ ಮರಣ ಗೆದ್ದ ಜಂಗಮರು ಮನೆಗೆ ಬಂದರೆ ಅವರನ್ನು ಆದರದಿಂದ ಸತ್ಕರಿಸಬೇಕು; ಈ ವಿನಯವು ಶಿವನಿಗೆ ಪ್ರೀತಿಯದಾಗಿದೆ.

**೭೧೯ ಅಟ್ಟಾಟಿಕೆಯ ಮಾತದಾಡಲದೇಕೋ?**
**ಮುಟ್ಟಿ ಬಂದುದಕ್ಕಂಜಲದೇಕೋ?**
**ಕಾದಿದಲ್ಲದೆ ಮಾಣೆನು: ಓಡಿದರೆ ಭಂಗ ಹಿಂಗದಾಗಿ,**
**ಕೂಡಲ ಸಂಗಮದೇವಾ, ಎನ್ನ ಭಂಗ ನಿಮ್ಮದಾಗಿ!**

ಆಡಂಬರದ, ಸೊಕ್ಕಿನ ಮಾತುಗಳನ್ನು ನಾನು ಆಡುವುದಿಲ್ಲ; ಶಿವಪೂಜೆ ಮಾಡಿ ಪಾದಮುಟ್ಟಿ ನಮಸ್ಕಾರ ಮಾಡಿದಬಳಿಕ, ಬರುವ ವಿಧಿ ಸಂಕಟಗಳಿಗೆ ನಾನು ಅಂಜುವದಿಲ್ಲ; ವಿಧಿಯೊಂದಿಗೆ ಹೋರಾಡುವೆ; ಹಿಂತಿರುಗಿ ಓಡಿಹೋಗಲಾರೆ; ಕೂಡಲ ಸಂಗಮದೇವಾ ನನ್ನ ಅಪಮಾನವೆಂದರೆ ನಿಮ್ಮ ಅಪಮಾನವಾದ ಕಾರಣ ತಾನು ಹೇಡಿಯಾಗಲಾರನು.

**೭೨೦ ಲಿಂಗಕ್ಕಲ್ಲದೆ ಮಾಡೆನೀ ಮನವನು,**
**ಜಂಗಮಕ್ಕಲ್ಲದೆ ಮಾಡೆನೀ ಧನವನು.**
**ಪ್ರಸಾದಕ್ಕಲ್ಲದೆ ಮಾಡೆನೀ ತನುವನು.**
**'ಲಿಂಗ ಜಂಗಮದ ಪ್ರಸಾದಕ್ಕಲ್ಲದೆ ಬಾಯ್ದೆರೆಯೆನೆ'ಂಬು**
**ದೆನ್ನ ಭಾಷೆ,**

**ಅನರ್ಪಿತವಾದರೆ ತಪ್ಪೆನ್ನದು,**
**ಮೂಗ ಕೊಯಿ, ಕೂಡಲ ಸಂಗಮದೇವಾ.**

ನನ್ನ ತನು ಮನ ಧನಾದಿಗಳನ್ನು ಲಿಂಗ ಜಂಗಮ ಪ್ರಸಾದಗಳಿಗಲ್ಲದೇ ಅನ್ಯಕಾರ್ಯಗಳಿಗಾಗಿ ವಿನಿಯೋಗಿಸಲಾರೆ; ಲಿಂಗ ಜಂಗಮ ಪ್ರಸಾದಗಳಿಗಾಗಿಯೇ ನಾನು ಅರ್ಪಿಸುವೆನೆಂದು ವಚನ ಕೊಡುವೆನುದೇವಾ! ಈ ಮಾತಿಗೆ ತಪ್ಪಿದರೆ ನನ್ನ ಮೂಗು ಕೊಯ್ದುಹಾಕು ಕೂಡಲ ಸಂಗಮದೇವಾ!

## ಮಾಹೇಶ್ವರನ ಪ್ರಸಾದಿ ಸ್ಥಳ

**೭೨೧ ಅಂಕ ಕಂಡಾ : ಕೋಲಾಸೆ ಮತ್ತೇಕಯ್ಯಾ?**
**ಲೆಂಕ ಕಂಡಾ : ಪ್ರಾಣದಾಸೆ ಮತ್ತೇಕಯ್ಯಾ?**
**ಭಕ್ತ ಕಂಡಾ : ತನುಮನಧನದಾಸೆ ಮತ್ತೇಕಯ್ಯಾ?**
**ನಿಮ್ಮ ಅಂಕೆಗೆ ಝಂಕೆಗೆ ಶಂಖಿಸಿದೆನಾದರೆ**
**ಎನ್ನಲೆಂಕತನಕ್ಕೆ ಹಾನಿ, ಕೂಡಲಸಂಗಮದೇವಾ!**

ಕಂಬವು ಆಸರಕ್ಕೆ ದೊರೆತ ಬಳಿಕ ಕೈ ಕೋಲಿನ ಹಂಗೇತಕ್ಕೆ; ವೀರರ ಸಹವಾಸ ಮಾಡಿದ ಬಳಿಕ ಜೀವನದ ಮೇಲಿನ ಮೋಹ ವೇತಕ್ಕೆ; ಭಕ್ತರ ಪ್ರೀತಿ ದೊರೆತಬಳಿಕ ದೇಹ, ಮನ, ಸಂಪತ್ತುಗಳ ಲೋಭವೇತಕ್ಕೆ; ದೇವಾ ನಾನು ನಿಮ್ಮ ಆಜ್ಞಾಧಾರಕನಾಗಿರದೆ ಸಂಶಯ ಭೂತನಾದರೆ ನನ್ನ ಧೀರತನಕ್ಕೆ ಕುಂದು ಕೂಡಲಸಂಗಮದೇವಾ!

**೭೨೨ ನೀನಿರಿಸಿದ ಮನದಲ್ಲಿ ನಾನಂಜೆನಯ್ಯಾ :**
**ಮನವು ಮಹಾಘನಕ್ಕೆ ಶರಣಗತಿವೊಕ್ಕುದಾಗಿ**
**ನೀನಿರಿಸಿ ಧನದಲ್ಲಿ ನಾನಂಜೆನಯ್ಯಾ:**
**ಧನವು ಸತಿ ಸುತ ಮಾತಾ ಪಿತರಿಗೆ ಹೋಗದಾಗಿ.**
**ನೀನಿರಿಸಿದ ತನುವಿನಲ್ಲಿ ನಾನಂಜೆನಯ್ಯಾ:**
**ತನವು ಸರ್ವಾರ್ಪಿತದಲ್ಲಿ ನಿಯತ ಪ್ರಸಾದ ಭೋಗಿಯಾಗಿ**

**ಇದು ಕಾರಣ, ವೀರಧೀರ ಸನುಗ್ರಾಹಕನಾಗಿ,**
**ನಿಮಗಾ ನಂಜೆ, ಕೂಡಲ ಸಂಗಮ ದೇವಾ !**

ದೇವಾ, ನೀನಿರಿಸಿದ ಹಾಗೆ, ನೀ ಕೊಟ್ಟಜನ್ಮದಲ್ಲಿ ನಾನು ಇದುಂ ಕೊಂಡು ನಿಮ್ಮ ಚರಣಗಳಿಗೆ ನನ್ನ ಸರ್ವಸ್ವವನ್ನೂ ಧಾರೆಯೆರೆದು ವೀರ ನಾದ ಕಾರಣ ನಾನು ಯಾವುದಕ್ಕೂ ಅಂಜುವುದಿಲ್ಲ; ನಿಮಗೂ ನಾನು ಅಂಜಲಾರೆ ಕೂಡಲಸಂಗಮ ದೇವಾ !

**೭೨೩ ಹಲ್ಲು ಹತ್ತಿ ನಾಲಗೆ ಹೊರಳದಿದ್ದಲ್ಲಿ**
**ಮನವೆರಡಾದರೆ ಆಣೆ, ನಿಮ್ಮಾಣೆ !**
**ಮಾಡುವ ನೇಮಕ್ಕೆ ಫಲವಿಲ್ಲದಿದ್ದರೆ ಆಣೆ, ನಿಮ್ಮಾಣೆ !**
**ಕೂಡಲ ಸಂಗಮ ದೇವಾ ಎನ್ನಮನವ ನೋಡಲಟ್ಟಿದರೆ**
**ಪ್ರಸಾದವನಲ್ಲದೆ ಕೊಂಡರೆ ಆಣೆ, ನಿಮ್ಮಾಣೆ !**

ನನ್ನ ಹಲ್ಲುಗಳು ಬಿಗಿಯಾಗಿ ಸಾಯುವ ಸಂಕಟಕ್ಕೆ ಕೂಡಿಕೊಂಡು ನಿಮ್ಮ ನಾಮನೆನೆಯಲು ನಾಲಗೆ ಹೊರಳದಿದ್ದು ನನ್ನ ಮನಸ್ಸು ಸಿಥಿಲವಾದರೆ ನಿಮ್ಮಾಣೆ; ನಾನು ಮಾಡುವ ವ್ರತನೇಮಗಳಿಗೆ ಫಲವೆಂಬುದಿಲ್ಲವಾದರೆ, ದೃಢತೆಯಿಲ್ಲದಿದ್ದರೆ ನಿಮ್ಮಾಣೆ; ನೀವು ನನ್ನ ಮನಸ್ಸಿಗೆ ನಿಮ್ಮ ಅನುಭಾವದ ಸಂಸ್ಕಾರ ಮಾಡಬೇಕು; ಹೀಗಿದ್ದೂ ನನ್ನ ಮನಪರಿಕ್ಷೀಸಲು ಬಂದರೆ ನಿಮ್ಮ ಪ್ರಸಾದದ ಹೊರತು ಬೇರೆಏನನ್ನೂ ಸೇವಿಸುವುದಿಲ್ಲ ಕೂಡಲ ಸಂಗಮ ದೇವಾ !

**೭೨೪ ಹೊಕ್ಕಲ್ಲಿ ಹೊಕ್ಕು ನಿಮ್ಮೊಕ್ಕುದ ನುಂಬವನ ಕುಲವೇನೊ?**
**ದೇವ, ನೀ ನೊಲಿದವನ, ಸ್ವಾಮೀ ನೀ ಹಿಡಿದವನ ಕುಲ ವೇನೊ ?**
**ಕುಲಕ್ಕೆ ತಿಲಕ ನಮ್ಮ ಮಾದಾರ ಚೆನ್ನಯ್ಯ ನಿಮ್ಮಿಂದಧಿಕ !**
**ಕೂಡಲ ಸಂಗಮ ದೇವಾ,**

ಲಿಂಗ ಪ್ರಭು ನೀ ಇದ್ದ ಮನೆಯಲ್ಲಿ ಹೊಕ್ಕು ನಿಮ್ಮ ಪ್ರಸಾದವನ್ನು ಉಂಡು ಬರುವ ಭಕ್ತರ ಕುಲ ಜಾತಿಗಳನ್ನು ಏನೆಂದು ಹೇಳಲಿ ! ಪ್ರಭು ನಿನ್ನ ಅಂತಃಕರುಣೆಗೆ ಪಾತ್ರನಾದ ಭಕ್ತನ ಕುಲವು ಎಂತಹದೆಂದು

ಹೇಳಲಿ ! ಸಕಲ ಕುಲಜಾತಿಗಳಿಗೆ ತಿಲಕನಾಗಿರುವವನೇ ಮಾದಾರ ಚೆನ್ನಯ್ಯನು; ಕೂಡಲ ಸಂಗಮದೇವಾ !

**೭೨೫ ಹುಟ್ಟಿದ ಮಕ್ಕಳೆಲ್ಲಾ ಅರ್ಥ ಪ್ರಾಣಾಭಿಮಾನಕ್ಕೆ**
**ಒಡೆಯರಾದ ಪರಿಯ ನೋಡಾ;**
**ಅಟ್ಟಡಿಗೆಯ ವಿಷವನು ನಿಮಗೆ ಕೊಟ್ಟಲ್ಲದೆ**
**ಉಣ್ಣೆನೆಂಬ ಭಾಷೆ !**
**ಕೂಡಲ ಸಂಗಮ ದೇವಯ್ಯಾ, ನಿನಗೆಂರಟ್ಟಡಿಗೆಯ**
**ನೀಡಕಲಿಸಿದಾತ ಕೆಂಬಾವಿಯ ಭೋಗಯ್ಯಾ.**

ಹುಟ್ಟಿದ ಮಕ್ಕಳೆಲ್ಲರೂ ಧನಕನಕಾದಿಗಳಿಗೆ ಯಜಮಾನರಾಗಿದ್ದಾರೆ; ಮಾಡಿದ ಅಡಿಗೆ ಕೆಟ್ಟು ಹೋದರೆ ಅದನ್ನು ದೇವರಿಗೆ ನೀಡುತ್ತಾರೆ; ಆದರೆ ನಿನಗೆ ಮಾಡಿದ ರುಚಿ ಅಡಿಗೆಯನ್ನು ನಿಮಗೂ ನಿಮ್ಮ ಜಂಗಮರಿಗ್ಯೂ ಉಣಬಡಿಸುವ ಬುದ್ಧಿಯನ್ನು ಕಲಿಸಿದಾತನು ಕೆಂಬಾವಿಯ ಭೋಗಯ ನೆಂಬ ನಿಮ್ಮ ಸದ್ಭಕ್ತನು. ಕೂಡಲಸಂಗಮದೇವಾ !

**೭೨೬ ಬತ್ತೀಸಾಯುಧದಲ್ಲಿ ಅಭ್ಯಾಸವ ಮಾಡಿದರೇನು,**
**ಹಗೆಯ ಕೊಲುವರೆ ಒಂದಲಗು ಸಾಲದೆ?**
**ಲಿಂಗವ ಗೆಲುವರೆ 'ಶರಣ ಸತಿ-ಲಿಂಗಪತಿ'**
**ಎಂಬುದೊಂದಲಗುಸಾಲದೆ?**
**ಎನಗೆ ನಿನಗೆ ಜಂಗಮ ಪ್ರಸಾದವೆಂಬಲಗು ಸಾಲದೆ?**
**ಕೂಡಲ ಸಂಗಮ ದೇವಾ ?**

ಮೂವತ್ತೆರಡು ಪ್ರಕಾರಗಳ ಶಸ್ತ್ರಾಸ್ತ್ರಗಳವಿದ್ಯೆ ಕಲಿತರೇನಾಯಿತು; ವೈರಿಯನ್ನು ಕೊಲ್ಲುವುದಕ್ಕೆ ಒಂದೇ ಒಂದು ಕಿರುಗತ್ತಿ ಸಾಕು; ಲಿಂಗವನ್ನು ಗೆಲ್ಲಬೇಕಾದರೆ ಶರಣಸತಿ ಲಿಂಗಪತಿ ಎಂಬ ಭಾವ ಮನದಲ್ಲಿ ಹುಟ್ಟಬೇಕು; ನಾನು ನೀನೆಂಬ ದ್ವಿಭಾವವನ್ನು ಕಳೆಯಲು ಜಂಗಮ ಪ್ರಸಾದವೊಂದೇ ಸಾಕು ಕೂಡಲ ಸಂಗಮದೇವಾ !

# ಮಾಹೇಶ್ವರನ ಪ್ರಾಣಲಿಂಗಸ್ಥಳ

೭೨೭ ಕೊಲ್ಲೆನಯ್ಯಾ ಪ್ರಾಣಿಗಳ, ನೊಲ್ಲೆನಯ್ಯಾ ಬಾಯಿಚ್ಛೆಗೆ,
ಒಲ್ಲೆನಯ್ಯಾ ಪರಸತಿಯರ ಸಂಗವ:
ಒಲ್ಲೆನಯ್ಯಾ ಮುಂದೆ ತೊಡಕುಂಟೆಂಬುದ!
ಬಳ್ಳದ ಬಾಯಂತೆ ಒಂದೇ ಮನವ ಮಾಡಿ
ನಿಲ್ಲೆಂದು ನಿಲ್ಲಿಸಯ್ಯಾ, ಕೂಡಲ ಸಂಗಮ ದೇವಾ,

ನಾಲಿಗೆಯ ರುಚಿಗಾಗಿ ಪ್ರಾಣಿಗಳನ್ನು ಕೊಂದು ತಿನ್ನಲಾರೆ; ಮನಸ್ಸಿನ ಇಚ್ಛಾನುಸಾರ ಪರಸತಿಯರ ರತಿ ಸುಖ ನಾನು ಬಯಸುವುದಿಲ್ಲ, ಸಂಸಾರದಿಂದ ಹೊರಗೆ ಬರುವುದೆಂದರೆ ಬಲು ಜಂಜಡವೆಂಬುದು ನನಗೆ ಗೊತ್ತಿದೆ; ದೊಡ್ಡ ದೊಡ್ಡ ಮಡಕೆಗಳಿಗೆ ಒಂದೇ ಬಾಯಿಯಿರುವಂತೆ ಮನಸ್ಸನ್ನು ಒಂದೇ ಮಾಡಿಕೊಂಡು ದೇವರ ಪಾದಾರವಿಂದಗಳಲ್ಲಿ ನೆಲೆಸಬೇಕೆಂದು ಪ್ರಾರ್ಥಿಸುವೆ ಕೂಡಲ ಸಂಗಮದೇವಾ!

೭೨೮ ಆನೆ ಅಂಕುಶ ಕಂಜುವುದೆ, ಅಯ್ಯಾ;
ಮಾಣದೆ ಸಿಂಹದ ನಖವೆಂದು ಅಂಜುವುದಲ್ಲದೆ?
ಆನೀ ಬಿಜ್ಜಳಂಗಂಜುವೆನೆ, ಅಯ್ಯಾ,
ಕೂಡಲ ಸಂಗಮ ದೇವಾ,
ನೀನು ಸರ್ವಜೀವದಯಾಪಾರಿಯಾದ ಕಾರಣ
ನಿನಗಂಜುವೆನಲ್ಲದೆ?

ಆನೆಯು ಅಂಕುಶಕ್ಕೆ ನಿಜವಾಗಿಯೂ ಅಂಜುವುದಿಲ್ಲ; ಆ ಅಂಕುಶವು ಸಿಂಹದ ಉಗುರೆಂದು ಅಂಜುತ್ತದೆ; ಆ ರೀತಿ ನಾನು ಈ ಬಿಜ್ಜಳರಾಯನಿಗೆ ಹೆದರುವದಿಲ್ಲ; ಕೂಡಲ ಸಂಗಮದೇವಾ ನೀನು ಸರ್ವಂತರ್ಯಾಮಿಯಾಗಿರುವ ಕಾರಣ ಮತ್ತು ನೀನು ದಯಾಪರನಾಗಿರುವುದರಿಂದ ನಿನಗೆ ಅಂಜಿ ಅಳುಕಿ ನಡೆಯುವೆನು!

**೭೨೯ ಬಂದಹೆನೆಂದು ಬಾರದೆ ಇದ್ದರೆ, ಬಟ್ಟೆಗಳ**
**ನೋಡುತ್ತ ಇದ್ದೇನಯ್ಯಾ.**
**ಇನ್ನಾರನಟ್ಟುವೆ, ಇನ್ನಾರ ಪಾದವ ಹಿಡಿವೆನಯ್ಯಾ !**
**ಕೂಡಲ ಸಂಗಮನ ಶರಣರು ಬಾರದಿದ್ದರೆ**
**ಅಟ್ಟುವೆನೆನ್ನ ಪ್ರಾಣವನು !**

ದೈವಲಿಂಗವೇ, ನೀನು ಬರುವೆನೆಂದು ಹೇಳಿ ಬಾರದಿದ್ದರೆ ನಿನ್ನ ಹಾದಿ ಕಾಯುತ್ತ ಕುಳಿತು ಕೊಳ್ಳುವೆ; ಯಾರ ಪಾದಗಳಿಗೆ ನಮಿಸಲಿ? ಕೂಡಲ ಸಂಗಮದೇವರ ಶರಣರು ಬರದಿದ್ದರೆ ನನ್ನ ಪ್ರಾಣವನ್ನೇ ಕಳಿಸುವೆನು ! ನಿಮ್ಮ ಬಳಿ ನಾನು ಬರುವೆ.

## ಮಾಹೇಶ್ವರನ ಶರಣಸ್ಥಳ.

**೭೩೦ ಅರಸನು ಮಂಚಕ್ಕೆ ಬರಿಸಿ ಎನ್ನ ಬೆರಸಿದ ಬಳಿಕ**
**ಆನಂಜುವಳೆ? ಆನು ಸಿರಿಯುಕ್ಕನೇ :**
**ಪರುಷ ಮುಟ್ಟಿದ ಬಳಿಕ ಲೋಹವೆ?**
**ಕೂಡಲ ಸಂಗಮ ದೇವಯನ್ನನೊಲ್ಲದೊಡಾನು**
**ಬದುಕುವೆನೆ ?**

ಸಂಗಮರಾಜನು ಪ್ರೇಮದಿಂದ ತನ್ನ ಮಂಚಕ್ಕೆ ನನ್ನನ್ನು ಕರೆಸಿಕೊಂಡು ನನ್ನನ್ನು ಕೂಡಿಕೊಂಡ ಬಳಿಕ ನಾನು ಅಂಜಬೇಕೇಕೆ? ನಾನು ಪಾವನಳಾಗಲಾರೆನೆ? ಪರುಷದ ಸಂಬಂಧವಾದ ಬಳಿಕ ಕಬ್ಬಿಣದ ಕೊಳೆ ಹೋಗಿ ಬಂಗಾರವಾಗುತ್ತದೆ; ಕೂಡಲ ಸಂಗಮದೇವರು ನನ್ನನ್ನು ಪ್ರೇಮಿಸದೆ ಇದ್ದರೆ ನಾನು ಬದುಕುವದಾದರೂ ಸಾಧ್ಯವೆ?

**೭೩೧ ಎಲ್ಲಿ ಹೊಕ್ಕಲ್ಲಿ ನಿನ್ನ ವಿಕಾರವ ಮಾಣೆ: ಗರುವತನವೆ ?**
**ದಾಸನ ವಸ್ತ್ರವನುಡುವುದೊಂದು ಗರುವತನವೆ !**
**ಸಿರಿಯಾಳನ ಮಗನ ಬೇಡುವುದೊಂದು ಗರುವತನವೆ !**
**ಕೋಡಗನ ಹುಲ್ಲಲಿ ಮುಸುಕಿದಂತೆ**
**ಕೂಡಲ ಸಂಗಮ ದೇವಾ, ನಿಮ್ಮ ಪರಿ !**

ಹೋದಲ್ಲೆಲ್ಲ ನಿಮ್ಮ ಸಗುಣವನ್ನು ನೆನೆಯದೇ ಇರಲಾರೆ; ಅದು ಗರ್ವವೆನಿಸಲಾರದು; ದಾಸನ ಬಟ್ಟೆಯನ್ನು ಉಟ್ಟು ಕೊಂಡಿರುವದು ನಿನಗೆ ಗರ್ವವಾಗುತ್ತದೆಯೇ? ಸಿರಿಯಾಳನ ಮಗನನ್ನು ಬೇಡುವುದು, ನಿಮಗೆ ಗರ್ವ ವೆನಿಸುತ್ತದೆಯೆ? ಹೆ ದೇವಾ ನೀನು ಜಗದಲ್ಲಿ ನೆಲೆಸಿರುವುದು ಎತ್ತರವಾದ ಹುಲ್ಲು ಗದ್ದೆಯಲ್ಲಿ ಮಂಗವು ಮುಚ್ಚಿಕೊಂಡಿರುವಂತಿದೆ; ಕೂಡಲ ಸಂಗಮ ದೇವಾ.

**೭೩೨ ಸಿರಿಯಾಳನ ಮಗನ ಬಾಣಸವ ಮಾಡಿಸಿ**
**ಉಣಲೊಲ್ಲದೆ ಕಾಡಿದೆ,**
**ಚೋಳನ ಮನೆಯಲ್ಲುಣಲೊಲ್ಲದೆ, ಚೆನ್ನನ**
**ಮನೆಯಲುಂಡೆ :**
**ಒಬ್ಬರಿಗೊಂದು ಪರಿಯ ಮಾಡಿದೆ**
**ಕೂಡಲ ಸಂಗಮ ದೇವಾ !**

ಸಿರಿಯಾಳನ ಮಗನ ದೇಹಪಾಕಮಾಡಿಸಿ ಊಟಮಾಡದೆ ಸುಮ್ಮನೆ ಕಾಡಿದೆ. ಚೋಳನ ಮನೆಯಲ್ಲಿ ಊಟ ಮಾಡದೆ ಚೆನ್ನಯ್ಯನ ಮನೆಯಲ್ಲಿ ಊಟ ಮಾಡಿದೆ; ಹೀಗೆ ತಾರತಮ್ಯವನ್ನು ನೀನು ಮಾಡಿದ್ದು ಬಲು ಮೋಜು ಕೂಡಲ ಸಂಗಮ ದೇವಾ.

**೭೩೩ ಒಬ್ಬನ ಮನೆಯಲ್ಲುಂಡು ಹೊತ್ತುಗಳೆವೆ,**
**ಒಬ್ಬನ ಮನೆಯಲುಡಲೊಂದು ಗಳಿಸಿದೆ:**
**ಗರ್ವ ಬೇಡ, ಬೇಡ ನಿನಗೆ !**
**ಚೆನ್ನಯ್ಯನ ಮನೆಯಲ್ಲಂಬಲಿಯ ನುಂಡು ಬದುಕಿದೆ,**
**ಗರ್ವ ಬೇಡ, ಬೇಡ !**
**ಕೂಡಲ ಸಂಗಯ್ಯಾ, ಸಿರಿಯಾಳನಿಂದ**
**ಮಾನಿಸಲೋಕಗಂಡೆ !**

ಓರ್ವ ಭಕ್ತನ ಮನೆಯಲ್ಲಿ ಉಂಡು ಕಾಲ ಕಳೆಯುವೆನು; ಇನ್ನೋರ್ವ ಭಕ್ತನ ಮನೆಯಲ್ಲಿ ಉಟ್ಟುಕೊಳ್ಳಲು ವಸ್ತ್ರಗಳನ್ನು ಪಡೆದಿರುವೆನು;

ಸೊಕ್ಕೆಂಬುದು ಬೇಡ; ಭಕ್ತಶ್ರೇಷ್ಠ ಚೆನ್ನಯ್ಯನ ಮನೆಯಲ್ಲಿ ಅಂಬಲಿ ಉಂಡು ಬದುಕಿಕೊಂಡಿರುವೆನು; ಕೂಡಲ ಸಂಗಮದೇವಾ ಸಿರಿಯಾಳನ ಭಕ್ತಿಯಿಂದ ಅಂತರಂಗ ಭಕ್ತಿಯನ್ನು ಕಲಿತೆನು.

**೭೩೪ ಹರಿಯಜ ಮುನಿಗಳೆಲ್ಲರೂ ನಿಜ, ನಿಮ್ಮ ಬಾಗಿಲ**
**ಕಾಯ್ದಿಹರು :**
**ಏನು ಕಾರಣ ನೀವು ಬಾಣನ ಬಾಗಿಲ ಕಾಯ್ದಿರಿ ?**
**ಡಿಂಗರಿಗನ ಮನೆಗೆ ಅಂಗಜವಾಹಕ್ಕೆ ಹೋಗಿದ್ದರೊಳರೆ**
**ಕೂಡಲ ಸಂಗಮ ದೇವಾ ?**

ವಿಷ್ಣುವು, ಅಜ, ಮುನಿಗಳೆಲ್ಲರೂ ಶಿವನೆ, ನಿಮ್ಮ ಬಾಗಿಲನ್ನು ಕಾಯ್ದರು; ಆಧರೆ ನೀವು ಯಾವ ಕಾರಣಕ್ಕಾಗಿ ಬಾಣಾಸುರನ ಮನೆಯ ಬಾಗಿಲು ಕಾಯಬೇಕಾಯ್ತು ? ಭಿಕ್ಷುಕನ ಮನೆಗೆ ಭಿಕ್ಷೆ ಬೇಡಲು ಹೋಗುವುದು ಒಳಿತೆ ? ಕೂಡಲ ಸಂಗಮ ದೇವಾ !

**೭೩೫ ಶಿವಲೋಕಕ್ಕೆ ಸರಿ ಬೇರೆ ಲೋಕವಿಲ್ಲ;**
**ಜಗಕ್ಕೆ ಇಕ್ಕಿದೆ ಮುಂಡಿಗೆಯನೆತ್ತಿಕೊಳ್ಳಿ :**
**'ಕೂಡಲ ಸಂಗಯ್ಯನೊಬ್ಬನೇ ದೈವ'ವೆಂದು.**

ಕೈಲಾಸಕ್ಕೆ ಸರಿಸಮಾನವಾದಂಥ ಸ್ಥಳವು ಬೇರೆ ಯಾವುದೂ ಇಲ್ಲ; ಜಗತ್ತಿನಲ್ಲಿ ಹಬ್ಬಿಕೊಂಡಿರುವ ಶಿವರೂಪವನ್ನು ಕಂಡುಕೊಳ್ಳಿರಿ; ಸಕಲ ಜೀವಾತ್ಮರಿಗೂ ಕೂಡಲ ಸಂಗನು ದೇವರೊಬ್ಬನೇ ದೇವನೆಂದು ತಿಳಿದು ಕೊಳ್ಳಿರಿ; ಜೀವನ ಸಾರ್ಥಕ ಮಾಡಿಕೊಳ್ಳಿರಿ.

**೭೩೬ ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ :**
**ಪಾತಾಳದಿಂದತತ್ತ ನಿಮ್ಮ ಶ್ರೀ ಚರಣ,**
**ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ !**
**ಅಗಮ್ಯ ಅಗೋಚರ ಅಪ್ರತಿಮ ಲಿಂಗವೆ,**
**ಕೂಡಲ ಸಂಗಮ ದೇವಯ್ಯಾ,**
**ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯಾ !!**

ಜ್ಞಾನಲಿಂಗವೆ, ನಿಮ್ಮ ಪಾದವು ಘನವಾದುದು; ಅದು ಭೂಮಿಯೆಲ್ಲವನ್ನೂ ಆಕಾಶವೆಲ್ಲವನ್ನೂ, ಮನದಗಲವನ್ನೂ, ನಿಮ್ಮ ಭಾವನೆಯಗಲವನ್ನೂ ವ್ಯಾಪಿಸಿರುತ್ತದೆ; ಅಗಮ್ಯನೂ ಕಣ್ಣಿಗೆ ಕಾಣದ ಘನಲಿಂಗವೆ ನನ್ನ ಅಂಗೈಯಲ್ಲಿ ಬಂದು ನೆಲೆಸಿ ಹೊಳೆಯುತ್ತಿರುವಿರಿ,ಕೂಡಲ ಸಂಗಮದೇವಾ.

**೭೩೭ ಗೋತ್ರನಾಮವ ಬೆಸಗೊಂಡರೆ**
**ಮಾತುನೊಂಕದೆ ಸುಮ್ಮನಿದ್ದಿರಿದೇನಯ್ಯಾ ?**
**ತಲೆಯ ಕುತ್ತಿ ನೆಲನ ಬರೆಯುತ್ತಿದ್ದಿರಿದೇನಯ್ಯಾ ?**
**ಗೋತ್ರ ಮಾದಾರ ಚೆನ್ನಯ್ಯನೆಂಬುದೇನು,**
**ಕೂಡಲ ಸಂಗಯ್ಯಾ ?**

ನಿಮ್ಮ ಗೋತ್ರ ಕುಲಗಳ ಬಗ್ಗೆ ವಿಚಾರಿಸಿದರೆ, ದೇವಾ, ಏನೂ ಉತ್ತರ ಕೊಡದೆ ತಲೆ ಕೆಳಗೆ ಮಾಡಿ ನೆಲದಲ್ಲಿ ದೃಷ್ಟಿ ಇಟ್ಟು ಮಣ್ಣು ಕೆದರುತ್ತೀರಿ ಏಕೆ? ಮಾದಾರ ಚೆನ್ನಯ್ಯನ ಗೋತ್ರವೆಂದರೇನು, ಕೂಡಲ ಸಂಗಮದೇವಾ ?

**೭೩೮ 'ಈಶ್ವರ ಸದ್ಭಾವೇ ಕಿಂ ಪ್ರಮಾಣಂ'**
**ಎಂಬ ಮೀಮಾಂಸಕನ ಮೂಗಿನ ಕೊನೆಯ**
**ಸುರಗಿಯಲಿರಿದು,**
**ವೈಶೇಷಿಕ ಎಂಬ ಇಟ್ಟಿಗೆಯಲೊರಸಿ,**
**ಕೂಡಲ ಸಂಗಯ್ಯನೆಂಬ ಕನ್ನಡಿಯ ತೋರುವೆನು !**

ಈಶ್ವರನ ಸದ್ಭಾವನೆಗೆ ಯಾವ ಪ್ರಮಾಣವಿದೆ ? ಎಂದು ಪ್ರಶ್ನೆ ಮಾಡುವ ವಿಮರ್ಶಕನ ಮೂಗಿನ ತುದಿಯನ್ನು ಸಣ್ಣ ಚೂರಿಯಿಂದ ಕೊಯ್ದು ವಿಶಿಷ್ಟ ಜ್ಞಾನವೆಂಬ ಮಣ್ಣಿನ ಮುದ್ದೆಯನ್ನು ಹಚ್ಚಿ, ಕೂಡಲ ಸಂಗಮ ದೇವರೆಂಬ ಕನ್ನಡಿಯನ್ನು ಮುಖದ ಮುಂದೆ ಇಡುವೆನು.

**೭೩೯ ನಿಷ್ಠೆಯಿಂದ ಲಿಂಗವ ಪೂಜಿಸಿ**
**ಮತ್ತೊಂದು ಪಥವನರಿಯದ ಶರಣರು**

**ಸರ್ಪನ ಹೆಡೆಯ ಮಾಣಿಕದಂತಿಪ್ಪರು ಭೂಷಣರಾಗಿ !**
**ದರ್ಪಣದೊಳಗಣ ಪ್ರತಿಬಿಂಬದಂತೆ ಹಿಂಗದಿಪ್ಪರು,**
**ಕೂಡಲ ಸಂಗಮ ದೇವಾ, ನಿಮ್ಮ ಶರಣರು.**

ಶ್ರದ್ಧೆಯಿಂದ ಲಿಂಗವನ್ನು ಪೂಜಿಸಿ ಲಿಂಗದಲ್ಲಿ ನಂಬಿಕೆ ಇಟ್ಟ ಶರಣರಿಗೆ ಬೇರೆ ದಾರಿಗಳು ಕಾಣುವುದಿಲ್ಲ. ಆದುದರಿಂದ ಆ ಶರಣರು ಹಾವಿನ ಹೆಡೆಯಲ್ಲಿ ಥಳಥಳಿಸುತ್ತಿರುವ ರತ್ನದಂತೆ ಲೋಕಭೂಷಣರಾಗಿರುತ್ತಾರೆ; ಕನ್ನಡಿಯಲ್ಲಿಯ ಪ್ರತಿಬಿಂಬದಂತೆ ಅವರು ಅಮರರು.

**೭೪೦ ಪಂಚಬ್ರಹ್ಮವ ಕೆಡಿಸಿತ್ತು; ಪ್ರಣವ ಮಂತ್ರವ ನೀಡಾಡಿತ್ತಲ್ಲಾ,**
**ಕರ್ಮಂಗಳನೇ ಕಳೆಯಿತ್ತು; ಕ್ರೀಗಳನೆಮೀರಿತ್ತಲ್ಲಾ;**
**ಆಗಮದ ಹಲ್ಲನೆ ಕಳೆಯಿತ್ತು**
**ಕೂಡಲ ಸಂಗಯ್ಯನ ಭಕ್ತಿಗಜ ಹೋ !**

ಕೂಡಲ ಸಂಗಮ ದೇವರ ಭಕ್ತಿಯೆಂಬ ಆನೆಯು ಐದು ಬ್ರಹ್ಮ ಸಂಸ್ಕಾರಗಳನ್ನು ಇಲ್ಲದಂತೆ ಮಾಡಿತು; ಸರ್ವ ಕರ್ಮಗಳನ್ನು ನಾಶ ಮಾಡಿ ಪುನರ್ಜನ್ಮದ ಬೇರನ್ನೇ ಕಿತ್ತು ಹಾಕಿತು.

**೭೪೧ ನೀನಲ್ಲದನ್ಯ ದೈವವುಂಟೆಂಬುವನ ಬಾಯ**
**ಕೆನ್ನಾರೆ ಸೀಳಿದಲ್ಲದೆ ನಿನ್ನ ಮುನಿಸು ಹೋಗದಯ್ಯಾ**
**ಎನ್ನ ಕೋಪವಡಗದಯ್ಯಾ!**
**ಎನ್ನ ಬಿನ್ನಪವನವಧರಿಸು; ಕೂಡಲ ಸಂಗಮದೇವಾ.**

ಕೂಡಲ ಸಂಗಮದೇವಾ, ನೀನಲ್ಲದೆ ಬೇರೆ ದೇವರು ಇರುವನೆಂದು ಹೇಳುವವರ ಬಾಯಿ ಹರಿದು ಹಾಕಿದರೂ ನನ್ನ ಸಿಟ್ಟು ಕಡಿಮೆಯಾಗುವದಿಲ್ಲ; ನನ್ನ ಅಹವಾಲನ್ನು ಸ್ವಲ್ಪ ಕೇಳು ದೇವಾ ?

**೭೪೨ ವೇದ ನಡನಡುಗಿತ್ತು, ಶಾಸ್ತ್ರವಗಲಿ ಕೆಲಕ್ಕೆ ಸಾರಿದ್ದಿತಯ್ಯಾ;**
**ತರ್ಕ ತರ್ಕಿಸಲರಿಯದೆ ಮೂಗವಟ್ಟಿದ್ದಿತ್ತಯ್ಯಾ;**

**ಆಗಮ ಹೊರತೊಲಗಿ ಅಗಲಿ ಇದ್ದಿತ್ತಯ್ಯಾ,**
**ನಮ್ಮ ಕೂಡಲಸಂಗಯ್ಯನು**
**ಚೆನ್ನಯ್ಯನ ಮನೆಯಲುಂಡ ಕಾರಣ!**

ಕೂಡಲ ಸಂಗಮದೇವರು ಮಾದರ ಚೆನ್ನಯ್ಯನ ಮನೆಯಲ್ಲಿ ಊಟ ಮಾಡಿದ ಕಾರಣ ವೇದಕ್ಕೆ ಭಯವಾಗಿ ನಡುಗು ಬಂದಿತು; ಶಾಸ್ತ್ರವು ಶಿವದೇವರಿಂದ ದೂರವಾಯಿತು; ತರ್ಕಶಾಸ್ತ್ರವು ಶಿವನ ಮಹಿಮೆಯನ್ನು ತಿಳಿಯಲಾರದೆ ಮೂಗು ಮುರಿದುಕೊಂಡು ಕುಳಿತಿತು; ಆಗಮವಂತೂ ಆಗಮ್ಯನಾದ ಪರಮಾತ್ಮನಿಂದ ಹೊರಗೆ ಬಂದು ಅವನಿಂದ ದೂರವಾಯಿತು; ಶಿವಲಿಂಗದ ಮಹಿಮೆ ಭಕ್ತನ ಬಿಟ್ಟು ಬೇರಾರಿಗೂ ತಿಳಿಯದು.

**೭೪೩ ಚಿಕ್ಕದೊಂದು ಹೊತ್ತಗೆ, ಬೆನಕನ ಕರಡಗೆಯಯ್ಯಾ,**
**ನೀಡುಂಡುಟಗೆ ಗೊರವನಯ್ಯಾ.**
**ಪುಣ್ಯವೇನಾದರಾಗಲಿ, ಡಕ್ಕೆಯ ಮೇಲೆ ಅಕ್ಕಿಯ ತಳಿದೆನು:**
**ನಮ್ಮ ಕೂಡಲ ಸಂಗಮ ದೇವರಲ್ಲದೆ**
**ಅನ್ಯದೈವವುಂಟೆನ್ನದಿರು, ಕಂಡಾ!**

ಸಣ್ಣದೊಂದು ಪುಸ್ತಕವನ್ನು ತಲೆಯ ಮೇಲೆ ಇಟ್ಟುಕೊಂಡು, ಕೈಯಲ್ಲಿ ಡೋಣಿಯನ್ನು ಹಿಡಿದುಕೊಂಡು ಅಂಗೈಯಲ್ಲಿ ನೀಡಿಸಿಕೊಂಡು ಊಟ ಮಾಡುನವರೇ ಗೋರಪ್ಪಗಳು; ಪುಣ್ಯವು ಬರಲಿ ಬಾರದಿರಲಿ, ಡಮರು ಬಾರಿಸಿ ಅಕ್ಕಿಯನ್ನು ಸಂಪಾದಿಸಿದ ಗೊರವಯ್ಯಗಳೇ ಅನ್ಯದೇವರು ಇದ್ದಾನೆಂದು ಸಾರಬೇಡಿರಿ; ವಿಶ್ವಕ್ಕೆಲ್ಲ ಕೂಡಲ ಸಂಗಮ ದೇವನೊಬ್ಬನೇ ದೇವರು.

**೭೪೪ ನ್ಯಾಯನಿಷ್ಠುರಿ, ದಾಕ್ಷಿಣ್ಯಪರನು ನಾನಲ್ಲ;**
**ಲೋಕವಿರೋಧಿ, ಶರಣನಾರಿಗಂಜುವನಲ್ಲ**
**ಕೂಡಲ ಸಂಗಮದೇವರ ರಾಜ ತೇಜದಲ್ಲಿಪ್ಪನಾಗಿ.**

ಹೇ ಪ್ರಭೋ ನಾನು ಕಠಿಣೋಕ್ತಿಗಳನ್ನು ಆಡುವವನಲ್ಲ; ಪರರ ಅಂಕಿತದಲ್ಲಿದ್ದು ಅವರ ಬಣ್ಣದ ಮಾತುಗಳಿಗೆ ಮೋಸ ಹೋಗುವ ಭಕ್ತ ನಾನಲ್ಲ; ಲೋಕ ವ್ಯವಹಾರವನ್ನು ಸುಧಾರಿಸಿ ಸಮಾಜ ಕಲ್ಯಾಣವನ್ನು ಮಾಡುವ ನಿಮ್ಮ ಶರಣನು ಜನಜಂಗುಳಿಯ ಮಾತಿಗೆ ಬೆದರುವವನಲ್ಲ; ಅವರಿಗೆ ವಿರೋಧಿಸಿ ನಡೆಯುತ್ತಾನೆ; ಯಾಕಂದರೆ ಅವನು ಕೂಡಲ ಸಂಗಮ ದೇವರ ಮಹಾಬೆಳಕಿನಲ್ಲಿರುವವನಾಗಿದ್ದಾನೆ.

**೭೪೫ ಆರು ಮುನಿದು ನಮ್ಮನೇನು ಮಾಡುವರು?**
**ಊರು ಮುನಿದು ನಮ್ಮನೆಂತು ಮಾಡುವರು?**
**ನಮ್ಮ ಕುನ್ನಿಗೆ ಕೂಸ ಕೊಡಬೇಡ;**
**ನಮ್ಮ ಸೊಣಗಂಗೆ ತಳಿಗೆಯ ನಿಕ್ಕಬೇಡ!**
**ಆನೆಯ ಮೇಲೆ ಹೋಹನ ಶ್ವಾನ ಕಚ್ಚಬಲ್ಲುದೆ,**
**ನಮಗೆ ನಮ್ಮ ಕೂಡಲ ಸಂಗಯ್ಯನುಳ್ಳನ್ನಕ್ಕ?**

ಯಾರು ಸಿಟ್ಟಾಗಿ ಭಕ್ತರನ್ನು ಏನು ಮಾಡುತ್ತಾರೆ; ಇಡೀ ಊರೇ ಒಂದಾಗಿ ಭಕ್ತನ ಮೇಲೆ ಸಿಟ್ಟಾಗಿ ಏನು ತಾನೇ ಮಾಡುತ್ತಾರೆ; ಏನೂ ಮಾಡಲು ಸಾಧ್ಯವಿಲ್ಲ; ಭಕ್ತನಿಗೆ ಅನ್ನ ನೀಡದೆ ಕಳಿಸಬಹುದು; ಕೂಡಲ ಸಂಗಮ ದೇವರು ಭಕ್ತರನ್ನು ಕಾಪಾಡಲು ಬೆನ್ನುಹಿಂದೆ ಇರುವನಾದ್ದರಿಂದ ಯಾರು ಏನು ಮಾಡಲು ಸಾಧ್ಯವಿಲ್ಲ; ಆನೆಯನ್ನೇರಿ ಹೋಗುವವನನ್ನು ನಾಯಿಗೆ ಕಚ್ಚಲು ಬಾರದು.

**೭೪೬ ಊರ ಮುಂದೆ ಹಾಲ ಹಳ್ಳ ಹರಿಯುತ್ತಿರಲು,**
**ಓರೆಯಾವಿನ ಬೆನ್ನಲ್ಲಿ ಹರಿಯಲದೇಕಯ್ಯಾ?**
**ಲಜ್ಜೆಗೆಡಲೇಕೆ? ನಾಣುಗೆಡಲೇಕೆ?**
**ಕೂಡಲ ಸಂಗಮ ದೇವಯ್ಯನುಳ್ಳನ್ನಕ್ಕ**
**ಬಿಜ್ಜಳನ ಭಂಡಾರವೆನಗೇಕಯ್ಯಾ?**

ಊರ ಮುಂದೆ ಹಾಲಿನ ಹಳ್ಳ ಹರಿದಿರುವಾಗ ಗುಡ್ಡದ ಸಂದಿಯಲ್ಲಿ ಹರಿಯುತ್ತಿರುವ ಝುರಿಗೆ ಹೋಗುವೆನೆ? ಹಾಗೆ ಹೋಗಲು ಲಜ್ಜೆಗೆಟ್ಟ

ವನು, ಚರ್ಮಗೆಟ್ಟವನು ನಾನಲ್ಲ; ಸದಾ ಸುಖ ಸಂಪದವನ್ನು ಕೊಡುವ, ಕುಬೇರ ಕೂಡಲ ಸಂಗಮನಿರುವಾಗ ಬಿಜ್ಜಳರಾಯನ ಬೊಕ್ಕಸಕ್ಕೆ ಆಶೆ ಮಾಡಲಾರೆನು.

**೭೪೭ ಕಂಡುದಕ್ಕೆಳಸೆನೆನ್ನ ಮನದಲ್ಲಿ, ನೋಡಿಸೋಲೆನೆನ್ನ**
**ಕಣ್ಗಳಲ್ಲಿ,**
**ಅಡಿ ಹುಸಿಯೆನೆನ್ನ ಜಿಹ್ವೆಯಲ್ಲಿ.**
**ಕೂಡಲ ಸಂಗಮದೇವಾ,**
**ನಿಮ್ಮ ಶರಣನ ಪರಿ ಇಂತುಟಯ್ಯಾ**

ಕೂಡಲ ಸಂಗಮ ದೇವಾ, ನಿಮ್ಮ ಶರಣನಾದ ನಾನು, ಕಂಡ ವಸ್ತುಗಳಿಗೆಲ್ಲ ಆಸೆ ಮಾಡುವುದಿಲ್ಲ, ಅವುಗಳನ್ನು ನೋಡಿ ಪುನಃ ನೋಡುವ ಅಪೇಕ್ಷೆಯನ್ನೂ ಮಾಡುವುದಿಲ್ಲ; ಮಾತಾಡಿದರೆ ಸತ್ಯವನ್ನೆ ನುಡಿಯುವೆ; ಈ ನಾಲಗೆಯಿಂದ ಸುಳ್ಳು ನುಡಿಯುವುದಿಲ್ಲ; ಇದು ನಿಮ್ಮ ಶರಣರ ಸಜ್ಜನಿಕೆಯ ಮಾರ್ಗ.

**೭೪೮ ಹೋಗಬಿಟ್ಟು, ಮರಳಿ ಹಿಂದನೋಡಿ**
**ಮತ್ತಾಗಬೇಕೆಂಬ ಸಂದೇಹವುಳ್ಳನ್ನಕ್ಕ**
**ಅದೆ ಪಾರದ್ವಾರ ನಾಯಕ ನರಕ, ತಪ್ಪದು!**
**ಅನ್ಯವಧುವೆಂಬುದು ನಿಮ್ಮ ರಾಣಿವಾಸ:**
**ಇದೇ ದಿಬ್ಯ, ಕೂಡಲ ಸಂಗಮದೇವಾ.**

ಸಂಸಾರದ ಎಲ್ಲ ಮೋಹವನ್ನೂ ಕಳೆದುಕೊಂಡು ಮತ್ತೆ ಆ ಪಾಪ ಕೂಪದತ್ತ ಮುಖ ತಿರುಗಿಸಿ ನೋಡಿ ಮನದಲ್ಲಿ ಆಶೆ ಅಂಕುರಿಸಿದರೆ ಘೋರ ನರಕದಲ್ಲಿ ಬೀಳುವುದು ಖಂಡಿತ; ಪರಸ್ತ್ರೀಯರೊಡನೆ ಕೂಡುವುದೆಂದರೆ ಅದು ನಿಮ್ಮ ರಾಣಿಯರೊಡನೆ ಕೂಡಿದಂತೆ ದೇವಾ; ನಿಮ್ಮ ಘನತೆಯನ್ನರಿತುಕೊಳ್ಳುವುದೆ ಹಬ್ಬವೆನಗೆ, ದಿವ್ಯ ಜ್ಞಾನವೆನಗೆ ಕೂಡಲ ಸಂಗಮದೇವಾ !

೭೪೯ ಆಪ್ಯಾಯನಕ್ಕೆ ನೀಡುವೆ, ಲಾಂಛನಕ್ಕೆ ಶರಣೆಂಬೆ:
ಲಾಂಛನಕ್ಕೆ ತಕ್ಕ ಆಚರಣೆಯಿಲ್ಲದಿದ್ದರೆ
ಕೂಡಲ ಸಂಗಮದೇವಾ,
ನೀ ಸಾಕ್ಷಿಯಾಗಿ 'ಛಿಃ' ಎಂಬೆ!

ಲಿಂಗ ತೃಪ್ತಿಗೆಂದು ನೈವೇದ್ಯಮಾಡುವೆನು; ವಿಶಿಷ್ಟ ಲಿಂಗಕ್ಕೆ ತಲೆಬಾಗುವೆನು; ಇಷ್ಟಾಲಿಂಗಕ್ಕೆ ಸರಿಯಾಗುವಂತೆ ಆಚರಣೆಯನ್ನು ನಾನು ಇಟ್ಟುಕೊಳ್ಳದಿದ್ದರೆ ಕೂಡಲ ಸಂಗಮ ದೇವಾ ನಿನ್ನ ಆಣೆ; ನೀನು ನನಗೆ ಛಿಃ ಥೂ ಹಾಕು!

೭೫೦ ಮಾಡುವ ನೀಡುವ ಭಕ್ತನ ಕಂಡರೆ
ನಿಧಿನಿಧಾನವ ಕಂಡಂತಾಯಿತ್ತು.
ಪಾದೋದಕ ಪ್ರಸಾದ ಜೀವಿಯ ಕಂಡರೆ
ಹೋದ ಪ್ರಾಣ ಬಂದಂತಾಯಿತ್ತು.
ಅನ್ಯರ ಮನೆಗೆ ಹೋಗಿ ತನ್ನುದರವ ಹೊರೆಯದ
ಅಚ್ಚ ಶರಣರ ಕಂಡರೆ
ನಿಶ್ಚಯವಾಗಿ ಕೂಡಲ ಸಂಗಯ್ಯನೆಂಬೆನು.

ಭಕ್ತಿಯನ್ನು ಮಾಡುವ ಮತ್ತು ಜಂಗಮ ದಾಸೋಹವನ್ನು ಮಾಡುವ ಭಕ್ತನನ್ನು ಕಂಡಾಗ ನೆಲದಲ್ಲಿ ಹೂಳಿದ ಕೊಪ್ಪರಗಿ ಹೊನ್ನು ದೊರೆತಷ್ಟು ಆನಂದವಾಯಿತು, ಜಂಗಮ ಪಾದ ತೀರ್ಥಪ್ರಸಾದಗಳನ್ನೇ ಸೇವಿಸಿ ಬಾಳಿದ ಭಕ್ತನನ್ನು ನೋಡಿ ಹೋದ ಪ್ರಾಣ ಪುನಃ ಬಂದಷ್ಟು ಆನಂದವಾಯಿತು. ಮನೆ ಮನೆಗೆ ಹೋಗಿ ಭಿಕ್ಷೆ ಬೇಡಿ ಹೊಟ್ಟೆ ತುಂಬಿಕೊಳ್ಳದ ಶರಣರೆ ಕೂಡಲ ಸಂಗಮ ದೇವರೆಂದು ನಂಬುವೆನು.

೭೫೧ ಗುರು ಭಕ್ತಿಯ ಮಾಡಬಹುದಲ್ಲದೆ.
ಲಿಂಗ ಭಕ್ತಿಯ ಮಾಡಬಾರದು.
ಲಿಂಗ ಭಕ್ತಿಯ ಮಾಡಬಹುದಲ್ಲದೆ
ಜಂಗಮ ಭಕ್ತಿಯ ಮಾಡಬಾರದು.

**ಜಂಗಮ ಭಕ್ತಿಯ ಮಾಡಬಹುದಲ್ಲದೆ**
**ಸಮಯ ಭಕ್ತಿಯ ಮಾಡಬಾರದು.**
**ಸಮಯ ಭಕ್ತಿಯ ಮಾಡಬಹುದಲ್ಲದೆ**
**ಸಮಯ ಸಂತೋಷವ ಮಾಡಬಾರದು.**
**ಇವೆಲ್ಲವ ಮಾಡಬಹುದಲ್ಲದೆ ತನ್ನ ತಾನರಿಯಬಾರದು !**
**ತನ್ನ ತಾನರಿದೆನೆಂಬಹಂಕಾರ ವುಳ್ಳರೆ ನಿಮ್ಮವರಿಗೆ ದೂರ, ಎಲೆದೇವ.**
**ಅನ್ಯಕ್ಕೆ ಆಸೆಮಾಡಿದೆನಾದರೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ !**

**ಕೂಡಲ ಸಂಗಮದೇವಾ.**

ಭಕ್ತಿಯ ಉಪಚಾರಗಳನ್ನು, ಪ್ರಕಾರಗಳನ್ನು, ಸಮಯಗಳನ್ನು ತಿಳಿದು ಕೊಳ್ಳಬೇಕು. ಉಭಯ ಭಕ್ತಿಗಳ ತಾರತಮ್ಯವನ್ನು ತಿಳಿದು ಆತ್ಮ ಲಿಂಗವನ್ನು ಜ್ಞಾನದಿಂದ ಕಂಡೆನೆಂದು ಅಹಂಕಾರದಿಂದ ನುಡಿಯಬಾರದು; ಆ ಅಹಂಕಾರ ಮನದಲ್ಲಿದ್ದರೆ ದೇವಾ, ನಿಮ್ಮಿಂದ ನಾನು ದೂರವಿರಬೇಕಾ ಗುತ್ತದೆ; ನಿಮ್ಮ ಭಕ್ತಿಯ ಬಿಟ್ಟು ಬೇರೆಡೆಗೆ ಮನಸ್ಸು ಹರಿದರೆ ನಿಮ್ಮಾಣೆ ಕೂಡಲ ಸಂಗಮ ದೇವಾ ?

೭೫೨ **ದಾಸನಂತೆ ತವನಿಧಿಯ ಬೇಡುವನಲ್ಲ;**
**ಚೋಳನಂತೆ ಹೊನ್ನ ಮಳೆಯ ಕರೆಸೆಂಬುವನಲ್ಲ;**
**ಅಂಜದಿರು ! ಅಂಜದಿರು ! ಅವರಂದದವ ನಾನಲ್ಲ !**
**ಎನ್ನ ತಂದೆ, ಕೂಡಲ ಸಂಗಮದೇವಾ,**
**ಸದ್ಭಕ್ತಿಯನೆ ಕರುಣಿಸೆನಗೆ.**

ಕೂಡಲ ಸಂಗಮದೇವಾ, ನಿಮ್ಮ ಆತ್ಮ "ಶ್ರೀ"ಯನ್ನು ನಾನು ಬೇಡುವುದಿಲ್ಲ; ಬಂಗಾರದ ಮಳೆ ನನ್ನ ಮನೆಯಲ್ಲಿ ಸುರಿಸೆಂದು ಕೇಳುವು ದಿಲ್ಲ; ಕೇವಲ ಸದ್ಭಕ್ತಿಯನ್ನು ನನಗೆ ಕೃಪೆ ಮಾಡಿದರೆ ಸಾಕು !

**೭೫೩ ಲಿಂಗದಲ್ಲಿ ಸಮ್ಯಕ್ಕರು, ಲಿಂಗದಲ್ಲಿ ಸಮರ್ಥರು,**
**ಲಿಂಗದಲ್ಲಿ ಸೂಕ್ಷ್ಮ-ಸಂಬಂಧವರಿತ ಸ್ವಾಮಿ ಭೃತ್ಯರೆಲ್ಲರೂ,**
**ನಿಮ್ಮ ಬೇಡೆ, ಅಂಜದಿರಿ!**
**ಎನಗೆ ಮರ್ತ್ಯಲೋಕದ ಮಹಾಗಣಂಗಳುಂಟು,**
**ಇದು ಕಾರಣ, ಕೂಡಲ ಸಂಗಮ ದೇವರ ಲೋಕವ**
**ಹಂಚಿಕೊಳ್ಳಿ ನಿಮ ನಿಮಗೆ!**

ಲಿಂಗದಲ್ಲಿ ಸಮಾನಾಧಿಕಾರವುಳ್ಳವರು, ಸಾಮರ್ಥ್ಯವುಳ್ಳವರು ಮತ್ತು ಲಿಂಗದಲ್ಲಿ ನಿಕಟ ಸಂಬಂಧವನ್ನು ಇಟ್ಟುಕೊಂಡ ದೇವರ ಚಾಕರರೆಲ್ಲರೂ ಅಂಜಬೇಡಿರಿ; ನಿಮ್ಮನ್ನು ಏನೂ ಕೇಳುವುದಿಲ್ಲ! ನನಗೆ ಈ ಧರತಿಯಲ್ಲಿ ಪುಣ್ಯಕೋಟಿ ಗಣಗಳಿದ್ದಾರೆ. ಕಾರಣ ಸಂಗಮ ದೇವರ ಪ್ರದೇಶವನ್ನು ನೀವು ನಿಮಗೆ ತಿಳಿದತ್ತ ಹಂಚಿಕೊಳ್ಳಿರಿ.

## —:ಮಾಹೇಶ್ವರನ ಐಕ್ಯ ಸ್ಥಲ:—

**೭೫೪ ಅಂದಂದಿನ ಹೊಂದಿಗೆಯ ಬಿಂದು ಮಾತ್ರದಲಾದ**
**ಅಂದವ ಕೆಡಿಸಲರಿಯದ ಅಂಧಕರ ನೋಡಾ.**
**ಸಮರಸವಿಲ್ಲದೆ ನೆರಹಿ ಮಾಡಿ ಭಕ್ತರಾದರೆಂಬುವರ**
**ನೇನೆಂಬೆ?**
**ಆಚಾರವಂಚಕರ ಎನಗೆ ತೋರದಿರು,**
**ಕೂಡಲ ಸಂಗಮದೇವಾ ನಿಮ್ಮ ಧರ್ಮ!**

ಆಯಾದಿನದ ಕರ್ಮವನ್ನು ಮಾಡುತ್ತಿರುವಾಗ ಘಟಿಸಿದ ಪಾಪಗಳನ್ನು ಆಯಾ ದಿನಗಳಲ್ಲಿಯೇ ನಾಶಮಾಡಬೇಕು; ಆತ್ಮ ಸಂತೋಷವಿಲ್ಲದೆ ಭಕ್ತಿಯನ್ನು ಮಾಡಬಾರದು; ವಂಚಕತನದಿಂದ ಭಕ್ತಿಯನ್ನು ಮಾಡಿ ಸದ್ಭಕ್ತರೆಂದು ಹೇಳಿಕೊಳ್ಳುವ ಆಚಾರ ಹೀನರನ್ನು ನಾನು ನೋಡಲಾರೆ; ಕೂಡಲ ಸಂಗಮ ದೇವಾ!

**೭೫೫ ಕಲಿಯ ಕೈಯ ಕೈದುವಿನಂತಿರಬೇಕು, ಅಯ್ಯಾ;**
**ಎಲುದೋರ ಸರಸವಾಡಿದರೆ ಸೈರಿಸಬೇಕಯ್ಯಾ.**
**ರಣದಲ್ಲಿ ತಲೆಹರಿದು ಅಟ್ಟೆ ನೆಲಕ್ಕೆ ಬಿದ್ದು**
**ಬೊಬ್ಬಿಡಲದಕ್ಕೆ ಒಲಿವ ಕೂಡಲ ಸಂಗಮದೇವ!**

ವೀರನ ಕೈಯೊಳಗಿನ ಖಡ್ಗದಂತಿರಬೇಕು; ಹರಿತವಾದ ಚೂರಿಯೊಂದಿಗೆ ಹುಡುಗಾಟಿಕೆಯಾಡಿದರೂ ಅದರ ನೋವನ್ನು ಸೈರಿಸಬೇಕು; ಯುದ್ಧ ಮಾಡುವಾಗ್ಗೆ ರುಂಡ ಕತ್ತರಿಸಿ ನೆಲದ ಮೇಲೆ ಬಿದ್ದು ಅಂಗಲಾಚಿ ಶಿವನನ್ನು ಬೇಡಿಕೊಂಡರೆ ಕೂಡಲ ಸಂಗಮ ದೇವರು ಮೆಚ್ಚುವನು.

**೭೫೬ ಆಸೆರೋಸ ಹರುಷಾದಿಗಳೆಂಬ ಕರಣೇಂದ್ರಿಯಂಗಳ ಮುಟ್ಟಲೀಯದೆ**
**ಆ ಚಾರವ ಶಿವಾಚಾರವ ಮಾಡುವೆ;**
**ಭಯ ಭಕ್ತಿಯಿಂದ ತೋರುವೆ ಮನದಲ್ಲಿ ವಂಚನೆಯಿಲ್ಲದೆ;**
**ಭಾವ ಶುದ್ಧ ಪೂಜೆಯ ಮಾಡುವೆ,**
**ಎನ್ನ ಪ್ರಾಣ ಶಕ್ತಿಯಿಂದ ಕೂಡಲ ಸಂಗಮ ದೇವರ.**

ನನ್ನ ಮನಕ್ಕೆ ಆಸೆ, ಸಿಟ್ಟು, ಹರುಷಗಳೆಂಬ ಮದಗಳು ತಾಗದಂತೆ ಮಾಡಿ ನೀತಿವಂತನಾಗಿ ಶಿವಭಕ್ತಿಯನ್ನು ಮಾಡುತ್ತೇನೆ; ಭಾವಶುದ್ಧನಾಗಿ ಪೂರ್ಣಭಾವದಿಂದ ಜೀವಾತ್ಮಶಕ್ತಿಯ ಚೇತನದಿಂದ ಪೂಜೆಮಾಡುವೆನು ಕೂಡಲ ಸಂಗಮ ದೇವಾ.

**೭೫೭ ಪೂರ್ವಬೀಜ ವಾಯು ಪ್ರಾಣಿಯಲ್ಲ,**
**ಲಿಂಗಪ್ರಾಣಿಯಾ ಶರಣನು.**
**ಏಕಗ್ರಾಹಿ, ಭಾವ ಭೇದವಿಲ್ಲವಾಗಿ,**
**ಮನಃ ಪ್ರವೇಶಿಯಾ ಶರಣನು.**
**ನಿಮ್ಮುವ ಪೂಜಿಸಿ ತನು ಧರ್ಮವ ಮರೆದು**
**ನಿಮ್ಮ ಪ್ರತಿಬಿಂಬದಂತಿಪ್ಪ,**
**ಕೂಡಲ ಸಂಗಮದೇವಾ, ನಿಮ್ಮ ಶರಣನು.**

ಶರಣನು ಲಿಂಗೋದ್ಭೂತನು; ಅವನು ಪರಂಪರಾಗತದಿಂದ ಹುಟ್ಟಿಬಂದ ಮನುಷ್ಯನ ಮೂಲ ಬೀಜನಲ್ಲ; ಏಕಚಿತ್ತಿಯಾಗಿ ಸರ್ವರ ಮನದಲ್ಲಿ ಪ್ರವೇಶ ಮಾಡುತ್ತಾನೆ ಶರಣನು; ಆ ಶರಣನು ಲಿಂಗ ಸಾಧನೆಯನ್ನು ಮಾಡಿ ನಿಮ್ಮ ಪ್ರತಿಬಿಂಬನಾಗಿ ಮೂಡಿರುವನು ಕೂಡಲ ಸಂಗಮ ದೇವಾ !

# ಪ್ರಸಾದಿ ಸ್ಥಲ

## ಪ್ರಸಾದಿಯ ಜ್ಞಾನಸ್ಥಳ

೭೫೮ ಹಸಿವಾಯಿತ್ತೆಂದು ಅರ್ಪಿತವ ಮಾಡುವರಯ್ಯಾ:
ತೃಷೆಯಾಯಿತ್ತೆಂದು ಮಜ್ಜನಕ್ಕೆರೆವರಯ್ಯಾ:
ಹಸಿವೆ-ತೃಷೆ-ವಿಷಯಕ್ಕೆ ಬಳಲುವರಯ್ಯಾ!
ಹಸಿವಾಯಿತ್ತೆಂದು ಅರ್ಪಿತವ ಮಾಡಲಿಲ್ಲ;
ತೃಷೆಯಾಯಿತ್ತೆಂದು ಮಜ್ಜನಕ್ಕೆರೆಯಲಿಲ್ಲ;
ಇದು ಕಾರಣ ಕೂಡಲ ಸಂಗನ ಪೂಜೆ ಮಾಡಿ
ಪ್ರಸಾದವ ಹಡೆವರೊಬ್ಬರೂ ಇಲ್ಲ !

ಜನರು ತಮ ತಮಗೆ ಹಸಿವು ನೀರಡಿಕೆಗಳು ಹೆಚ್ಚಿವೆ ಎಂದು ಅನ್ನ ನೀರುಗಳನ್ನು ತೆಗೆದುಕೊಳ್ಳುತ್ತಾರೆ; ದೇವರಿಗೆ ಪೂಜೆ, ನೈವೇದ್ಯಗಳನ್ನು ಮಾಡುತ್ತಾರೆ; ಇವರು ಹಸಿವು, ನೀರಡಿಕೆ, ಮತ್ತು ಇಂದ್ರಿಯ ಸುಖಕ್ಕಾಗಿ ಕಷ್ಟ ಪಡುತ್ತಾರೆ; ಆದರೆ ದೇವಾ, ನಿನಗೆ ಹಸಿವೆಯಾಗಿದೆ ಎಂದು, ನೀರಡಿಕೆಯಾಗಿದೆ ಎಂದು ನಿಮ್ಮ ಪೂಜೆ ನೈವೇದ್ಯಗಳನ್ನು ಮಾಡುವುದಿಲ್ಲ; ಈ ಮೋಸಕರು ಕೂಡಲ ಸಂಗಮದೇವರನ್ನು ಪೂಜಿಸಿ ಅವನ ಕರುಣೆ ಪಡೆಯುವುದಿಲ್ಲ.

೭೫೯ ಮುತ್ತು ನೀರಲಿ ಹುಟ್ಟಿ ಮತ್ತೆ ನೀರಪ್ಪುದೆ?
ಗುರು ಕಾರುಣ್ಯವ ಹಡೆದ ಭಕ್ತನು ಹಿಂದಣ ಪೂರ್ವಾಶ್ರಯವ ಬೆರಸಿದರೆ,
ಗುರುದ್ರೋಹ, ಲಿಂಗದ್ರೋಹ, ಜಂಗಮದ್ರೋಹ,

ಆಚಾರದ್ರೋಹ, ಪ್ರಸಾದದ್ರೋಹ!-
ಇಂತಿ ಪಂಚ ಮಹಾ ಪಾತಕಂಗಳು
ಭಕ್ತಂಗಲ್ಲದೆ ಭವಿಗೆಲ್ಲಿಯದೋ?
ಗುರುವಿದು, ಲಿಂಗವಿದು, ಜಂಗಮವಿದು,
ಆಚಾರವಿದು, ಪ್ರಸಾದವಿದೆಂದರಿಯದಿದ್ದರೆ
ಕುಂಭೀ ಪಾತಕ ನಾಯಕನರಕ!
ಕೂಡಲ ಸಂಗಮದೇವಾ.

ಮುತ್ತು ನೀರಿನಲ್ಲಿ ಹುಟ್ಟಿದರೂ ಆದು ಪುನಃ ನೀರಾಗಲು ಸಾಧ್ಯವಿಲ್ಲ! ಆದರೆ ಒಮ್ಮೆ ಗುರುಗಳ ಆಶೀರ್ವಾದ ಪಡೆದುಕೊಂಡ ಭಕ್ತನು ಪುನಃ ಸಂಸಾರದ ಬಂಧನದಲ್ಲಿ ಸಿಕ್ಕರೆ- ಪಂಚ ಮಹಾ ಪಾಪಗಳು ಆ ಭಕ್ತನಿಗೆ ತಟ್ಟುವುದೆ ಹೊರತು, ಶಿವನಿಗೆ ಅಲ್ಲ! ಗುರು, ಲಿಂಗ, ಜಂಗಮ, ಆಚಾರ, ಪ್ರಸಾದ- ಈ ಎಲ್ಲವುಗಳ ತಾರತಮ್ಯ ತಿಳಿದು ನಡೆಯಬೇಕು. ಇಲ್ಲವಾದರೆ ಘೋರ ನರಕ ಪ್ರಾಪ್ತವಾಗುತ್ತದೆ; ಕೂಡಲ ಸಂಗಮದೇವಾ.

೭೬೦ ಸೂಳೆಗೆ ಮೆಚ್ಚಿ ಸೂಳೆಯ ಬಂಟರೆಂಜಲ ತಿಂಬುದೀ ಲೋಕ
ಅಡಗ ಮೆಚ್ಚಿ ಸೊಣಗನ ಎಂಜಲ ತಿಂಬುದೀ
ಲೋಕವೆಲ್ಲ!
ಲಿಂಗವ ಮೆಚ್ಚಿ ಜಂಗಮ ಪ್ರಸಾದವ ಕೊಂಬವರ
ನೋಡಿ ನಗುವವರ ಕುಂಭೀಪಾತಕ ನಾಯಕನರಕದಲ್ಲಿಕ್ಕುವ
ಕೂಡಲ ಸಂಗಮದೇವ

ಲೋಕದ ಲೋಗರು ಸೂಳೆಗೆ ಮೋಹಿಸಿ ಅವಳ ಅನೇಕ ಜನ ವಿಟರ ಎಂಜಲವನ್ನು ತಿನ್ನುತ್ತಾರೆ; ಮಾಂಸದ ರುಚಿಗಾಗಿ ನಾಯಿಯ ಎಂಜಲವನ್ನು ತಿನ್ನುತ್ತಾರೆ; ಆದರೆ ಲಿಂಗವನ್ನು ಪೂಜಿಸಿ ಜಂಗಮನ ಎಂಜಲವನ್ನು ತಿಂದರೆ ಈ ಮನುಜರು ನಗುತ್ತಾರೆ; ಹೀಗೆ ನಗುವವರನ್ನು ಕೂಡಲ ಸಂಗಮದೇವರು ನರಕಕ್ಕೆ ಅಟ್ಟುತ್ತಾನೆ.

೭೬೧ ಹೊಲೆಯುಂಟೆ ಲಿಂಗವಿದ್ದೆಡೆಯಲ್ಲಿ?
ಕುಲವುಂಟೆ ಜಂಗಮವಿದ್ದೆಡೆಯಲ್ಲಿ?
ಎಂಜಲುಂಟೆ ಪ್ರಸಾದವಿದ್ದೆಡೆಯಲ್ಲಿ?
ಅಪವಿತ್ರ ನುಡಿಯು ನುಡಿವ ಸೂತಕವೇ ಪಾತಕ!
ನಿಷ್ಕಳ, ನಿಜೈಕ್ಯ, ತ್ರಿವಿಧ ನಿರ್ಣಯ,
ಕೂಡಲ ಸಂಗಮದೇವಾ ನಿಮ್ಮ ಶರಣರಿಗಲ್ಲದಿಲ್ಲಾ.

ಲಿಂಗವಿದ್ದ ಜಾಗವೆಲ್ಲವೂ ಪವಿತ್ರವು; ಜಂಗಮರಿಗೆ ಕುಲಜಾತಿಗಳಿಂಬುವುದಿಲ್ಲ; ಆದರೆ ಹೊಲೆಯೆಂದರೆ ಕೆಟ್ಟ ನುಡಿಯೆ ಹೊಲೆ; ಕಾರಣ್ಣ ಕೂಡಲ ಸಂಗಮ ದೇವರ ಶರಣರು, ಕಲಂಕ ರಹಿತರೂ, ಮುಕ್ತಿಯನು ಹೊಂದಲು ಯೊಗ್ಯರೂ ಆಗಿದ್ದಾರೆ.

೭೬೨ ಬಾರದು, ಬಾರದು ಭಕ್ತಂಗೆ ಪೆರಧನ ಪರಸ್ತ್ರೀ.
ಬಾರದು, ಬಾರದು ವಿಷಯಿಗೆ ಪಶುಪತಿಯ ಬ್ರತವು.
ಬಾರದು, ಬಾರದು ಭವಭಾರಿಗೆ
ಕೂಡಲ ಸಂಗಮ ದೇವನ ಒಕ್ಕುದ ಕೊಳ್ಳಬಾರದು!

ಭಕ್ತರಿಗೆ ಅನ್ಯರ ಸಂಪತ್ತು ಮತ್ತು ಅನ್ಯರ ಸತಿಯರು ಮನಸ್ಸಿಗೆ ಹಿಡಿಸುವುದಿಲ್ಲ; ಸಂಸಾರಲಂಪಟರಿಗೆ ಹರನ ವ್ರತವು ಹಿಡಿಸದು; ಜನನ ಮರಣ ಚಕ್ರಗಳಲ್ಲಿ ಸುತ್ತುವವರಿಗೆ ಸಂಗಮ ದೇವರ ಪ್ರಸಾದ ದೊರೆಯುವುದು ದುರ್ಲಭ; ಕಾರಣ ಸಂಸಾರ ಸಂಗ ಪರಿತ್ಯಾಗಮಾಡಬೇಕು.

೭೬೩ ಹುತ್ತದ ಮೇಲಣ ರಜ್ಜು ಮುಟ್ಟಿದರೆಯೂ
ಸಾವರು ಶಂಕಿತರಾದವರು,
ಸರ್ಪ ದಷ್ಟ್ರವಾದರೆಯೂ
ಸಾಯರು ನಿಶ್ಯಂಕಿತರಾದವರು:
ಕೂಡಲ ಸಂಗಮ ದೇವಯ್ಯಾ,
ಶಂಕಿತಂಗೆ ಪ್ರಸಾದ ಸಿಂಗಿ, ಕಾಳಕೂಟವಿಷವು!

ಸಂಶಯದ ಬೆನ್ನೇರಿದ ಮಾನವರಿಗೆ ಹಾವಿನ ಹುತ್ತದ ಮಣ್ಣು ತಾಕಿದರೂ ಸಹಿತ ಆ ಭ್ರಮೆಯಿಂದ ಅವರು ಸಾಯುತ್ತಾರೆ; ಸಂಶಯದ ಅಂಗಿ

ಯನ್ನು ಬಿಚ್ಚಿ ಹಾಕಿದವರಿಗೆ ನಿಜವಾದ ಸರ್ಪಕಚ್ಚಿದರೂ ಸಾಯುವುದಿಲ್ಲ; ಆದ ಕಾರಣ ಸಂಶಯ ಪಿಶಾಚಿಗಳಿಗೆ ಸಂಗಮದೇವರ ಪ್ರಸಾದವೂ ಕಾಳ ಕೂಟವಿಷವಾಗಿ ಪರಿಣಮಿಸುತ್ತದೆ.

**೭೬೪ ನಂಬಿದರೆ ಪ್ರಸಾದ: ನಂಬದಿದ್ದರೆ ವಿಷವು!**

**ತುಡುಕಬಾರದು, ನೋಡಾ, ಲಿಂಗನ ಪ್ರಸಾದ, ಸಂಗನ ಪ್ರಸಾದ!**

**ಕೂಡಲ ಸಂಗನ ಪ್ರಸಾದ ಸಿಂಗಿ ಕಾಳಕೂಟವಿಷವು!**

ಪರಮಾತ್ಮನಲ್ಲಿ ನಂಬಿಗೆ ಇಟ್ಟವರಿಗೆ ವಿಷವೂ ಪ್ರಸಾದವಾಗುತ್ತದೆ; ನಾಸ್ತಿಕರಿಗೆ ಪ್ರಸಾದವೂ ವಿಷವಾಗುತ್ತದೆ, ಯಾವದಕ್ಕೂ ಸಾವಧಾನದಿಂದ ವರ್ತಿಸಬೇಕು; ಲಿಂಗನ ಪ್ರಸಾದವು ಸಂಗಮ ದೇವರ ಪ್ರಸಾದವೆಂದು ತಿಳಿಯಬೇಕು; ಜಿಗುಪ್ಸಿಗರಿಗೆ ಸಂಗನ ಪ್ರಸಾದವೆಂದರೆ ಅದೊಂದು ಮಹಾವಿಷವು; ಭಕ್ತರಿಗೆ ಅದು ಅಮೃತವು.

**೭೬೫ ಪಂಡಿತನಾಗಲಿ, ಮೂರ್ಖನಾಗಲಿ, ಸಂಚಿತ ಕರ್ಮ ಉಂಡಲ್ಲದೆ ಬಿಡದು.**

**ಪ್ರಾರಬ್ಧ ಕರ್ಮ ಭೋಗಿಸಿದಲ್ಲದೆ ಹೋಗದೆಂದು**
**ಶ್ರುತಿ ಸಾರುತ್ತೈದಾವೆ, ನೋಡಾ,**
**ತಾನಾವ ಲೋಕದೊಳಗಿದ್ದರೆಯೂ ಬಿಡದು**
**ಕರ್ಮ ಫಲಗೂಡಿ ಕೂಡಲ ಸಂಗಮದೇವಂಗೆ**
**ಆತ್ಮನೈವೇದ್ಯವ ಮಾಡಿದವನೆ ಧನ್ಯ.**

ಬಡವ ಬಲ್ಲಿದರೆಲ್ಲರೂ ತಾವು ಮಾಡಿದ ಪಾಪದ ಫಲವನು ಭೋಗಿಸಲೇ ಬೇಕು; ಯಾವ ಲೋಕದಲ್ಲಿದ್ದರೂ ಪ್ರಾರಬ್ಧ ಕರ್ಮಬಿಡುವುದಿಲ್ಲ; ಆದರೆ ಪುಣ್ಯ ಫಲಗಳು ಲಭಿಸಿದನಂತರ ತಮ್ಮ ಆತ್ಮವನ್ನು ಕೂಡಲ ಸಂಗಮ ದೇವರಿಗೆ ಸಮರ್ಪಿಸಿದವನೇ ಭಾಗ್ಯವಂತನು.

**೭೬೬ ಒಲ್ಲೆಂಬುದು ವೈರಾಗ್ಯ: ಒಲಿವೆನೆಂಬುದು ಕಾಯಗುಣ.**

**ಆವ ಪದಾರ್ಥವಾದರೇನು? ತಾನಿದ್ದೆಡೆಗೆ ಬಂದುದ**

**ಲಿಂಗಾರ್ಪಿತವ ಮಾಡಿ ಭೋಗಿಸುವುದೆ ಆಚಾರ,**
**ಕೂಡಲ ಸಂಗಮದೇವನ ನೊಲಿಸ ಬಂದ**
**ಪ್ರಸಾದ ಕಾಯವ ಕೆಡಿಸಲಾಗದು.**

ಪ್ರಪಂಚವು ಬೇಡವೆಂದು ಹೇಳುವುದು ಮನದ ವೈರಾಗ್ಯಗುಣವಾದರೆ; ಸಂಸಾರ ಸುಖಕ್ಕೆ ಮೋಹಹೋಗುವುದು ದೇಹದ ಗುಣವಾಗಿದೆ; ತನ್ನಲ್ಲಿದ್ದುದನ್ನು ಲಿಂಗಕ್ಕೆ ನೀಡಿ ತಾನು ಉಣ್ಣುವುದು ಮಾನವ ನೀತಿ; ಕಾರಣ ಸಂಗಮ ದೇವರ ಪ್ರೀತಿಯನ್ನು ಸಂಪಾದಿಸಲು ಹುಟ್ಟಬಂದ ಈ ದೇಹವನ್ನು ವ್ಯರ್ಥ ಹಾಳುಮಾಡಿಕೊಳ್ಳಬೇಡಿರಿ.

**೭೬೭ ಒಪ್ಪುವ ನುಡಿವರಯ್ಯಾ ತುಪ್ಪವ ತಡೆದಂತೆ!**
**ಶರಣ ತನ್ನ ಮರೆವನೆ ಬಿನ್ನಾಣಿಯಂತೆ?**
**ಕೂಡಲ ಸಂಗನ ಪ್ರಸಾದದಿಂದ ಬದುಕುವನಲ್ಲದೆ ತನ್ನ ಮರೆವನೆ?**

ಕಡುಬಿಗೆ ತುಪ್ಪವನ್ನು ಸವರಿದಂತೆ, ಈ ಜನರು ಬಣ್ಣದ ಮಾತುಗಳನ್ನು ಆಡುತ್ತಾರೆ; ಡಂಭಾಚಾರಿಗಳು ದೇವರನ್ನು ಮರೆಯುವಂತೆ ಶರಣರು ಭಕ್ತರನ್ನು ಎಂದಿಗೂ ಮರೆಯುವುದಿಲ್ಲ; ಕಾರಣ ಭಕ್ತನು ಕೂಡಲ ಸಂಗನ ಪ್ರಸಾದದಿಂದ ಬದುಕಿ ಬಾಳುತ್ತಾನೆ; ತನ್ನಿಂದ ತಾನೆ ಎಂದಿಗೂ ಬದುಕಿಬಾಳಲಾರನು.

## ಪ್ರಸಾದಿಯ ಪ್ರಸಾದಿ ಸ್ಥಳ

**೭೬೮ ಗುರುಲಿಂಗ ಜಂಗಮದಿಂದೆ ಪಾದೋದಕ ಪ್ರಸಾದ ವಾಯಿತ್ತು.**

**ಆ ಭಾವನೆ ಮಹಾನುಭಾವವಾಗಿ**
**ಎನಗೆ ಮತ್ತೆ ಬೇರೆ ಪ್ರಸಾದ ವೆಂಬುದಿಲ್ಲ,**
**ಕೂಡಲ ಸಂಗಮದೇವಾ.**

ಗುರು—ಲಿಂಗ - ಜಂಗಮರ ದಯಾದೃಷ್ಟಿಯಿಂದ ತೀರ್ಥ ಪ್ರಸಾದಗಳು ದೊರೆತವು. ಆ ನಿರ್ಮಲ ಭಾವನೆ ಮಹಾದರ್ಶನವಾಗಿ, ಕೂಡಲ ಸಂಗಮದೇವಾ, ನಿನ್ನ ಬಿಟ್ಟು ಬೇರೆ ಪ್ರಸಾದವಿಲ್ಲವೆಂಬುದನ್ನು ತಿಳಿದು ಕೊಂಡೆನು.

**೭೬೯ ದಾಸೋಹವೆಂಬ ಸೋಹೆಗೊಂಡು ಹೋಗಿ**
**ಗುರುವ ಕಂಡೆ, ಲಿಂಗವಕಂಡೆ, ಜಂಗಮವಕಂಡೆ, ಪ್ರಸಾದವಕಂಡೆ.**

**ಇಂತೀ ಚತುರ್ವಿಧ ಸಂಪನ್ನನಾದೆ, ಕಾಣಾ,**
**ಕೂಡಲ ಸಂಗಮದೇವಾ.**

ದಾಸೋಹವೆಂಬ ವ್ರತವನ್ನಾಚರಿಸಿ ಗುರು, ಲಿಂಗ ಜಂಗಮ, ಪ್ರಸಾದಗಳನ್ನು ಕಣ್ಣಾರೆ ಕಂಡು ಪುನೀತನಾದೆನು; ಕೂಡಲ ಸಂಗಮ ದೇವಾ!

## ಪ್ರಸಾದಿಯ ಭಕ್ತಸ್ಥಳ

**೭೭೦ ಸಜ್ಜನ ಶರಣರ ಕಂಡು ಎನ್ನಮನ ಉಬ್ಬಿತ್ತು ನೋಡಿರಯ್ಯಾ!**
**ಶ್ರೀ ಗುರುಪಾದವ ಹಿಡಿದು ಪಾವನವಾದೆನಯ್ಯಾ.**
**ಪಾದೋದಕ ಪ್ರಸಾದದಿಂದ ಭವಗೆಟ್ಟೆನು,**
**ಕೂಡಲ ಸಂಗಮದೇವಾ.**

ನಯ ವಿನಯ ಸಂಪನ್ನರಾದ ಶರಣರ ದರ್ಶನದಿಂದ ನನ್ನ ಮನಸ್ಸು ಉಲ್ಲಾಸಗೊಂಡಿತು. ಶ್ರೀ ಗುರುವಿನ ಪಾದಗಳ ಸೇವೆ ಮಾಡಿ ಧನ್ಯನಾದೆನು; ಗುರುಪಾದತೀರ್ಥ ಸ್ವೀಕರಿಸಿ ಸಂಸಾರ ಸಾಗರ ದಾಟಿದೆನು; ಕೂಡಲ ಸಂಗಮದೇವಾ!

**೭೭೧ ಸಯಿದಾನವ ತಂದು ನೀಡುವೆನಲ್ಲದೆ**
**ಸಂಬಂಧಿ ನಾನಲ್ಲಯ್ಯಾ.**

ತರ್ಕಂಗೆ ಭೃತ್ಯಾಚಾರವ ಮಾಡಿ,
ಒಕ್ಕುದ ಕೊಂಡಿಪ್ಪೆನೆಯ್ಯಾ.
ಭೋಗಾದಿ ಭೋಗವ ಸಮವಾಗಿ ಭೋಗಿಸಲು
ಅಘೋರ ನರಕದಲ್ಲಿಕ್ಕುವ
ಕೂಡಲ ಸಂಗಮದೇವಾ.

ಸದಾಚಾರದಿಂದ ವರ್ತಿಸಿ ನಿಮಗೆ ಯೋಜಿತಕಾರ್ಯಸಿದ್ಧಿಗಳಲ್ಲಿ ನನ್ನ ಆತ್ಮಶಕ್ತಿಯನ್ನು ಧಾರೆಯೆರೆಯುವೆನು; ಸೃಷ್ಟಿಕರ್ತನಿಗೆ ಆಳಾಗಿ ದುಡಿದು ಅವನುಂಡು ಬಿಟ್ಟುದನುಂಡು ಜೀವನ್ಮುಕ್ತನಾಗುವೆನು; ನಾನು ಸಂಸಾರದ ಎಲ್ಲ ಭೋಗೋಪಭೋಗಗಳನ್ನು ಸವಿದೆನಾದರೆ ಕೂಡಲ ಸಂಗಮದೇವರು ನರಕದಲ್ಲಿಡಲಿ.

೭೭೨ ಶುದ್ಧವ ಗುರುವಿಂಗೆ ಕೊಟ್ಟು ಶುದ್ಧವಾಯಿತ್ತೆಂಬೆನಯ್ಯಾ.
ಸಿದ್ಧವ ಲಿಂಗಕ್ಕೆ ಕೊಟ್ಟು ಸಿದ್ಧವಾಯಿತ್ತೆಂಬೆನಯ್ಯಾ.
ಪ್ರಸಿದ್ಧವ ಜಂಗಮಕ್ಕೆ ಕೊಟ್ಟು ಪ್ರಸಿದ್ಧವಾಯಿತ್ತೆಂಬೆನಯ್ಯಾ.
ಗುರು ಲಿಂಗ ಜಂಗಮವ ಏಕತ್ರಯವಾಗಿ ಕಾಣಲರಿಯದಿದ್ದರೆ
ಶುದ್ಧ ಸಿದ್ಧ ಪ್ರಸಿದ್ಧ ಒಡನೆ ನಗುತ್ತಿದಾವೆ !
ತನುಮನಧನವ ನಿವೇದಿಸಲರಿಯನಾಗಿ
ಕೂಡಲ ಸಂಗಮದೇವ ಒಲಿಯೆಂದೊಡೆಂತೊಲಿವ?

ತಿಳಿಮನದಿಂದ ಗುರುವಿನ ಸೇವೆ ಮಾಡಿ ನನ್ನ ಆತ್ಮ ಶುದ್ಧವಾಯಿತ್ತು; ದೃಢಚಿತ್ತದಿಂದ ಲಿಂಗಪೂಜೆಮಾಡಿ ಸಿದ್ಧಿಯನ್ನು ಪಡೆದೆನು; ಜಂಗಮನಿಗೆ ಜಂಗಮ ಭಕ್ತಿ ಆದರಣೆಗಳನ್ನು ಸಲ್ಲಿಸಿ ನನ್ನ ಜೀವನ ಸಾರ್ಥಕವಾಯಿತೆಂಬೆನು; ಕಾರಣ ಗುರು ಲಿಂಗ ಜಂಗಮರನ್ನು ಒಂದೇ ಭಾವದಿಂದ ನೋಡದಿದ್ದರೆ, ಪೂಜಿಸದಿದ್ದರೆ—ನಾನು ಯಾವ ತ್ಯಾಗವನ್ನು ಮಾಡಿದರೂ ಕೂಡಲ ಸಂಗಮ ದೇವರು ಕೃಪೆ ಮಾಡುವುದಿಲ್ಲ.

## ಪ್ರಸಾದಿಯ ಮಾಹೇಶ್ವರ ಸ್ಥಳ

**೭೭೩ ಒಡಲ ಕಳವಳಕ್ಕೆ ಬಾಯಸವಿಗೆ**
**ಬಯಸಿ ಉಂಡೆನಾದರೆ ನಿಮ್ಮ ನಿಮ್ಮ ತೊತ್ತಿನ**
**ಮಗನಲ್ಲಾ !**
**ಬೇಡೆ, ಬೇಡೆ, ನಿಮ್ಮ ನಂಬಿದ ಸದ್ಭಕ್ತರ;**
**ಅವರೊಕ್ಕುದ ಉಂಬೆ, ಅವರೆಂದಂತೆಂಬೆ.**
**ಎನ್ನೊಡೆಯ ಕೂಡಲ ಸಂಗಮ ದೇವನೊಲ್ಲದವರ**
**ಹಿಡಿದೆ ನಾದಡೆ**
**ನಿಮ್ಮ ಪಾದದಾಣೆ !**

ಹಸಿವೆಯ ಸಂತಾಪಕ್ಕಾಗಿ ಇಲ್ಲವೆ ಬಾಯಿ ರುಚಿಗಾಗಿ ಊಟಮಾಡಿದರೆ ನಾನು ನಿಮ್ಮ ಶರಣರ ಮಗನೇ ಅಲ್ಲ; ನಿಮ್ಮಲ್ಲಿ ವಿಶ್ವಾಸವಿಟ್ಟ ಭಕ್ತರನ್ನು ಕಾಡಿ ಬೇಡುವುದಿಲ್ಲ; ಅವರುಂಡು ಬಿಟ್ಟ ಎಂಜಲವನ್ನುಂಡು ಬಾಳುವೆನು; ಕೂಡಲ ಸಂಗಮದೇವರ ಅವಕೃಪೆಗೆ ಒಳಗಾದವರನ್ನು ನಾನೆಂದೂ ನೋಡುವುದಿಲ್ಲ; ನಿಮ್ಮ ಪಾದದಾಣೆ ಕೂಡಲ ಸಂಗಮ ದೇವಾ !

## ಪ್ರಸಾದಿಯ ಪ್ರಾಣಲಿಂಗ ಸ್ಥಳ

**೭೭೪ ಮೌನದಲುಂಬುದು ಆಚಾರವಲ್ಲ; ಲಿಂಗಾರ್ಪಿತವ**
**ಮಾಡಿದ ಬಳಿಕ,**
**ತುತ್ತಿಗೊಮ್ಮೆ 'ಶಿವಶರಣೆ'ನ್ನುತ್ತಿರಬೇಕು.**
**ಕರಣ ವೃತ್ತಿಗಳಡಗುವುವು, ಕೂಡಲ ಸಂಗನ ನೆನೆಯುತ್ತ**
**ಉಂಡರೆ,**

ಮೌನದಿಂದ ಊಟಮಾಡುವುದು ಧರ್ಮವಲ್ಲ; ಲಿಂಗಪೂಜೆಮಾಡಿ ಅಡಿಗೆಯ ನೈವೇದ್ಯ ಮಾಡಿದ ಬಳಿಕ ಆ ಪ್ರಸಾದವನ್ನು ಉಣ್ಣುವಾಗ ತುತ್ತಿಗೊಮ್ಮೆ "ಶಿವ—ಶಿವ" ಎಂದು ಈಶ್ವರನ ಭಜನಮಾಡಬೇಕು; ನಾಮಸ್ಮರಣೆಮಾಡುವುದರಿಂದ ಎಲ್ಲ ಪಾಪಗಳು ನಾಶವಾಗುತ್ತವೆ.

೭೭೫ ಶಿವಾಚಾರವೆಂಬುದೊಂದು ಬಾಳ ಬಾಯಧಾರೆ:
ಲಿಂಗ ಮೆಚ್ಚಬೇಕು, ಜಂಗಮ ಮೆಚ್ಚಬೇಕು,
ಪ್ರಸಾದ ಮೆಚ್ಚಿ ತನ್ನಲ್ಲಿ ಸ್ವಾಯತವಾಗಿರಬೇಕು!
ಬಿಚ್ಚಿ ಬೇರಾದರೆ ಮೆಚ್ಚುವನೆ ನಮ್ಮ ಕೂಡಲ
ಸಂಗಮ ದೇವ?

ಶಿವ ತತ್ವಕ್ಕನುಸಾರವಾಗಿ ಆಚರಿಸುವುದೆಂದರೆ ಖಡ್ಗದೊಡನೆ ಆಟವಾಡಿದಂತೆ; ಕಾರಣ ಶಿವಾಚಾರ ಮಾಡುವುದೆಂದರೆ ಲಿಂಗ-ಜಂಗಮರು ಪ್ರೀತರಾಗಬೇಕು; ಪ್ರಸಾದವು ತನ್ನಿಂದ ತಾನೇ ಬರಬೇಕು; ಮುಸುಕು ತೆರೆದ ಮೇಲೆ ಮತ್ತೆ ಮೋಹಿಸಿದರೆ ಕೂಡಲ ಸಂಗಮ ದೇವರು ಕೃಪೆ ಮಾಡುವುದಿಲ್ಲ.

೭೭೬ ಕಾಯದ ಕರಣದ ಕೈಯಲ್ಲಿ ಪದಾರ್ಥ ಹಿಡಿವಲ್ಲಿ
ನಿಮಗೆ ಕೊಡುವ ಭರದ ಭೀತಿಯಿಂದಾನರಿಯದಿಪ್ಪೆನಾಗಿ
ಎನ್ನ ನೀನರಿದು ಸಲುಹುತ್ತಿಪ್ಪೆಯಯ್ಯಾ.
ಕೂಡಲ ಸಂಗಮದೇವಾ.

ದೇಹದ ಕರ್ಮಗಳ ಹಿಡಿತದಲ್ಲಿದ್ದ ನಾನು ನಿಮಗೆ ಭಕ್ತಿಯನ್ನು ಮಾಡಿ ನೈವೇದ್ಯ ಕೊಡುವ ಅವಾಂತರದಲ್ಲಿ ಭಯಭೀತನಾದ ಕಾರಣ ನಿಮ್ಮನ್ನು ತಿಳಿಯದೆ ಹೋದೆನು; ಆದರೆ ಕೂಡಲ ಸಂಗಮ ದೇವಾ ನೀನೆ ನನ್ನನ್ನು ಗುರುತಿಸಿ ಕಾಪಾಡುತ್ತಿರುವಿ.

೭೭೭ ಆಳಿಕಾರ ನೆನಗೊಬ್ಬ ಮಗ ಹುಟ್ಟಿದನೆಂದು
ಆಳೆಯ ಕೆಡಲೀಸದೆ ನಡೆಸುವ ನಮ್ಮಯ್ಯ.
ಪಂಚ ಭೂತಕಾಯುವ ಭವಿಯಂದನಲೀಯದೆ
ಪ್ರಸಾದ ಕಾಯಮಾಡಿ ಸಲಹುವ ನಮ್ಮಯ್ಯ.
ಆಳಿಸಾವಲ್ಲಿ ಅವಧಾನಿಯಾಗಿರ್ದರೆ
ಆಳ್ದನು ನಮ್ಮ ಕೂಡಲ ಸಂಗಮದೇವ.

ರಾಜನೆ, ನನಗೊಬ್ಬ ಮಗ ಹುಟ್ಟಿದನು; ಆ ಆಳಿನ ಜೀವನವನ್ನು ತೊಂದರೆಗೊಳಿಸದಲೆ ಸುಸೂತ್ರವಾಗಿ ನಡೆಸುವನು ಪರಮಾತ್ಮನು; ಈ ಪಂಚಮಹಾಭೂತಗಳಿಂದಾದ ಈ ದೇಹಕ್ಕೆ ನಾಸ್ತಿಕ ನೆನ್ನದೆ, ಅದನ್ನು ಪವಿತ್ರಮಾಡಿದನು; ಸಾಯುವ ಕಾಲಕ್ಕೆ ಶಿವಕೃಪೆಯಾದರೆ, ಕೂಡಲ ಸಂಗಮ ಅರಸನು ನನ್ನನ್ನು ಆಳುತ್ತಾನೆ.

## ಪ್ರಸಾದಿಯ ಶರಣಸ್ಥಳ

**೭೭೮ ತ್ರಿವಿಧ ಪ್ರಸಾದ ವೆಂದೆಂಬರು: ಅದೆಂತಹುದೋ?**
**ಶುದ್ಧ ಪ್ರಸಾದ ಲಿಂಗದದು, ಸಿದ್ಧ ಪ್ರಸಾದ ಜಂಗಮದದು,**
**ಪ್ರಸಿದ್ಧ ಪ್ರಸಾದ ಗುರುವಿನದದು.**
**ಇಂತೀ ತ್ರಿವಿಧ ವೊಂದಾದವರ ತೋರಾ,**
**ಕೂಡಲ ಸಂಗಮದೇವಾ.**

ಮೂರು ಪ್ರಕಾರದ ಪ್ರಸಾದಗಳುಂಟು; ಅವುಗಳು ಯಾವವೆಂದರೆ, ಗುರುಪ್ರಸಾದ ಲಿಂಗ ಪ್ರಸಾದ ಜಂಗಮ ಪ್ರಸಾದಗಳೆಂಬವು; ಇವು ಮೂರು ಪ್ರಸಾದಗಳನ್ನು ಒಂದೇ ಎಂದು ಭಾವಿಸುವ ಭಕ್ತನ ಸಂಗವ ಮಾಡಿಸು ಕೂಡಲ ಸಂಗಮ ದೇವಾ.

**೭೭೯ ಆವಾವ ಭಾವದಲ್ಲಿ ಶಿವನ ನಂಬಿದ ಶರಣರು**
**ಎಂತಿದ್ದರೇನಯ್ಯಾ ?**
**ಆವಾವ ಭಾವದಲ್ಲಿ ಶಿವನ ನಂಬಿದ ಮಹಿಮರು**
**ಎಂತಿದ್ದರೇನಯ್ಯಾ ?**
**ಸುಚರಿತ್ರರು ಎಂತಿದ್ದರೇನಯ್ಯಾ ?**
**ಕೂಡಲ ಸಂಗನ ಶರಣರು, ರಸದ ವಾರುಧಿಗಳು.**
**ಎಂತಿರ್ದ ರೇನಯ್ಯಾ ?**

ಶಿವನೇ ಸರ್ವಸ್ವವೆಂದು ನಂಬಿದ ಶರಣರು ಮತ್ತುಮಹಿಮರು ಸದಾ ಚಾರಿಗಳಾದುದರಿಂದ ಸಮಯಾನುಸಾರ ಭಾವ ಭಂಗಿಗಳನ್ನು ಬದಲಿಸಿದ ರೇನೂ ಚಿಂತೆಯಿಲ್ಲ; ಅವರು ಕರುಣಾರಸದ ಸಮುದ್ರದಂತಿರುತ್ತಾರೆ.

೭೪೦ ಉರಿತಾಗಿದ ಮೃಗವು ಒಂದಡಿಯು ನಿಡುವುದೆ, ಅಯ್ಯಾ?
ತನುವ ತಾಗಿದ ಸುಖವು ಅಗಲುವುದೆ?
ಕೂಡಲ ಸಂಗನ ಶರಣರ ಅನುಭಾವವರಿದವರ
ಮರಳಿ ಮರ್ತ್ಯರೆನ್ನ ಬಹುದೆ?

ಉರಿಗೆ ಬೆಂದ ಚಿಗರಿಯು ಒಂದು ಹೆಜ್ಜೆಯನ್ನು ಮುಂದೆ ಇಡುವುದಿಲ್ಲ; ದೇಹಕ್ಕುಂಟಾದ ಸುಖವು ಎಂದಿಗೂ ಅಳಿಯದು! ಸಂಗಮ ದೇವರ ಶರಣರ ನೆರಳಿನಲ್ಲಿರುವವರು ಜನನ ಮರಣ ಮುಕ್ತರು; ಅವರಿಗೆ ಪುನರ್ಜನ್ಮವಿಲ್ಲ.

೭೪೧ ನಿಮ್ಮ ಶ್ರೀ ಪಾದ ಮುಟ್ಟಿ ಎನ್ನ ಕರ್ಮ ಹರಿಯಿತ್ತು.
ನಿಮ್ಮ ಪ್ರಸಾದದಿಂದ ನಾನು ಭವಗೆಟ್ಟೆ, ನೋಡಯ್ಯಾ!
ಮನಪರುಷ, ದೃಷ್ಟಿಪರುಷ, ಭಾವ ಪರುಷ:
ಲಿಂಗಗಣಂಗಳು.
ಕೂಡಲ ಸಂಗಮದೇವಾ, ನಿಮ್ಮ ಶರಣರನುಭಾವದಿಂದ
ನಾನು ಸುಖಿಯಾದೆನು!

ದೇವಾ ನಿಮ್ಮ ಪಾದ ಸ್ಪರ್ಶದಿಂದ ನನ್ನ ಭವಕರ್ಮಗಳು ದೂರವಾದವು; ನಿಮ್ಮ ಕಾರುಣ್ಯ ಪ್ರಸಾದದಿಂದ ನಾನು ಭವಚಕ್ರದಿಂದ ಬಿಡುಗಡೆ ಹೊಂದಿದೆನು; ಕಾರಣ ನನ್ನ ಮನಸ್ಸು, ನೋಟ ಭಾವವು ಪರುಷಮಣಿಗಳಾಗಿವೆ; ಕೂಡಲಸಂಗಮದೇವಾ ಶರಣರ ಅಸದೃಶ್ಯ ಸ್ನೇಹದಿಂದ ನಾನು ಕಡು ಸುಖಿಯಾದೆನು.

## ಪ್ರಸಾದಿಯ ಐಕ್ಯಸ್ಥಳ

೭೪೨ ನಡೆ ಚೆನ್ನ, ನುಡಿ ಚೆನ್ನ, ಎಲ್ಲಿ ನೋಡಿದಡೆ ಚೆನ್ನ!
ಪ್ರಮಥರೊಳಗೆ ಚೆನ್ನ ಪುರಾತರೊಳಗೆ ಚೆನ್ನ!
ಸವಿನೋಡಿ ಅಂಬಲಿಯು, ರುಚಿಯಾಯಿತ್ತೆಂದು,
ಕೂಡಲ ಸಂಗಮ ದೇವಂಗೆ ಬೇಕೆಂದು ಕೈದೆಗೆದ
ನಮ್ಮ ಚೆನ್ನ!!

ಮಾದಾರ ಚೆನ್ನಯ್ಯನ ನಡೆ ನುಡಿಗಳು ಉತ್ತಮ ವಾದವುಗಳು ನೋಡಿದತ್ತೆಲ್ಲ ಚೆನ್ನನು ಇದ್ದೇ ಇದ್ದಾನೆ; ಪ್ರಮಥರ ಗುಂಪಿನಲ್ಲಿ, ಪುರಾತರ ಗುಂಪಿನಲ್ಲಿ! ಚೆನ್ನನು ಅಂಬಲಿಯ ರುಚಿ ನೋಡಿ ಕೂಡಲ ಸಂಗಮ ದೇವರಿಗೆ ಅತಿ ಪ್ರಿಯವಾದ ಅಡಿಗೆ ಎಂದು ಅವನಿಗಾಗಿ ಮುಚ್ಚಿಟ್ಟನು.

೭೮೩ ಲಿಂಗವಿಕಾರಿಗೆ ಅಂಗವಿಕಾರವೆಂಬುದಿಲ್ಲ,
ಜಂಗಮವಿಕಾರಿಗೆ ಧನವಿಕಾರವೆಂಬುದಿಲ್ಲ;
ಪ್ರಸಾದವಿಕಾರಿಗೆ ಮನವಿಕಾರ ವೆಂಬುದಿಲ್ಲ;
ಇಂತೀ ತ್ರಿವಿಧಗುಣವನರಿಯದಾತನು
ಅಚ್ಚಲಿಂಗೈಕ್ಯನು, ಕೂಡಲ ಸಂಗಮದೇವಾ.

ಲಿಂಗ ಜಂಗಮ ಪ್ರಸಾದಗಳನ್ನು ಮೆಚ್ಚಿದ ಭಕ್ತರಿಗೆ ತನು ಮನ ಧನದ ಹುಚ್ಚು ಕಡಿಮೆ; ಯಾಕಂದರೆ ಪೂಜೆಯ ಮೂರು ಪ್ರಕಾರಗಳನ್ನು ಭಿನ್ನಭಿನ್ನ ವಾಗಿಟ್ಟು ನೋಡದವನೆ ಲಿಂಗೈಕ್ಯನೆಂದು ಸಾರಬೇಕು; ಕೂಡಲ ಸಂಗಮದೇವಾ.

# ಪ್ರಾಣಲಿಂಗಿ ಸ್ಥಳ

## ಪ್ರಾಣಲಿಂಗಿಯ ಜ್ಞಾನಿಸ್ಥಳ

೭೮೪ ಪ್ರಾಣಲಿಂಗ ಪ್ರತಿಗ್ರಾಹಕನಾದ ಬಳಿಕ
ಲಿಂಗ ವಿರಹಿತವಾಗಿ ನಡೆವ ಪರಿಯಿನ್ನೆಂತೋ?
ಲಿಂಗ ವಿರಹಿತವಾಗಿ ನುಡಿವ ಪರಿಯಿನ್ನೆಂತೊ?
ಪಂಚೇಂದ್ರಿಯ ಸುಖವನು ಲಿಂಗ ವಿರಹಿತವಾಗಿ
ಭುಂಜಿಸಲಾಗದು;
ಲಿಂಗ ವಿರಹಿತವಾಗಿ ಉಗುಳು ನುಂಗಲಾರದು.
ಇಂತೆಂದುದು ಕೂಡಲ ಸಂಗನ ವಚನ.

ಪ್ರಾಣಲಿಂಗವು ಸಂಸಾರದಲ್ಲಿ ಪುನಃ ಕೂಡಿದ ಬಳಿಕ, ಲಿಂಗವನ್ನು ಬಿಟ್ಟು ನಡೆಯುವುದು, ಮಾತನಾಡುವುದು, ಪಂಚೇಂದ್ರಿಯ ಸುಖ ಅನು ಭೋಗಿಸುವದು ಹೇಗೆ? ಲಿಂಗವಿಲ್ಲದೆ ಉಗುಳನ್ನು ಕೂಡ ನುಂಗಬಾರದು; ಹೀಗೆ ಕೂಡಲ ಸಂಗಮನು ಕಟ್ಟಪ್ಪಣೆ ಮಾಡಿದ್ದಾನೆ.

**೭೮೫ ಹತ್ತುಸಾವಿರ ಗೀತವ ಹಾಡಿ ಅರ್ಥವಿಟ್ಟಲ್ಲಿ ಫಲವೇನು,**
**ಮುಟ್ಟುವ ತೆರನರಿಯದನ್ನಕ್ಕ?**
**ಕಟ್ಟಿದರೇನು ಬಿಟ್ಟರೇನು.**
**ಮನವು ಲಿಂಗದಲ್ಲಿ ಮುಟ್ಟದನ್ನಕ್ಕ?**
**ಮಾತಿನ ಮಾತಿನಲೆ ಒಲಿಸಿ ಮುಹತ್ತಪ್ಪ ಲಿಂಗವ ಕಂಡಹೆನೆಂಬ**
**ಪಾತಕರ ಮೆಚ್ಚ ನಮ್ಮ ಕೂಡಲ ಸಂಗಮ ದೇವ.**

ಹತ್ತುಸಾವಿರ ಹಾಡುಗಳನ್ನುಹಾಡಿ ಅವುಗಳ ಅರ್ಥ ಮರ್ಮಗಳನ್ನು ತಿಳಿದೂ ಏನೂ ಪ್ರಯೋಜನವಿಲ್ಲ; ಏಕೆಂದರೆ ದೇವರಲ್ಲಿ ಐಕ್ಯನಾಗುವ ರೀತಿ ತಿಳಿಯದುದರಿಂದ; ಮನಸ್ಸು ಲಿಂಗದಲ್ಲಿ ಅವಿಭಾಜ್ಯವಾಗಿ ನೆಲೆಸದ ವಿನಃ ಲಿಂಗವನ್ನು ಕಟ್ಟಿಕೊಂಡರೂ ಅಷ್ಟೇ ಬಿಟ್ಟರೂ ಅಷ್ಟೆ. ಸವಿ ಮಾತು ಗಳಿಂದ ಘನಲಿಂಗವನ್ನು ಒಲಿಸಿಕೊಂಡಿರುವೆವೆಂದು ಡಂಭದಮಾತು ಆಡಿದ ಪಾಪಿಗಳಿಗೆ ಕೂಡಲ ಸಂಗಮ ದೇವರು ದಯೆದೋರುವುದಿಲ್ಲ.

**೭೮೬ ಶ್ವಾನಜ್ಞಾನ ಗಜಜ್ಞಾನ, ಕುಕ್ಕುಟಜ್ಞಾನವೆಂಬ**
**ಜ್ಞಾನತ್ರಯಗಳೇನಾದುವು?**
**ಕೂಡಲ ಸಂಗಮದೇವಾ, ನಿಮ್ಮನರಿಯದ**
**ಜ್ಞಾನವೆಲ್ಲಾ ಅಜ್ಞಾನ!**

ನಾಯಿಯಲ್ಲಿರಬೇಕಾದ ನಂಬಿಗೆಯ ಗುಣ, ಆನೆಯಲ್ಲಿರಬೇಕಾದ ಕರ್ತವ್ಯಗುಣ, ಹೊತ್ತಿಗೆ ಸರಿಯಾಗಿ 'ಕುಕುಕೂ'ಎಂದು ಕೂಗುವ ಕೋಳಿ ಯ ಗುಣ, ಇವು ಮೂರು ಗುಣ ತ್ರಯಗಳು ನಿರುಪಯೋಗವಾಗಿವೆ; ಪರ ಮಾತ್ಮನನ್ನು ತಿಳಿಯಲು ಸಾಧ್ಯವಾಗದ ಜ್ಞಾನವು ಜ್ಞಾನವಲ್ಲ; ಅಜ್ಞಾನ.

೭೮೭ **ಗುರು ತೋರಿದ ಲಿಂಗವು ಮನಸ್ಥಲವಾಗಿರಲು**
**ಪವನ ಭೇದದಿಂದ ಅರಿದಹೆನೆಂದರೆ, ಅದೆದ್ರೋಹ !**
**ಇಡಾ ಪಿಂಗಳಾ ಸುಷುಮ್ನಾನಾಳವಿಡಿದು ಅರಿದಹೆನೆಂದರೆ**
**ಕೂಡಲ ಸಂಗಮ ದೇವ ಮೂಗ ಕೊಯ್ಯದೆ**
**ಮಾಣ್ಬನೇ?**

ಗುರೂಪದೇಶದ ಫಲದಿಂದಾಗಿ ಪರಮಾತ್ಮಲಿಂಗವು ಮನವರಿಕೆಯಾಗಿದ್ದರೂ ಅನೇಕ ಪ್ರಕಾರದ ಯೋಗಗಳಿಂದ ದೇವರನ್ನು ಕಂಡೆನೆಂದು ಹೇಳುವುದು ಗುರುದ್ರೋಹ ಮಾಡಿದಂತೆ; ಇಡಾ, ಪಿಂಗಳಾ, ಸುಷುಮ್ನ ಎಂಬ ನಾಡಿಗಳನ್ನು ಆಧೀನದಲ್ಲಿಟ್ಟುಕೊಂಡು ಲಿಂಗವನ್ನು ಕಂಡಿರುವೆನೆಂದು ಹೇಳಿದರೆ ಕೂಡಲ ಸಂಗಮ ದೇವರು ಅವರ ಮೂಗು ಕೊಯ್ಯುತ್ತಾನೆ.

೭೮೮ **ಕಬ್ಬುನ ಪರುಷ ವೇದಿಯಾದರೇನು,**
**ಕಬ್ಬುನ ಹೊನ್ನಾಗದೊಡಾ ಪರುಷವದೇಕೊ ?**
**ಮನೆಯೊಳಗೆ ಕತ್ತಲೆ ಹರಿಯದೊಡಾ**
**ಜ್ಯೋತಿಯದೇಕೊ ?**
**ಕೂಡಲ ಸಂಗಮ ದೇವರ ಮನಮುಟ್ಟಿ ಪೂಜಿಸಿ**
**ಕರ್ಮಹರಿಯದೊಡಾ ಪೂಜೆಯದೇಕೋ ?**

ಪರುಷಮಣಿಯ ಸ್ಪರ್ಶವಾದರೂ ಕಬ್ಬುನವೂ ಬಂಗಾರವಾಗದಿದ್ದರೆ ಆ ಪರುಷಮಣಿಯು ಕೆಲಸಕ್ಕೆ ಬಾರದ್ದು; ಮನೆಯ ಕತ್ತಲೆಯನ್ನು ಹೋಗಲಾಡಿಸದ ದೀಪವು ನಿರುಪಯೋಗವಾಗುತ್ತದೆ; ಹಾಗೆ ಲಿಂಗಪೂಜೆ ಮಾಡಿಯೂ ಕರ್ಮಗಳು ನಾಶವಾಗದೇ ಇದ್ದರೆ ಆ ಪೂಜೆ ನಿಷ್ಫಲವಾದುದು ದೇವಾ.

೭೮೯ **ಅಹಂಕಾರ ಮನವನಿಂಬುಗೊಂಡಲ್ಲಿ**
**ಲಿಂಗ ತಾನೆಲ್ಲಿ ಬಪ್ಪುದೋ ?**
**ಅಹಂಕಾರಕ್ಕೆ ಎಡೆಗೊಡದೆ ಲಿಂಗತನುವಾಗಿರಬೇಕು.**

**ಅಹಂಕಾರರಹಿತವಾದಲ್ಲಿ ಸನ್ನಿಹಿತ, ಕಾಣಾ,**
**ಕೂಡಲ ಸಂಗಮದೇವ !**

ಮನಸ್ಸು ಅಹಂಕಾರದಿಂದ ಮುಸುಕಿದ್ದರೆ ಅಲ್ಲಿ ಲಿಂಗವು ಪ್ರಕಾಶಮಾನವಾಗಿರುವುದು ಹೇಗೆ? ಅಹಂಕಾರವನ್ನು ಬಿಟ್ಟು ದೇಹವೆಲ್ಲ ಲಿಂಗಮಯವಾದಾಗ ಅಲ್ಲಿ ಕೂಡಲ ಸಂಗಮ ದೇವನೂ ಬಂದು ನೆಲೆಸುತ್ತಾನೆ.

**೬೯೦ ಮನದ ಕೊನೆಯ ಮೊನೆಯ ಮೇಲೆ**
**ಮನೆಯ ಮಾಡಿಕೊಂಡಿಪ್ಪನೊಬ್ಬ ದಾಸೋಹಿ**
**ಆದಿವಿಡಿದು ಬಂದಾತನೆ ಭಕ್ತ:**
**ಅನಾದಿವಿಡಿದು ಬಂದಾತನೆ ಜಂಗಮ !**
**ಆದಿಗುರುಃ ಅನಾದಿ ಶಿಷ್ಯ !**
**ಈ ಉಭಯ ಕುಳಸ್ಥಳವ ಬಲ್ಲರೆ ಆತಲಿಂಗ ಸಂಬಂಧಿ,**
**ಕೂಡಲ ಸಂಗಮ ದೇವಾ.**

ನಿಮ್ಮ ಚಾಕರನು ಎಲ್ಲಕ್ಕೂ ಮಿಗಿಲಾದ ಎತ್ತರದ ಸ್ಥಳದಲ್ಲಿ ಮನೆ ಮಾಡಿಕೊಂಡಿದ್ದಾನೆ; ಆದರೆ ದೇವಾ, ಭಕ್ತನು ಇಂದು ನಾಳಿನವನು; ಜಂಗಮನು ಅನಾದಿ ಕಾಲದಿಂದಲೂ ಇದ್ದವನು; ಕಾಲ ಕಾಲಕ್ಕೆ ಗುರು ಬದಲಾಗುತ್ತಾನೆ. ಆದರೆ ಶಿಷ್ಯನು ಯುಗ ಯುಗ ಪರ್ಯಂತದಿಂದಲೂ ಶಿಷ್ಯತ್ವವನ್ನು ಕಾಯ್ದುಕೊಂಡು ಬಂದವನು; ಕಾರಣ ಈ ಎರಡು ಸ್ಥಳಗಳನ್ನು ಸರಿಯಾಗಿ ತಿಳಿದು ಕೊಂಡವನೇ ಲಿಂಗೈಕ್ಯನು; ಕೂಡಲ ಸಂಗಮ ದೇವಾ.

**೬೯೧ ಮುತ್ತು ಉದಕದೊಳಾಗದು, ಉದಕೆ**
**ಮುತ್ತಿನಲಾಗದು;**
**ತತ್ತ್ವ ಘಟಸಿದ ಸುಮುಹೂರ್ತದಲ್ಲಲ್ಲದೆ,**
**ಚಿತ್ತವೇದ್ಯವಾಗದು ಸದ್ಗುರುವಿನ ಕರಣಕ್ಕಲ್ಲದೆ.**

**ಕರ್ತೃ ಕೂಡಲ ಸಂಗಮ ದೇವರ ಒಲವಿನ ದಯದ**
**ಚಿತ್ತವಿಡಿದಂಗಲ್ಲದೆ ಶಿವತತ್ತ್ವ ಸಾಹಿತ್ಯವಾಗದು.**

ಸಮುದ್ರದಲ್ಲಿ ಮುತ್ತುಗಳಾಗುವುದು ನೀರಿನಿಂದಾಯಿತೆಂಬುದು ಸುಳ್ಳು. ಭಗವಂತನ ಮಹಿಮೆಯ ತತ್ತ್ವ ಘಟಿಸಿದ ಶುಭ ಸಮಯದಲ್ಲಿ ಮುತ್ತುಗಳಾಗುತ್ತವೆ. ಸದ್ಗುರುವಿನ ಉಪದೇಶವಿಲ್ಲದ ಹೊರತು ಪರಮಾತ್ಮನನ್ನು ತಿಳಿಯಲಾರೆವು; ಲೋಕಪಾಲಕನಾದ ಕೂಡಲ ಸಂಗಮ ದೇವರ ಪ್ರೇಮವು ಯಾರಲ್ಲಿದೆಯೋ ಅವರಿಗೆ ಶಿವಪಥ ಗೋಚರವಾಗುತ್ತದೆ.

**೭೯೨ ಸ್ಥಾವರ ಜಂಗಮ ವೆಂಬುಭಯ ಪಕ್ಷ ಒಂದೇ:**
**ಆವ ಮುಖದಲಿ ಬಂದರೂ ತೃಪ್ತಿಯೊಂದೇ;**
**ಕೂಡಲ ಸಂಗಮದೇವರ ಆಪ್ಯಾಯನವೊಂದೇ**

ಚರಾಚರಗಳೆಂಬುವು ಬೇರೆ ಬೇರೆಯಲ್ಲ; ಭಗವಂತನ ಅನೇಕ ಮುಖಗಳಲ್ಲಿ ಸವಿಯುವ ರುಚಿಯ ತೃಪ್ತಿಒಂದೆಯಾಗಿದೆ. ತಂದೆ ತಾಯಿಗಳಿಗೆ – ಮಕ್ಕಳು ಮರಿಗಳುಂಡರೂ ತಾವು ಉಂಡಷ್ಟೆ ತೃಪ್ತಿಯಾಗುತ್ತದೆ. ಹಾಗೆ ಕೂಡಲ ಸಂಗಮ ದೇವರು ತೃಪ್ತಿಯಾಗಬೇಕೆಂದರೆ ಜಂಗಮ ತೃಪ್ತಿಯಾಗಬೇಕು; ಪ್ರಾಣಿ ದಯೆ ಮುಖ್ಯವಾಗಿ ಮಾನವನಿಗಿರಬೇಕು.

**೭೯೩ ಅರಿದರಿದು ! ಸಮಗಾಣಿಸಬಾರದು:**
**ತ್ರಾಸಿನ ಕಟ್ಟಳೆಯಂತಿನಿತು ನೆಗ್ಗಳವಾದರೆ**
**ಈಶ್ವರ ನೊಡೆಯಿಕ್ಕದೆ ಮಾಣುವನೆ?**
**ಪಾತ್ರ ಅಪಾತ್ರವೆಂದು ಕಂಡರೆ ಶಿವನೆಂತು ಮೆಚ್ಚುವನು?**
**ಜೀವ ಜೀವಾತ್ಮವ ಸರಿಯೆಂದು ಕಂಡರೆ**
**ಸಮವೇದಿಸದಿಪ್ಪನೆ ಶಿವನು?**
**ತನ್ನ ಮನದಲ್ಲಿ 'ಯತ್ರ ಜೀವಸ್ತತ್ರ ಶಿವ' ನೆಂದು**
**ಸರ್ವಜೀವದಯಾಪಾರಿಯಾದಲ್ಲಿ ಕೂಡಲ ಸಂಗಮ ದೇವನು**
**ಕೈಲಾಸದಿಂದ ಬಂದು ಎತ್ತಿಕೊಳ್ಳದಿಪ್ಪನೆ?**

ತಿಳಿದೂ ತಿಳಿದೂ ನಾವು ಯಾವುದನ್ನೂ ಜನರ ಮುಂದೆ ಹೇಳಬಾರದು; ದುಃಖಗಳು ಹೆಚ್ಚಾದರೆ ಈಶ್ವರನು ಸಹಾಯ ಮಾಡದೆ ಇರುವುದಿಲ್ಲ; ಶಿವಾಚಾರಗಳಿಗೆ ಅಯೋಗ್ಯರೆಂದು ತಿಳಿದು ಬಂದರೆ ಅವನು ಕರುಣಿಸುವುದಿಲ್ಲ; ಎಲ್ಲ ಜೀವಾತ್ಮರೂ—ಜೀವಗಳೂ ಪರಮಾತ್ಮನಾಂಶಗಳೆಂದು ತಿಳಿದುಕೊಂಡರೆ ಶಿವನು ನಮಗೆ ಗೋಚರನಾಗುತ್ತಾನೆ; ಜೀವಮಾತ್ರರೆಲ್ಲರಲ್ಲಿಯೂ ಶಿವನಿದ್ದಾನೆಂದು ಮನಗಂಡು ಸಕಲ ಪ್ರಾಣಿಗಳಲ್ಲಿ ದಯಾದೃಷ್ಟಿಯಿಟ್ಟರೆ ಕೂಡಲ ಸಂಗಮ ದೇವರು ನಮ್ಮನ್ನು ಕೈಲಾಸಕ್ಕೆ ಕರೆದುಕೊಂಡು ಹೋಗುತ್ತಾನೆ,

**೭೯೪ ಕಾಯದ ಗಡಣಿ ಕೆಲಬರಿಗುಂಟು,**
**ಜೀವದ ಗಡಣಿ ಕೆಲಬರಿಗುಂಟು,**
**ಭಾವದ ಗಡಣಿ ಕೆಲಬರಿಗುಂಟು,**
**ವಚನದ ಗಡಣಿ ಕೆಲಬರಿಗುಂಟು;**
**ಪ್ರಾಣಲಿಂಗದ ಗಡಣಿ ಆರಿಗೂ ಇಲ್ಲ,**
**ಕೂಡಲಸಂಗನ ಶರಣರಲ್ಲಿ, ತಂಗಟೂರ**
**ಮಾರಯ್ಯಂಗಲ್ಲದೆ.**

ಕೆಲವರು ದೇಹದಂಡಮಾಡಿ ದೇವರನ್ನೊಲಿಸುತ್ತಾರೆ; ಕೆಲವರು ಜೀವಕ್ಕೆ ದುಃಖ ಕೊಟ್ಟು ದೇವರ ಪ್ರೀತಿ ಸಂಪಾದಿಸುತ್ತಾರೆ; ಭಾವಜೀವಿಗಳಾಗಿ ಕೆಲವರು ದೇವರನ್ನು ಕಾಣುತ್ತಾರೆ; ಮಾತಿನ ಮಧುರತೆಯಿಂದಲೆ ಕೆಲೆವರು ಲಿಂಗವನ್ನು ಒಲಿಸಿಕೊಳ್ಳುತ್ತಾರೆ; ಆದರೆ ಮಾರಯ್ಯನು ತನ್ನ ಪ್ರಾಣವೇ ಲಿಂಗ ಅದೇ ಪ್ರಾಣಲಿಂಗವೆಂದು ಅಂತರಂಗದಲ್ಲಿ ಕಂಡು ತಿಳಿದು ಪೂಜಿಸುತ್ತಾನೆ; ಇವನೇ ಶರಣ ಶ್ರೇಷ್ಠನು.

**೭೯೫ ಚಂದ್ರಕಾಂತದ ಶಿಲೆಯಲ್ಲಿ ಜಲವಿಲ್ಲದನ್ನಕ್ಕ**
**ಶೈತ್ಯವ ತೋರುವ ಪರಿಯೆಂತೋ ?**
**ಸೂರ್ಯಕಾಂತದ ಶಿಲೆಯಲ್ಲಿ ಅಗ್ನಿಯಿಲ್ಲದನ್ನಕ್ಕ**
**ಉಷ್ಣವ ತೋರುವ ಪರಿಯೆಂತೊ ?**

**ಶರಣಂಗೆ ಭಕ್ತಿಕಾಯವಿಲ್ಲದನ್ನಕ್ಕ**
**ಕೂಡಲ ಸಂಗಯ್ಯನನರಿವ ಪರಿಯೆಂತೋ ?**

ಚಂದ್ರಕಾಂತದಲ್ಲಿ ನೀರಿಲ್ಲದಿರುವಾಗ, ಸೂರ್ಯಕಾಂತದಲ್ಲಿ ಅಗ್ನಿಯಿಲ್ಲದಿರುವಾಗ ಸೀತವನ್ನೂ ಮತ್ತು ಉಷ್ಣವನ್ನೂ ತೋರಿಸುವುದು ಹೇಗೆ? ಹಾಗೆ ಶರಣನಲ್ಲಿ ಭಕ್ತಿಯೆಂಬುದಿಲ್ಲದಿದ್ದರೆ ಕೂಡಲ ಸಂಗಮ ದೇವರನ್ನು ತಿಳಿದುಕೊಳ್ಳುವುದು ಹೇಗೆ?

೭೯೬ **ಮೂನ್ನೂರರವತ್ತು ನಕ್ಷತ್ರಕ್ಕೆ ಬಾಯಿಬಿಟ್ಟು**
**ಕೊಂಡಿಪ್ಪುದೆ ಸಿಂಪು ?**
**ಅದು ಸ್ವಾತಿಗಲ್ಲ ಬಾಯಿದೆರೆಯದು, ಕೇಳು, ಕೇಳಾ,**
**ತಂದೇ :**
**ಎಲ್ಲವಕ್ಕೆ ಬಾಯಿ ಬಿಟ್ಟರೆ ತಾನೆಲ್ಲಿಯ ಮುತ್ತಪ್ಪುದೋ?**
**ಪರಮಂಗಲ್ಲದೆ ಹರುಷತಿಕೆಯಿಲ್ಲೆಂದು**
**ಕರಣಾದಿಗುಣಂಗಳ ಮರೆದರು;**
**ಇದು ಕಾರಣ, ಕೂಡಲ ಸಂಗನ ಶರಣರು**
**ಸಪ್ತವ್ಯಸನಿಗಳಲ್ಲಾಗಿ**

ಸ್ವಾತೀಮಳೆಯ ಹನಿಗಳು ಸಿಂಪಿನಲ್ಲಿ ಬಿದ್ದಾಗ ಮುತ್ತುಗಳಾಗುತ್ತವೆ; ಆ ಸಿಂಪು ಮುನ್ನೂರರವತ್ತು ನಕ್ಷತ್ರಗಳ ಮಳೆಗಳಿಗೂ ಬಾಯಿತೆರೆದು ಕುಳಿತರೆ ಮುತ್ತಾಗಲು ಸಾಧ್ಯವಿಲ್ಲ; ಹಾಗೆ ಎಲ್ಲ ಕರ್ಮಗಳನ್ನು ಕಳೆದುಕೊಂಡು ಪರಿಶುದ್ಧರಾದ ಪರಮಶರಣರಿಗೆ ಮಾತ್ರ ಮುಕ್ತಿ ಸಿಕ್ಕುತ್ತದೆ.

## ಪ್ರಾಣಲಿಂಗಿಯ ಪ್ರಾಣಲಿಂಗಿಸ್ಥಳ

೭೯೭ **ಮೈಗೆ ಕಾಹಹೇಳುವರಲ್ಲದೆ ಮನಕ್ಕೆ ಕಾಹ ಹೇಳುವರೆ?**
**ಅಣಕದ ಮಿಂಡನ ಹೊಸ ಪರಿಯ ನೋಡಾ :**
**ಕೂಡಲ ಸಂಗಮ ದೇವನೆನ್ನ ಮನವ ನಂಬದೆ**
**ತನ್ನಲ್ಲಿದ್ದ ಲೇಸ ಕಾಹ ಹೇಳಿದನು !**

ಜನರು ದೇಹ ಸಂರಕ್ಷಿಸಿಕೊಳ್ಳಲು ಹೇಳುತ್ತಾರೆಯೇ ಹೊರತು ಮನಸ್ಸನ್ನು ಆಧೀನದಲ್ಲಿಟ್ಟುಕೊಳ್ಳಿರೆಂದು ಯಾರೂ ಹೇಳುವುದಿಲ್ಲ! ಆದರೆ ಕೂಡಲ ಸಂಗಮ ದೇವರು ನನ್ನ ಚಂಚಲ ಮನಸ್ಸನ್ನು ಸಂಬದೆ ತನ್ನಲ್ಲಿ ಅಡಕವಾದ ಸುಜ್ಞಾನ ಜ್ಯೋತಿಯನ್ನು ರಕ್ಷಣೆ ಮಾಡು ಎಂದು ಹೇಳಿದನು!

**೭೯೮ ಮನವಂಚನೆಯೆ ಅನ್ಯಲಿಂಗಾರ್ಚನೆ;**
**ಅದು ನಿಜವಲ್ಲಾ, ನಿಜವಲ್ಲಾ;**
**ಕೂಡಲ ಸಂಗಮದೇವನು ಮನದಂತರ್ಯಾಮಿ ತಾನಾಗಿ**

ನಮ್ಮ ಮನಸ್ಸಿಗೆ-ಆತ್ಮಕ್ಕೆ ಮೋಸಮಾಡಿ ಬೇರೆ ದೇವರನ್ನು ಪೂಜೆ ಮಾಡುವುದು ನಿಜವಾದ ಪೂಜೆಯಲ್ಲ; ನಿಜವಾದ ಭಕ್ತಿಯಲ್ಲ; ಯಾಕೆಂದರೆ ಸರ್ವರ ಮನೋಭಿತ್ತಿಯಲ್ಲಿರುವವನು ಕೂಡಲ ಸಂಗಮ ದೇವರು; ಕಾರಣ ವಂಚಿಸಲು ಸಾಧ್ಯವೆ?

**೭೯೯ ಪಶ್ಚಿಮ ಪದ್ಮಾಸನದಲ್ಲಿ ಕುಳಿತು ನೆಟ್ಟೆಲುವ ಮುರಿದು**
**ತುಟಿಮಿಡುಕದೆ ಅಟ್ಟಿಯಾಡಿತ್ತಲ್ಲಾ!**
**ಬಿಟ್ಟಕಣ್ಣು ಬಿಗಿದ ಹುಬ್ಬು, ಬ್ರಹ್ಮರಂಧ್ರದಲ್ಲಿ,**
**ಕಟ್ಟುಗುಡಿಯ ಕೂಡಲ ಸಂಗಮದೇವ ಹಿಡಿವಡೆದ!**

ಪದ್ಮಾಸನಸ್ಥನಾಗಿ ಕುಳಿತು ಮೌನತಾಳಿ ತಲೆಯಲ್ಲಾಡಿಸುತ್ತ ಕುಳಿತ ಶರಣನ ಅಂತರಂಗದಲ್ಲಿ ಕೂಡಲ ಸಂಗಮದೇವರು ಪ್ರಕಟವಾದನು.

**೮೦೦ ಸರ್ಪನ ಸಂಯೋಗ, ಜ್ಯೋತಿಯ ಪತಂಗನ**
**ಬೆಸನದಂತೆ—**
**ಮನದ ಮದವರಿಯದೆ, ನಿಮ್ಮ ಕೃಪೆಯಿಂದ ನಿಮ್ಮ ನೆನೆವೆ.**
**ಎನ್ನ ಭಾವದ ಕೊನೆಯ ಮೊನೆಯ ಮೇಲೆ**
**ಮನೆಯ ಮಾಡಿಕೊಂಡಿಪ್ಪೆಯಯ್ಯಾ, ಕೂಡಲ**
**ಸಂಗಮದೇವಾ.**
**ನೀನೆನ್ನ ಪ್ರಾಣನಾಥನಾಗಿ.**

ಹಾವಿನೊಡನೆ ಸ್ನೇಹ ಮಾಡುವುದೆಂದರೆ — ದೀಪ ಮತ್ತು ದೀಪದ ಹುಳುವಿನ ವ್ಯವಹಾರ ವಿದ್ದ ಹಾಗೆ; ಮನದಲ್ಲಿರುವ ವಿಷಗಳನ್ನು ಉಗುಳಿ ನಿಮ್ಮ ಕೃಪೆಯಿಂದ ನಾನು ನಿಮ್ಮ ನಾಮ ಸಂಕೀರ್ತನೆಮಾಡುತ್ತಿರುವೆನು; ಕೂಡಲ ಸಂಗಮ ದೇವಾ ನೀನು ನನ್ನ ಪ್ರಾಣದೊಡೆಯನಾಗಿರುವಿ !

**೮೦೧ ಪೃಥ್ವಿ ಅಪ್ಪು ತೇಜ ವಾಯುವಾಕಾಶ ನಿರಂಜನ ದೇವಾ.**
**ನಿಮ್ಮ ಮಹಿಮೆಯು ಪ್ರಣವ ಸ್ವರೂಪಂಗಲ್ಲದೆ**
**ಕಾಣಲಾರಿಗೆಯೂ ಬಾರದಯ್ಯಾ.**
**ಜ್ಞಾನ ಜ್ಯೋತಿ ಧ್ಯಾನದಿಂದ ನಾಳಶುದ್ಧದ್ವಾರನಾಗಿ**
**ಆರಾಧಿಸಿ ಕಂಡೆ ನಮ್ಮ ಕೂಡಲ ಸಂಗಮದೇವನ.**

ವಿಶ್ವರೂಪನಾಗಿಯೂ ನಿರಾಕಾರನಾಗಿರುವ ಪರಮಾತ್ಮನು ತನ್ನ ಸ್ವರೂಪರಾದ ಶರಣರಿಗಲ್ಲದೆ ಬೇರೆಯಾರಿಗೂ ಕಾಣುವುದಿಲ್ಲ; ನಾನು, ಕೂಡಲ ಸಂಗಮ ದೇವರನ್ನು ಜ್ಞಾನ ಮಾರ್ಗದಿಂದ ಧ್ಯಾನ ಮಾಡಿ ಪವಿತ್ರನಾಗಿ ಕಂಡೆನು.

**೮೦೨ ಸುನಾದ ಬಿಂದು ಪ್ರಣವಮಂತ್ರ ಅಗ್ರದ ಕೊನೆಯ**
**ಲೈದುವುದೆ:**
**'ಸೋಹಂ ಸೋಹಂ" ಎಂದೆನುತಿದ್ದಿತ್ತು,**
**'ಕೋಹಂ' ಎಂಬುದ ಕಳೆದು ಬ್ರಹ್ಮರಂಧ್ರದೊಳಗೆ;**
**ಅಗಮ್ಯ ಕೂಡಲ ಸಂಗಮ ದೇವನಲ್ಲದೆ**
**ಮತ್ತಾರೂ ಇಲ್ಲ !**

ಬಿಂದು ರೂಪದಿಂದ ಬಂದ ಘಂಟಾಧ್ವನಿಯು ನಾದ ಬ್ರಹ್ಮವಾಗಿ— "ಸೋಹಂ ಸೋಹಂ" ಎನ್ನುತ್ತ "ಕೋಹಂ" ಎಂಬ ಕಲ್ಪನೆಯನ್ನು ಬಿಟ್ಟುಕೊಟ್ಟನು; ಅಲ್ಲಿ ಅನಂತ ಮಹಿಮೆಯುಳ್ಳ ಕೂಡಲ ಸಂಗಮದೇವರು ಮಂಡಿಸಿದ್ದಾನೆ

**೮೦೩ ಬೆಳಗಿನೊಳಗಣ ಬೆಳಗು, ಮಹಾ ಬೆಳಗು !**
**ಶಿವ ಶಿವಾ, ಪರಮಾಶ್ರಯವೇ ತಾನಾಗಿ**

**ಶತ ಪತ್ರಕಮಳ ಕರ್ಣಿಕಾಮಧ್ಯದಲ್ಲಿ**
**ಸ್ವತಃ ಸಿದ್ಧನಾಗಿರ್ಪ ನಮ್ಮ ಕೂಡಲ ಸಂಗಮದೇವ.**

ಪ್ರಾತಃ ಕಾಲ ಸಮಯವು ಲಿಂಗಸಾಕ್ಷಾತ್ಕಾರದ ವೇಳೆಯಾಗಿದೆ; ಚಿದಾನಂದದ ಸಮಯ; ಆ ಪ್ರಸನ್ನ ಕಾಲದಲ್ಲಿ ತಿಳಿಗೊಳದೊಳಗಿನ ಕಮಲ ಪುಷ್ಪದೊಳಗೆ ಸುವಾಸಿತ ಗಂಧರೂಪನಾಗಿ ಹೊರಬರುವವನೇ ನಮ್ಮ ಕೂಡಲ ಸಂಗಮದೇವನು.

**೮೦೪ ಆಚಾರ ವಿಚಾರವೆಂದರಿಯದ ಕಾರಣ**
**ಷಡುದರುಶನಂಗಳೆಲ್ಲ ತಮ ತಮಗೆ ಶರಣೆನ್ನುತ್ತಿದ್ದವು;**
**ಮಹತ್ವದ ಸಮಯೊಾದಿ ಶೈವಂಗಳೆಲ್ಲ ಶರಣೆನ್ನುತ್ತಿದ್ದುವು!**
**ನಮ್ಮ ಕೂಡಲ ಸಂಗನ ಶರಣರು ಮಾಡಿದ ವಿನಿಯೋಗ**
**ಬಹಿರಂಗದಲ್ಲಿ ವರ್ತಿಸುವವರಿಗೆ ಎಲ್ಲಿಯದೋ?**

ನಮ್ಮ ತಿಳಿವಳಿಕೆಯಂತೆ ನಮ್ಮ ನಡೆ—ನುಡಿ – ವ್ಯವಹಾರಗಳು ಇಲ್ಲದುದಕ್ಕಾಗಿ ಕಾಮ, ಕ್ರೋಧ, ಮದ, ಮತ್ಸರ ಮೊದಲಾದವುಗಳು ತಾವೇ ಹೆಚ್ಚಿನವರೆಂದುಕೊಳ್ಳುತ್ತಲಿವೆ; ಡಂಭಾಚಾರದ ಶಿವಶರಣರು ತಾವೇ ಲೋಕಕ್ಕೆ ತಂದೆ ಎಂದು ಹೇಳಿಕೊಳ್ಳುತ್ತಾರೆ; ಆದರೆ ನಿಜವಾದ ಶರಣರ ಭಕ್ತಿಯ ಫಲ ಹುಚ್ಚು ಜನರಿಗೆ ದೊರೆಯಲಾರದು, ಕೂಡಲ ಸಂಗಮ ದೇವಾ.

**೮೦೫ ತಮ ತಮಗೆಲ್ಲ ನೋಸಲ ಕಣ್ಣವರು, ತಮತಮಗೆಲ್ಲ**
**ನಂದಿ ವಾಹನರು,**
**ತಮತಮಗೆಲ್ಲ ಖಟ್ವಾಂಗ ಕಪಾಲ ತ್ರಿಶೂಲಧರರು:**
**ದೇವರಾರು ಭಕ್ತರಾರು ಹೇಳಿರಯ್ಯಾ!**
**ಕೂಡಲ ಸಂಗಮ ದೇವಾ, ನಿಮ್ಮ ಶರಣರು ಸ್ವತಂತ್ರರು:**
**ಎನ್ನ ಬಚ್ಚಬರಿಯ ಬಸವನೆನಿಸಯ್ಯಾ.**

ತಾವೇ ದೊಡ್ಡವರೆಂದು ಭಾವಿಸಿದ ಜನರು ಎಷ್ಟು ದೊಡ್ಡವರೆಂದರೆ, ತಮ್ಮಷ್ಟಕ್ಕೆ ತಾವೇ ಮುಕ್ಕಣ್ಣರಾಗಿದ್ದಾರೆ, ನಂದೀಶ್ವರರಾಗಿದ್ದಾರೆ, ರುಂಡ

ಮಾಲೆಧರಿಸಿ ತ್ರಿಶೂಲಹಿಡಿದ ರುದ್ರನಾಗಿದ್ದಾರೆ; ಕೂಡಲ ಸಂಗಮದೇವಾ, ನಿಮ್ಮ ಶರಣರು ಇಂಥ ಕುಭಾವನೆಗಳಿಂದ ಸ್ವತಂತ್ರರು; ಆದರೆ ನನ್ನನ್ನು ಎಲ್ಲರೂ ಬಸವನೆಂದು ಕರೆಯುವಂತೆ ದಯೆದೋರು.

**೮೦೬ ಗುರುವಿನಲ್ಲಿ ಸದಾಚಾರ: ಲಿಂಗದಲ್ಲಿ ಅನುದಿನ ವೇಳೆ.**
**ಜಂಗಮದಲ್ಲನುಭಾವ, ಸಮಯಾಚಾರ: ಲಿಂಗದಲ್ಲಿ ಅನುದಿನವೇಳೆ.**
**ಈ ಉಭಯಾಚಾರದಿಂದ ತಿಳಿದ ತಿಳಿವು: ಲಿಂಗದಲ್ಲಿ ಅನುದಿನವೇಳೆ;**
**ಬೇರೆ ತೋರಲಿಲ್ಲ:**
**ಲಿಂಗ ಜಂಗಮದಲ್ಲಿ ಲೀಯವಾದಾಚಾರ ಸಮಯಾಚಾರ.**
**ಇದು ಕಾರಣ, ಕೂಡಲ ಸಂಗಮದೇವಾ, ಲಿಂಗದಲ್ಲಿ ಅನುದಿನವೇಳೆ!**

ಗುರುವಿನ ಬಳಿ ಸದ್ವಿನಯ ಸದ್ವರ್ತನೆಯಿಂದ ನಡೆಯಬೇಕು; ನಿರಂತರಲಿಂಗ ಧ್ಯಾನ ಚಿಂತನೆ ಮಾಡಬೇಕು; ಜಂಗಮನಬಳಿ ಪ್ರತ್ಯಕ್ಷ ಅನುಭವ ಪಡೆಯಬೇಕು; ಗುರು-ಲಿಂಗ-ಜಂಗಮರ ಮಧ್ಯಂತರದಲ್ಲಿರುವ ಉಪಚಾರಭೇದ ತಿಳಿಯುವುದೇ ಜ್ಞಾನ; ಜ್ಞಾನವೆಂಬುದು ಬೇರೆಯೇನೂ ಅಲ್ಲ; ಆದಕಾರಣ ಕೂಡಲ ಸಂಗಮದೇವಾ, ಲಿಂಗ ಚಿಂತನೆಯನ್ನು ಸದಾವಕಾಲ ಮಾಡುತ್ತಲಿರುವೆನು.

**೮೦೭ ಉಳ್ಳವರು ಶಿವಾಲಯವ ಮಾಡುವರು:**
**ನಾನೇನ ಮಾಡುವೆ? ಬಡವನಯ್ಯಾ.**
**ಎನ್ನ ಕಾಲೇ ಕಂಭ, ದೇಹವೇ ದೇಗುಲ,**
**ಸಿರ ಹೊನ್ನಕಳಸವಯ್ಯಾ.**
**ಕೂಡಲ ಸಂಗಮದೇವ, ಕೇಳಯ್ಯಾ;**
**ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ!**

ಧನಿಕರು ದುಡ್ಡಿನ ಬಲದಿಂದ ಮಹಾಶಿವ ಮಂದಿರಗಳನ್ನು ಕಟ್ಟಿಸುತ್ತಾರೆ; ದೇವಾ ನಾನು ಬಡವನು; ಈ ದೇಹವೇ ನಿನಗೆ ಗುಡಿ; ಕಾಲುಗಳು

ಕಂಭವಾಗಿವೆ; ನನ್ನ ಸಿರವೇ ಬಂಗಾರದ ಕಳಸ; ಶಾಶ್ವತವೆಂದು ನಂಬಿ ಕಟ್ಟಿದಗುಡಿಗಳು ನಾಶಹೊಂದುತ್ತವೆ;ಆದರೆ ಜಂಗಮನಲ್ಲಿ ಪ್ರತಿಷ್ಠಿತನಾದ ನಿನಗೆ ಅಳಿವಿಲ್ಲ!

## ಪ್ರಾಣಲಿಂಗಿಯ ಭಕ್ತಸ್ಥಳ

**೮೦೮ ಅಷ್ಟದಳ ಕಮಳಾತ್ಮದೊಳಗೆ ನೆಟ್ಟನೆ ಮನಃಪ್ರೇರಕ ನೆಂದು**
**ನಿಮ್ಮ ನಂಬಿದೆ, ಮತ್ತೊಂದನರಿಯೆ.**
**ನಿತ್ಯ ಸ್ವತಂತ್ರನು ನೀನೇ ದೃಷ್ಟ: ಲಿಂಗ ಜಂಗಮ ಒಂದೆ ಎಂದಿಪ್ಪೆನು,**
**ಪರಮ ಪ್ರಭುವೆ, ಕೂಡಲ ಸಂಗಮದೇವಾ!**

ಮಹಾಪ್ರಭುವೆ, ಕೂಡಲ ಸಂಗಮದೇವಾ, ಎಂಟುದಳ ಕಮಲಪುಷ್ಪ ದೊಳಗಡಕವಾಗಿನಿಂದು ಪರಿಮಳದೊಂದಿಗೆ ನನ್ನ ಮನ ಪ್ರವೇಶಮಾಡಿ ಪ್ರೇಮಭಕ್ತಿಯನ್ನು ಪ್ರೇರೇಪಿಸುವವನು ನೀನೇ ಎಂದು ನಾನು ನಂಬಿದ್ದಕ್ಕೆ ಸತ್ಯಾತ್ಮನೂ ಸರ್ವಸ್ವತಂತ್ರನೂ ಆದ ನೀನೆ ಸಾಕ್ಷಿ; ಲಿಂಗ ಜಂಗಮರೂ ಅಭಿನ್ನರು.

**೮೦೯ ನಿನ್ನನಾರಿಯದ ಮುನ್ನ ನೀನೆಲ್ಲಿದ್ದೆ?**
**ಎನ್ನೊಳಗಿದ್ದು ನಿನ್ನ ತೋರಲಿಕೆ ನೀನೇ ರೂಪಾದೆ.**
**ಇನ್ನು ಜಂಗಮವೆ ಲಿಂಗವೆಂದು ನಂಬಿದೆ,**
**ಕೂಡಲ ಸಂಗಮದೇವಾ.**

ಪ್ರಭು, ನಿನ್ನನ್ನು ನಾನು ಅರಿತುಕೊಳ್ಳುವದಕ್ಕಿಂತ ಮೊದಲು ನೀನು ಎಲ್ಲಿ ಕುಳಿತಿದ್ದಿ ? ನನ್ನ ಅಂತರಂಗದಲ್ಲಿ ನೀನು ಅಡಗಿ ಕುಳಿತುದುದನ್ನು ಗೊತ್ತುಮಾಡಿ ಕೊಡಲು ನೀನೇ ಗುರುವಾಗಿ ಬರಬೇಕಾಯಿತು. ಕಾರಣ ಕೂಡಲ ಸಂಗಮ ದೇವಾ, ಇನ್ನು ಮುಂದೆ ಜಂಗಮನೇ ಪರಮಾತ್ಮಲಿಂಗ ನೆಂದು ದೃಢನಂಬಿಕೆ ಇಡುವೆನು.

**೮೧೦ ಗುರು ಮುನಿದರೆ ಒಂದು ದಿನ ತಾಳುವೆ,**
**ಲಿಂಗ ಮುನಿದರೆ ದಿನದರೆ ತಾಳುವೆ:**
**ಜಂಗಮ ಮುನಿದರೆ ಕ್ಷಣಮಾತ್ರ ತಾಳಿದೆನಾದರೆ**
**ಎನ್ನ ಪ್ರಾಣದ ಹೋಕು! ಕೂಡಲ ಸಂಗಮದೇವಾ.**

ಗುರುವು ಶಾಪ ಕೊಟ್ಟರೆ ಒಂದು ದಿನ ಬಾಳಿ ಬದುಕಬಲ್ಲೆನು; ಪರಮಾತ್ಮನು ಶಾಪ ಕೊಟ್ಟರೆ ಅರ್ಧದಿನ ಬದುಕಿರಲು ಸಾಧ್ಯವಿದೆ; ಆದರೆ ಸಾಕ್ಷಿರೂಪನಾದ ಜಂಗಮನು ಶಾಪಕೊಟ್ಟಾಗ್ಯೂ ಒಂದು ಕ್ಷಣದವರೆಗೆ ನನ್ನ ಪ್ರಾಣಉಳಿದರೆ ಆ ಪ್ರಾಣವು ಸತ್ಯಾಂಶದಿಂದ ಕೂಡಿದೆ ಎಂದು ತಿಳಿಯುವೆನು ಕೂಡಲಸಂಗಮದೇವಾ,

**೮೧೧ ಅರಸು ಮುನಿದರೆ ನಾಡೊಳಗಿರಬಾರದಯ್ಯಾ;**
**ಗಂಡ ಮುನಿದರೆ ಹೆಂಡತಿ ಇರಬಾರದಯ್ಯಾ.**
**ಕೂಡಲ ಸಂಗಮ ದೇವಯ್ಯಾ,**
**ಜಂಗಮ ಮುನಿದಡೆ ನಾನೆಂತು ಬದುಕುವೆ?**

ರಾಜನಿಗೆ ಬೇಡವಾಗಿ ರಾಜ್ಯದಲ್ಲಿರಬಾರದು; ಗಂಡನಿಗೆ ಬೇಡವಾದ ಹೆಂಡತಿ ಬದುಕಿದ್ದರೂ ವ್ಯರ್ಥ; ಕೂಡಲ ಸಂಗಮದೇವಾ, ಜಂಗಮರ ಕೋಪಕ್ಕೆ ಗುರಿಯಾಗಿ ನಾನು ಹೇಗೆ ಬದುಕಲಿ ?

**೮೧೨ ರಚ್ಚೆಯ ನೆರವಿಗೆ ನಾಣು ನುಡಿಯಿಲ್ಲದಿಹುದೆ?**
**ಅದರಂತೆ ಎನಬಹುದೆ ಸಜ್ಜನ ಸ್ತ್ರೀಯು?**
**ಅದರಂತೆ ಎನಬಹುದೆ ಭಕ್ತಿಯ ರತಿಯು?**
**ಕರುಳ ಕಲೆ ಪ್ರಕಟಿತವುಂಟೆ, ಕೂಡಲ ಸಂಗಮದೇವಾ?**

ಕೋಪಾವಿಷ್ಟನಾದ ಮನುಷ್ಯನು ಸುಳ್ಳುಮಾತುಗಳನ್ನು ಆಡುತ್ತಾನೆ; ಆದರೆ ಪತಿವ್ರತೆಯರು ಮತ್ತು ಭಕ್ತರು ಹಾಗಲ್ಲ; ಅವರು ಯಾವಾಗಲೂ ಸತ್ಯವನ್ನೇ ಆಡುತ್ತಾರೆ, ಅಂತಃಕರುಣಪ್ರೀತಿವೆಂಬವುಗಳು ಹೊರಗೆ ತೋರಿಸಲು ಬಾರವು.

೮೧೩ ಭೂತವೊಲಿದು ಆತ್ಮನ ಸೋಂಕಿದ ಬಳಿಕ
ಭೂತದ ಗುಣವಲ್ಲದೆ ಆತ್ಮನ ಗುಣವುಂಟೆ ?
ಗುರು ಕಾರುಣ್ಯವಾಗಿ ಹಸ್ತ ಮಸ್ತಕ ಸಂಯೋಗವಾದ ಬಳಿಕ
ಗುರುಲಿಂಗ ಜಂಗಮವೆ ಗತಿಯಾಗಿದ್ದೆ ಕಾಣಾ,
ಕೂಡಲ ಸಂಗಮ ದೇವಾ.

ಪಂಚೇಂದ್ರಿಯಗಳೆಂಬ ಮಹಾಭೂತಗಳಿಂದಾದ ಈ ದೇಹವು ಆ ಭೂತಗುಣಗಳನ್ನೇ ಅಳವಡಿಸಿಕೊಂಡಿದೆ; ಅಂತರಾತ್ಮನ ಗುಣಗಳು ಬರಲಾರವು; ಆದರೆ ಮುಂದೆ ಗುರುಗಳ ಆಶೀರ್ವಾದದಿಂದ ಶಿವತತ್ವ—ಶಿವಾಚಾರಗಳು ನನ್ನಲ್ಲಿ ಬೆರೆತು ಲಿಂಗ ಜಂಗಮರು ಒಂದೆ ಎಂಬ ಭಾವ ಬೆಳೆದು ಸದ್ಗತಿಗೆದಾರಿಯಾಯಿತು. ಕೂಡಲ ಸಂಗಮ ದೇವಾ.

## ಪ್ರಾಣಲಿಂಗಿಯ ಮಾಹೇಶ್ವರ ಸ್ಥಳ

೮೧೪ ಆಕಳ ಕಳ್ಳರು ಕೊಂಡೊಯ್ದರೆನ್ನದಿರಿಂ ಭೋ ನಿಮ್ಮ ಧರ್ಮ !
ಬೊಬ್ಬಿಡಿದಿರಿಂ ಭೋ, ನಿಮ್ಮ ಧರ್ಮ !
ಆರಡದಿರಿಂ ಭೋ, ನಿಮ್ಮ ಧರ್ಮ !
ಅಲ್ಲಿ ಉಂಬರೆ ಸಂಗ, ಇಲ್ಲಿ ಉಂಬರೆ ಸಂಗ !
ಕೂಡಲ ಸಂಗಮದೇವ ಏಕೋಭಾವ.

ಹೈನದ ಆಕಳನ್ನು ಕಳ್ಳರು ಕದ್ದುಕೊಂಡು ಹೋದರೆಂದು ಗೋಳಿಟ್ಟು ಆರ್ಭಟ ಮಾಡಬೇಡಿರಿ; ಅಲ್ಲಿ ಊಟಮಾಡುವವನೂ, ಇಲ್ಲಿ ಊಟಮಾಡುವವನೂ ಕೂಡಲ ಸಂಗಮದೇವನು; ಅವನೇ ವಿಶ್ವಕ್ಕೆಲ್ಲ ದೇವರು.

೮೧೫ ಅರ್ಥ ಪ್ರಾಣಾಭಿಮಾನವನೊಪ್ಪಿಸಿದಲ್ಲಿ ಭಕ್ತಸಪ್ಪನೆ? ಅಲ್ಲ.
ಆದಿರುದ್ರನ ಮಗಳು ಶಕ್ತಿ; ಆದಿಶಕ್ತಿಯ ಮಗ ವಿಷ್ಣು;

ವಿಷ್ಣುವಿನ ಅರ್ಧಾಂಗಿ ಲಕ್ಷ್ಮಿ.
ಈ ತೊತ್ತಿನ ತೊತ್ತಿನ ಪಡಿದೊತ್ತನೊಪ್ಪಿಸಿದಲ್ಲಿ ಭಕ್ತನಪ್ಪನೆ?
ಅಲ್ಲ.
ಎನ್ನ ಮನದೊಡೆಯ ಮಹಾದೇವಾ,
ನಿಮ್ಮ ಮನವ ನಿಮಗೊಪ್ಪಿಸಿ ನಾ ಶುದ್ಧ, ಕಾಣಾ!
ಕೂಡಲ ಸಂಗಮದೇವಾ.

ಕೇವಲ ತನು ಮನ ಧನಾದಿಗಳನ್ನು ಈಶ್ವರನಿಗೆ ಅರ್ಪಿಸಿದ್ದೇನೆಂದರೆ ಅವನು ಭಕ್ತನಾಗಲಾರನು; ದೇವರಿಂದ ಪಡೆದ ಜ್ಞಾನ ಬುದ್ಧಿಗಳನ್ನು ಆ ಮಹಾದೇವನೆಗೆ ನಿರ್ವಿಕಾರದಿಂದ ಸಮರ್ಪಣೆ ಮಾಡಿ ಮುಕ್ತಿಸಂಪದ ಪಡೆಯಬೇಕು; ಕೂಡಲ ಸಂಗಮದೇವಾ.

೮೧೬ ಮಾಡುವಾತ ನಾನಲ್ಲಯ್ಯಾ; ನೀಡುವಾತ ನಾನಲ್ಲಯ್ಯಾ.
ಬೇಡುವಾತ ನಾನಲ್ಲಯ್ಯಾ; ನಿಮ್ಮ ಕಾರುಣ್ಯವಲ್ಲದೆ,
ಎಲೆ ದೇವಾ!
ಮನೆಯ ತೊತ್ತಲಿಸಿದರೆ ಒಡತಿ ಮಾಡಿಕೊಂಬಂತೆ
ನಿನಗೆ ನೀ ಮಾಡಿಕೊ, ಕೂಡಲ ಸಂಗಮದೇವಾ.

ನಾನು ಕೊಡುತ್ತೇನೆ ಎನ್ನಲು ನಾನು ಎಷ್ಟರವನು? ಎಲೆ ದೇವಾ ನಾನು ಬೇಡುವುದು ನಿಮ್ಮ ಕೃಪೆಯನ್ನು; ಮನೆಯಲ್ಲಿ ಕೆಲಸದ ಆಳು ಬೇಸತ್ತು ಮನೆಗೆಲಸ ಮಾಡದಿದ್ದರೆ ಮನೆಯ ಯಜಮಾನಿ ಮಾಡಿಕೊಳ್ಳುವ ಹಾಗೆ ನೀನೇ ನಿನಗೆ ಸರಿಯಾದದ್ದನ್ನು ಮಾಡಿಕೊಳ್ಳಬೇಕು ಕೂಡಲ ಸಂಗಮ ದೇವಾ!

## ಪ್ರಾಣಲಿಂಗಿಯ ಪ್ರಸಾದಿ ಸ್ಥಳ

೮೧೭ ಜನ್ಮಜನ್ಮಕ್ಕೆ ಹೋಗಲೀಯದೆ 'ಸೋಹಂ' ಎಂದೆನಿಸದೆ
'ದಾಸೋಹಂ' ಎಂದೆನಿಸಯ್ಯಾ.
ಲಿಂಗ ಜಂಗಮದ ಪ್ರಸಾದದ ನಿಲವ ತೋರಿ ಬದುಕಿಸಯ್ಯಾ
ಕೂಡಲ ಸಂಗಮ ದೇವಾ, ನಿಮ್ಮ ಧರ್ಮ!

'ಸೋಹಂ' ಎಂದು ಪಠಿಸುತ್ತ ಜನ್ಮ ಚಕ್ರದಲ್ಲಿ ತಿರುತಿರುಗಿ ಬರುವಂತೆ ಮಾಡೆಬೇಡಾ; ಲಿಂಗ ಜಂಗಮರ ಸಂಯೋಗದಿಂದ ನಾನು ನಿರ್ವಾಣ ಪಡೆಯುವಂತೆ ಕರುಣಿಸು ಕೂಡಲ ಸಂಗಮದೇವಾ!

**೮೧೮ ಬೆಟ್ಟಕ್ಕೆ ಬೆಳ್ದಾರ ಸುತ್ತಿತ್ತಯ್ಯಾ:**
**ಪಾಪದ ಬಲೆಯ ತಂದು ಮುಂದೊಡ್ಡಿದರಯ್ಯಾ.**
**ಬೇಟೆಕಾರನು ಮೃಗವನಟ್ಟೆ, ಮೃಗಗೋರಿಗೊಳಗಾಗದಯ್ಯಾ!**
**ಹರನೊಡ್ಡಿದ ಬಲೆಯಲ್ಲಿ ಸಿಲುಕಿದ ಮೃಗವು**
**ಕೂಡಲ ಸಂಗಮಂಗೆ ಓಗರವಾಗಿತ್ತಯ್ಯಾ!**

ಗುಡ್ಡಗಳ ಸುತ್ತಲೂ ಆಕಾಶವು ತನ್ನ ಡೇರೆಯನ್ನು ಸುತ್ತುಹಾಕಿ ನಿಂತಿದೆ; ಬೇಟೆಗಾರನಾದ ಕಣ್ಣಪ್ಪನು ತನ್ನ ಪಾಪದ ಬಲೆಯನ್ನು ಮೃಗ ಹಿಡಿಯಲು ಕಟ್ಟಿದ್ದಾನೆ; ಆದರೆ ಮೃಗಕ್ಕೆ ಯಾವ ಪಾಪದ ಅಂಜಿಕೆಯೂ ಇಲ್ಲ; ಅದು ದೈವ ಘಟಿತವಾಗಿ ದೇವರಿಂದ ನಿರ್ಮಾಣವಾದ ಜಾಲದಲ್ಲಿ ಬಿದ್ದು ಕೂಡಲ ಸಂಗಮ ದೇವರಿಗೆ ಉತ್ತಮ ಆಹಾರವಾಗಿ ಪರಿಣಮಿಸಿತು.

**೮೧೯ ಆತ್ಮಲಿಂಗ, ಪರಮಾತ್ಮ ಜಂಗಮ;**
**ತನು ಮಧ್ಯೆಪ್ರಸಾದವಾಯಿತ್ತು,**
**ನಿಶ್ಚಿಂತ ನಿವಾಸವಾಯಿತ್ತು—**
**ಕೂಡಲ ಸಂಗನ ಶರಣರ ಸಂಗದಿಂದ!**

ಆತ್ಮನು ಅಂತರಂಗ ಲಿಂಗರೂಪನಾಗಿದ್ದರೆ ಜಂಗಮನು ಸಾಕ್ಷಾತ್ ಪರಮಾತ್ಮನಾಗುತ್ತಾನೆ; ಅಂತರಾತ್ಮಾ ಮತ್ತು ಪರಮಾತ್ಮರ ಸಮ್ಯಕ್ ದರ್ಶನದಿಂದ ಈ ಪ್ರಾಣವು ನಿರಂತರ ಬಿಡುಗಡೆ ಹೊಂದಿದೆ; ಕೂಡಲ ಸಂಗಮದೇವಾ, ನಿಮ್ಮ ಶರಣರ ಸತ್ಸಹವಾಸದ ಫಲದಿಂದ!

**೮೨೦ ಲೋಹ ಪರುಷವ ಮುಟ್ಟುವುದಲ್ಲದೆ,**
**ಪರುಷ ಪರುಷವ ಮುಟ್ಟುವುದೆ, ಅಯ್ಯಾ?**

**ಅಂಗವಿಡಿದಂಗೆ ಪ್ರಸಾದವಲ್ಲದೆ, ಲಿಂಗವಿಡಿದಂಗೆ ಪ್ರಸಾದ ವೆಲ್ಲಿಯದೋ ?**
**'ಅಣೋರಣೀಯಾನ್ ಮಹೋತೋಮಹೀಯಾನ್,'**
**ಹಿರಿದಕ್ಕೆ ಹಿರಿದು ಕಿರಿದಕ್ಕೆ ಕಿರಿದು**
**ವಾಙ್ಮನಕ್ಕ ಗೋಚರ-**
**ಕೂಡಲ ಸಂಗಮದೇವ ಸ್ವರೂಪವು:**
**ಪ್ರಸಾದ ನಿರೂಪು, ಲಿಂಗೈಕ್ಯ !**

ಕಬ್ಬಿಣವು ಪರುಷವನ್ನು ಸ್ಪರ್ಶಮಾಡಿ ಬಂಗಾರುವಾಗುತ್ತದೆ; ಆದರೆ ಪರುಷವು ಪರುಷಮಣಿಯ ಸ್ಪರ್ಶಮಾಡುವದಕ್ಕೆ ಹಾತೊರೆಯುವದಿಲ್ಲ; ಕಾರಣ ಪಂಚಭೂತಗಳಿಂದಾದ ಈ ದೇಹಕ್ಕೆ ಅನುಗ್ರಹವಾಗಬೇಕಲ್ಲದೆ ಲಿಂಗ ಸಂಸ್ಕಾರ ಹೊಂದಿದ್ದ ಲಿಂಗಿಗೆ ಅನುಗ್ರಹ ಬೇಕಿಲ್ಲ; ಯಾಕೆಂದರೆ, ಅಣುವಿಗಿಂತ ಅಣುವಾಗಿದ್ದ, ದೊಡ್ಡದಕ್ಕಿಂತ ದೊಡ್ಡವನಾಗಿದ್ದ, ಶಬ್ದ ಮನಸ್ಸುಗಳಿಗೂ ಕಾಣದಂಥ ಕೂಡಲ ಸಂಗಮ ದೇವರ ರೂಪ ದರ್ಶನ ಪಡೆದರೆ ಮುಕ್ತಿಯಾಗುತ್ತದೆ.

೮೨೧ **ಅಯ್ಯಾ, ನೀನೆಂದರೆ ಎಂಬೆನು;**
**ನಿನ್ನ ಹಂಗೇನು ಹರಿಯೇನು ?**
**ನಿನ್ನ ಮುಖದಲ್ಲಿ ಒಂದಗುಳು ಸವೆಯದು;**
**ನಿನ್ನ ಪ್ರಸಾದವ ಕೊಂಡೆನ್ನ ಭವಕ್ಕೆ ಬೀಜವಾಯಿತ್ತು !**
**ಜಂಗಮವೇ ಲಿಂಗವೆಂದು ಒಕ್ಕುದ ಕೊಂಡರೆ**
**ಎನ್ನ 'ಭವಂ ನಾಸ್ತಿ'ಯಾಯಿತ್ತು ! ಕೂಡಲ ಸಂಗಮ ದೇವಾ''**

ತಂದೆ, ನಿರ್ಭಿಡೆಯಿಂದಲೂ ನಿರ್ಭಯದಿಂದಲೂ ನಿನ್ನ ಸಮ್ಮುಖದಲ್ಲಿಯೇ ಹೇಳುತ್ತೇನೆ ಕೇಳು; ಹೇ, ಲಿಂಗುವೆ, ನೀನೊಂದು ಕಲ್ಲು ನೀನು ಉಣ್ಣಲಾರೆ ಉಡಲಾರೆ; ನಿನ್ನ ಮುಂದಿಟ್ಟು ಮರಳಿ ತಂದ ಪ್ರಸಾದ ಸೇವಿಸಿದ್ದಕ್ಕಾಗಿ ಪುನರ್ಜನ್ಮ ಪ್ರಾಪ್ತವಾಯಿತು;ಆದರೆ ಜಂಗಮನೇ ಸರ್ವಶ್ರೇಷ್ಠ ಲಿಂಗವೆಂದು ತಿಳಿದು ಅವನಿಗೆ ಆರೋಗಣೆ ಮಾಡಿಸಿ ಉಳಿದುದನ್ನು ಪ್ರಸಾದವೆಂದು ಉಂಡುದಕ್ಕಾಗಿ ನಾನು ಪುನರ್ಜನ್ಮದಿಂದ ಪಾರಾಗಿ ಮೋಕ್ಷ ಹೊಂದಿದೆ ಕೂಡಲ ಸಂಗಮದೇವಾ !

# ಪ್ರಾಣಲಿಂಗಿಯ ಶರಣಸ್ಥಳ

೮೨೨ ಶರಣ ಸನ್ನಿಹಿತನೈಕ್ಯವಹಲ್ಲಿ ಹರಿಬ್ರಹ್ಮಾದಿಗಳು
ಮೊದಲಾದ
ತೆತ್ತೀಸಾದಿ ದೇವರ್ಕಳು 'ಉಘೆ' 'ಉಘೆ' ಎನುತಿರಲು
'ಐಕ್ಯ ಬಸವಣ್ಣಂಗೆ ಠಾವಾವುದಯ್ಯಾ ?' ಎಂದೊಡೆ:—
ಅಂಗದ ಕಳೆಯಲ್ಲಿ ಬಲದಲ್ಲಿ ಬ್ರಹ್ಮನ ಸ್ಥಾನ,
ಎಡದಲ್ಲಿ ನಾರಾಯಣನ ಸ್ಥಾನ, ಒಲ್ಲೆನಯ್ಯಾ !
ಕೊರಳು ಗರಳಸ್ಥಾನ, ಬಾಯಿ ಅಪ್ಪುವಿನ ಸ್ಥಾನ,
ನಾಸಿಕ ವಾಯುವಿನಸ್ಥಾನ, ಕಣ್ಗಳು ಅಗ್ನಿಸ್ಥಾನ,
ಜಡೆಗಂಗೆಯ ಸ್ಥಾನ ನೊಸಲು ಚಂದ್ರನ ಸ್ಥಾನ,
ಹಿಂದು ಸೂರ್ಯನ ಸ್ಥಾನ,
ಚರಣಂಗಳು ಅಷ್ಟದಿಕ್ಪಾಲಕರ ಸ್ಥಾನಂಗಳು,
ಗುಹ್ಯಕಾಮನ ಸ್ಥಾನ,
ಹಸ್ತಂಗಳು ಕಪಾಲ ಖಟ್ವಾಂಗ ತ್ರಿಶೂಲ ಡಮರುಗಸ್ಥಾನ
ದೇಹ ರುಂಡಮಾಲೆಯಸ್ಥಾನ, ಕರ್ಣನಾಗೇಂದ್ರನ
ಸ್ಥಾನ—
ಇಂತೀ ಸ್ಥಾನಂಗಳ ನಾನೊಲ್ಲೆನಯ್ಯಾ !
ಹೃದಯ ಕಮಳ ಮಧ್ಯದ ಅಂತರಾಳದ
ಏಕಪೀಠದ ಸಿಂಹಾಸನದ ತೆರಹಕೊಡು,
ಕೂಡಲ ಸಂಗಮ ದೇವಾ !

ಶರಣರನ್ನು ನಿರಂತರವಾಗಿ ಪೂಜಿಸಿ ಅವರ ಪಾದಸೇವೆ ಮಾಡುತ್ತ ಬಂದ ಭಕ್ತನು ಐಕ್ಯನಾಗುವ ಪರ್ವಕಾಲ ಸಮೀಪಿಸಲು ಹರಿ ಬ್ರಹ್ಮ ಮೊದಲಾದ ಮೂವತ್ತು ಮೂರು ಕೋಟಿ ದೇವತೆಗಳು ಜಯ ಜಯಕಾರ ಮಾಡುತ್ತ "ಶಂಕರ ದೇವಾ ಐಕ್ಯನಾಗಲಿರುವ ಬಸವಣ್ಣನಿಗೆ ನಿನ್ನ ದೇಹ ದಲ್ಲಿ ಯಾವ ಸ್ಥಾನ ಕೊಡುವೆ" ಎಂದು ಕೇಳಿದರೆ, ನಿನ್ನ ದೇಹದ ಬಲ

ಭಾಗದಲ್ಲಿ ಬ್ರಹ್ಮನಿದ್ದಾನೆ, ಎಡದಲ್ಲಿ ವಿಷ್ಣುವಿದ್ದಾನೆ, ಹೀಗೆ ಒಂದೊಂದು ಭಾಗದಲ್ಲಿ-ಅಗ್ನಿ ಸರ್ಯ, ಚಂದ್ರ, ವಾಯು ಮೊದಲಾದವರು ಇದ್ದಾರೆ; ನನಗೆ ಇವಾವ ಸ್ಥಳಗಳೂ ಬೇಡಾ ದೇವಾ; ನಿನ್ನ ಹೃತ್ಕಮಲದ ಮಧ್ಯದಲ್ಲಿ ನನಗೆ ವಾಸಿಸಲು ಸ್ಥಾನಕೊಡು ದೇವಾ ಕೂಡಲ ಸಂಗಮದೇವಾ! ಎಂದು ಬಸವಣ್ಣನು ನುಡಿದನು.

**೮೨೩ ನೀನೊಲಿದರೆ ಒಲಿ; ಒಲ್ಲದಿದ್ದರೆ ಸಮವೇದಿಸಿಕೊಳ್ಳಯ್ಯಾ;**
**ಲಿಂಗದ ಬೆಳಗನೊಳಕೊಂಡು ಸಮವೇದಿಸಿಕೊಳ್ಳಯ್ಯಾ.**
**ಕೂಡಲ ಸಂಗಮ ದೇವನಲ್ಲಿ ತದ್ಗತನಾದೆನಯ್ಯಾ !**

ದೇವಾ, ನೀನು ಮೆಚ್ಚಿದರೆ ಮೆಚ್ಚಿಕರುಣಿಸು; ಇಲ್ಲವಾದರೆ ನನ್ನ ಪ್ರಾಣಲಿಂಗದ ಜ್ಯೋತಿಯನ್ನು ನಿನ್ನಲ್ಲಿ ಅಳವಡಿಸಿಕೊಂಡು ಸರಿಪಡಿಸಿಕೋ! ನಾನು ಕೂಡಲ ಸಂಗಮದೇವರ ಆತ್ಮದಲ್ಲಿ ಕೂಡಿರುವೆನು.

**೮೨೪ ಮಾಡುವರಿಲ್ಲ, ನೀ ಮಾಡದೆ ನಿಲ ಸಾಲೆ;**
**ಬೇಡುವರಿಲ್ಲ, ನೀ ಬೇಡದೆ ನಿಲ ಸಾಲೆ;**
**ಕೂಡುವರಿಲ್ಲ, ನೀ ಕೂಡದೆ ನಿಲ ಸಾಲೆ;**
**ಕೂಡಲ ಸಂಗಮ ದೇವ,**
**ತಾನು ತಾನಾಗಿ ನೋಡದೆ ನಿಲ ಸಾಲೆ !**

ದೇವಾ ನನ್ನನ್ನು ಸಂಸಾರ ಮುಕ್ತನನ್ನಾಗಿ ಮಾಡುವವರಿಲ್ಲ; ನೀನೇ ನನಗೆಗತಿ; ಮೋಕ್ಷ ಸಾಧನೆಯಾಗಬೇಕಾದರೆ ನನ್ನನ್ನು ಕಾಡಿ ಬೇಡುವ ಭಕ್ತರಿಲ್ಲ; ನೀನೇ ಬೇಡಬೇಕು; ಕೂಡಲ ಸಂಗಮ ದೇವರೆ ನೀನು ನಾನಾಗಬೇಕು, ನಾನು ನೀನಾಗಬೇಕು; ಆಗಲೆ ಐಕ್ಯನಾಗಲು ಸಾಧ್ಯ.

**೮೨೫ ನಾಲಗೆ ತಾಗಿದ ರುಚಿಗೆ ಮನವೇ ಸಾಕ್ಷಿ, ಸಾಲದೆ, ಅಯ್ಯಾ ?**
**ಮಾಲೆಗಾರನ ಕೇಳಿ ನನೆ ಅರಳುವುದೆ ?**
**ಆಗಮವನಿದಿರಿಂಗೆ ತೋರುವುದು ಆಚಾರವೆ, ಅಯ್ಯಾ ?**

**ನಮ್ಮ ಕೂಡಲ ಸಂಗನ ಕೂಡಿದ ಕೂಟದ ಕರುಳ ಕಲೆಯನು**
**ಇದಿರಿಂಗೆ ತೋರುವುದು ಆಚಾರವೆ, ಅಯ್ಯಾ ?**

ನಾಲಗೆ ತಿಂದು ಸವಿದ ವಸ್ತುವಿನ ರುಚಿಗೆ ಮನಸ್ಸೆ ಸಾಕ್ಷಿ; ಬೇರೆ ಸಾಕ್ಷಿಗಳು ಬೇಕಿಲ್ಲ; ಕಾರಣ ಮಾಲೆಗಾರನನ್ನು ಕೇಳಿ ಮೊಗ್ಗೆ ಅರಳುವದಿಲ್ಲ; ಪ್ರಕೃತಿನಿಯಮದಂತೆ ಅದು ಅರಳುವ ಸಮಯಕ್ಕೆ ಅರಳುತ್ತದೆ; ಆದುದ ರಿಂದ ಐಕ್ಯಹೊಂದುವ ರೀತಿ ನೀತಿಗಳನ್ನು ಹೀಗೆ ಎಂದು ತೋರಿಸವುದು ಮೂರ್ಖತನ.

## ಪ್ರಾಣಲಿಂಗಿಯ ಐಕ್ಯ ಸ್ಥಳ

**೮೨೬ ಜ್ಞಾನದ ಗಮನದ ಸಹಜದ ಉದಯದಲ್ಲಿ ಏನೆಂದ ರಿಯೆನು;**
**ಲಿಂಗದ ಬೆಳಗು ಒಳಕೊಂಡುದಾಗೆ ಏನೆಂದರಿಯೆನು;**
**ಕೂಡಲ ಸಂಗನ ಧ್ಯಾನದಿಂದ ನಾನೇ ನಂದರಿಯೆನು !**

ಜ್ಞಾನೋದಯ ವಾಗುವ ಸಮಯದಲ್ಲಿ ಜ್ಞಾನ ಭಾನುವಿನ ಕಿರಣ ಗಳು ಸಹಜವಾಗಿ ಬರುವುದನ್ನು ನಾನು ತಿಳಿಯಲಾರೆನು; ಈಗಾಗಲೆ ಅಂತರಂಗದಲ್ಲಿ ಆತ್ಮಜ್ಯೋತಿ ಬೆಳಗುತ್ತಲಿದೆ; ಮತ್ತು ಕೂಡಲ ಸಂಗಮ ದೇವರ ನಾಮವೊಂದನ್ನು ಬಿಟ್ಟು ಬೇರೆ ಏನನ್ನೂ ತಿಳಿಯಲಾರೆನು.

**೮೨೭ ಕಾಯವೆಂಬ ಘಟಕ್ಕೆ ಚೈತನ್ಯವೆ ಸುಯಿದಾನ,**
**ಸಮತೆಯೆಂಬ ಜಲ, ಕರಣಾದಿಗಳೆ ಶ್ರವಣ;**
**ಜ್ಞಾನವೆಂಬಗ್ನಿಯನಿಕ್ಕಿ,**
**ಮತಿಯೆಂಬ ಸಟ್ಟುಗದಲ್ಲಿ ಘಟ್ಟಿಸಿ ಪಾಕಕ್ಕೆ ತಂದು,**
**ಭಾವದಲ್ಲಿ ಕುಳ್ಳಿರಿಸಿ, ಪರಿಣಾಮದೋಗರವ ನೀಡಿದರೆ**
**ಕೂಡಲ ಸಂಗಮ ದೇವಂಗೆ ಆರೋಗಣೆಯಾಯಿತ್ತು.**

ದೇಹವೆಂಬ ಕೊಡಕ್ಕೆ ಚೇತನೆಯನ್ನು ಅಂದರೆ ಜೀವನವನ್ನು ಕೊಟ್ಟು ಅದರಲ್ಲಿ ಸಮದೃಷ್ಟಿ ಎಂಬ ಪಾವನ ಗಂಗೆಯನ್ನು ತುಂಬಿ-ಜ್ಞಾನ

ವೆಂಬ ಬೆಂಕಿಯಿಂದ ಕಾಯಿಸಿ ಬುದ್ಧಿಯೆಂಬ ಹುಟ್ಟನಿಂದ ತಿರುವಿ ಘಟ್ಟಿಸಿ ಹದವಾದ ಪಾಕಮಾಡಿ ಸದ್ಭಾವನೆಯೊಂದಿಗೆ ಮಾಡಿದ ಅಡುಗೆಯನ್ನು ನೀಡಿದರೆ ಕೂಡಲ ಸಂಗಮನಿಗೆ ಅದು ಉತ್ಕೃಷ್ಟ ನೈವೇದ್ಯ ವಾಗುತ್ತದೆ.

**೮೨೮ ಅಡಿಗಡಿಗೆ ಸ್ಥಾನ ನಿಧಿ, ಅಡಿಗಡಿಗೆ ದಿವ್ಯಕ್ಷೇತ್ರ,**
**ಅಡಿಗಡಿಗೆ ನಿಧಿಯೂ ನಿಧಾನ, ನೋಡಾ !**
**ಆತನ ಇರವೆ ವಾರಣಾಸಿ, ಅವಿಮುಕ್ತಿ ಕ್ಷೇತ್ರ:**
**ಕೂಡಲ ಸಂಗನ ಶರಣ ಸ್ವತಂತ್ರನಾಗಿ.**

ಸಂಗನ ಶರಣರು ಸ್ವತಂತ್ರರಾಗಿ ವಾಸಮಾಡಿದ ಪ್ರದೇಶವು ವಾರಣಾಸಿ, ಮೋಕ್ಷಸ್ಥಾನ; ಅದು ಮಹಾಕ್ಷೇತ್ರ; ಅಲ್ಲಿ ಹೆಜ್ಜೆ ಜೆಜ್ಜೆಗೆ ಸಂಪತ್ತು ಸಕಲೈಶ್ವರ್ಯಗಳು ತುಂಬಿಕೊಂಡಿವೆ.

**೮೨೯ ಕಣ್ಣುಗಳು ತುಂಬಿದ ಬಳಿಕ ನೋಡಲಿಲ್ಲ;**
**ಕಿವಿಗಳು ತುಂಬಿದ ಬಳಿಕ ಕೇಳಲಿಲ್ಲ;**
**ಕೈಗಳು ತುಂಬಿದ ಬಳಿಕ ಪೂಜಿಸಲಿಲ್ಲ;**
**ಮನ ತುಂಬಿದ ಬಳಿಕ ನೆನೆಯಲಿಲ್ಲ;**
**ಮಹಂತ ಕೂಡಲ ಸಂಗಮದೇವನ !**

ನನ್ನ ಸರ್ವಾಂಗಗಳೆಲ್ಲವೂ ಪರಮಾತ್ಮನ ನಾಮ ಸಂಕೀರ್ತನೆಯಿಂದ ತುಂಬಿ ಸೂಸುತ್ತಿರುವಾಗ ನಾನು ಮಹಂತನಾದ ಕೂಡಲ ಸಂಗಮ ದೇವರ ಪೂಜೆಯನ್ನು ನಾಮಸ್ಮರಣೆಯನ್ನು ಮಾಡುವ ಗೊಡವೆಗೆ ಹೋಗಲಿಲ್ಲ.

## ಶರಣ ಸ್ಥಳ

### ಶರಣನ ಜ್ಞಾನಿ ಸ್ಥಳ

**೮೩೦ ಧನದಲ್ಲಿ ಶುಚಿ, ಪ್ರಾಣದಲ್ಲಿ ನಿರ್ಭಯ,**
**ಇದಾವಂಗಳವಡುವುದಯ್ಯಾ?**

**ನಿಧಾನ ತಪ್ಪಿ ಬಂದರೆ ಒಲ್ಲೆನೆಂಬವರಿಲ್ಲ;**
**ಪ್ರಮಾದವಶದಿಂ ಬಂದರೆ ಹುಸಿಯೆನೆಂಬವರಿಲ್ಲ.**
**ನಿರಾಶೆ–ನಿರ್ಭಯ, ಕೂಡಲ ಸಂಗಮದೇವಾ,**
**ನೀನೊಲಿದ ಶರಣಂಗಲ್ಲದಿಲ್ಲ !**

ದುಡ್ಡನ್ನು ಕೊಡುವಲ್ಲಿ ಮತ್ತು ಪಡೆಯುವಲ್ಲಿ ಸತ್ಯದಿಂದ ನಡೆಯುವುದು; ಪ್ರಾಣದ ಬಗ್ಗೆ ನಿರ್ಭಯನಾಗಿರುವುದು ಯಾರಿಗೂ ಸಾಧ್ಯವಿಲ್ಲ; ಹೂಳಿಟ್ಟದುಡ್ಡು ತಾನೇ ಎದ್ದು ಬಂದರೆ ನನಗೆ ಬೇಡ ಎನ್ನುವಂತಹ ಉದಾರ ಮಾನವರು ಯಾರು ಇಲ್ಲ; ತಪ್ಪಿನ ಕಾರಣದಿಂದ ಇಲ್ಲವೆ ಹಾದಿ ತಪ್ಪಿ ಸುಂದರ ತರುಣಿ ನಮ್ಮ ಬಳಿ ಬಂದರೆ ಅವಳನ್ನು ಹಾಯಾಗಿರಲು ಬಿಡುವ ಧೀರ ಗಂಡು ಒಬ್ಬರೂ ಇಲ್ಲ; ಆದರೆ ಕೂಡಲ ಸಂಗಮದೇವರ ವರಪಡೆದ ಶರಣರಿಗೆ ಮಾತ್ರ ಲೋಕದ ವಿರುದ್ಧ ಆಚರಿಸುವುದು ಸಾಧ್ಯ.

**೮೩೧ ಹಲಬರ ನುಂಗಿದ ಹಾವಿಂಗೆ ತಲೆ ಬಾಲವಿಲ್ಲ, ನೋಡಾ;**
**ಕೊಲುವುದು ತ್ರೈಜಗವೆಲ್ಲವ: ತನಗೆ ಬೇರೆ ಪ್ರಳಯವಿಲ್ಲ;**
**ನಾಕಡಿಯ ನೈದುವುದು: ಲೋಕದ ಕಡೆಯನೆ ಕಾಣ್ಬುದು;**
**ಸೂಕ್ಷ್ಮ ಪಥದಲ್ಲಿ ನಡೆವುದು: ತನಗೆ ಬೇರೆ ಒಡಲಿಲ್ಲ;**
**ಅಹಮ್ಮೆಂಬ ಗಾರುಡಿಗನ ನುಂಗಿತ್ತು,**
**ಕೂಡಲಸಂಗನ ಶರಣರಲ್ಲದುಳಿದವರ !**

ಹಲವು ಶರಣ ಸತ್ಪುರುಷರನ್ನು ತನ್ನಂತರಂಗದಲ್ಲಿ ಐಕ್ಯಮಾಡಿಕೊಂಡ ಈಶ್ವರಲಿಂಗಕ್ಕೆ ತಲೆಯೆಂಬುದಿಲ್ಲ ಬಾಲಎಂಬುದಿಲ್ಲ; ತಾನು ನಾಶನಾಗದೆ ಮೂರುಲೋಕಗಳನ್ನು ಪ್ರಳಯದಿಂದ ಹಾಳುಮಾಡುತ್ತಾನೆ; ಜಗದ ತುಂಬೆಲ್ಲ ತುಂಬಿ ಕೊಂಡಿದ್ದರೂ ಜಗತ್ತಿನ ಅಂತ್ಯಮ ಸ್ಥಿತಿಯನ್ನು ನೋಡುತ್ತಾನೆ; ಅಹಮ್ಮೆಂಬ ಅಹಂಕಾರವನ್ನು ನುಂಗಿ ನೀರು ಕುಡಿದು ಶರಣರಲ್ಲದೇ ಇದ್ದವರನ್ನು ಪಾತಳಕ್ಕೆ ಮೆಟ್ಟುತ್ತಾನೆ ಪರಮಾತ್ಮನು.

**೮೩೨ ಆದಿತ್ಯ ಸೋಮರು ಆಗಿ ಹೋಗುತ್ತಿದ್ದಹರು;**
**ಬ್ರಹ್ಮ ಪ್ರಳಯಕ್ಕೊಳಗಾದ, ಹರಿ ಸಿಂಹಾಸನವಡಗಿತ್ತು:**

**ಅಂತೂ ನಾಸ್ತಿ, ಇಂತೂ ನಾಸ್ತಿ!**
**ಇಂತು ರೋಮಜರೆಂಬರು ಸಿಟ್ಟು ಗುಟ್ಟಿ ತರುಮರನಡಿಯ ಲಿದ್ದರು.**
**ಮಾರ್ಕಂಡೇಯ ಮಹಾಮುನಿ ಸ್ವೇಚ್ಛಾಮರಣಿಯೆನಿಸಿ ಕೊಂಡನಲ್ಲದೆ,**
**ಲಿಂಗದ ನಿಜವನರಿಯನು,**
**ಇದು ಕಾರಣ ಕೂಡಲ ಸಂಗಮದೇವಾ,**
**ನೀವು ಮಾಡಿದ ಬಯಲು ಭಕ್ಷಿಸಿತ್ತು ಅನಂತ ಹಿರಿಯರನು!**

ಬ್ರಹ್ಮ ಪ್ರಳಯದಲ್ಲಿ ಸಿಕ್ಕ ಕಾರಣ ವಿಷ್ಣುವು ತನ್ನ ಸಿಂಹಾಸನವಾದ ಆದಿಶೇಷನನ್ನು ಕಳೆದುಕೊಂಡನು; ಆದರೆ ಆದಿತ್ಯಸೋಮರು ಏನೋ ಉಳಿದುಕೊಂಡರು. ಹೀಗೆ ಮಾನವ ಸಂತತಿ ಬೆಳೆಯಿತು- ಮಾರ್ಕಂಡೇಯ ಮುನಿಯು ಇಚ್ಛಾಮರಣಿ ಯಾದದ್ದೇನೋ ನಿಜ; ಆದರೆ ಅವನಿಗೆ ಲಿಂಗ ಜ್ಞಾನವಾಗಲಿಲ್ಲ; ಕೂಡಲಸಂಗಮದೇವಾ ನೀವು ನಿರ್ಮಿಸಿದ ಈ ಬಯಲು ಅನಂತ ಮಹಾ ವಿಭೂತಿಗಳನ್ನು ನುಂಗಿ ಮತ್ತೆ ಬಯಲಾಗಿಯೇ ಉಳಿದಿದೆ.

**೮೩೩ ಆದಿಯಲ್ಲಿ ಶಿವಬೀಜವಲ್ಲದವರಿಗೆ, ವೇದ್ಯವಾಗದು ಶಿವಜ್ಞಾನ;**
**ಶಿವಭಕ್ತಿ, ಲಿಂಗಸ್ಥಳವಳವಡದು; ಜಂಗಮಸ್ಥಳವಳವಡದು;**
**ಪಾದೋದಕ ಸ್ಥಳವಳವಡದು, ನರಕದಲ್ಲಿ ಬೀಳುವ ಕರ್ಮಿ ಗಳಿಗೆ**
**ಕೂಡಲ ಸಂಗನ ಶರಣರನುಭಾವ ನೆಲೆಗೊಳ್ಳದು.**

ಶಿವಬೀಜದಿಂದ ಜನಿಸದವರಿಗೆ ಶಿವನ ಅರಿವಾಗುವದು ಕಠಿಣ- ಎಂದಿಗೂ ಆಗಲಾರದು, ಲಿಂಗ ಪ್ರೇರಣೆಯಾಗಿ ಹುಟ್ಟಿದವರಿಗೆ ಶಿವ ಜ್ಞಾನ ವುಂಟಾಗುತ್ತದೆ; ಕುಕರ್ಮಿಗಳಿಗೆ ಕೂಡಲಸಂಗಮದೇವರ ಶರಣರ ಅನುಭಾವವು ದೊರೆಯಲಾರದು; ಸ್ಥಿರವಾಗಿ ಅವರಲ್ಲಿ ಉಳಿಯುವದಿಲ್ಲ.

**೮೩೪ ಕೆರೆ ಹಳ್ಳ ಬಾವಿಗಳು ಮೈದೆಗೆದರೆ**
**ಗುಳ್ಳೆ ಗೊರಜೆ ಚಿಪ್ಪುಗಳು ಕಾಣಬಹುದು:**

**ವಾರಿಧಿ ಬತ್ತಿ ದೆಗೆದರೆ ರತ್ನಂಗಳು ಕಾಣಬಹುದು !**
**ಕೂಡಲ ಸಂಗನ ಶರಣರು ಮನ ತೆರೆದು ಮಾತನಾಡಿದರೆ**
**ಲಿಂಗವೇ ಕಾಣಬಹುದು !**

ಕೆರೆ ಹಳ್ಳ ಬಾವಿಗಳು ಬತ್ತಿಹೋದರೆ ಗುಳ್ಳೆ ಗೊರಜೆ ಕಪ್ಪೆಚಿಪ್ಪುಗಳು ಕಾಣುತ್ತವೆ; ಸಮುದ್ರವು ಒಣಗಿ ಹೋದರೆ ರತ್ನಗಳು ಕಾಣುತ್ತವೆ; ಶರಣನು ಮನಬಿಚ್ಚಿ ಮಾತನಾಡಿದರೆ ಪಾವನ ಮೂರ್ತಿ ಅವರ ಲಿಂಗವು ಕಾಣುತ್ತದೆ-ಅವರ ಮುಖದಲ್ಲಿ.

೮೩೫ **ಪುಣ್ಯ ಪಾಪವೆಂಬುಭಯ ಕರ್ಮವನಾರು ಬಲ್ಲರಯ್ಯಾ?**
**ಇವನಾರುಂಬರು ? ಕಾಯ ತಾನುಂಬರೆ ಕಾಯ ಮಣ್ಣು;**
**ಜೀವ ತಾನುಂಬರೆ ಜೀವ ಬಯಲು !**
**ಈ ಉಭಯ ನಿರ್ಣಯವ, ಕೂಡಲ ಸಂಗಮ ದೇವಾ,**
**ನಿಮ್ಮ ಶರಣ ಬಲ್ಲ.**

ಪುಣ್ಯ ಮತ್ತು ಪಾಪ ಎಂಬ ಎರಡು ಪ್ರಕಾರಿಗಳ ಕರ್ಮಗಳನ್ನು ತಿಳಿಯರು; ತಿಳಿಯದಲೆ ಕರ್ಮಗಳನ್ನೆಸಗುತ್ತಾರೆ; ಇವುಗಳು ಅನುಭವಿಸುವವರಾರು? ದೇಹವು ಅನುಭೋಗಿಸ ಬೇಕೆಂದರೆ ಅದು ಮಣ್ಣುಪಾಲಾಗಿ ಹೋಗುತ್ತದೆ; ಜೀವವನುಭೋಗಿಸಬೇಕೆಂದರೆ ಜೀವವು ಬಯಲನ್ನು ಹೊಂದಿಕೊಳ್ಳುತ್ತದೆ; ಇವೆರಡನ್ನುಳಿದು ಇನ್ನಾರು, ಎಂಬುದನ್ನು ತಿಳಿದವರು, ಕೂಡಲ ಸಂಗಮದೇವಾ, ನಿಮ್ಮ ಶರಣರು.

೮೩೬ **ನಾರುಳಿಯ ಹಣಿದವ ನಾರಾದರೆಯೂ ಆದರೆ?**
**ನಾರುಳಿದರೆ ಮುಂದೆಯಂಕುರಿತ ಫಲ ತಪ್ಪದು:**
**ಮಾಡುವನ್ನಕ್ಕ ಫಲದಾಯಕ !**
**ಮಾಟವರತು ನಿಮ್ಮಲ್ಲಿ ಸ್ವಯವಾದರೆ,**
**ಆತನೆ ಅಚ್ಚ ಶರಣನಯ್ಯಾ ಕೂಡಲ ಸಂಗಮದೇವಾ.**

ಕರ್ಮಗಳನ್ನು ಬಿಟ್ಟು ಸನ್ಯಾಸಿಯಾದರೂ ಅವನು ಕರ್ಮಗಳನ್ನು ಮಾಡಲೇಬೇಕಾಗುತ್ತದೆ; ನಾರನ್ನು ಹೊಸೆದು ಹಗ್ಗಮಾಡಿದ ಮಾತ್ರಕ್ಕೆ

ಮುಂದೆ ಆಗತಕ್ಕ ಫಲಗಳ ಪರಿಣಾಮ ಮಾತ್ರ ಬಿಡದು; ನಾನು ಭಕ್ತಿಯನ್ನು ಮಾಡುವೆನೆಂದು ಭಾವನೆ ಹರಿದು ಹೋಗಿ ನಿಮ್ಮಲ್ಲಿ ನಿಮ್ಮವನಾದರೆ ನಾನು ನಿಜ ಶರಣನಾಗುವೆ ಕೂಡಲ ಸಂಗಮದೇವಾ!

೮೩೭ ಭಕ್ತನ ಮಠವೆಂದು ಜಂಗಮ ನಡೆದು ಬಂದಲ್ಲಿ,
ಆ ಭಕ್ತನ ಕಾಣುತ್ತ ಆಸನತ್ಯಜತೆಯ ಮಾಡುತ್ತ,
ಕೊಂಕುತ್ತ ಕೈಮುಗಿದು ನಿಂದಿರ್ದು,
ಬಾಗಿ ಬಳುಕುತ್ತ,
'ಬಿಜಯಂ ಮಾಡಿ, ದೇವಾ!' ಎಂದು ಕರೆದು ಕುಳ್ಳಿರಿಸಿ,
ಪಾದಾರ್ಚನೆಯಂ ಮಾಡಿ ಪಾದೋದಕವಂ ಕೊಂಡು,
ವಿಭೂತಿ-ವೀಳೆಯಂ ಕೊಟ್ಟು,
ಕಂಗಳು ತುಂಬಿ ನಿರೀಕ್ಷಿಸಿ, ಶ್ರೋತ್ರ ತುಂಬಿ ಹಾರೈಸಿ,
ಬಾಯಿ ತುಂಬಿ ಮಾತನಾಡಿ 'ಏಗುವುದು ಏಬೆಸನೆಂ'ದು
ತನು ಕರಗಿ ಮನಕರಗಿ ನೋಡಿ ಮಾಡುವುದು ಭಕ್ತಿಸ್ಥಲ.
ಬಡವನಾಗಲಿ ಬಲ್ಲಿದನಾಗಲಿ ಇನಿತು ಮುಖ್ಯವಾಗಿ
ಮಾಡಿಸಿಕೊಂಬುದು ಜಂಗಮಸ್ಥಲ.
ಈ ಎರಡೊಂದಾದ ಘನವನಂತಿಂತೆಂದುಪಮಿಸಲಾಗದಂ
ತಿರಲಿ!
ಇನಿತಲ್ಲದೆ ಮಾಡಿದ ಮಾಟ ಭಕ್ತಿಸ್ಥಲಕ್ಕೆ ಸಲ್ಲದು:
ಫಲದಾಯಕನ್ನೈಸೆ!
ಇನಿತಲ್ಲದೆ ಮಾಡಿಕೊಂಬುದು ಜಂಗಮ ಸ್ಥಲಕ್ಕೆ ಸಲ್ಲದು:
ಉಪಜೀವಿತನ್ನೈಸೆ!
ಈ ಎರಡಕ್ಕೆಯೂ ಭವ ಹಿಂಗದು, ಕಾಣಾ, ಕೂಡಲ
ಸಂಗಮ ದೇವಾ!

ಇದು ಭಕ್ತನ ಮಠವೆಂದು ತಿಳಿದು ಜಂಗಮನು ಬಂದರೆ ಭಕ್ತನು ನಯ ವಿನಯ ಆದರ ಗೌರವಗಳೊಂದಿಗೆ ಜಂಗಮನನ್ನು ಬರಮಾಡಿಕೊಂಡು ಪೀಠದಲ್ಲಿ ಕುಳ್ಳಿರಿಸಿ 'ಪ್ರಭು ತಮಗೇನಾಗಬೇಕು' ಎಂದು ಅವ

ರನ್ನು ಕೇಳುವುದು ಭಕ್ತಿ; ಬಡವ ಬಲ್ಲಿದನೆಂಬ ಭೇದ ಮಾಡದೆ ಈ ರೀತಿಯ ಭಕ್ತಿಯನ್ನು ಸಂತೋಷದಿಂದ ಸ್ವೀಕರಿಸುವದು ಜಂಗಮರಿಗೆ ಯೋಗ್ಯವಾಗುತ್ತದೆ; ಭಕ್ತ ಮತ್ತು ಜಂಗಮರ ಒಂದೇ ಭಾವನೆಯನ್ನು ವರ್ಣಿಸಲ-ಸದಳವಾಗಿದೆ; ಹೀಗೆ ವರ್ತಿಸದೆ ವಿರೋಧಿಸದರೆ ಭಕ್ತ-ಜಂಗಮರಿಬ್ಬರಿಗೂ ಭವ ಬಂಧನ ತಪ್ಪದು; ಕೂಡಲ ಸಂಗಮದೇವಾ!

**೮೩೮ ತೆರನರಿವುದು ಅಪೂರ್ವ; ಅರಿದು ಮರೆವುದು ಅಪೂರ್ವ;**
**ಕೂಡೆ ಶರಣೆಂಬುದು ಅಪೂರ್ವ !**
**ಕೂಡಲ ಸಂಗಮ ದೇವನ ಭಕ್ತಿಯಭಿಮಾನಿಯ**
**ಜವ್ವನದಂತೆ !**

ಭೂಮಿ-ಆಕಾಶಗಳ ಮಧ್ಯೆ ಇರುವ ಈ ಬಲವನ್ನು ತಿಳಿದವರು ಅತಿ ವಿರಳ; ತಿಳಿದನಂತರ ಅದನ್ನು ಮರೆತುಬಿಡುವ ಹುಚ್ಚರೂ ಅತಿ ವಿರಳ; ಹರೆಯದ ಹುಡುಗನು ದೇವರ ಭಕ್ತನಾಗ ಬೇಕಾದರೆ ಅವನು ತನ್ನ ಯೌವನದ ಅಭಿಮಾನವನ್ನು ಬಿಡ ಬೇಕಾಗುತ್ತದೆ; ಹಾಗೆ ಬಯಲನ್ನು ತಿಳಿದರೂ ಕೂಡಲೆ ಮನದಲ್ಲಿ ನಮಸ್ಕಾರ ಮಾಡಬೇಕೆಂದು ಬುದ್ಧಿ ಬರುವುದು ಅಪರೂಪ.

**೮೩೯ ಐದು ಮಾನವ ಕುಟ್ಟಿ, ಒಂದು ಮಾನವ ಮಾಡು, ಕಂಡಾ,**
**ಮದವಳಿಗೆ:**

**ಇದು ನಮ್ಮ ಬಾಳು, ಮದವಳಿಗೆ,**
**ಇದು ನಮ್ಮ ವಿಸ್ತಾರ, ಮದವಳಿಗೆ;**
**ಮದವಳಿದು ನಿಜವುಳಿದ ಬಳಿಕ, ಅದು ಸತ್ಯ, ಕಾಣಾ,**
**ಕೂಡಲ ಸಂಗಮದೇವಾ.**

ಮನುಷ್ಯನಲ್ಲಿರುವ ಐದು ಅಭಿಮಾನಗಳನ್ನು ಕೊಂದು ಒಂದೇ ಒಂದು ಭಕ್ತಿಯ ಸದಭಿಮಾನವನ್ನಿಟ್ಟು ಕೊಳ್ಳಬೇಕು; ಮದಮತ್ಸರಗಳನ್ನು ಕಳೆಯಲು ಇದೊಂದು ಮಾರ್ಗ. ಅಂದರೆ ನಮ್ಮ ಬಾಳು ಬೆಳೆದು ವಿಸ್ತಾರವಾಗಿ ಹಬ್ಬಿಕೊಳ್ಳುತ್ತದೆ; ಅದು ಸತ್ಯ ಧರ್ಮದ ಬಾಳು ಕೂಡಲಸಂಗಮದೇವಾ!

೮೪೦ ಮಣ್ಣು ಮಡಕೆ ಮಣ್ಣಾಗದು ಕ್ರೀಯುಳಿದು;
ಬೆಣ್ಣೆ ಕರಗಿ ತುಪ್ಪವಾಗಿ,
ಮರಳಿ ತುಪ್ಪ ಬೆಣ್ಣೆಯಾಗದು ಕ್ರೀಯುಳಿದು;
ಹೊನ್ನು ಕಬ್ಬುನವಾಗದು ಕ್ರೀಯುಳಿದು;
ಮುತ್ತು ನೀರಲ್ಲಿ ಹುಟ್ಟಿ ಮತ್ತೆ ನೀರಾಗದು ಕ್ರೀಯುಳಿದು;
ಕೂಡಲ ಸಂಗನ ಶರಣನಾಗಿ
ಮರಳಿ ಮಾನವನಾಗನು ಕ್ರೀಯುಳಿದು.

ಮಣ್ಣಿನಿಂದ ಮಾಡಿದ ಕುಂಭವು ಪುನಃ ಮಣ್ಣಾಗಲಾರದು; ತುಪ್ಪವು ಮರಳಿ ಬೆಣ್ಣೆಯಾಗಲಾರದು; ಪರುಷದಿಂದ ಬಂಗಾರವಾದ ಕಬ್ಬಿಣವು ಪುನಃ ಕಬ್ಬಿಣವಾಗುವುದಿಲ್ಲ; ಹೀಗೆ ಕೂಡಲ ಸಂಗಮ ದೇವರ ಶರಣನಾದ ಬಳಿಕ ಎಂದಿಗೂ ಮಾನವ ಜನ್ಮ ಪುನರಪಿ ಸಿಗುವುದಿಲ್ಲ. ಸಂಸಾರ ಮುಕ್ತನಾಗುವನು.

ಲಗ್ನವೆಲ್ಲಿಯದೋ ವಿಘ್ನವೆಲ್ಲಿಯದೋ, ಸಂಗಯ್ಯಾ ?
ದೋಷವೆಲ್ಲಿಯದೋ, ದುರಿತವೆಲ್ಲಿಯದೋ, ಸಂಗಯ್ಯಾ ?
ನಿಮ್ಮ ಮಾಣದೆ ನೆನೆವಂಗೆ ಭವಕರ್ಮವೆಲ್ಲಿಯದೋ,
ಕೂಡಲ ಸಂಗಯ್ಯಾ ?

ಶುಭ ಮುಹೂರ್ತ ಅಶುಭಮುಹೂರ್ತವೆಂಬವುಗಳು, ದೋಷ ಪಾಪಗಳೆಂಬುವೂ ನಿಮ್ಮನ್ನು ತಪ್ಪದೆ ಪ್ರತಿದಿನ ಧ್ಯಾನಮಾಡುವ ಭಕ್ತನಿಗೆ ಯಾವುದೂ ಇಲ್ಲ; ಭವಸಾಗರಗೆದ್ದವನಿಗೆ ಶುಭಾಶುಭಗಳೆಂಬುವುದಿಲ್ಲ. ಕೂಡಲ ಸಂಗಮದೇವಾ !

## ಶರಣ—ಶರಣಸ್ಥಳ

೮೪೨ ಶರಣ ನಿದ್ರೆಗೆಯ್ದರೆ ಜಪ, ಕಾಣಿರೋ,
ಶರಣನೆದ್ದು ಕುಳಿತರೆ ಶಿವರಾತ್ರಿ, ಕಾಣಿರೊ;
ಶರಣ ನಡೆದುದು ಪಾವನ, ಕಾಣಿರೊ,
ಶರಣ ನುಡಿದರೆ, ಶಿವತತ್ವ, ಕಾಣಿರೋ !
ಕೂಡಲ ಸಂಗನ ಶರಣರ ಕಾಯವೇ ಕೈಲಾಸ, ಕಾಣಿರೋ !

ಶರಣರು ನಿದ್ರೆಮಾಡಿದರೆ ಅದು ಶಿವ ಜಪವಾಗುತ್ತದೆ; ಎದ್ದು ಕುಳಿತರೆ ಶಿವರಾತ್ರಿ ಜಾಗರಣೆಯಾಗುತ್ತದೆ; ಶರಣರು ಹೋದದಾರಿ ಪವಿತ್ರವಾದುದು; ಅವರ ನುಡಿ ಶಿವತತ್ತ್ವ; ಆದಕಾರಣ ಅವರ ದೇಹವೆ ಕೈಲಾಸವಾಗಿದೆ.

**೮೪೩ ಉಪಮಿಸಬಾರದ ಉಪಮಾತೀತರು,**
**ಕಾಲ ಕರ್ಮರಹಿತರು, ಭವರಹಿತರು,**
**ಕೂಡಲ ಸಂಗಮದೇವಾ, ನಿಮ್ಮ ಶರಣರು.**

ಕೂಡಲ ಸಂಗಮದೇವಾ ನಿಮ್ಮ ಶರಣರು ನಿತ್ಯದ ಕರ್ಮಗಳಿಂದ ದೂರ ವಿದ್ದ ಕಾರಣ ಅವರು ಸಂಸಾರಾಂಬುಧಿಯನ್ನು ದಾಟಿದ್ದಾರೆ; ಅವರನ್ನು ಪ್ರಪಂಚದ ಯಾವ ವಸ್ತುವಿಗೂ ಸರಿಸಮನೆಂದು ಸಾಮ್ಯ ವೈಷಮ್ಯಗಳನ್ನು ಎಣಿಸಲಸಾಧ್ಯ ಕೂಡಲ ಸಂಗಮ ದೇವಾ !

**೮೪೪ ಬ್ರಹ್ಮಂಗೆ ವಾಕ್ ಪರುಷ, ವಿಷ್ಣುವಂಗೆ ನಯನ ಪರುಷ,**
**ರುದ್ರಂಗೆ, ಹಸ್ತ ಪರುಷ,**
**ನಮ್ಮ ಕೂಡಲ ಸಂಗನ ಶರಣಂಗೆ ಪಾದವೇ ಪರುಷ !**

ಬ್ರಹ್ಮದೇವನ ಮಾತುಗಳಿಂದ ಜಗವೆಲ್ಲವೂ ಪವಿತ್ರವಾಗುತ್ತದೆ; ವಿಷ್ಣುವಿನ ದಯಾದೃಷ್ಟಿಯಿಂದ ದಾರಿದ್ರ್ಯವೆಲ್ಲ ದೂರವಾಗುತ್ತದೆ; ರುದ್ರದೇವನ ಕೈಗಳ ಸಂಪರ್ಕದಿಂದ ಪಾಪವೆಲ್ಲ ಸುಟ್ಟು ಪುಣ್ಯದ ಫಲಗಳು ಉದ್ಭವಿಸುತ್ತವೆ; ಸಂಗಮ ದೇವರ ಶರಣರ ಪಾದಗಳನ್ನು ಮುಟ್ಟಿ ನಮಿಸಿದರೆ ದುರಿತಗಳೆಲ್ಲ ಅಳಿದು ಮುಕ್ತಿಯ ಫಲಸಿಗುತ್ತದೆ.

**೮೪೫ ನೆಲನೊಂದೆ ಹೊಲಗೇರಿ-ಶಿವಾಲಯಕ್ಕೆ;**
**ಜಲವೊಂದೆ ಶೌಚಾಚಮನಕ್ಕೆ;**
**ಕುಲವೊಂದೆ ತನ್ನ ತಾನರಿದವಂಗೆ;**
**ಫಲವೊಂದೆ ಷಡುದರುಶನ ಮುಕ್ತಿಗೆ;**
**ನಿಲವೊಂದೆ, ಕೂಡಲ ಸಂಗಮ ದೇವಾ, ನಿಮ್ಮನರಿದವಂಗೆ.**

ಹೊಲೆಯರು ಮನೆಕಟ್ಟಿಕೊಂಡಿರುವುದು--ಶಿವಾಲಯವನ್ನು ಕಟ್ಟಿರುವುದು ಒಂದೇ ಭೂಮಿಯ ಮೇಲೆ; ಶುದ್ಧಮಾಡಲು ಉಪಯೋಗಿಸುವ ನೀರು, ಆಚಮನಕ್ಕೆ ಬಳಸುವ ನೀರು ಒಂದೇ; ಇವುಗಳ ತಾರತಮ್ಯವನ್ನು ತಿಳಿದುಕೊಳ್ಳಬೇಕು; ಹಾಗೆ ತನ್ನನ್ನು ತಾನು ಚೆನ್ನಾಗಿ ಬಲ್ಲವನಿಗೆ ಕುಲ ಜಾತಿಗಳು ಒಂದೆ; ಸಕಲ ಭಕ್ತರಿಗೂ ದೊರೆಯುವ ಮುಕ್ತಿ--ಸಂಗಮ ದೇವರ ದೇವರ ದರ್ಶನವೂ ಒಂದೇ ಯಾಗಿದೆ ಬೇರೆ ಬೇರೆಯಲ್ಲ.

## ಶರಣನ ಭಕ್ತ ಸ್ಥಳ

**೮೪೬ ಮಧ್ಯಪಿಂಡಗಳೆಲ್ಲವೂ ಶಿವನಿದ್ದೆಡೆಯನರಿಯವು;**
**ಪೂರ್ವಪಿಂಡಗಳೆಲ್ಲವೂ ಶಿವನಾದ್ಯಂತವನರಿಯವು;**
**ಕಾಲ ಪಿಂಡಗಳೆಲ್ಲವೂ ಶಿವನ ನಿಲುಕಡೆಯನರಿಯದೆ**
**ಕಾಲ ಚಕ್ರದೊಳಗಾದುವೆಲ್ಲವೂ!**
**ಸಂಶಯ ಪಿಂಡಗಳೆಲ್ಲವ ಮರೆದು**
**ನಿಮ್ಮ ಶರಣ ಸೇವೆಯಲ್ಲಿರಿಸಯ್ಯಾ,**
**ಕೂಡಲ ಸಂಗಮದೇವಾ.**

ಈ ಮೊದಲು ಹುಟ್ಟಿದ ದೇಹಗಳು ಶಿವನ ಪೂರ್ಣತ್ವವನ್ನು ತಿಳಿಯದೆ ಹೋದವು; ತದನಂತರ ಹುಟ್ಟಿಬಂದ ಈ ಮಧ್ಯಕಾಲದ ದೇಹಿಗಳು ಶಿವನಿರುವ ಜಾಗವನ್ನು ತಿಳಿಯಲಾರರು; ಆದುದರಿಂದ ಅವರು ಕಾಲನ ಕೈಯೊಳಗೆ ಸಿಕ್ಕು ಭವಣೆಬಡುತ್ತಲಿದ್ದಾರೆ, ಕಾರಣ ಈ ಸಂಶಯಯುಕ್ತ ದೇಹದಿಂದ ಮುಕ್ತನನ್ನಾಗಿ .ಮಾಡಿ ಶರಣರ ಪಾದಸೇವೆಯಲ್ಲಿರಿಸು ನನ್ನನ್ನು ಕೂಡಲ ಸಂಗಮದೇವಾ !

**೮೪೭ ಮರಮರ ಮಥನದಿಂದ ಅಗ್ನಿ ಹುಟ್ಟಿ ಆಮರನೆಲ್ಲವ**
**ಸುಡದಿಪ್ಪುದೆ?**
**ಮಹಾನುಭಾವರ ಸಂಗದಿಂದ ಜ್ಞಾನಾಗ್ನಿ ಹುಟ್ಟಿ**

**ಎನ್ನ ತನುಗುಣವೆಲ್ಲ ಸುಡದಿಪ್ಪುದೆ?**
**ಇದು ಕಾರಣ, ಮಹಾನುಭಾವರ ತೋರಿಸು, ಕೂಡಲ ಸಂಗಮದೇವಾ.**

ಮರ ಮರಗಳು ತಿಕ್ಕಿ ಘರ್ಷಣೆಯಿಂದ ಹುಟ್ಟಿದ ಬೆಂಕಿಯು ಆ ಮರಗಳನ್ನೆ ದಹಿಸುತ್ತದೆ; ಹಾಗೆ ಮಹಾನುಭಾವರಾದ ಶರಣರ ಸಹವಾಸದಿಂದ ನನ್ನಲ್ಲಿ ಜ್ಞಾನೋದಯವಾಗಿ ನನ್ನ ಎಲ್ಲ ಪಂಚೇಂದ್ರಿಯ ದುರ್ಗುಣಗಳು ಸುಟ್ಟು ಭಾವ ಶುದ್ಧನಾಗುವೆ ಕೂಡಲ ಸಂಗಮದೇವಾ !

**೮೪೮ ಅರಿದುದನರಿಯಲೊಲ್ಲದು, ಅದೆಂತಯ್ಯಾ?**
**ಮರೆದುದ ಮರೆಯಲೊಲ್ಲದು ಅದೆಂತಯ್ಯಾ?**
**ಅರಿದು ಮರೆದ ಮನವ ಕೂಡಲ ಸಂಗಯ್ಯ ಬಲ್ಲ!**

ಒಂದು ಸಲ ತಿಳಿವಳಿಕೆಯಾಗಿ ನಿನ್ನನ್ನು ತಿಳಿದ ಬಳಿಕ ಅದನ್ನು ಮತ್ತೆ ತಿಳಿಯಲು ನನ್ನ ಮನಸ್ಸಿಗೆ ಕಠಿಣವಾಗಿದೆ; ಸಂಸಾರವನ್ನು ಮರೆತು ಬಂದಿರುವೆನು; ಅದರ ನೆನಹು ಮತ್ತೆಯಾಗದು; ಹೀಗೆ ತಿಳಿದು ಮರೆತ ಮನಸ್ಸಿನ ದೋಲಾಯವನ್ನು ಕೂಡಲ ಸಂಗನು ದೇವನು ಬಲ್ಲನು.

**೮೪೯ ಪಾದಾರ್ಚನೆಯ ಮಾಡುವೆನಯ್ಯಾ ಪಾದೋದಕದ ಹಂಗಿಗೆ;**
**'ಶರಣಾರ್ಥಿ' ಎಂಬೆನಯ್ಯಾ ಒಕ್ಕುದ ಕೊಂಬಹಂಗಿಗೆ!**
**ಎಡೆಯಾಟ ಕಡ ಬಡ್ಡಿಯ ಕೊಟ್ಟು ಕೆಟ್ಟಿತ್ತು ನೋಡಾ, ಭಕ್ತಿ!**
**ಕೂಡಲ ಸಂಗನ ಶರಣರ ನಿಲವನರಿಯದೆ**
**ಮುಯ್ಯಿಗೆ ಮುಯ್ಯಾಗಿ ಕೆಟ್ಟಿತ್ತಯ್ಯಾ ಎನ್ನ ಭಕ್ತಿ**

ನಿಮ್ಮ ಪಾದ ಪೂಜೆ ಮಾಡುತ್ತಿರುವೆನು; ಕೇವಲ ತೀರ್ಥದ ಆಸೆಗಾಗಿ; ನೀವು ಉಂಡುಬಿಟ್ಟ ಎಂಜಲಕ್ಕಾಗಿ ನಿಮಗೆ ನಮಸ್ಕಾರ ಮಾಡುವೆನು; ಆಶೆಯ ಏಟಿಗೆ ನನ್ನನ್ನು ಅಡ್ಡವಾಗಿಟ್ಟು ನಾನು ಕೆಟ್ಟೆ; ನಿಮ್ಮ ಶರಣರ ಮಹತ್ವವನ್ನು ತಿಳಿಯದೆ ನಾನು ಕೆಟ್ಟೆ; ಮುಯ್ಯಿಗೆ ಮುಯ್ಯಿ ತೀರಿಸಿದಂತಾಯಿತು. ಕೂಡಲ ಸಂಗಮದೇವಾ!

೮೫೦ ಕಳಾ ಬಿಂದು ಪಟಾ ಮುಖಿಯೆಂಬ ಹೆಂಗೂಸಿನ ಕೈಯಲು
ಜಲಾಕಾರವೆಂಬ ಗಡಿಗೆ ಇದ್ದಿತ್ತು.
ಆ ಗಡಿಗೆಯಲ್ಲಿ ಚನ್ನಬಸವಣ್ಣ ನೀರು ತಂದ,
ಮಡಿವಾಳಯ್ಯ ಸಯಿಧಾನವ ತಂದ,
ಇದರೊಲೆಯಡಿಯನುರುಹಿ ಕೊಡಾ,
ಕೂಡಲ ಸಂಗಮದೇವಾ.

ತೇಜಃಪುಂಜವಾದ ಬಿಂದವು ಎಂಟು ವರುಷದ ಕುಮಾರಿಯ ಕರಗಳಲ್ಲಿ ನೀರ್ಮಣೆಯಿಂದ ಮಾಡಿದ ಘಟದಂತೆ ಹೊಳೆಯುತ್ತಿದ್ದಿತು;ಆ ಕುಂಭದಲ್ಲಿ ಚೆನ್ನಬಸವಣ್ಣನು ನೀರು ತಂದನು; ಮಡಿವಾಳಯ್ಯನು ಯೋಜಿತ ಫಲದ್ರವ್ಯಗಳನ್ನು ತಂದಿದ್ದಾನೆ; ಇದರ ತಳದಲ್ಲಿ ಉರಿಮಾಡಿ ಅದನ್ನು ಪಾಕಮಾಡಿ ಕೊಡು ಕೂಡಲ ಸಂಗಮ ದೇವಾ!

೮೫೧ ದಿಟವಮಾಡಿ ಪೂಜಿಸಿದರೆ ಸಟೆಯಮಾಡಿ ಕಳೆವೆ,
ಸಟೆಯಮಾಡಿ ಪೂಜಿಸಿದರೆ ದಿಟವಮಾಡಿ ಕಳೆವೆ!
ಏನೆಂಬೆ, ಎಂತೆಂಬೆ? ಸುಖಕ್ಕೆ ತುಂಬಿದ ದೀವಿಗೆ ಮನೆ
ಯಲ್ಲವ ಸುಟ್ಟಂತೆ
ಆನು ಮಾಡಿದ ಭಕ್ತಿ ಎನಗಿಂತಾಯಿತ್ತು,
ಕೂಡಲ ಸಂಗಮದೇವಾ!

ಸತ್ಯವನ್ನು ಸುಳ್ಳಾಗಿಯೂ ಸುಳ್ಳನ್ನು ಸತ್ಯವಾಗಿಯೂ ಮಾಡಿ ಡಂಭಾಚಾರದ ಪೂಜೆ ಮಾಡುವೆ; ಸುಖ ಜೀವನ ಸಾಗಿಸಬೇಕೆಂದು ಈ ತೆರ ನಡಿದಿರುವೆ; ಕತ್ತಲೆಯನ್ನು ಅಳಿದು ಬೆಳಕು ತಂದು ಮನೆಯಲ್ಲಿ ಶೋಭಿಸಲೆಂದು ಹಚ್ಚಿದ ದೀಪವು ಮನೆಯನ್ನೇ ಸುಟ್ಟು ಹಾಕಿದಂತೆ ನನ್ನ ಸುಳ್ಳು ಭಕ್ತಿ ನನ್ನನ್ನು ಹಾಳು ಮಾಡಿತು ದೇವಾ!

## ಶರಣನ ಮಹಾಹೇಶ್ವರ ಸ್ಥಳ

೮೫೨ ಪರಮ ಪ್ರಭುವೆ, ನೀ ಮುನಿದೆನ್ನ ಮರ್ತ್ಯಲೋಕದೊಳ
ಗಿರಿಸಿದರೆ
ಆನು ಸೈರಿಸಿದೆನಯ್ಯಾ.

**ಮದ; ಛಲವಿದೇನಯ್ಯಾ? ದರುಶನ ಭ್ರಾಂತಿ**
**ಇದೇನಯ್ಯಾ?**
**ಕ್ರಿಯಾಕರ್ಮ ಸೂತಕವಿದೇನಯ್ಯಾ?**
**ಇನ್ನು ಕಲಿಯುಗದಲ್ಲಿ ಬಳಸಿದರೆ,**
**ಕೂಡಲ ಸಂಗಮದೇವಾ, ನಿಮ್ಮರಾಣಿವಾಸದಾಣೆ!**

ಪರಮ ದಯಾಘನನೆ ನೀನು ನನ್ನ ಮೇಲೆ ಸಿಟ್ಟಾಗಿ ನನ್ನನ್ನು ಭೂಲೋಕಕ್ಕೆ ಅಟ್ಟಿದರೆ ನಾನು ಅದನ್ನು ತಾಳಿಕೊಂಡು ಬಾಳುವೆ; ಮದ ಹಟ, ದರುಶನದ ಹುಚ್ಚುತನದ ಹೊಲೆತನಗಳನ್ನು ಇನ್ನು ಮುಂದೆ ಕಲಿ ಯುಗದಲ್ಲಿ ಆಚರಿಸಿದರೆ ನಿಮ್ಮ ರಾಣಿಯರಾಣೆ; ಕೂಡಲ ಸಂಗಮದೇವಾ.

೮೫೩ **ತನುಮನಧನವೆಂಬ ಕನ್ನಡಿ ನೋಡಯ್ಯಾ;**
**ಎನ್ನದೂ ಅಲ್ಲ, ನಿನ್ನದೂ ಅಲ್ಲ, ಬರಿಯ ಭ್ರಮೆಯ**
**ಮಾತು!**
**ಆ ಭ್ರಮೆಯೊಳಗಾಗೆ, ನಿಮ್ಮ ಶ್ರೀ ಚರಣವ ಬಿಡೆ,**
**ಕೂಡಲ ಸಂಗಮದೇವಾ.**

ತನು ಮನ ಧನ ವೆಂಬ ಕನ್ನಡಿಯು ನನ್ನದೂ ಅಲ್ಲ ನಿನ್ನದೂ ಅಲ್ಲ ದೇವಾ ಕೇವಲ ಭ್ರಮೆಯದು; ಆ ಹುಚ್ಚುತನದ ಬಲೆಯೊಳಗೆ ಬೀಳಲಾರೆನು; ನಿಮ್ಮ ಸದ್ಗತಿದಾಯಕ ಪಾದಗಳನ್ನು ಎಂದಿಗೂ ಬಿಡಲಾರೆನು; ಕೂಡಲ ಸಂಗಮದೇವಾ.

೮೫೪ **ತಾಪ ತ್ರಯವೆಂದರೆ ರೂಪ ಕಾಣುತ್ತ ಕನಲಿದ;**
**ಕೋಪದಲ್ಲಿ ಶಿವ ಕಳಿಯದ ಕರಡಿಗೆಯನೆ ಮುರಿದ,**
**ಧೂಪಗುಂಡಿಗೆಯನೊಡೆದ ದೀಪಾರತಿಯ ನಂದಿಸಿದ,**
**ಬಪ್ಪ ಪರಿಯಾಣ ದೋಗರವ ತುಡುಕಿದ:**
**ಪಾಪ ಕರ್ಮ; ಕೂಡಲ ಸಂಗಮದೇವಾ, ನಿಮ್ಮ ಶರಣ,**

ಕೂಡಲ ಸಂಗಮದೇವಾ, ನಿಮ್ಮ ಶರಣನು ನಿಮ್ಮ ರೂಪ ನೋಡು ವದಕ್ಕಾಗಿ ಬಹು ಕಷ್ಟ ಪಟ್ಟನು; ಸಿಟ್ಟನ್ನು ಬಿಡುವಾಗ ದೇಹದ ಮೇಲೆ

ಮೋಹವನ್ನು ಬಿಟ್ಟನು; ಪಾಪದ ಕರ್ಮಗಳನ್ನು ಹರಿದು ಹಾಕಿದನು; ಪುನರ್ಜನ್ಮದ ಫಲವನ್ನು ತುಂಡುಮಾಡಿಗೆದ್ದನು.

**೮೫೫ ಈ ಲೋಕದ ಭೀತರು ಆ ಲೋಕದ ಕಲಿಗಳು:**
**ಸಾಲೋಕ್ಯ ಸಾಮೀಪ್ಯಸಾರೂಪ್ಯ ಸಾಯುಜರೆಲ್ಲರೂ**
**ಅಜಾತಂಗೆ ಸರಿಯೆ?**
**ಮೂಜಗದಲ್ಲಿ ನಿರತರು ಕೂಡಲ ಸಂಗನ ಶರಣರು–**
**ತ್ರಿವಿಧನರಿಯರು.**

ಈ ಭೂಲೋಕದಲ್ಲಿ ಅಂಜಿ ಸಾಧಕ ಬಾಧಕಗಳನ್ನು ವಿಚಾರಿಸಿ ನಡೆವವರು ಕೈಲಾಸದಲ್ಲಿ ಧೀರರಾಗಿ ಮೆರೆಯುತ್ತಾರೆ; ಮುಕ್ತಿಮಾರ್ಗವನ್ನು ಹಿಡಿದವರು, ಶರಣರ ಸಂಗವ ಮಾಡಿದವರು, ಪರಮಾತ್ಮರೂಪರಾದವರು, ಜನನ ಮರಣ ರಹಿತರೂ ಹುಟ್ಟೆಂಬುದನ್ನೇ ತಿಳಿಯದವನಿಗೆ ಸರಿಯಾಗಲಾರರು; ತ್ರಿಲೋಕದಲ್ಲಿಯೂ ನಿರಂತರ ವಾಸ ಮಾಡಿರುವ ಶರಣರು ಮೂರು ಪ್ರಕಾರದ ಕರ್ಮಗಳನ್ನು ತಿಳಿಯಲಾರರು.

**೮೫೬ ಜಗವ ಸುತ್ತಿಹುದು ನಿನ್ನ ಮಾಯೆಯಯ್ಯಾ:**
**ನಿನ್ನ ಸುತ್ತಿಹುದು ಎನ್ನ ಮನ ನೋಡಯ್ಯಾ!**
**ನೀನು ಜಗಕ್ಕೆ ಬಲ್ಲಿದನು: ಆನು ನಿನಗೆ ಬಲ್ಲಿದನು,**
**ಕಂಡಯ್ಯಾ !**
**ಕರಿಯು ಕನ್ನಡಿಯೊಳಗಡಗಿದಂತಯ್ಯಾ,**
**ಎನ್ನೊಳಗೆ ನೀ ನಡಗಿದೆ, ಕೂಡಲ ಸಂಗಮದೇವಾ;**

ಹೇ ದೇವಾ ನಿನ್ನ ಮಾಯೆಯು ಜಗತ್ತನ್ನೇ ತುಂಬಿ ಸುತ್ತುವರಿದು ನಿಂತಿದೆ; ಜಗತ್ತೆಲ್ಲವು ನಿನ್ನನ್ನು ತಿಳಿದಿದೆ; ನಾನು ಮಾತ್ರ ನಿನಗೆ ತಿಳಿದಿರುವೆನು; ಆನೆಯು ಕನ್ನಡಿಯಲ್ಲಿ ಪ್ರತಿಬಿಂಬರೂಪವಾಗಿ ಅಡಗಿಕೊಂಡಿರುವಂತೆ ನೀನು ನನ್ನ ಅಂತರಂಗದಲ್ಲಿ ಅಡಗಿಕೊಂಡಿರುವಿ ಕೂಡಲ ಸಂಗಮದೇವಾ!

೮೫೭ ತಾಗು ನಿರೋಧದ ಆಗು ಹೋಗನರಿಯದ
ಶರಣನ ಚರಿತ್ರವ ನೋಡಿ ನೋಡಿ ಬೆರಗಾದೆನಯ್ಯಾ !
ಕೂಡಲ ಸಂಗಯ್ಯನಲ್ಲಿ ತಾನೇ ಸುಯಿಧಾನಿಯಾಗಿ!

ಅಪ್ಪುವ ಕರ್ಮಗಳನ್ನು ತಡೆಗಟ್ಟಿ ಜನ್ಮ ಜನ್ಮಾಂತರಗಳ ಗೋಳನ್ನು ತಪ್ಪಿಸಿಕೊಂಡು ನಿನ್ನಲ್ಲಿ ಏಕರೂಪರಾದ ಶರಣರ ಚಾರಿತ್ರ್ಯವನ್ನು ನೋಡಿ ನನಗೆ ಮಹದಾಶ್ಚರ್ಯವಾಗಿದೆ ದೇವಾ.

## ಶರಣನ ಪ್ರಸಾದಿ ಸ್ಥಳ

೮೫೮ ಎನಗೆ ಗುರುವಿನ ಪ್ರಸಾದ: ನಿನಗೆ ಚೆನ್ನನ ಪ್ರಸಾದ;
ಎನಗೆಯೂ ಸಮಯಾಚಾರ ಸರಿ:
ಕೂಡಲ ಸಂಗಮದೇವಾ, ನೀನೆನಗೆ ಚಿಕ್ಕ ತಮ್ಮ!

ನಾನು ಗುರುವಿನ ಪ್ರಸಾದ ಪಡೆದರೆ ನೀನು ಪ್ರಯೋಗ ಪ್ರವೀಣನಾದ ಚೆನ್ನ ಬಸವಣ್ಣನ ಪ್ರಸಾದವನ್ನು ಸ್ವೀಕರಿಸಿದಿ; ನಾವಿಬ್ಬರು ಸಮಯಾಚಾರಿಗಳು; ತತ್ಕಾರಣ, ಕೂಡಲ ಸಂಗಮದೇವಾ, ನೀನು ನನ್ನ ಸಣ್ಣ ತಮ್ಮನಿರುವಿ.

೮೫೯ ಶುದ್ಧಾತ್ಮ ಪರಮಾತ್ಮರಿಬ್ಬರೂ ಒಂದು ರತ್ನಕ್ಕೆ
ಹೆಣಗಾಟವನಾಡಿಹರು.
ಅವನ ಹೆಣಗಾಟವ ನೋಡಿ ಆ ರತ್ನವ ಸೆಳೆದುಕೊಂಡರೆ
ಕೂಡಲ ಸಂಗಯ್ಯಗಾರೋಗಣೆಯಾಯಿತ್ತು!

ಶುದ್ಧ ಚರಿತ್ರೆಯ ಶರಣನೂ ಹಾಗೂ ಪರಮಾತ್ಮನೂ ಇಬ್ಬರೂ ಒಂದೇ ರತ್ನವಾದ ಸತ್ಯಕಾಂತಕ್ಕೆ ಬಡಿದಾಡುತ್ತಲಿದ್ದಾರೆ; ಆ ಸತ್ಯ ಬಿಂದುವನ್ನು ಕಸಿದುಕೊಂಡರೆ ಕೂಡಲ ಸಂಗಮ ದೇವರಿಗೆ ಉತ್ತಮ ನೈವೇದ್ಯವಾಗುತ್ತದೆ.

೮೬೦ ಆ ರತ್ನ ಪ್ರಸಾದವನಾರಾಧಿಸುತ್ತಿರಲು
ಆ ಪ್ರಸಾದವಲ್ಲಿ ಬೀಳುತ ಆಳುತ್ತೆದ್ದಿತ್ತು, ನೋಡಾ!

**ಅದ ಹಲಬರು ನೋಡಿ ನೋಡಿ ಹೋಗುತ್ತಿದ್ದರು;**
**ಆ ಪ್ರಸಾದ ತಾನೇ ಬಂದು ಎನ್ನ ಸುತ್ತಿಕೊಂಡಿತ್ತು;**
**ಇದ ಪದಾರ್ಥವ ಮಾಡಿಕೊಡೈ, ಕೂಡಲ ಸಂಗಮ ದೇವಾ.**

ಆ ಸತ್ಯಕಾಂತವನ್ನು ಪೂಜಿಸುತ್ತಿರಲು ಅದು ರಾಜಮಾನ್ಯವಾಗಿ ವಿರಾಜಿಸಿತು; ಕೆಲವರು ನೋಡಿ ಸುಮ್ಮನೆ ಹೋದರು; ಅದು ತಾನೇ ಬಂದು ನನ್ನ ಹೃದಯುವಲ್ಲಿ ಪ್ರವೇಶ ಮಾಡಿತು; ಇನ್ನು ಕೂಡಲ ಸಂಗಮ ದೇವಾ, ಅದನ್ನೊಂದು ಉತ್ತಮ ಮೂರ್ತಿಯನ್ನಾಗಿ ಮಾಡು.

**೮೬೧ ಎಲ್ಲರ ಗಂಡರೂ ಬೇಟೆಗೆ ಹೋದರು:**
**ನೀನೇಕೆ ಹೋಗೆ, ಎಲೆ ಗಂಡನೇ?**
**ಸತ್ತುದ ತಾರದಿರು, ಕೈಮುಟ್ಟಿ ಕೊಲ್ಲದಿರು,**
**ಅಡಗಿಲ್ಲದ ಮನೆಗೆ ಬಾರದಿರು!**
**ದೇವರ ಧರ್ಮದೊಳಗೊಂದು ಬೇಂಟೆ ದೊರಕೊಂಡರೆ**
**ಕೂಡಲ ಸಂಗಮದೇವಗರ್ಪಿತವ ಮಾಡುವೆ, ಎಲೆ ಗಂಡನೇ !**

ಎಲೆ ಗಂಡನೇ ಎಲ್ಲರ ಮನೆಯ ಪುರುಷರೂ ಬೇಟೆಗೆ ಹೋದರು; ನೀನೂ ಹೋಗು; ನೀನು ಸತ್ತ ಪ್ರಾಣಿಗಳನ್ನು ಮನೆಗೆ ತರಬೇಡ; ಕೈ ಮುಟ್ಟಿಕೊಂದು ಪ್ರಾಣಿಗಳನ್ನು ತರಬೇಡ; ಆದರೆ ಮಾಂಸವಿಲ್ಲದೆ ಮನೆಗೆ ಹಿಂತಿರುಗಬೇಡ; ದೇವರ ಕೃಪೆಯಿಂದ ಧರ್ಮದ ಬೇಟೆ ಸಿಕ್ಕರೆ ಅದನ್ನು ಕೂಡಲ ಸಂಗಮ ದೇವರಿಗೆ ಅರ್ಪಿಸುವೆನು ನನ್ನ ಪ್ರಿಯ ಪ್ರಾಣಕಾಂತ.

## ಶರಣನ ಪ್ರಾಣಲಿಂಗಿ ಸ್ಥಳ

**೮೬೨ ಗ್ರಹಬಂದು ಆವರಿಸಲೊಡನೆ ತನ್ನ ಮರೆಸುವುದು;**
**ಮತ್ತೊಂದಕ್ಕಿಂಬುಗೊಡಲೀಯದಯ್ಯಾ.**
**ಕೂಡಲ ಸಂಗಮ ದೇವನ ಅರಿವು ಅನುಪಮವಾಗಲೊಡನೆ**
**ಜಿವಹಾರದೊಳಗಿರಲೀಯದಯ್ಯಾ.**

ಭೂತ ಗ್ರಹಗಳು ಬಂದು ಆತ್ಮ ಗ್ರಹಣ ಮಾಡಿದ ಕೂಡಲೆ ಎಲ್ಲವೂ ಮರೆತು ಹೋಗುತ್ತದೆ; ಮತ್ತೆ ಬೇರೆ ಯಾವದನ್ನು ಮಾಡಲು ಬಿಡುವುದಿಲ್ಲ; ಆದರೆ ಕೂಡಲ ಸಂಗಮ ದೇವರ ಜ್ಞಾನವು ಹಿರಿದಾಗಲು ವ್ಯವಹಾರದ ಜೀವನ ಬೇಸರವಾಗುತ್ತದೆ.

**೮೬೩ 'ಭೂತಿಕ ಸೀರೆಯ ಸಾತ್ವಿಕ ನೆರೆವುಟ್ಟರೆ,**
**ಭೂತಿಕ ಸಾತ್ವಿಕನಾದ, ಸಾತ್ವಿಕ ಭೂತಿಕನಾದ:**
**ಈ ಮಾತು ಬಿದ್ದುದು ನೋಡಾ, ರಾಜ ಬೀದಿಯಲ್ಲಿ.**
**ಅಯ್ಯಾ ಭೂತ ಕೆಣಕಿದರಿಲ್ಲ, ಮಾತು ಮುಚ್ಚಿದರಿಲ್ಲ;**
**ಓತು ಕೊಡುವ ಅನುವ ಕೂಡಲ ಸಂಗಮ ತಾನೆ ಬಲ್ಲ;**

ಭೂತನುಟ್ಟ ಶೀರೆಯನ್ನು ಸಜ್ಜನರು ಉಟ್ಟುಕೊಂಡರೆ, ಭೂತನು ಸಜ್ಜನನಾಗಿಯೂ ಸಜ್ಜನನು ಭೂತನಾಗಿಯೂ ಪರಿಣಮಿಸುತ್ತಾರೆ; ಈ ಮಾತು ರಾಜ ಮಾತಾಗಿದೆ; ಆದರೆ ಕೆಣಕಿದರೆ ಭೂತವಿಲ್ಲ; ಮುಚ್ಚಿಟ್ಟು ಕೊಂಡರೆ ಮಾತುಗಳು ಬರುವುದಿಲ್ಲ; ಕಾರಣ ಏಕರೂಪನಾಗಿ ಎಲ್ಲರಲ್ಲಿಯೊ ಕೂಡಿಕೊಳ್ಳುವ ಗುಣಧರ್ಮವು ಕೂಡಲ ಸಂಗಮ ದೇವರಿಗೆ ಗೊತ್ತಿದೆ.

## ಶರಣನ ಐಕ್ಯ ಸ್ಥಳ

**೮೬೪ ಮನೆಯ ಗಂಡನ ಮನೆವಾರ್ತೆಯ ನೇನ ಹೇಳುವೆನವ್ವಾ !**
**ಅಂಗವಿದ್ಯೆಯನೊಲ್ಲ;**
**ಕಣ್ಣಳೊಳಗಣ ಕಸವ ಕಳೆದಲ್ಲದೆ ನೋಡಲೀಯ;**
**ಕೈಯ ತೊಳೆದಲ್ಲದೆ ಮುಟ್ಟಲೀಯ;**
**ಕಾಲ ತೊಳೆದಲ್ಲದೆ ಹೊದ್ದಲೀಯ;**
**ಇಂತೀ ಸರ್ವಾಂಗ ತಲೆದೊಳೆದ ಕಾರಣ**
**ಕೂಡಲ ಸಂಗಮ ದೇವನೆನ್ನ ಕೂಡಿಕೊಂಡನವ್ವಾ !**

ನನ್ನ ಹಿರಿಯನ ಗುಣವೇನೆಂದು ಹೇಳಲಿ ತಾಯಿ! ದೇಹ ಸಂಬಂಧ ಬೇಡ ಎನ್ನುತ್ತಾನೆ; ದೃಷ್ಟಿ ಶುದ್ಧವಾಗದ ವಿನಃ ನಾನು ಅವನನ್ನು ನೋಡ

ಲಾಗದು; ಕೈಕಾಲುಗಳನ್ನು ತೊಳೆದು ಅಂಗವಿಷಯ ಹೋಗದ ವಿನಃ ಮುಟ್ಟಬೇಡ ಹತ್ತಿರ ಬರಬೇಡ ಎನ್ನುತ್ತಾನೆ;ಸರ್ವಾಂಗಗಳನ್ನು ತೊಳೆದು ಪಾವನ ಮಾಡಿಕೊಂಡಾಗ ಕೂಡಲ ಸಂಗಮ ದೇವರು ನನ್ನಲ್ಲಿ ಕೂಡಿ ಕೊಂಡನು.

**೮೬೫ ಅಳಿಯನ ಕಂಡರೆ ನಾಚೆಂಬೆ ಮಗಳೆ;**
**ಅಳಿಯನ ಕಂಡರೆ ತೊಲಗೆಂಬೆ, ಮಗಳೆ;**
**ನಾಚುವರೆ ಮೊರೆಯಿಲ್ಲ, ತೊಲಗುವರೆ ನೆಲನಿಲ್ಲ!**
**ಇಬ್ಬರಿಗೊಬ್ಬ ಗಂಡನಾದ ಬಳಿಕ**
**ಇನ್ನೆಲ್ಲಿಯ ಮೊರೆ, ಮಗಳೆ?**
**ಕೂಡಲ ಸಂಗಮ ದೇವಯ್ಯನೆಂಬ ಗಂಡನಾದ ಬಳಿಕ**
**ಇನ್ನೆಲ್ಲಿಯ ಮೊರೆ, ಮಗಳೆ?**

ಅಳಿಯ ದೇವನನ್ನು ಕಂಡೊಡನೆ ಎದುರು ನಿಲ್ಲಬೇಡಾ, ನಾಚಿ ಮರೆಗೆ ಹೋಗು ಎಂದು ಹೇಳುವೆ ಮಗಳೆ; ನಾಚಿಕೆ ಆಗಿದೆ ಎಂದರೆ ಕೇಳುವವರಿಲ್ಲ; ಹೋಗಬೇಕೆಂದರೆ ದಾರಿಯಿಲ್ಲ; ಯಾಕಂದರೆ ತಾಯಿ ಮಗಳಿಬ್ಬರಿಗೂ ಕೂಡಲ ಸಂಗಮದೇವನೊಬ್ಬನೇ ಗಂಡಪ್ರಾಣದೊಡೆಯ ನಾದಬಳಿಕ ನಾಚಿಕೆಯಲ್ಲಿಯದು ಮಗಳೆ ?

**೮೬೬ ಸತ್ಯವಿದೆ, ಸಮಾಧಾನವಿದೆ; ಮನಕ್ಕೆ ಬಾರದಿದೇನಯ್ಯಾ?**
**ಸರ್ವ ಸನುಮತವೆಂಬ ಸುಖವಿದೆ; ಮನಕ್ಕೆ ಸೋಂಕದಿ ದೇನಯ್ಯಾ?**
**ಆ ನೀನೆಂಬೊಂದು ಘನವಿದೆ, ಕೂಡಲ ಸಂಗಮ ದೇವಾ, ಭ್ರಮೆಯೊ?**

ಸತ್ಯ-ಸಮಾಧಾನ ಸನುಮತವೆಂಬ ಸುಖವು ಎಲ್ಲವೂ ಇದೆ; ಆದರೆ ಮನಸ್ಸಿಗೆ ಒಂದು ಹಿಡಿಸದಾಗಿದೆ; ನಾನು ನೀನೆಂಬ ಮಹಾಲಿಂಗದ ಭ್ರಮೆಯೇ ಹೆಚ್ಚಾಗಿದೆ ಕೂಡಲ ಸಂಗಮ ದೇವಾ!

**೮೬೭ ಪೂಜೆಯುಳ್ಳನ್ನಬರ ಲಿಂಗನ ಹಾಡಿದೆ;**
**ಮಾಟವುಳ್ಳನ್ನಬರ ಜಂಗಮುವ ಹಾಡಿದೆ,**
**ಜಿಹ್ವೆಯುಳ್ಳನ್ನಬರ ಪ್ರಸಾದವ ಹಾಡಿದೆದೆ.**
**ಈ ತ್ರಿವಿಧ ನಾಸ್ತಿಯಾದ ಬಳಿಕ**
**ಎನ್ನ ನಾಹಾಡಿಕೊಂಡೆ, ಕಾಣಾ**
**ಕೂಡಲ ಸಂಗಮದೇವಾ:**

ಪೂಜೆ ಮಾಡುವಷ್ಟು ಕಾಲ ಲಿಂಗಪೂಜೆ ಮಾಡಿದೆ; ಭಕ್ತಿಯಿರುವಷ್ಟು ಕಾಲ ಜಂಗಮಭಕ್ತಿ ಮಾಡಿದೆ; ನಾಲಿಗೆಯಿರುವಷ್ಟು ಕಾಲ ನಿನ್ನ ನಾಮಸ್ಮರಣೆ ಮಾಡಿದೆ; ಈ ಮೂರು ಅಳಿದ ಬಳಿಕ ನನ್ನಲ್ಲಿದ್ದ ಅಂತರಾತ್ಮನನ್ನೇ ಭಜಿಸಿದೆನು ಕೂಡಲ ಸಂಗಮದೇವಾ.

**೮೭೮ ಮರುಳ ತಲೆ ಹುರುಳ ತಲೆ ನೀನೇ ದೇವಾ:**
**ಹೆಂಗೂಸು ಗಂಡು ಗೂಸು ನೀನೇ ದೇವಾ;**
**ಎಮ್ಮಕ್ಕನ ಗಂಡ ನೀನೇ, ದೇವಾ-**
**ಕೊಡಲ ಸಂಗಮದೇವಾ—**
**ಭ್ರಾಂತಳಿದು ಭಾವ ನಿಂದುದಾಗಿ!**

ಹುಚ್ಚು ಮಬ್ಬಿನ ತಲೆಯೂ ನೀನೇ; ನನ್ನ ಅಕ್ಕನ ಗಂಡನೂ ನೀನೇ;; ಕೂಡಲ ಸಂಗಮ ದೇವಾ ಹುಚ್ಚುಬಿಟ್ಟು ಸತ್ಯದ ಕಲ್ಪನೆ ಅಚ್ಚಳಿಯದೆ ನಿಂತಿದೆ.

**೮೭೯ ಅನಾಯಾಸದಿಂದ ಮನೆಯ ಮಾಡಿ**
**ನಿರಾಯಾಸದಿಂದ ಪರಮ ಸುಖಿ!**
**ರೂಹಿಸುವಲ್ಲಿ ರೂಪಾಧಿಕ,**
**ನೋಡುವಲ್ಲಿ ನೋಟ ಘನ!**
**ಇಂತಪ್ಪ ಸಹಜ ಸಂಗಿಯ ನಿಲವಿನ ಪರಿ:**
**ಉದಕದೊಳಗಣ ಬಿಂದು ಉದಯ ರತ್ನದಂತೆ,**
**ಕೂಡಲ ಸಂಗನ ಶರಣರ ನಿಲವು!!**

ಸಹಜ ಸುಕುಮಾರನಾದ ಲಿಂಗವು ಯಾವ ಪರಿಶ್ರಮವಿಲ್ಲದೆ ಮನೆ ಮಾಡಿಕೊಂಡು ಸುಖದಿಂದ ಇರುವನು; ರೂಪದಲ್ಲಿ ಶ್ರೇಷ್ಠನು, ದೃಷ್ಟಿಯಲ್ಲಿ ನೆಟ್ಟಹನು; ನೀರಿನ ಹನಿಯು ರತ್ನದಂತೆ ಕೂಡಲ ಸಂಗಮ ದೇವರ ಶರಣರು ಧರೆಯಲ್ಲಿ ನೆಲೆಸಿದ್ದಾರೆ.

**೪೨೦ ತೆರಹಿಲ್ಲದ ನಡೆ, ತೆರಹಿಲ್ಲದ ನುಡಿ,**
**ತೆರಹಿಲ್ಲದ ಸಂಭಾಷಣೆಯ ಸುಖವು,**
**ತೆರಹಿಲ್ಲದ ನಂಬಿದ ಸ್ವಾನುಭಾವ ಸುಖವು;**
**ತೆರಹಿಲ್ಲದ ಮಹಿಮೆ, ತೆರಹಿಲ್ಲದ ವಿಚಾರ,**
**ಕೂಡಲ ಸಂಗಮದೇವಾ, ನಿಮ್ಮ ಶರಣಂಗೆ!**

ಕೂಡಲ ಸಂಗಮ ದೇವಾ, ನಿಮ್ಮ ಶರಣರ ನಡೆ-ನುಡಿ, ವಚನ, ಸ್ವಾನುಭಾವ, ಕೀರ್ತಿ,ವಿಚಾರಧಾರೆ ದಿಗಂತದಲ್ಲೆಲ್ಲ ಹಬ್ಬಿಕೊಂಡಿದೆ, ಬಳ್ಳಿಯಾಗಿ ಕುಡಿಯೊಡೆದು ಬೆಳೆಯುತ್ತಲಿದೆ.

## ಐಕ್ಯಸ್ಥಳ

## ಐಕ್ಯನ ಜ್ಞಾನಿ ಸ್ಥಳ

**೪೨೧ ಮೂರರಾಪ್ಯಾಯನ ಐದು ಬಿಟ್ಟವನಿಂಬುಗೊಂಡು,**
**ಅಕ್ಕಟಕ್ಕಟಾ, ಮಾಡಿಕೆಟ್ಟರು, ಮಾಡದೆ ಕೆಟ್ಟರು!**
**ನೀಡಿ ಕೆಟ್ಟರು, ನೀಡದೆ ಕೆಟ್ಟರು!**
**ಕೂಡಲ ಸಂಗಮ ದೇವನ ಬಸಿರ ಮಧ್ಯದ**
**ಬಯಲ ಸಮಾಧಿಯ ನಕ್ಕದೆ ಕೆಟ್ಟರು!!**

ತ್ರಿಗುಣಗಳ ತೃಪ್ತಿಗಾಗಿ ಪಂಚೇಂದ್ರಿಯಗಳ ಪಂಚ ಕರ್ಮಗಳಿಗೆ ಆಶ್ರಯಕೊಟ್ಟು ಮಾನವರು ಕೆಟ್ಟರು; ಇವೆಲ್ಲವುಗಳನ್ನು ಕೂಡಲ ಸಂಗಮ ದೇವರಿಗೆ ಅರ್ಪಿಸದೆ ಹಾಳಾದರು ಕಪಿ ಮಾನವರು.

**೪೨೨ ಬಯಲ ರೂಪ ಮಾಡಬಲ್ಲಾತನೆ ಶರಣನು;**
**ಆ ರೂಪ ಬಯಲ ಮಾಡಬಲ್ಲಾತನೆ ಲಿಂಗಾನುಭಾವಿ.**

**ಬಯಲು ರೂಪ ಮಾಡಲರಿಯದಿದ್ದರೆ ಎಂತು ಶರಣನೆಂಬೆ ?**
**ಆ ರೂಪ ಬಯಲರಿಯದಿದ್ದರೆ ಎಂತು ಲಿಂಗಾನುಭಾವಿ ಯೆಂಬೆ ?**
**ಈ ಉಭಯ ವೊಂದಾದರೆ ನಿಮ್ಮಲ್ಲಿ ತೆರಹುಂಟೆ,**
**ಕೂಡಲ ಸಂಗಮ ದೇವಾ?**

ಬಯಲಿನಿಂದ ಸೃಷ್ಟಿ ಮಾಡುವವನೆ ಶರಣನು; ಆ ಸೃಷ್ಟಿಯನ್ನು ಪುನಃ ಬಯಲಿನಲ್ಲಿರಿಸುವವನೆ ಲಿಂಗದರ್ಶಿ; ಉಭಯತರೂ ಏಕೋಭಾವಿ ಗಳಾದರೆ ನಿಮ್ಮಲ್ಲಿ ಅವರಿಗೆ ನಿರ್ಯಾಣವಿದೆ; ಕೂಡಲ ಸಂಗಮ ದೇವಾ !

**೮೭೩ ದೇವಲೋಕ ಮರ್ತ್ಯಲೋಕವೆಂಬ ಸೀಮೆಯುಳ್ಳನ್ನಕ್ಕ**
**ಕೇವಲ ಶರಣನಾಗಲರಿಯ,**
**ಸತ್ತು ಬೆರಸಿಹೆನೆಂದರೆ ಕಬ್ಬಿನ ತುದಿಯ ಮೆಲಿದಂತೆ!**
**ಕೂಡಲ ಸಂಗಮ ದೇವಾ.**

ಶರಣನಾಗುವ ಮಾರ್ಗ ತಿಳಿಯದೆ ನಾನು ದೇವಲೋಕಕ್ಕೆ ಹೋಗ ಬೇಕು ಮರ್ತ್ಯವನ್ನು ಬಿಡಬೇಕು ಎಂದು ಗಡಿ, ಗುರುತು ಮಾಡಿಕೊಳ್ಳುತ್ತ ಲಿರುವೆ; ಸತ್ತು ನಿನ್ನಲ್ಲಿ ಬೆರೆಯುವದೆಂದರೆ ಕಬ್ಬಿನ ಸಿಪ್ಪೆಯನ್ನು ತಿಂದಂ ತೆಯೇ; ಕೂಡಲ ಸಂಗಮ ದೇವಾ !

**೮೭೪ ಮಾತಿಲ್ಲ, ನುಡಿಯಿಲ್ಲ, ಏತಕ್ಕೆ ಮುನಿವಿರಿ?**
**ಮಾತಾಡಿದರೆ ಕೆಯ್ಯಬೆಳೆಸೆಂಬುದನರಿಯಿರೆ, ಅಯ್ಯಾ?**
**ಮಾತು ಕೆಟ್ಟಲ್ಲದೆ ತಾನಾಗಬಾರದು.**
**ಕೂಡಲ ಸಂಗಮ ದೇವಯ್ಯಾ,**
**ಮಾತಿಂದ ಬರ್ಕು ಭವಭಾರ ಘೋರ!**

ನೀನು ಮಾತನಾಡುವ ಹಾಗಿಲ್ಲ ಏನಿಲ್ಲ ಸಿಟ್ಟು ಏತಕ್ಕಾಗಿ? ಮಾತಿ ನಂತೆ ಕೃತಿಯಾಗಬೇಕೆಂಬುದನ್ನು ತಿಳಿಯಬೇಕು; ಮಾತು ಕೆಟ್ಟಮೇಲೆ

ತಿಳಿವಳಿಕೆಬಂದು ನಿಷ್ಪ್ರಯೋಜನ; ಕಾರಣ ಮಾತು ಒಳ್ಳೆಯದಾಗಿರಬೇಕು; ಮಾತಿನಿಂದಲೇ ಸಂಸಾರವು ಘೋರವಾಗುತ್ತದೆ.

**೮೭೫ ಗುರು ಶಿಷ್ಯ ಸಂಬಂಧವಾದುದಕ್ಕೆ ಇದು ಚಿಹ್ನ:**
**ಹಿಂದ ಬಿಟ್ಟು ಮುಂದೆ ಹಿಡಿಯಲೇಬೇಕು;**
**ಕೂಡಲ ಸಂಗಮ ದೇವಾ, ಕೇಳಯ್ಯಾ:**
**ಕಿಚ್ಚಿನಲ್ಲಿ ಕೋಲ ಬಯ್ಚಿಟ್ಟಂತಿರಬೇಕು!**

ಗುರು-ಶಿಷ್ಯರು ಕೂಡಿಕೊಂಡದ್ದಕ್ಕೆ ಇದು ಗುರುತು; ಹಿಂದಿನ ಭವಾಂತರಗಳನ್ನೆಲ್ಲ ಮರೆತು-ಮುಂದೆ ಮಹಾಬೆಳಕಾಗಿ ನಿಂತಿರುವ ಘನ ಮಹಿಮನನ್ನು ಕೂಡುವ ಮಾರ್ಗ ಹಿಡಿಯಬೇಕು; ಅದು ಬೆಂಕಿಯಲ್ಲಿ ಕೊಲನ್ನು ಮುಚ್ಚಿಟ್ಟ ಹಾಗೆ ಇರಬೇಕು ಕೂಡಲ ಸಂಗಮ ದೇವಾ.

## ಐಕ್ಯನ ಭಕ್ತ ಸ್ಥಳ

**೮೭೬ ಭಕ್ತನಾಯಿತ್ತೆ ಭಕ್ತಿ ದಾಸೋಹ; ಯುಕ್ತನಾಯಿತ್ತೆ ಯುಕ್ತಿದಾಸೋಹ**
**ಐಕ್ಯನಾಯಿತ್ತೆ ಮಮಕಾರ ದಾಸೋಹ!**
**ಸರ್ವದಲ್ಲೂ ದಾಸೋಹವೆ ಬೇಕು:**
**ಈ ದಾಸೋಹದ ಅನುವ ಕೂಡಲ ಸಂಗಯ್ಯ ತಾನೇ ಬಲ್ಲ.**

ಭಕ್ತನ ಭಕ್ತಿ, ಯುಕ್ತನ ಯುಕ್ತಿಗಳೆರಡೂ ದಾಸೋಹಗಳಾಗಿವೆ; ಐಕ್ಯವೆಂದರೆ ಮಮಕಾರವು (ನಾಶವಾಗಿದೆ) ದಾಸೋಹವಾಗಿದೆ; ಕಾರಣ ದಾಸೋಹದ ಪರಿಯನ್ನು ಕೂಡಲ ಸಂಗಯ್ಯನೇ ಬಲ್ಲನು.

**೮೭೭ ಜಲವ ನುಂಗಿತ್ತಯ್ಯಾ ಎನ್ನ ಕರವು;**
**ಪತ್ರೆಯ ನುಂಗಿತ್ತಯ್ಯಾ ಎನ್ನ ಶಿಖಿ;**
**ಎನ್ನಯ ಮಂತ್ರ ಭಿನ್ನವಾಯಿತ್ತು!**

**ಇಂತೀದ್ವಿವಿಧ ಒಂದಾಗದ ಮುನ್ನ**
**ಕೂಡಲ ಸಂಗಮ ದೇವರು ಪೂಜೆಗೊಂಡರು.**

ನನ್ನ ಮಂತ್ರಗಳು ಮತ್ತು ಪೂಜಾವಿಧಿಗಳು ಭಿನ್ನವಾಗುವ ಪೂರ್ವದಲ್ಲಿಯೇ ಕೂಡಲ ಸಂಗಮ ದೇವರ ಪೂಜೆಯಾಯಿತು; ನನ್ನ ಅಶುಭಕ್ರಿಗಳಲ್ಲಿ ನೀರು ಆವಿಯಾಯಿತು, ಬಿಲ್ವಪತ್ರೆಯು ಬೆಂಕಿಯಾಗಿ ಪರಿಣಮಿಸಿತು.

**೮೭೮ ಭಿತ್ತಿಯಿಲ್ಲದ ಚಿತ್ತಾರದಂತೆ, ಭಕ್ತಿಯಿಲ್ಲದ ಪ್ರಮಥನಾಗಿ ಎಂದಿಪ್ಪೆನಯ್ಯಾ?**
**ಸತ್ಯವಿಲ್ಲದ ಶರಣನಾಗಿ ಎಂದಿಪ್ಪೆನಯ್ಯಾ?**
**ಗೆರೆಯಿಲ್ಲದ ಕೋಲಿಸಲಿ ಉದರೆಯ ನಿಕ್ಕದ ಭಂಡದ ಹರದ ನಂತಾದೆನಯ್ಯಾ!**
**ಕೂಡಲ ಸಂಗಮದೇವಾ.**

ಗೋಡೆಯ ಸಹಾಯವಿಲ್ಲದೆ ಬರೆದ ಚಿತ್ರದಂತೆ ನನ್ನ ಭಕ್ತಿಯಾಗಿದೆ; ಸತ್ಯವನ್ನರಿಯದ ಶರಣನು ನಾನು; ಒಣಗಿದ ಕೋಲಿನಲ್ಲಿ ದುಡ್ಡು ಇಟ್ಟ ಭಂಡ ವ್ಯಾಪಾರಿಯ ಹಾಗೆ ನನ್ನಗತಿ ಯಾಗಿದೆ ಕೂಡಲ ಸಂಗಮ ದೇವಾ.

**೮೭೯ ಆಯತ ಒಂದೆಡೆಯಲ್ಲಿ: ತೆರನರಿಯರಾಗಿ**
**ನೋಡಬಾರದು, ನೋಡಿ ನುಡಿಸಬಾರದು.**
**ಅದು ತಿದ್ದಬಾರದ ಡೊಂಕು ಕೂಡಲ ಸಂಗನ ಭಕ್ತಿ!**

ಬಂದು ವಾಸಮಾಡುವುದು ಒಂದೇ ಸ್ಥಳದಲ್ಲಿ;ಆದರೆ ಅಂತರಂಗವನ್ನು ತಿಳಿಯರು ಈ ಜನರು; ನೋಡಬಾರದು;ನೋಡಿದ ಬಳಿಕ ನುಡಿಸಬಾರದು ಕೂಡಲ ಸಂಗನ ಭಕ್ತಿ ತಿದ್ದಲು ಬಾರದಡೊಂಕು.

## ಐಕ್ಯನ ಮಾಹೇಶ್ವರ ಸ್ಥಳ

**೮೮೦ ದಶದಿಕ್ಕು ಧರೆ ಗಗನವೆಂಬುದ ನಾವರಿಯೆನಯ್ಯಾ;**
**'ಲಿಂಗ ಮಧ್ಯೇ ಜಗತ್ ಸರ್ವಂ' ಎಂಬುದ ನಾನರಿಯೆನಯ್ಯಾ;**

**ಲಿಂಗ ಸೋಂಕಿನ ಸುಖದೊಳಗೆ, ಕೂಡಲ ಸಂಗಮ ದೇವಯ್ಯಾ;**
**ಅಂಬುಧಿಯೊಳಗೆ ಬಿದ್ದ ಆಲಿ ಕಲ್ಲಂತೆ**
**ಭಿನ್ನ ಭಾವವರಿಯದೆ 'ಶಿವ ಶಿವಾ' ಎನ್ನುತಿರ್ದೆನು ನಾನು.**

ದಶದಿಕ್ಕುಗಳನ್ನು, ಜಗತ್ತು, ಆಕಾಶವೆಂಬುದನ್ನು ನಾನು ತಿಳಿಯಲಾರೆ; ಲಿಂಗದಲ್ಲಿಯೇ ವಿಶ್ವವೆಲ್ಲ ನೆಲೆಸಿದೆ ಎಂಬುದನ್ನೂ ನಾನು ತಿಳಿಯೆ; ಲಿಂಗ ಸ್ಪರ್ಶಸುಖವು ಸಮುದ್ರದಲ್ಲಿ ಬಿದ್ದ ಆಣೆಕಲ್ಲಿನ ಹಾಗೆ ಕೂಡಲ ಸಂಗಮ ದೇವಾ; ನಾನು ಬೇರೆ ಭಾವವನ್ನು ಕಾಣದೆ 'ಶಿವಶಿವಾ' ಎನ್ನುತಿದ್ದೇನೆ.

## ಐಕ್ಯನ ಪ್ರಸಾದಿ ಸ್ಥಳ

**೮೮೧ ಮಿಥ್ಯೆಯ ನಳಿದುಳಿದು ಸತ್ಯ ಪ್ರಸಾದಿ;**
**ಅಂಜನ ವಿಲ್ಲದ ನಿರಂಜನ ಪ್ರಸಾದಿ;**
**ದುಃಖವನಳಿದ ಘನಾನಂದ ಪ್ರಸಾದಿ;**
**ಅನಿತ್ಯವಿಲ್ಲದ ನಿತ್ಯ ಪ್ರಸಾದಿ;**
**ಖಂಡಿತವಿಲ್ಲದ ಅಖಂಡಿತ ಪ್ರಸಾದಿ;**
**ಕೂಡಲ ಸಂಗಮ ದೇವರಲ್ಲಿ ತಾನೇ ಪ್ರಸಾದಿ.**

ಸುಳ್ಳನ್ನು ಬಿಟ್ಟು ಸತ್ಯನೂ, ನಿರಂಜನನು, ಘನಾನಂದನೂ, ನಿತ್ಯನೂ ಸ್ವಪೂರ್ಣನೂ ಆಗಿ ಕೂಡಲ ಸಂಗಮ ದೇವರಲ್ಲಿ ತಾನೇ ತಾನಾಗಿ ಐಕ್ಯಹೊಂದಿದವನೇ ಪ್ರಸಾದಿ

**೮೮೨ ಬೆಳಗಣೊಳಗಣ ಬೆಳಗು ಮಹಾ ಬೆಳಗೆಂಬ**
**ಪ್ರಸಾದದಲ್ಲೊದಗಿದ ಪ್ರಸಾದಿಯ ಪರಿಣಾಮದ**
**ಪರಮಾನಂದವನೇನೆಂದುಪಮಿಸುವೆನಯ್ಯಾ?**
**ಪರಮಾಶ್ರಯವೇ ತಾನಾಗಿ ಕೂಡಲ ಸಂಗಮ ದೇವಯ್ಯಾ**
**ಚೆನ್ನ ಬಸವಣ್ಣನೆಂಬ ಮಹಾ ಪ್ರಸಾದಿ**
**ಎನ್ನ ವಾಙ್ಮನಕ್ಕ ಗೋಚರನಾಗಿ, ನಾನೇನೆಂಬೆನಯ್ಯಾ?**

ಉಷಃಕಾಲವು ಸಚ್ಚಿದಾನಂದದ ಮಹಾ ಬೆಳಗಾಗಿರುವಂತೆ,ಪ್ರಸಾದ ರೂಪನಾಗಿ ಬಂದ ಭಕ್ತನ ಪರಮಾನಂದವನ್ನು ಏನೆಂದು ಹೇಳಲಿ; ಅವನಿಗೆ ಆಶ್ರಯದಾತನು ಕೂಡಲ ಸಂಗಮನೇ ಆಗಿರುವಕಾರಣ ಮಹಾಪ್ರಸಾದಿ ಚೆನ್ನಬಸವಣ್ಣನು ನನ್ನ ಬುದ್ಧಿಮನಗಳಿಗೆ ಕಾಣದಾಗಿರುವನು.

## ಐಕ್ಯನ ಪ್ರಾಣಲಿಂಗ ಸ್ಥಳ

**೮೮೩ ಆಯತವೆಂಬುದು ಭಂಗ; ಸ್ವಾಯತವೆಂಬುದು ಭವ !**
**ಆಯತವನರಿಯೆ ಸ್ವಾಯತವನರಿಯೆ :**
**ಭಾವದಲ್ಲಿ ವ್ರತಗೆಟ್ಟೆನಾಗಿ;**
**ಆ ಭಾವದಲ್ಲಿ ಜೀವಸಂಹಾರಿ**
**ಕೂಡಲ ಸಂಗಮದೇವ ಸರ್ವನಿವಾಸಿಯಾಗಿ.**

ಆಯತ, ಸ್ವಾಯತಗಳು ಎನಗೆ ಗೋತ್ತಿಲ್ಲ; ಆದರೆ ಭಾವದಲ್ಲಿ ಭಂಗವಾಗಿ ನನ್ನ ವ್ರತ ಕೆಟ್ಟಕಾರಣ ನನ್ನ ಜೀವನವು ಹಾಳಾಯಿತು; ಯಾವದೇವರನ್ನು ಭಜಿಸುವ ವ್ರತ ಮಾಡಿದ್ದೆನೋ ಆ ದೇವ, ಕೂಡಲ ಸಂಗಮನು ಎಲ್ಲರಲ್ಲಿಯೂ ಇದ್ದಾನೆ; ಅವನಿಗೆ ಮೋಸ ಮಾಡುವುದು ಅಸಾಧ್ಯ.

**೮೮೪ ಕುರುಹಿಲ್ಲ, ಕುರುಹಿಲ್ಲ ಲಿಂಗವೆಂದೆಂಬರೆ,**
**ತೆರಹಿಲ್ಲ, ತೆರಹಿಲ್ಲ ಜಂಗಮವೆಂದೆಂಬರೆ !**
**ಇದೇ ನೋಡಾ ಶಿವಾಚಾರ, ಇದೇ ನೋಡಾ ಶಿವದೊಡಕು!**
**'ಆತ್ಮಾನಾಂ ಪ್ರಕೃತಿಃ ಸ್ವಭಾವ' ಎಂಬುದಾಗಿ**
**ಮುಟ್ಟಲಾರದ ಠಾವ ಮರೆಗೊಂಡಿರ್ಪ**
**ಮಮ ಕರ್ತ ಕೂಡಲ ಸಂಗಮದೇವ.**

ಲಿಂಗವೆಂದು ಗುರುತಿಸುವ ಯಾವ ಚಿಹ್ನಗಳೂ ಇಲ್ಲ; ಆದರೂ ಲಿಂಗವೆಂದು ಹೇಳುತ್ತಾರೆ; ಜಂಗಮನಿಲ್ಲದ ನೆಲ್ಲವಿಲ್ಲ; ಶಿವಾಚಾರವೂ ಶಿವತೊಡಕೂ ಇದೆ ಯಾಗಿದೆ;ಆತ್ಮನೊಡಗೂಡಿದ ಪ್ರಕೃತಿಯಹಾಗೆ ಸ್ವಭಾವಗಳು ಹುಟ್ಟಿ

ತ್ತವೆ; ಕಾರಣ ನನ್ನೊಡೆಯನಾದ ಕೂಡಲಸಂಗಮದೇವರು ಮರೆಯಾಗಿರುವನು.

## ಐಕ್ಯನ ಶರಣ ಸ್ಥಳ

೮೮೫ **ಭೂತೋಯ ಪಾವಕ ಸಮೀರಣ ಅಂಬರಾದಿಗಳೆಲ್ಲ**
**ಆದಿಯಾಧಾರದ ಪರಮಾತ್ಮ ಲಿಂಗದಲ್ಲಿ !**
**ಆದಿ ಮಧ್ಯಾವಸಾನವನರಿಯದ ಅಗಮ್ಯ !**
**ವೇದಾದಿ ಸಕಲ ಶಾಸ್ತ್ರ ಪುರಾಣರು**
**ಅದನಂತಿಂತೆಂದುಪಮಿಸಲಿಲ್ಲಾ,**
**ಮಹಂತ ಕೂಡಲ ಸಂಗಮದೇವಾ.**

ಭೂಮಿ, ನೀರು, ಅಗ್ನಿ, ಗಾಳಿ, ಆಕಾಶಗಳೆಲ್ಲ ಮತ್ತು ಆದಿಮಧ್ಯಂತ್ಯಗಳು ಮತ್ತು ವೇದ ಶಾಸ್ತ್ರ ಪುರಾಣಗಳು ಪರಮಾತ್ಮನನ್ನು ಅಗಮ್ಯನನ್ನು ಏನೆಂದು ಕೊಂಡಾಡಲು ಸಾಧ್ಯವಿಲ್ಲ; ಎಲ್ಲಕ್ಕೂ ಹಿರಿಯನು ಕೂಡಲ ಸಂಗಮ ದೇವನು.

೮೮೬ **ಮಹಾಲಿಂಗ ಸ್ಥಾನಂಗಳು ಮಹಾಲಿಂಗದ ಹೆಸರಲ್ಲದೆ,**
**ಲಿಂಗ ಬೇರೆ ರೂಪ ನಿರೂಪನಲ್ಲ.**
**ಲಿಂಗ ಬೇರೆ ಕಾಯ ಸಂಬಂಧಿಯಲ್ಲ;**
**ಲಿಂಗ ಬೇರೆ ಮಹಾ ಘನದಿಂದತ್ತತ್ತಲೆ !**
**ಕೂಡಲ ಸಂಗಮದೇವರ ನಿಲವು ಆರಿಗೂ ಅಳವಡದು !**

ಮಹಾಲಿಂಗದ ಸಹಸ್ರನಾಮಾವಳಿಯು ಮಹಾಲಿಂಗದ ಹೆಸರುಗಳು ಮಾತ್ರ; ಲಿಂಗ ಬೇರೆ ರೂಪ ಬೇರೆ ಎಂದೇನೂ ಅಲ್ಲ. ಲಿಂಗವು ಮಹಾ ಜ್ಞಾನಕ್ಕಿಂತಲೂ ದೂರವಿದೆ; ಆದ ಕಾರಣ ಕೂಡಲ ಸಂಗಮ ದೇವರ ಮಹಿಮೆಯು ಯಾರಿಗೂ ತಿಳಿಯದು.

**೮೮೭ ಹುತ್ತಕ್ಕೆ ಏಸು ಬಾಯಾದರೇನು? ಸರ್ಪನಿಪ್ಪುದು ಒಂದೇ ಸ್ಥಾನ!**
**ಭಾವ ಭಾವಿಸಿ ಭ್ರಮೆಯಳಿದು ನೋಡಾ:**
**ಆ ಭಾವ ಭಾವಿಸಲು ನಿರ್ಭಾವ, ಕೂಡಲಸಂಗಮದೇವಾ.**

ಹುತ್ತಕ್ಕೆ ಎಷ್ಟೇ ಮುಖಗಳಿದ್ದರೂ ಹಾವು ಇರುವದು ಆ ಹುತ್ತಿನಲ್ಲಿಯೇ ಅಲ್ಲವೆ! ಹಾಗೆ ದೇವನನ್ನು ತಿಳಿಯಲು ಅನೇಕ ಭಾವ ಕಲ್ಪನೆಗಳಿದ್ದರೂ ದೇವರೊಬ್ಬನೆ; ಅದನ್ನು ತಿಳಿದಾಗ ಎಲ್ಲ ಭಾವಗಳು ಅಳಿದು ಒಂದೇ ಭಾವ ಮೂಡುತ್ತದೆ ಕೂಡಲ ಸಂಗಮದೇವಾ!

**೮೮೮ ಸುತ್ರಾಜಿತನು, ನೃಜಿತನು, ಉರ್ವರಾಜಿತನು;**
**ಅಶ್ವಜಿತನು, ಗೋಜಿತನು, ಸ್ವರ್ಜಿತನು;**
**ಸುಸಂವೇದ್ಯನು ವೇದನಾದಾತೀತನು;**
**ತುರೀಯ ಪರಮಾನಂದನು, ನಿರವಯ;**
**ಸೂರ್ಯಕೋಟಿ ಪ್ರಭೆಯ ಸಹಸ್ರಕಿರಣದ**
**ಅಗ್ರಪಟಲದ ಬೆಳಗು ಕೂಡಲ ಸಂಗಯ್ಯನು.**

ಪುಷ್ಪರಾಜ, ನರರಾಜ, ಸರ್ಪರಾಜ, ಅಶ್ವರಾಜ ಮೊದಲಾದವರು ಪರಮಾನಂದದ ನಿರವಯನೂ ಸಹಸ್ರ ಕಿರಣಗಳ ಸೂರ್ಯನೂ ಉಷಃಕಾಲದ ಶಾಂತಿರಸನೂ ಕೂಡಲ ಸಂಗಯ್ಯನೇ ಆಗಿದ್ದಾನೆ; ಬೇರಾರೂ ಅಲ್ಲ.

**೮೮೯ ವೇದಾತೀತ, ಷಡುವರ್ಣರಹಿತ, ಅಷ್ಟತ್ರಿಂಶತ್ ಕಳಾತೀತ,**
**ವ್ಯೋಮಾತೀತ, ಕೂಡಲ ಸಂಗಮದೇವ.**
**ವಿಶ್ವಜಿತನು, ಧನುಜಿತನು, ಸರ್ವಜಿತನು;**

ವಿಶ್ವಾಕಾರನೂ, ವಿಶ್ವದಂತನೂ, ವಿಶ್ವತೋಮುಖನೂ ಆದ ಕೂಡಲ ಸಂಗಮ ದೇವರು ಸರ್ವಜಿತನು.

**೪೯೦ ಅಂತರಂಗ ಬಹಿರಂಗ ಆತ್ಮಸಂಗ ಒಂದೇ, ಅಯ್ಯಾ !**
**ನಾದ ಬಿಂದು ಕಳಾತೀತ, ಆದಿಯಾಧಾರ ನೀನೆ, ಅಯ್ಯಾ!**
**ಆರೂಢದ ಕೂಟದ ಸುಖವ ಕೂಡಲಸಂಗಯ್ಯ ತಾನೇ ಬಲ್ಲ!**

ಒಳ ಹೊರಗು ನಾದ-ಬಿಂದು ಆದಿಗೆ ಆಧಾರನು ಆದವನು ನೀನೇ ಪ್ರಭು; ಆರೂಢತ್ವದ ಸುಖವನ್ನು ಕೂಡಲ ಸಂಗಮ ದೇವನು ಬಲ್ಲನು!

**೪೯೧ ಸ್ವಯಂಲಿಂಗದನುಭವ ತನಗೆ ದೊರಕೊಂಡ ಬಳಿಕ**
**ದೇವಲೋಕವೆಂಬುದೇನೋ ಮರ್ತ್ಯಲೋಕವೆಂಬುದೇನೊ?**
**ಆವುದರಲ್ಲಿಯೂ ಭೇದವೇನಯ್ಯಾ ?**
**ಕೂಡಲ ಸಂಗಮದೇವಾ, ಬಳಿಕ ಆಲಸ್ಯವುಂಟೆ?**

ಲಿಂಗ ಪ್ರತ್ಯಕ್ಷವಾದ ಬಳಿಕ ದೇವ ಲೋಕ ಮೃತ್ಯು ಲೋಕಗಳೆಂಬವು ಏನೂ ಅಲ್ಲ; ಅವೆರಡೂ ಒಂದೆ; ಭಕ್ತಿಯ ಮಾಡುವದಕ್ಕೆ ಆಲಸಿಕೆ ಏಕೆ? ಕೂಡಲ ಸಂಗಮದೇವಾ.

**೪೯೨ ಸಮಸ್ತ ಕತ್ತಲೆಯ ಮುಸಕ ಕಳೆದಿಪ್ಪ ಇರುವ ನೋಡಾ!**
**ಬೆಳಗಿಂಗೆ ಬೆಳಗು ಸಿಂಹಾಸನವಾಗಿ,**
**ಬೆಳಗು ಬೆಳಗ ಕೂಡಿದ ಕೂಟವ**
**ಕೂಡಲ ಸಂಗಯ್ಯ ತಾನೇ ಬಲ್ಲ !**

ಮನದ ಮತ್ತು ಜಗದ ಎಲ್ಲ ಕತ್ತಲೆಯನ್ನು ದೂರಮಾಡಿ ಬೆಳಗು ತಂದು ಅಲ್ಲಿ ಸಿಂಹಾಸ ನಾರೂಢನಾಗಿದ್ದು-ಬೆಳಗು ಮಹಾಬೆಳಕಿನಲ್ಲಿ ಸಲೆ ಬೆರೆದ ರೀತಿಯನ್ನು ಕೂಡಲ ಸಂಗಮದೇವರು ತಿಳಿದಿದ್ದಾನೆ.

## ಭಕ್ತನೈಕ್ಯ ಸ್ಥಳ

**೪೯೩ ಒಲೆಯುಡಿಯುಸುರುಹಿದಡೆ**
**ಹೊಗೆ ಗೋಳಕನಾಥನ ಕೊರಳ ಸುತ್ತಿತ್ತು;**
**ಮಹೀತಳನ ಜೆಡೆ ಸೀಯಿತ್ತು, ಮರೀಚಕನ ಸಿರ ಬೆಂದಿತ್ತು**

**ರುದ್ರನ ಹಾವುಗೆ ಉರಿಯಿತ್ತು, ದೇವಗಣಂಗಳು ನಿವಾಟ ವಾದರು;**
**ಮಡದಿಯೈಯ್ವರು ಮುಡಿಯ ಹಿಡಿದುಕೊಂಡು ಹೋದರು.**
**ಕೂಡಲ ಸಂಗಮದೇವ ಭಸ್ಮಧಾರಿಯಾದ !**

ಒಲೆಯ ಉರಿಯನ್ನು ಹೆಚ್ಚಿಸಿದೊಡನೆ ಹೊಗೆ ಗೋಳಕನಾಥನ ಕೊರಳಿಗೆ ಸುತ್ತುಹಾಕಿತು; ನಾಗೇಶ್ವರನ ಮೈಮೆಲಿನ ಗೊದಲಗಳನ್ನು ನಾಶಮಾಡಿತು; ರುದ್ರದೇವನ ಮೆಟ್ಟುಗಳು ಸುಟ್ಟುಹೋದವು; ಹುಲ್ಲೆಯ ತಲೆ ಕಮರಿತು; ದೇವತೆಗಳು ನಿರ್ನಾಮರಾದರು; ಕಾರಣ ಐವರು ಐದೆಯರು ತಲೆ ಹಿಡಿದುಕೊಂಡು ಹೋದರು; ಕೂಡಲ ಸಂಗಮ ದೇವರು ಮಾತ್ರ ಭಸ್ಮ ಧಾರಿಯಾದನು.

**೮೯೪ ಆ ಭಸ್ಮ ತಾಗಿ ಬ್ರಹ್ಮ ತನ್ನ ಕಪಾಲವಿಡಿದನು;**
**ಗಣನಾಥನ ಐವತ್ತೆರಡು ಸರ ಹರಿದು ಬಿದ್ದುವು !**
**ಆ ಭಸ್ಮ ತಾಗಿ ಅಂಡಜ ಮುಗ್ಧೆಯ ಮೂರು ಮೊಲೆ ಹರಿದು ಬಿದ್ದುವು;**
**ನಾದ ಪ್ರಿಯ ನಂದಿಯನೇರಿಕೊಂಡು**
**ಅತೀತನ ಮೇಲೆ ಆನಂದ ಸಿಂಹಾಸನವಿಕ್ಕಿ ಕುಳ್ಳಿತ್ತ;**
**ಕೂಡಲ ಸಂಗಮ ದೇವತ್ವ ಕೆಟ್ಟಿತ್ತು!**

ಆ ಭಸ್ಮದ ಮಹಿಮೆ ಎಷ್ಟೆಂದು ಹೇಳಬೇಕು. ಬ್ರಹ್ಮನು ತನ್ನ ತಲೆ ಮರುಳಿ ಪಡೆದನು; ಗಣೇಶ್ವರನ ದುರಿತಗಳು ನಾಶವಾದವು; ಆ ಭಸ್ಮದ ಧೂಳು ತಾಗಿದ ಕಾರಣ ಅಂಡಜೋದ್ಭವಳಾದ ಕನ್ಯೆಯು ಪಾವನವಾದಳು; ನಾದಪ್ರಿಯನಾದ ಶಂಕರನು ನಂದಿಯನ್ನೇರಿ ಆನಂದ ಸಿಂಹಾಸನದ ಮೇಲೆ ಕುಳಿತನು; ಹೀಗಾದಕಾರಣ ಕೂಡಲ ಸಂಗಮ ದೇವರ ದೇವತ್ವಕ್ಕೆ ಬಾಧೆಬಂದಿತು.

**೮೯೫ ನಾನೊಮ್ಮೆ ಬೇಂಟೆಯ ಹೋದರೆ ಭಸಿತಕ್ಕಾಹುತಿಯನಿಕ್ಕಿಹೆನೆಂದು**
**ಸಾಸಿರದೇಳುನೂರು ವರುಷ ಒಬ್ಬ ರಾಜನ ಕೊಂದೆನು.**

**ಅವನ ಹೆಂಡತಿ ಐವತ್ತೆರಡು ಕಣ್ಣುಳ್ಳವಳು.**
**ಅವಳು ತನ್ನ ಹೂಮುಡಿಯ ಬಿಟ್ಟು ಅತ್ತಾಳು.**
**ಅವಳ ಬಾಯಲ್ಲಿ ಅಜ ಬಿದ್ದ, ಕಂಗಳಲಿ ಧೂಮಕೇತು ಬಿದ್ದ:**
**ಕೂಡಲ ಸಂಗಮ ದೇವರ ದೇವತ್ವ ಕೆಟ್ಟಿತ್ತು !**

ಸಾವಿರದಾ ಏಳನೂರು ವರ್ಷಗಳ ತರುವಾಯ ನಾನೂ ಒಂದು ಸಲ ಬೇಟೆಗೆ ಹೋದೆನು; ಆಗ ಭಸ್ಮದ ಆಹುತಿಯೆಂದು ಒಬ್ಬ ರಾಜನನ್ನು ಕೊಂದೆನು; ಐವತ್ತೆರಡು ಕಣ್ಣುಗಳುಳ್ಳ ಅವನ ಮಡದಿ ತನಗೆ ವೈಧವ್ಯ ಪ್ರಾಪ್ತಿಯಾಯಿತೆಂದು ರೋದಿಸಿದಳು; ಅವಳ ಶಾಪಕ್ಕೆ ಸಿಕ್ಕವನು ಅಜನು; ದೃಷ್ಟಿಗೆ ಬಿದ್ದವನು ಧೂಮಕೇತು; ಕಾರಣ ಅವರೊಡನೆ ಕೂಡಲ ಸಂಗಮ ದೇವರ ದೇವತ್ವವೂ ಹಾಳಾಯಿತು.

**೪೯೬ ಎಲ್ಲರ ಗಂಡರ ಹರಿಯಂತಲ್ಲ ನೋಡವ್ವಾ:**
**ನಮ್ಮ ನಲ್ಲ ಸುಳಿಯಲಿಲ್ಲ; ಸುಳಿದು ಸಿಂಗಾರವ ಮಾಡಲಿಲ್ಲ!**
**ಕೂಡಲ ಸಂಗಮ ದೇವನು ತನ್ನೊಳಗೆ ಬೈಚಿಟ್ಟನಾಗಿ.**

ನಮ್ಮ ನಲ್ಲನಾದ ಕೂಡಲ ಸಂಗಮ ದೇವರು ನನ್ನ ಅಂತರಂಗದ ಅರಳಲ್ಲಿ ಮಧುವಿನಂತೆ ಅಡಗಿರುವ ಕಾರಣ ಅವನು ಎಲ್ಲರ ಗಂಡರ ಹಾಗೆ ಹೊರಗೆ ಬಂದು ಡೌಲು ಮಾಡುವುದಿಲ್ಲ.

**೪೯೭ ಜಂಗಮವೆ ಲಿಂಗವೆನಗೆ, ಜಂಗಮವೆ ಪ್ರಾಣವೆನಗೆ.**
**ಕೂಡಲ ಸಂಗಮ ದೇವಯ್ಯಾ, ಎನಗೆಯೂ ನಿನಗೆಯೂ**
**ಜಂಗಮ ಪ್ರಸಾದವೇ ಪ್ರಾಣ.**

ಜಂಗಮನು ನನ್ನ ಪ್ರಾಣ, ನನ್ನ ಆರಾಧ್ಯ ಲಿಂಗವಾಗಿದ್ದಾನೆ; ಕೂಡಲ ಸಂಗಮ ದೇವಾ ನಮ್ಮಿರ್ವರಿಗೂ ಜಂಗಮ ಪ್ರಸಾದವು ಶ್ರೇಷ್ಠ ವಾಗಿದೆ.

## ರುದ್ರಾಕ್ಷಿಯ ಸ್ಥಳ.

**೪೯೮ ಅಯ್ಯಾ ಎನಗೆ ರುದ್ರಾಕ್ಷಿಯೇ ಸರ್ವ ಪಾವನ;**
**ಅಯ್ಯಾ, ಎನಗೆ ರುದ್ರಾಕ್ಷಿಯೇ ಸರ್ವಸಿದ್ಧ.**

**ಅಯ್ಯಾ, ನಿಮ್ಮ ಪಂಚ ವಕ್ತ್ರಗಳೆ**
**ಪಂಚ ಮುಖದ ರುದ್ರಾಕ್ಷಿಗಳಾದುವಾಗಿ,**
**ಅಯ್ಯಾ, ಕೂಡಲ ಸಂಗಮದೇವಾ,**
**ಎನ್ನ ಮುಕ್ತಿ ಪಥಕ್ಕೆ ಈ ರುದ್ರಾಕ್ಷಿ ಸಾಧನವಯ್ಯಾ.**

ನನ್ನ ಸರ್ವಸಿದ್ಧಿಗೆ ರುದ್ರಾಕ್ಷಿಯೆ ಕಾರಣ; ರುದ್ರಾಕ್ಷಿ ನನಗೆ ಪಾವನ ಗಂಗೆ; ಈ ರುದ್ರಾಕ್ಷಿಗಳು ನಿಮ್ಮ ಐದು ವಚನಗಳಿಂದಾಗಿವೆ; ಆದ್ದರಿಂದ ನನ್ನ ಮುಕ್ತಿ ಸಾಧನೆಗೆ ರುದ್ರಾಕ್ಷಿಯು ಪರುಷವಾಗಿದೆ; ಕೂಡಲ ಸಂಗಮ ದೇವಾ.

೫೯೯ **ಶ್ರೀ ರುದ್ರಾಕ್ಷಿಯ ಧರಿಸಿದಾತನೆ ಲಿಂಗವೆಂಬೆ;**
**ಶ್ರೀ ರುದ್ರಾಕ್ಷಿಯ ಧರಿಸದ ಅಧಮರನೆ ಭವಿಯೆಂಬೆ !**
**ಕೂಡಲ ಸಂಗಮ ದೇವಯ್ಯಾ,**
**ಶ್ರೀ ರುದ್ರಾಕ್ಷಿಯ ಧರಿಸುವ ಭಕ್ತರ ನೀನೆಂಬೆ !**

ರುದ್ರಾಕ್ಷಿ ಮಾಲೆಯನ್ನು ಉರದಲ್ಲಿ ಧರಿಸಿದವನೇ ಲಿಂಗನು; ಅವನೇ ಕೂಡಲ ಸಂಗಮ ದೇವರು ನನಗೆ; ಸಕಲ ಸಂಪದ ವಾಗಿರುವ ರುದ್ರಾಕ್ಷಿ ಯನ್ನು ಧರಿಸದೇ ಇದ್ದವರೆ ನಾಸ್ತಿಕರು; ಲಿಂಗವಿರೋಧಿಗಳು.

೬೦೦ **ಹಸ್ತಕಡಗ ಕೈಗಧಿಕ ನೋಡಾ:**
**ಕೊಡಲಹುದು ಕೊಳ್ಳಲಹುದು.**
**ಬಾಹು ಬಳೆ ತೋಳಿಂದಧಿಕ, ನೋಡಾ:**
**ಪರವಧುವನಪ್ಪಲಾಗದು.**
**ಕರ್ಣಕ್ಕೆ ರುದ್ರಾಕ್ಷಿ ಅಧಿಕ, ನೋಡಾ:**
**ಶಿವನಿಂದೆಯ ಕೇಳಲಾಗದು.**
**ಕಂಠ ಮಾಲೆ ಕೊರಳಿಂದಧಿಕ, ನೋಡಾ:**
**ಅನ್ಯ ದೈವಕ್ಕೆ ತಲೆ ಬಾಗಲಾಗದು.**
**ಆವಾಗಳೂ ನಿಮ್ಮುವನೇ ನೆನೆದು, ನಿಮ್ಮನೇ ಪೂಜಿಸಿ,**
**ಕೂಡಲ ಸಂಗಯ್ಯನ ಪದ ಸನ್ನಿಹಿತನಾಗಿಪ್ಪಡೆ**
**ಅಂಗ ಶಿಖಾಮಣಿಯಯ್ಯಾ !**

ಮುಂಗೈಗಳಲ್ಲಿ ತೊಡುವ ಕಡಗವು ತೋಳಬಂದಿಗಳಿಗಿಂತ ಹೆಚ್ಚಿನ ವಲ್ಲ; ತೋಳುಗಳಲ್ಲಿ ಶೋಭಿಸುವ ರುದ್ರಾಕ್ಷಿಯ ತೋಳ ಬಳೆಗಳು ಅತಿ ಬಲವಾದವುಗಳು ಪರಸ್ತ್ರೀಯರನ್ನು ಮುಟ್ಟಲಾಗದು; ಕಿವಿಯಲ್ಲಿ,ಕೊರಳಲ್ಲಿ ರುದ್ರಾಕ್ಷಿಯನ್ನು ಧರಿಸಿ ಪಾವನಂಗರಾಗಬೇಕು; ಯಾವಾಗಲೂ ಕೂಡಲ ಸಂಗಮದೇವರನ್ನೇ ನೆನೆದು-ಪೂಜಿಸಿ ಪರಮ ಪದ ಪಾದಾರವಿಂದಗಳಲ್ಲಿದ್ದರೆ ಶರೀರವು ಅಗ್ನಿಯಂತೆ ತೇಜಃಪುಂಜವಾಗಿ ಬೆಳಗುತ್ತದೆ.

## ವಚನ ಶಾಸ್ತ್ರ ಸಾರ

**೯೦೧ ಅಂಗವೇ ಲಿಂಗ ಲಿಂಗವೇ ಅಂಗವೆಂದರಿತ ಬಳಿಕ**
**ಅಲ್ಲಿಯೇ ಅದೇ ಪ್ರಾಣಲಿಂಗ.**
**ಲಿಂಗವೇ ಪ್ರಾಣವೆಂದರಿತ ಬಳಿಕ**
**ಅಲ್ಲಿಯೂ ಅದೇ ಉಂಟೆಂದು ತೋರಲಿಲ್ಲ: ಇಲ್ಲವೆಂದರಸಲಿಲ್ಲ,**
**ಕೂಡಲ ಸಂಗಮದೇವಾ ಲಿಂಗ ನಿರಂತರವಲ್ಲಿಯೇ.**

ದೆಹವು ಆತ್ಮನ ಗೂಡು; ಆತ್ಮನು ದೇಹ ಧಾರಣ ಮಾಡಿದ್ದಾನೆ; ಈ ಅವಿಚ್ಛಿನ್ನ ಭಾವವೇ ಪ್ರಾಣಲಿಂಗ-ಅಂದರೆ ಜೀವಾತ್ಮ; ಆದರೆ ಆತ್ಮನೇ ಜೀವಾತ್ಮನೆಂದು ಅರಿತ ಬಳಿಕ ಅಲ್ಲಿ ದೇಹವು ಆತ್ಮನ ವಾಸಸ್ಥಳವೆಂದು ಕಂಡು ಬರಲಿಲ್ಲ; ದೇಹ ವಿಲ್ಲವೆಂದು ಹುಡುಕುವ ಗೊಡವೆಗೂ ನಾನು ಹೋಗಲಿಲ್ಲ. ಕೂಡಲ ಸಂಗಮದೇವಾ, ಆತ್ಮ-ಜೀವಾತ್ಮರು-ಪರಮಾತ್ಮನಲ್ಲಿಯೇ ಸರ್ವಕಾಲ ಹೊಂದಿ ಕೊಂಡಿರುತ್ತಾರೆ.

**೯೦೨ ಅಧರ ತಾಗುವ ರುಚಿಯು, ಉದರ ತಾಗುವ ಸುಖವ**
**ಲಿಂಗಾರ್ಪಿತ ವಿಲ್ಲದೆ ಕೊಂಡರೆ ಕಿಲ್ಬಿಷ, ನೋಡಾ!**
**ನೇತ್ರ, ಶ್ರೋತ್ರ, ಜಿಹ್ವೆ, ಘ್ರಾಣ; ತ್ವಕ್ಕು ಮೊದಲಾದ**
**ಸರ್ವೇಂದ್ರಿಯಗಳಲ್ಲಿ ಮುಟ್ಟಿದ ಸಕಲ ಪದಾರ್ಥಂಗಳನ್ನು**
**ಲಿಂಗಕ್ಕೆ ಕೊಟ್ಟು ಕೊಂಡರೆ,**
**ಅದು ಮಹಾಪ್ರಸಾದವಯ್ಯಾ, ಕೂಡಲ ಸಂಗಮದೇವಾ;**

ಕೆಳದುಟಿ ಸವಿಯುವ ರುಚಿಯನ್ನು, ಹೊಟ್ಟೆಗೆ ದೊರೆಯುವ ಸುಖವನ್ನು, ಸಕಲಾತ್ಮನಾದ ಲಿಂಗಕ್ಕೆ ಆರೋಗಣೆ ಮಾಡದ ವಿನಃ ಉಂಡರೆ ಅದು ನರವಿಷವಾಗಿ ಪರಿಣಮಿಸುತ್ತದೆ. ಪಂಚೇಂದ್ರಿಯಗಳಿಗೆ ಲಭಿಸುವ ಸುಖದೂಟ-ಉಡಿಗೆಗಳನ್ನು ಮೊದಲು ಪರಮಾತ್ಮನ ಪದತಲಕ್ಕೆ ಅರ್ಪಿಸಿ ನಾವು ನಂತರ ಸ್ವೀಕರಿಸಿದರೆ ಅದು ಮಹಾ ಪ್ರಸಾದವಾಗುವದಲ್ಲದೆ-ಸದಾ ಸುಖಿಯನ್ನಾಗಿ ಮಾಡುತ್ತದೆ ಕೂಡಲ ಸಂಗಮದೇವಾ.

**೯೦೩ ಅಂತರಂಗದಲ್ಲಿ ಅರಿವಾದೊಡೇನಯ್ಯಾ**
**ಬಹಿರಂಗದಲ್ಲಿ ಕ್ರಿಯೆಯಿಲ್ಲದನ್ನಕ್ಕರ ?**
**ದೇಹವಿಲ್ಲದಿರ್ದಡೆ ಪ್ರಾಣಕ್ಕಾಶ್ರಯವುಂಟೇ?**
**ಕನ್ನಡಿಯಿಲ್ಲದಿರ್ದಡೆ ತನ್ನ ಮುಖವ ಕಾಣಬಹುದೆ ?**
**ಸಾಕಾರ ನಿರಾಕಾರ ಏಕೋದೇವ**
**ನಮ್ಮ ಕೂಡಲ ಸಂಗಮದೇವ.**

ವ್ಯವಹಾರಿಕ ಜೀವನದ ಸಮಾಜ ಪ್ರಜ್ಞೆಯಿಲ್ಲದೆ ಅಂತರಂಗದಲ್ಲಿ ಆತ್ಮ ಪ್ರಜ್ಞೆಯುಂಟಾದರೆ ಅದು ವ್ಯರ್ಥ; ಪ್ರಾಣಕ್ಕೆ ಆಶ್ರಯವಾದದ್ದು ದೇಹವೆಂಬುದು ನಿಜ; ಕನ್ನಡಿಯ ಸಹಾಯದಿಂದಲೇ ತನ್ನ ಮುಖ ನೋಡಿಕೊಳ್ಳುವ ಹಾಗೆ ಜೀವರೂಪನೂ-ಪರಿಪೂರ್ಣ ಬ್ರಹ್ಮನೂ-ಒಬ್ಬನೇ ದೇವನೆಂದೆನಿಸಿಕೊಂಡವನೇ ನಮ್ಮ ಕೂಡಲ ಸಂಗಮದೇವನೆಂಬುದು ದೃಷ್ಟಾಂತದಿಂದ ಸ್ಪಷ್ಟವಾಗಿದೆ.

**೯೦೪ ಅಂತರಂಗದಲ್ಲಿರ್ದ ನಿರವಯ ಲಿಂಗವ ಸಾವಯ**
**ಲಿಂಗವ ಮಾಡಿ**
**ಶ್ರೀಗುರುಸ್ವಾಮಿ ಕರಸ್ಥಲಕ್ಕೆ ತಂದುಕೊಟ್ಟ ಲಿಂಗವು**
**ಅಂತರಂಗವ ನಾವರಿಸಿ ಅಂತಃಕರಣ ಕರಣಂಗಳೆ**
**ಕಿರಣಂಗಳಾಗೆ,**
**ಬೆಳಗುವ ಚಿದಂಶವೇ ಪ್ರಾಣಲಿಂಗವು;**
**ಆ ಮೂಲ ಚೈತನ್ಯವೇ ಭಾವಲಿಂಗವು !**
**ಇದನರಿದು ನೋಡುವ ನೋಟ ಭಾವ ಪರಿಪೂರ್ಣವಾಗಿ**

**ತಾನು ತಾನಹನಲ್ಲದೆ, ಇದಿರಿಟ್ಟು ತೋರುವುದಲ್ಲ !**
**ಅಖಂಡ ಪರಿಪೂರ್ಣವಪ್ಪ-ನಿಲವು ತಾನೇ**
**ಕೂಡಲ ಸಂಗಮದೇವ.**

ಹೃದಯಾಂತರಾಳದಲ್ಲಿ ನಿರಾಕಾರನಾಗಿರುವ ಆತ್ಮನನ್ನು, ರೂಪಾತ್ಮನೆಂದು ಜ್ಞಾನ ಮಾಡಿಕೊಟ್ಟವರು ಶ್ರೀಗುರುದೇವನು; ಆ ಪರಮಾತ್ಮನೇ ನಮ್ಮೆಲ್ಲರ ಅಂತರಂಗವನ್ನು ತುಂಬಿಕೊಂಡು ಅಂತಃಕರುಣವೆಂಬ ಅಮೃತ ಕಿರಣಗಳಿಂದ ಪ್ರಕಾಶಿಸುವನು. ಆ ಮನೋಮಯನೇ ಪ್ರಾಣಲಿಂಗನು. ಚಿತ್-ಶಕ್ತಿಯ ಚೇತನವೇ ಭಾವಾತ್ಮನು, ಈ ಸೂಕ್ಷ್ಮ ಭೇದ ಪ್ರಭೇದವನ್ನು ತಿಳಿದುಕೊಳ್ಳುವದೇ ಪರಿಪೂರ್ಣಭಾವ ಜ್ಞಾನ "ತಾನೇ ಆತ್ಮ-ಆತ್ಮನೇ ತಾನು" ಎಂದು ಭಾವ ತಿಳಿಯಬೇಕೆ ವಿನಃ ಸಾಕ್ಷಿಯಾಗಿ ತೋರಿಸುವದಲ್ಲ. ಅಖಂಡನಾಗಿ, ಪರಿಪೂರ್ಣನಾಗಿ ನಿಂತಿರುವವನೇ ಕೂಡಲ ಸಂಗಮದೇವನು.

**೯೦೫ ಅನ್ಯವಿಚಾರ ಮರೆದು ನಿಮ್ಮ ವಿಚಾರ ಎಡೆಗೊಂಡಿತ್ತಾಗಿ**
**ಪ್ರಾಣದ ನೆಲೆಗೆಟ್ಟಿತ್ತಯ್ಯಾ,**
**ದಶವಾಯುಗಳ ಸಂಚು ತಪ್ಪಿತ್ತಯ್ಯಾ,**
**ಕರಣಂಗಳ ಲಿಂಗದ ಕಿರಣಂಗಳು ನುಂಗಿದವಯ್ಯಾ,**
**ಒಳಗೆ ಕರತಳಾಮಳಕಗಂಡೆನಯ್ಯಾ;**
**ಹೊರಗೇನೆಂದರಿಯದೆ, ನೀನೆ ಗತಿಯಾಗಿರ್ದೆ**
**ಕೂಡಲ ಸಂಗಮ ದೇವಾ.**

ಪ್ರಪಂಚದ ಮೋಹದ ಕನವರಿಕೆ ಕಳೆದು ಪರಮಾತ್ಮಚಿಂತನೆಗೆ ಮನಸ್ಸು ಶರಣು ಬಂದಾಗ ಜೀವದಾಸೆ ಹಾರಿತು; ಪ್ರಾಣದ ಮೇಲಿನ ಮಮತೆ ದೂರವಾಯಿತು; ಕರ್ಮೇಂದ್ರಿಯಗಳು ಪರಲಿಂಗುವಿನ ಕಿರಣಗಳಿಂದ ಬೆಳಗಿದಾಗ ಬಾಹ್ಯ ಪ್ರಪಂಚದರಿವು ಇಲ್ಲದಾಗಿ ಅಂತರಂಗದಲ್ಲಿ ಜ್ಞಾನಮಯನಾಗಿ ಕಂಡ ನೀನೇ ನನಗೆ ಸದ್ಗತಿದಾಯಕ ನಿರುವೆ ಕೂಡಲ ಸಂಗಮದೇವ !

೯೦೬ ಅಯ್ಯಾ, ಎನ್ನ ಹೃದಯದಲ್ಲಿ ನ್ಯಸ್ತವಾಗಿಹ ಪರಮ ಚಿದ್ ಬೆಳಗೆ

ಹಸ್ತ ಮಸ್ತಕ ಸಂಯೋಗದಿಂದ ಒಂದು ಗೂಡಿ
ಮಹಾ ಬೆಳಗ ಮಾಡಿದಿರಲ್ಲಾ !
ಅಯ್ಯಾ, ಎನ್ನ ಮಸ್ತಕದೊಳಗೊಂದುಗೂಡಿದ ಮಹಾ ಬೆಳಗ ತಂದು
ಭಾವದೊಳಗಿಂಬಿಟ್ಟಿರಲ್ಲಾ !
ಅಯ್ಯಾ, ಭಾವದೊಳಗೆ ಕೂಡಿದ ಬೆಳಗ ತಂದು
ಮನಸ್ಸಿನೊಳಗಿಂಬಿಟ್ಟಿರಲ್ಲಾ !
ಅಯ್ಯಾ, ಎನ್ನಮನಸ್ಸಿನೊಳಗೆ ಕೂಡಿದ ಮಹಾಬೆಳಗ ತಂದು
ಕಣ್ಗೊಳೊಳಗಿಂಬಿಟ್ಟಿರಲ್ಲಾ !
ಅಯ್ಯಾ, ಎನ್ನಕಣ್ಗೊಳೊಳಗೆ ಕೂಡಿದ ಮಹಾಬೆಳಗತಂದು
ಕರಸ್ಥಳದೊಳಗಿಂಬಿಟ್ಟಿರಲ್ಲಾ !
ಅಯ್ಯಾ, ಎನ್ನ ಕರಸ್ಥಳದಿ ಥಳಥಳಿಸಿ ಬೆಳಗಿ ಹೊಳೆಯುತ್ತಿಪ್ಪ
ಅಖಂಡ ತೇಜವನೇ ಇಷ್ಟಲಿಂಗನೆಂಬ ದೃಷ್ಟವತೋರಿ,
ನಿಶ್ಚಯುವ ಶ್ರೋತ್ರದಲ್ಲಿ ಸೃಜಿಸಿದಿರಲ್ಲಾ
ಅಯ್ಯಾ ಎನ್ನ ಶ್ರೋತ್ರದಲ್ಲಿ ಸೃಜಿಸಿದ ಮಂತ್ರದೊಳಗೆ
ನೀವು ನಿಂದು ಮಹತ್ವವ ಹುದುಗಿದಿರಲ್ಲಾ !
ಅಯ್ಯಾ, ಎನ್ನ ಆರಾಧ್ಯ ಕೂಡಲ ಸಂಗಮದೇವಾ,
ಎನ್ನೊಳಗೆ ನಿಮ್ಮಿರವ ಈ ಪರಿಯಲ್ಲಿ ಕಾಣಿಸುತ್ತಿದ್ದಿರಲ್ಲಾ!

ತಂದೆಯೇ ! ನನ್ನ ಹೃತ್ಕಮಲದಲ್ಲಿ ಮಂಡಿಸಿರುವ ಪ್ರಜ್ಞಾನ ಘನನೇ, ಕರ-ಶಿರಗಳ ಜೋಡಣೆಯಿಂದ ಕೂಟಸ್ಥನಾಗಿರುವ ನನ್ನಲ್ಲಿ ಜ್ಞಾನೋದಯ ಮಾಡಿದಿರಲ್ಲಾ. ಭಾವನೆಗೆ ಕಂಡ ದಿವ್ಯತೇಜವನ್ನು ಮನಸ್ಸಿನಲ್ಲಿಟ್ಟಿರಿ; ಮನಾಕಾಶದಲ್ಲಿ ಮೂಡಿದ ಮೂರ್ತಿಯನ್ನು ಕಣ್ಗಳಲ್ಲಿಟ್ಟಿರಿ; ಕಣ್ಣಾಲಿಗಳಲ್ಲಿ ನೆಲೆಸಿರುವ ಲಿಂಗ ಮೂರ್ತಿಯನ್ನು ಕರಕಮಲಗಳಲ್ಲಿ ತಂದಿಟ್ಟಿರಿ; ಈ

ಪರಿ ಇಷ್ಟಲಿಂಗದ ದರ್ಶನ ಮಾಡಿಸಿ ನೀವು ನನ್ನ ರೋಮ ರೋಮಗಳಲ್ಲಿ ನಿಮ್ಮ ಪ್ರತಿಮೆಯನ್ನು ತುಂಬಿರುವಿರಿ; ನನ್ನ ಕುಲ ದೈವತ ಕೂಡಲ ಸಂಗಮದೇವಾ!!

೯೦೭ **ಅಯ್ಯಾ, ನೀಮಾಡಲಾದ ಜಗತ್ತು, ಅಯ್ಯಾ ನೀ ಮಾಡಲಾದ ಸಂಸಾರ,**
**ಅಯ್ಯಾ, ನೀ ಮಾಡಲಾದ ಮರವೆ**
**ಅಯ್ಯಾ, ನೀ ಮಾಡಲಾದ ದುಃಖ—**
**ಅಯ್ಯಾ, ನೀ ಬಿಡಿಸಿದರೆ ಬಿಟ್ಟಿತ್ತು!**
**ತಾಮಸವಯ್ಯಾ, ನಾನೀ ಮಾಯೆಯ ಗೆದ್ದೆನೆಂಬ ಹಮ್ಮಿದೇಕೆ**
**ಕೂಡಲ ಸಂಗಮ ದೇವಾ?**

ಪ್ರಭು ಕೂಡಲ ಸಂಗಮದೇವಾ; ಈ ಜಗತ್ತು ಈ ಸಂಸಾರ ನಿನ್ನಿಂದಲೇ ಉಂಟಾದವುಗಳು; ಪ್ರಾಣಿ ಮಾತ್ರರಿಗೆ-ಮರವು, ದುಃಖಗಳನ್ನು ನೀನೆ ತಂದೊಡ್ಡಿರುವೆ; ಅವುಗಳಿಂದ ನಮ್ಮನ್ನು ಬಿಡಿಸಿ ಕಾಪಾಡುವವನೂ ನೀನೆ; ಭಕ್ತಿಯ ಮದದಿಂದ ಕೊಬ್ಬೇರಿದ ನಾನು ಈ ಮಾಯೆಯನ್ನು ಗೆದ್ದಿರುವೆನೆಂದು ಜಂಬಕೊಚ್ಚುವ ಸೊಕ್ಕು ಏತಕ್ಕಾಗಿ?

೯೦೮ **ಅಯ್ಯಾ, ಮರದೊಳಗೆ ಅಗ್ನಿಯಿದ್ದೊಡೇನಯ್ಯಾ,**
**ಮಥನಿಸಿ ತೋರುವುದಿಲ್ಲನ್ನಕ್ಕ ಕಾಣಬಹುದೆ?**
**ಜಗದೊಳಗೆ ಕೂಡೆ ಪರಿಪೂರ್ಣ ಶಿವನೆಂದೊಡೆ**
**ಅಂತರಂಗದಲ್ಲಿ ಕಾಣಬಹುದೇ?**
**'ಆದಿ ಲಿಂಗ, ಅನಾದಿ ಶರಣ'ನೆಂಬ ಭೇದವ ತಿಳುಹಿ**
**ನಿಜ ಪ್ರಾಣದೊಳಗಿಪ್ಪ ಸುಜ್ಞಾನ ಲಿಂಗವ ಕರಸ್ಥಳಕ್ಕೆ ತಂದು,**
**ಆ ಕರಸ್ಥಳದ ಲಿಂಗವ ಎನ್ನ ಸರ್ವಾಂಗದೊಳಗೆ ಪ್ರತಿಷ್ಠಿಸಿ, ತೋರಿ,**

**ನಿತ್ಯನಿಜೈಕ್ಯಲಿಂಗದ ಹೊಲಬಿನ ಹರಿಯ ತೋರಿಸಿ,**
**ಮರ್ತ್ಯಲೋಕದೊಳಗೆಲ್ಲ ಇಂದು ಮೊದಲಾಗಿ**
**ಪ್ರಾಣಲಿಂಗದ ಘನವ ಹರಹಿ, ಶಿವಭಕ್ತಿಯನು—**
**ದ್ಧರಿಸಿದನು;**
**ಕೂಡಲ ಸಂಗಮ ದೇವರಲ್ಲಿ ಚೆನ್ನಬಸವಣ್ಣನೆನ್ನ ಆಗು**
**ಮಾಡಿ ಉಳುಹಿದನಾಗಿ,**
**ಇನ್ನು ಮರ್ತ್ಯಲೋಕದೊಳಗೆ ಬಂದೆನಾದರೆ,**
**ಚೆನ್ನ ಬಸವಣ್ಣನ ಶ್ರೀ ಪಾದದಾಣೆ !**

ಜಗತ್ತಿನ ತುಂಬೆಲ್ಲ ಪರಿಪೂರ್ಣನಾದ ಶಿವನು ಹಬ್ಬಿಕೊಂಡಿರುವನೆಂದ ಮಾತ್ರಕ್ಕೆ ಅಂತರಂಗದಲ್ಲಿ ಅವನನ್ನು ಕಾಣಲು ಸಾಧ್ಯವೆ? ಪ್ರಭುವೆ, ಮರಗಳಲ್ಲಿ ಬೆಂಕಿ ಇದೆ ಎಂದು ಬರಿಬಾಯಿಂದ ಹೇಳಿದರೆ ನಂಬುವದಿಲ್ಲ. ಮರದ ತುಂಡೆರಡನ್ನು ತಿಕ್ಕಿ-ಘರ್ಷಣದಿಂದ ಹುಟ್ಟಿದ ಬೆಂಕಿಯನ್ನು ತೋರಿಸಿದಾಗ ನಂಬಿಕೆಯಾಗುತ್ತದೆ; ಸರ್ವಕ್ಕೂ ಮೂಲಾಧಾರ ಲಿಂಗನು; ಮೂಲತತ್ವದಿಂದ ಭಿನ್ನವಾದವನೇ ಶರಣ; ಈ ಭೇದವನ್ನು ತಿಳಿಸಿ-ಪ್ರಾಣಲಿಂಗದ ಮಹತ್ವವನ್ನು ಜಗದಗಲ ಹಬ್ಬಿಸಿ-ಶಿವಭಕ್ತಿಯನ್ನುದ್ಧರಿಸಿ ನನ್ನನ್ನು ಕಾಪಾಡಿದ ಚೆನ್ನ ಬಸವಣ್ಣನ ಪಾದದಾಣೆಯಾಗಿಯೂ ಈ ಭವಲೋಕದಲ್ಲಿ ಪುನಃ ನರ ಜನ್ಮ ತಾಳಲಾರೆ-ಕೂಡಲ ಸಂಗಮದೇವ.

**೯೦೯ ಅಯ್ಯಾ, ಶ್ರೀ ವಿಭೂತಿಯಿಂದ ಕಂಡೆ**
**ಆ ನಿಮ್ಮ ದಿವ್ಯ ಬೆಳಗಿನ ಹೊಳಹ**
**ಈ ಎನ್ನ ಕರಸ್ಥಳದೊಳಗೆ !**
**ಅಯ್ಯಾ, ಶ್ರೀ ಮಹಾರುದ್ರಾಕ್ಷಿಯಿಂದ ಕಂಡೆ**
**ಆ ನಿಮ್ಮ ದಿವ್ಯ ಮೂರ್ತಿಯ ಗೂಢವ**
**ಈ ಎನ್ನ ಕರಸ್ಥಳದೊಳಗೆ !**
**ಅಯ್ಯಾ, ಶ್ರೀ ಮಹಾಪಂಚಾಕ್ಷರಿಯಿಂದ ಕಂಡೆ**
**ಆ ನಿಮ್ಮ ದಿವ್ಯವಸ್ತ್ರಂಗಳ**
**ಈ ಎನ್ನ ಕರಸ್ಥಳದೊಳಗೆ !**

**ಅಯ್ಯಾ, ನಾ ಬಯಸುವ ಬಯಕೆ ಕೈಸಾರಿತಿಂದು,**
**ಕೂಡಲ ಸಂಗಮ ದೇವಾ,**

ಪ್ರಭುವೆ, ಪವಿತ್ರ ವಿಭೂತಿಯನ್ನು ಧಾರಣ ಮಾಡುವದರಿಂದ ನಿಮ್ಮ ಮಹಾ ಬೆಳಕನ್ನು ಕಂಡೆ; ರುದ್ರಾಕ್ಷಿಯ ಮಹತ್ವದಿಂದಾಗಿ ನಿಮ್ಮ ದಿವ್ಯ ಮೂರ್ತಿ ಅಂತರ್ಗತ ಓಜ-ತೇಜಗಳನ್ನು ಕಂಡೆ; ಪಂಚಾಕ್ಷರ ಮಂತ್ರದಿಂ ದಾಗಿ ನಿಮ್ಮ ಅಂಗ ವಸ್ತ್ರಗಳನ್ನು ಕಂಡೆ; ಇಷ್ಟು ದಿನಗಳ ವರೆಗೆ ಬಸುರಿನ ಬಯಕೆ ಯಾಗಿದ್ದುದು ಇಂದು ಫಲವಾಗಿ ನನ್ನ ಕೈಗೆ ಸಿಕ್ಕಿತು ಕೂಡಲ ಸಂಗಮದೇವಾ!

**೯೧೦ ಅರ್ಪಿಸುವ ಸುಖವ ತಪ್ಪದೆ ಇಂಬುಗೊಂಡಿತ್ತಾಗಿ**
**ಅಲ್ಲಿಯೇ ಅರ್ಪಿತವಾಯಿತ್ತಯ್ಯಾ !**
**ಅಂಗವೆಂಬ ಶಂಕೆ ತಾನೆತ್ತ ಹೋಯಿತ್ತೆಂದರಿಯೆ ;**
**ಕಾಯಸುಖವೇ ಲಿಂಗಸುಖಕ್ಕೀಡಾಗಿತ್ತು!**
**ಅಂತಪ್ಪ ಅರ್ಪಿತದಷ್ಟ ತಲೆಗೇರಿದಲ್ಲಿ**
**ನೀ ಮುನ್ ತಾಗಿರ್ದ ಕಾಣಾ,**
**ಕೂಡಲ ಸಂಗಮ ದೇವಾ!**

ಭಗವತ್ ಪ್ರೀತ್ಯರ್ಥವಾಗಿ ನನ್ನ ಸುಖವನ್ನು ಅರ್ಪಣೆ ಮಾಡಬೇ ಕೆಂದು ಸಂಕಲ್ಪಿಸಿದ್ದೆ; ಆದರೆ ಹುಟ್ಟಿದಂದಿನಿಂದ-ನನ್ನ ಸರ್ವಸ್ವವೂ ಅಂತ ರಾತ್ಮನಿಗೆ ಅರ್ಪಿತವಾಯಿತು . ಅಲ್ಲದೆ ದೇಹ ವಿದೆ ಎಂಬ ಪರಿಜ್ಞಾನದ ಸಂಶಯ ದೂರ ಹೋಯಿತು; ಲಿಂಗಸುಖವೆ ದೇಹದ ಸುಖವಾಯಿತು; ಆದರೆ ಅರ್ಪಣೆ ಮಾಡಿದೆನೆಂಬ ಅಹಂಕಾರ ತಲೆಗೇರಿದರೆ, ನೀನು ಆ ತಲೆಗೆ ಪೆಟ್ಟು ಹಾಕಿಬಿಡುವೆ ಕೂಡಲ ಸಂಗಮದೇವಾ!

**೯೧೧ ಅರತುದಯ್ಯಾ ಅಂಗಗುಣ: ಒರೆತುದಯ್ಯಾ ಭಕ್ತಿರಸ;**
**ಆವರಿಸಿತಯ್ಯಾ ಅಂಗ ಲಿಂಗವನು !**
**ಏನೆಂದರಿಯೆನಯ್ಯಾ ಲೋಕ ಲೌಕಿಕದ ಮದವ:**

ಲಿಂಗಭ್ರಾಂತನಾದೆನಯ್ಯಾ, ಕೂಡಲ ಸಂಗಮದೇವಾ,
ನಿಮ್ಮ ಕರುಣವೆನ್ನನೆದೆಗೊಂಡಿತ್ತಾಗಿ.

ಪಂಚೇಂದ್ರಿಯಗಳ ವಿಷಯಗುಣ ಒಣಗಿ–ನನ್ನ ರೋಮರೋಮಗಳಲ್ಲಿ ಭಕ್ತಿಯ ರಸ ಚಿಮ್ಮುತಲಿದೆ; ನನ್ನ ದೇಹವು ಲಿಂಗವನ್ನು ಕೂಡಿದೆ; ನಾನು; ಲೋಕವ್ಯವಹಾರದ ಕಪಟ ಕುಹಕವನ್ನು ಏನೂ ತಿಳಿಯಲಾರೆ; ಕೂಡಲ ಸಂಗಮ ದೇವಾ ನಿಮ್ಮ ಕರುಣೆಯಿಂದಲೇ ನಾನು ಲಿಂಗಭ್ರಾಂತನಾಗಿರುವೆ.

೯೧೨ ಆರಾದರೂ ನಿಮ್ಮ ನೆನೆವರಯ್ಯಾ: ನಾ ನಿಮ್ಮ ನೆನೆವನಲ್ಲ!
ಅದೇನು ಕಾರಣವೆಂದಡೆ,
ಎನ್ನ ನೆನೆವ ಮನವೆ ನೀವೇ ಆದಿರಾಗಿ
ಆರಾದರೂ ನಿಮ್ಮ ಪೂಜಿಸುವರಯ್ಯಾ: ನಾನಿಮ್ಮ
ಪೂಜಿಸುವನಲ್ಲ !
ಅದೇನು ಕಾರಣ ವೆಂದಡೆ,
ಎನ್ನ ತನುವಿಗೆ ನೀವೇ ಪೂಜೆಯಾದಿರಾಗಿ
ಆರಾದರೂ ನಿಮಗರ್ಪಿಸುವರಯ್ಯಾ! ನಾ
ನಿಮಗರ್ಪಿಸುವನಲ್ಲ !
ಅದೇನು ಕಾರಣ ವೆಂದಡೆ,
ಎನ್ನಸರ್ವಾಂಗವೆಲ್ಲವೂ ನಿಮಗರ್ಪಿತವಾಗಿತ್ತಾಗಿ:
ಇದು ಕಾರಣ,
'ಭಕ್ತದೇಹಿಕದೇವ, ದೇವದೇಹಿಕ ಭಕ್ತ'ನೆಂಬ
ಶ್ರುತಿಯನರಿದು,
ನಿಮ್ಮ ಮುಟ್ಟಿ ನಾನಭಿನ್ನನಾದೆ, ಕಾಣಾ,
ಕೂಡಲ ಸಂಗಮ ದೇವಾ.

ಯಾರಾದರೂ ಸಹಿತ ನಿಮ್ಮ ಧ್ಯಾನ ಮಾಡಬಹುದು; ನಿಮ್ಮ ಪೂಜೆ ಮಾಡಬಹುದು; ನಿಮಗೆ ಆರೋಗಣೆ ಮಾಡಿಸಬಹುದು; ಆದರೆ ಕೂಡಲ ಸಂಗಮದೇವ, ನಾನು ಇದಾವುದನ್ನು ಮಾಡುವದಿಲ್ಲ; ಏಕೆಂದರೆ ನನ್ನ

ತನುಮನ ಧನವೆಲ್ಲವೂ ನಿಮ್ಮದಾಗಿದೆ; ಭಕ್ತನಲ್ಲಿ ದೇವರು-ದೇವರಲ್ಲಿ ಭಕ್ತನು—ಅನ್ಯೋನ್ಯವಾಗಿ ಕೂಡಿರುವದರಿಂದ ನಾನಿಮ್ಮಿಂದ ಬೇರೆ ಯಾಗಿಲ್ಲ.

೯೧೩ ಆಹ್ವಾನವಿಲ್ಲ ಪ್ರಾಣಲಿಂಗವಾಗಿ:
ವಿಸರ್ಜನೆಯಿಲ್ಲ ಅಂಗವ ನೆಲೆಗೊಂಡಿಪ್ಪುದಾಗಿ !
ಇದು ಕಾರಣ,
ಆಹ್ವಾನವಿಸರ್ಜನೆಯಿಲ್ಲ, ಶರಣರ ಪರಿ ಬೇರೆ:
ಅಂಗ ಸಂಗವೇ ಲಿಂಗ, ಲಿಂಗವೇ ಮನ !
ಕೂಡಲ ಸಂಗನ ಶರಣ ಸುಯಿಧಾನಿ !

ಪರಮಾತ್ಮನು-ಪ್ರಾಣಲಿಂಗ ಸ್ವರೂಪನಾಗಿದ್ದರಿಂದ ಬಿನ್ನಹವೆಂಬು ದಿಲ್ಲ; ಈ ಪ್ರಾಣಲಿಂಗವು ದೇಹದಲ್ಲಿ ವಾಸವಾಗಿರುವ ಕಾರಣ-ಬಿಟ್ಟಿ ರುವುದು ಸಾಧ್ಯವಿಲ್ಲ; ಆದರೆ ಶಿವ ಶರಣರ ರೀತಿಯೇ ಬೇರೆ; ದೇಹದೊಡನೆ ಪ್ರಾಣಸಂಗವಾಗಿ ಸಂಸ್ಕಾರ ಹೊಂದಿದ ಪ್ರಾಣವೇ 'ಆತ್ಮ' ಆ ಆತ್ಮನೇ ಮನಸ್ಸು ! ಅದುವೇ ಕೂಡಲ ಸಂಗಮ ದೇವರ ಶರಣರ ನಿಲಯಾಲಯ!!

೯೧೪ ಆಹ್ವಾನಿಸಿ ಕರೆವಲ್ಲಿ ಎಲ್ಲಿರ್ದನೋ,
ಈರೇಳು ಲೋಕ ಹದಿನಾಲ್ಕು ಭುವನಂಗಳೊಳಗೊಂಡಿಪ್ಪ
ದಿವ್ಯವಸ್ತು ?
ಮತ್ತೆ ವಿಸರ್ಜಿಸಿ ಬಿಡುವಾಗ ಎಲ್ಲಿ ಅಡಗಿರ್ದನೋ,
ಮುಳ್ಳೂರ ತೆರಹಿಲ್ಲದಿರ್ಪ ಅಖಂಡ ವಸ್ತು ?
ಬರಿಯ ಮಾತಿನ ಬಳಕೆಯ ತೂತ ಜ್ಞಾನವ ಬಿಟ್ಟು,
ನೆಟ್ಟನೆ ತನ್ನ ಕರಸ್ಥಳದೊಳಗಿರುತಿರ್ಪ
ಇಷ್ಟಲಿಂಗವ ದಿಟ್ಟಿಸಿ ನೋಡಲು, ಅಲ್ಲಿ,
ತನ್ನ ಮನಕ್ಕೆ ಮನ ಸಂಧಾನವಾದ ದಿವ್ಯ ನಿಶ್ಚಯ ಒದಗೆ
ಈ ದಿವ್ಯ ನಿಶ್ಚಯದಿಂದ ಕುಳುವಡಿಗ ಅದ್ವೈತವಪ್ಪುದು !
ಇದು ಕಾರಣ,

**ನಮ್ಮ ಕೂಡಲ ಸಂಗನ ಶರಣ—**
**ಆಹ್ವಾನ ವಿಸರ್ಜನೆಯೆಂಬುಭಯ ಜಡತೆಯ ಬಿಟ್ಟು**
**ತಮ್ಮ ತಮ್ಮ ಕರಸ್ಥಳದಲ್ಲಿ ನಿಶ್ಚಯಿಸಿದವರಿಗೆ—**
**ಸ್ವಯಂ ಲಿಂಗವಾದ, ಕಾಣಿರೋ ?**

ಹದಿನಾಲ್ಕು ಲೋಕಗಳಲ್ಲಿ ವ್ಯಾಪಿಸಿರುವ ಆ ದಿವ್ಯ ಶಕ್ತಿಯನ್ನು 'ಬಾ' ಎಂದು ಬಿನ್ನೈಸಿದಾಗ ಮತ್ತು ಹೋಗೆಂದು ಹೇಳಿ ಬಿಡುವಾಗ ಎಲ್ಲಿದ್ದನೋ-ಎಲ್ಲಿಗೆ ಹೋದನೋ ತಿಳಿಯದು ಆ ಚೇತನಾ ಮೂರ್ತಿಯು; ಅಖಂಡ ಶಕ್ತಿಯು ಮನಸ್ಸನ್ನು ಸಂಧಿಸಿದಾಗ ಉಂಟಾದ ಜ್ಞಾನದಿಂದ-ಪ್ರಾಣಲಿಂಗನು ಅದ್ವೈತನಾಗುತ್ತಾನೆ; ಇದನ್ನರಿತ ಶರಣರು ತಾವೇ ಸ್ವತಃ ಪರಲಿಂಗ ಶಕ್ತಿಯಾದವರು. ಜನನ ಮರಣ ಚಕ್ರದಿಂದ ಮುಕ್ತರಾದರು.

೯೧೫ **ಉರಿಯೊಳಗಣ ಕರ್ಪುರಕ್ಕೆ ಕರೆಯುಂಟೆ, ಅಯ್ಯಾ ?**
**ಬಯಲ ಮರೀಚಿಯ ಜಲಕ್ಕೆ ಕೆಸರುಂಟೆ, ಅಯ್ಯಾ ?**
**ವಾಯುವಿನಪ್ಪಿದ ಪರಿಮಳಕ್ಕೆ ನಿರ್ಮಾಲ್ಯವುಂಟೆ, ಅಯ್ಯಾ?**
**ನೀವು ನೆರೆಯೊಲಿದ ಬಳಿಕ್ಕೆನಗೆ ಭರವುಂಟೆ ?**
**ಕೂಡಲ ಸಂಗಮದೇವಾ,**
**ನಿಮ್ಮ ಚರಣ ಕಮಲದೊಳಗೆನ್ನನಿಂಬಿಟ್ಟು ಕೊಳ್ಳಯ್ಯಾ.**

ಉರಿಯುತ್ತಿರುವ ಕರ್ಪುರಕ್ಕೆ ಕಲೆ ಕಪ್ಪೇನೂ ಇರುವದಿಲ್ಲ; ಮೃಗಜಲಕ್ಕೆ (ಬಿಸಿಲು ಕುದುರೆ) ಕೆಸರೆಂಬುದಿಲ್ಲ; ಗಾಳಿಯಲ್ಲಿ ಗಾಳಿಯಾಗಿ ತೇಲಿ ಬರುವ ಸುಗಂಧಕ್ಕೆ ಮೈಲಿಗೆ ಇಲ್ಲ; ತಂದೆಯೆ, ನಿಮ್ಮ ಕರುಣೆ ನನಗೆ ದೊರೆತ ಬಳಿಕ ಇನ್ನೇತರ ಭಯ? ಕೂಡಲ ಸಂಗಮದೇವಾ ನನ್ನನ್ನು ನಿಮ್ಮ ಪಾದಕ್ಕೆ ಸೇರಿಸಿ ಕೊಳ್ಳಬೇಕೆಂದು ಬೇಡುವೆ.

೯೧೬ **ಎನ್ನ ಕಾಯಕ್ಕೆ ಸೀಮೆಯ ಮಾಡುವೆ;**
**ಎನ್ನ ಕಾಯದೊಳಗಿರ್ದ ಕರಣಾದಿ ಗುಣಂಗಳಿಗೆ ಸೀಮೆಯ ಮಾಡುವೆ;**
**ಎನ್ನ ಶ್ರೋತ್ರಕ್ಕೆ ಸೀಮೆಯ ಮಾಡುವೆ;**
**ಎನ್ನ ಶ್ರೋತ್ರದೊಳಗಿರ್ದ ಶಬ್ದಕ್ಕೆ ಸೀಮೆಯ ಮಾಡುವೆ:**

ಎನ್ನ ತ್ವಕ್ಕಿಗೆ ಸೀಮೆಯ ಮಾಡುವೆ;
ಎನ್ನ ತ್ವಕ್ಕಿನೊಳಗಿನ ಸ್ಪರ್ಶಕ್ಕೆ ಸೀಮೆಯ ಮಾಡುವೆ.
ಎನ್ನ ನೇತ್ರಕ್ಕೆ ಸೀಮೆಯ ಮಾಡುವೆ;
ಎನ್ನ ನೇತ್ರದೊಳಗಿರ್ದ ರೂಪಿಂಗೆ ಸೀಮೆಯ ಮಾಡುವೆ.
ಎನ್ನ ಜಿಹ್ವೆಗೆ ಸೀಮೆಯ ಮಾಡುವೆ;
ಎನ್ನ ಜಿಹ್ವೆಯೊಳಗಿರ್ದ ರುಚಿಗೆ ಸೀಮೆಯ ಮಾಡುವೆ.
ಎನ್ನ ಘ್ರಾಣಕ್ಕೆ ಸೀಮೆಯ ಮಾಡುವೆ;
ಎನ್ನ ಘ್ರಾಣದೊಳಗಿರ್ದ ಗಂಧಕ್ಕೆ ಸೀಮೆಯ ಮಾಡುವೆ.
ಎನ್ನ ಮನಕ್ಕೆ ಸೀಮೆಯ ಮಾಡುವೆ;
ಎನ್ನ ಮನದೊಳಗಿರ್ದ ಮರವೆಗೆ ಸೀಮೆಯ ಮಾಡುವೆ.
ಎನ್ನ ಭಾವಕ್ಕೆ ಸೀಮೆಯ ಮಾಡುವೆ;
ಎನ್ನ ಭಾವದೊಳಗಿರ್ದ ಭ್ರಾಂತಿಗೆ ಸೀಮೆಯ ಮಾಡುವೆ.
ಎನ್ನ ಪ್ರಾಣಕ್ಕೆ ಸೀಮೆಯ ಮಾಡುವೆ;
ಎನ್ನ ಪ್ರಾಣಲಿಂಗದಲ್ಲಿ ಪ್ರಸಾದ ರೂಪಾಗಿ,
ಹಿಂಗದೆ ನೀವಿರುವ ಕಾರಣ, ಕೂಡಲ ಸಂಗಮ ದೇವಾ.

ಕೂಡಲ ಸಂಗಮದೇವಾ ನೀವು ನನ್ನ ಪ್ರಾಣಲಿಂಗದಲ್ಲಿ ಪ್ರಸಾದ ರೂಪದಲ್ಲಿ ನೆಲೆಸಿರುವದರಿಂದ-ನಾನು ನನ್ನ ಸರ್ವ ಇಂದ್ರಿಯಗಳಿಗೆ ಹಾಗು ಅವುಗಳ ಕರ್ಮಗಳಿಗೆ ನಿರ್ಬಂಧನೆ ಮಾಡುತ್ತೇನೆ. ನಿರಂತರವಾಗಿ ನಿಮ್ಮ ಸೇವೆಯಲ್ಲಿ ತನು ಮನಗಳು ತೊಡಗುವಂತೆ-ಕಾರ್ಯಕ್ಷೇತ್ರ ನಿರ್ಮಿಸುತ್ತೇನೆ.

೯೧೭ ಎನ್ನ ಗಂಡ ಬರಿಬೇಕೆಂದು
ಎನ್ನಂತರಂಗವೆಂಬ ಮನೆಯ ತೆರಹು ಮಾಡಿ,
ಅಷ್ಟದಳ ಕಮಲವೆಂಬ ಓವರಿಯೊಳಗೆ,
ನಿಜ ನಿವಾಸವೆಂಬ ಹಾಸುಗೆಯ ಹಾಸಿ,
ಧ್ಯಾನ ಮೌನವೆಂಬ ಮೇಲು ಕಟ್ಟ ಕಟ್ಟಿ,
ಜ್ಞಾನವೆಂಬ ದೀಪವ ಬೆಳಗಿ,

**ನಿಷ್ಕ್ರಿಯಂಗಳೆಂಬುಪಕರಣಂಗಳ ಹರಹಿಕೊಂಡು;**
**ಪಶ್ಚಿಮ ದ್ವಾರನೆಂಬ ಬಾಗಿಲ ತೆರೆದು,**
**ಕಂಗಳೇ ಪ್ರಾಣವಾಗಿ ಹಾರುತಿರ್ದೆನಯ್ಯಾ !**
**ನಾನು ಬಾರೆನೆಂದು ಉಮ್ಮಳಿಸಿಹೆನೆಂದು**
**ತಾನೇ ಬಂದು ಎನ್ನ ಹೃದಯ ಸಿಂಹಾಸನದ ಮೇಲೆ ಮೂರ್ತಿ ಗೊಂಡಡೆ**
**ಎನ್ನ ಮನದ ಬಯಕೆ ಸಯವಾಗಿತ್ತು;**
**ಹಿಂದೆ ಹನ್ನೆರಡು ವರ್ಷದಲ್ಲಿ ಚಿಂತೆಯಿಂದ ನಿಶ್ಚಿಂತವಾಗಿತ್ತು!**
**ಕೂಡಲ ಸಂಗಮದೇವ ಕೃಪಾ ಮೂರ್ತಿಯಾದ ಕಾರಣ**
**ಆನು ಬದುಕಿದೆನು.**

ಗಂಡರ ಗಂಡನಾಗಿ ಮೆರೆಯುವ ನನ್ನ ಗಂಡ ಕೂಡಲ ಸಂಗಮದೇವನು ನನ್ನಲ್ಲಿ ಬರಬೇಕೆಂದು-ನನ್ನ ಅಂತರಂಗವನ್ನು ಶುದ್ಧಮಾಡಿದೆ; ಅಷ್ಟಾಂಗಗಳಲ್ಲಿ ವಿನಯದ ಹಾಸಿಗೆ ಹಾಸಿ ಧ್ಯಾನದ ಛತ್ತು ಕಟ್ಟಿ ಅಲ್ಲಿ ಜ್ಞಾನದ ದೀಪ ಬೆಳಗಿ-ಕರ್ಮರಹಿತ ಇಂದ್ರಿಯಗಳೊಂದಿಗೆ ಪಶ್ಚಿಮಬಾಗಿಲ ತೆರೆದು ಕಣ್ಣಿನಲ್ಲಿ ಪ್ರಾಣ ಹಿಡಿದು ದಾರಿ ಕಾಯುತ್ತಿರುವೆ; ನಾನು ಅಲ್ಲಿಗೆ ಹೋಗೆನೆಂದು, ಸಿಟ್ಟಾಗುವೆನೆಂದು ತಿಳಿದು ದಯಾ ಮೂರ್ತಿ ತಾವೇ ಬಂದು ನನ್ನ ಹೃದಯದಲ್ಲಿ ಮಂಡಿಸಿದರೆ ನನ್ನ ಬಯಕೆ ಸಾರ್ಥಕವಾಯ್ತು. ನಾನು ಬದುಕಿದೆ.

**೯೧೮ ಎನ್ನ ತನು ಮನವೆರಡು ಗುರು ಕರುಣದಿಂದ**
**ಲಿಂಗದಲ್ಲಿ ಏಕವ ಮಾಡಿದೆನಾಗಿ,**
**ಎನ್ನಂತರಂಗ ಬಹಿರಂಗ ನಿಮ್ಮವು ನೋಡಾ.**
**ನಿಮ್ಮಂತರಂಗದಲ್ಲಿ ನಿಮ್ಮನೆ ಇಂಬಿಟ್ಟುಕೊಂಬೆ.**
**ನಿಮ್ಮ ಬಹಿರಂಗದಲ್ಲಿ ನಿಮ್ಮನೇ ಪೂಜಿಸುವೆ.**
**ನಿಮ್ಮರಿವಿನಿಂದ ನಿಮ್ಮನೇ ಅರಿವೆ ಕಾಣಾ,**
**ಕೂಡಲ ಸಂಗಮದೇವಾ.**

ಗುರುವಿನ ಕೃಪೆಯಿಂದ ನನ್ನಲ್ಲಿ, ತನು ಮತ್ತು ಮನಸ್ಸು ಎಂಬ ದ್ವಿಭಾವ ಮೂಡಿತು, ಆದರೆ ಆತ್ಮನು ಒಂದೇ ಎಂಬುದನ್ನು ತಿಳಿದೆನಾದ್ದರಿಂದ-ನನ್ನ ಅಂತರಂಗ-ಬಹಿರಂಗಗಳೆರಡೂ ನಿಮ್ಮವೇ ಆದವು ಪ್ರಭು; ನಿಮ್ಮದಾದ ಅಂತರಂಗದಲ್ಲಿ ನಿಮ್ಮ ಮೂರ್ತಿಯನ್ನಿಟ್ಟುಕೊಂಡೆ; ನಿಮ್ಮದೇ ಆದ ಬಹಿರಂಗದಲ್ಲಿ ನಿಮ್ಮ ಪೂಜೆಮಾಡಿ, ನೀವು ದಯಪಾಲಿಸಿದ ತಿಳುವಳಿಕೆಯಿಂದ-ನಿಮ್ಮ ಮೂಲ ರೂಪ ಶಕ್ತಿಯನ್ನು ತಿಳಿದುಕೊಂಡೆ ಕೂಡಲ ಸಂಗಮದೇವಾ!

**೯೧೯ ಎನ್ನ ಶಿರ ನಿಮ್ಮ ಚರಣವನೊರಸೊರಸೆ ಭೇದವಿಲ್ಲಯ್ಯಾ!**
**ಎನ್ನ ಕಾಯದ ಕಪಟ, ಎನ್ನ ಮನದ ವಿಕಾರ,**
**ನಿಮ್ಮ ಅಂಗುಷ್ಟದ ಕೊನೆಯ ಸೋಂಕಲೊಡನೆ**
**ಹರಿದು ಹೋಹುದು ನೋಡಯ್ಯಾ !**
**ಕೂಡಲ ಸಂಗಮ ದೇವಯ್ಯಾ, ನಿಮ್ಮ ಶ್ರೀಪಾದದ**
**ಬೆಳಗ ಕಂಡು**
**ಎನ್ನಂಗದ ಕತ್ತಲೆ ತೊಡೆಯಿತ್ತು.**

ನನ್ನ ಮಸ್ತಕದಿಂದ ನಿಮ್ಮ ಪಾದಗಳನ್ನು ಒರಸುವದರಿಂದ-ನಿಮ್ಮ ಅಂಗುಷ್ಟವು ತಾಗಿ ನನ್ನ ದೇಹದ ಕಾಪಟ್ಯವು ಮತ್ತು ಮನಸ್ಸಿನ ವಿಕೃತ ರೂಪವು ಹರಿದು ಹೋದವು; ಕೂಡಲ ಸಂಗಮದೇವ ನಿಮ್ಮ ಸತ್ಪಾದಗಳ ಪಾವನ ಬೆಳಕಿನಿಂದ ನನ್ನ ಅಜ್ಞಾನ ಕಳೆಯಿತು.

**೯೨೦ ಎಲ್ಲರ ಪ್ರಾಣಲಿಂಗ ಒಂದೆ, ಕಂಡಯ್ಯಾ.**
**ಎನ್ನ ಪ್ರಾಣಲಿಂಗ ಬೇರೆ, ಕಂಡಯ್ಯಾ!**
**ಕೂಡಲ ಸಂಗಮದೇವ, ಕೇಳಯ್ಯಾ;**
**ಜಂಗಮವೆನ್ನ ಪ್ರಾಣಲಿಂಗ, ಕಂಡಯ್ಯಾ !**

ಎಲ್ಲರಲ್ಲಿಯೂ ಜೀವಾತ್ಮನು ಒಬ್ಬನೇಯಾಗಿದ್ದರೆ ಪ್ರಭು ನನ್ನ ಜೀವಾತ್ಮನು ಬೇರೆಯಾಗಿದ್ದಾನೆ; ಕೂಡಲ ಸಂಗಮದೇವಾ, ನನ್ನ ಜೀವಾತ್ಮನು-ಜಂಗಮನು.

೯೨೧ ಒಡಲಿಲ್ಲದಾತ ಜಂಗಮ; ಪ್ರಾಣವಿಲ್ಲದಾತ ಭಕ್ತನಯ್ಯಾ,
ಆಚಾರವೇ ಜಂಗಮ: ವಿಚಾರವೇ ಭಕ್ತನಯ್ಯಾ.
ಆಚಾರ ವಿಚಾರವೆಂಬುದು ಸ್ವಾನುಭಾವವು ನೋಡಾ,
ಕೂಡಲ ಸಂಗಮದೇವಾ—

ಹವೆಯ ಮೂಲವನ್ನು ಕಡಿದಾತನೆ ಜಂಗಮ; ಪ್ರಾಣಧ ಭಯ ತಪ್ಪಿಸಿಕೊಂಡವನೇ ಭಕ್ತನು. ಪೂಜೆ ಪುನಸ್ಕಾರಗಳೇ ಜಂಗಮ; ಧ್ಯಾನವೇ ಭಕ್ತ, ಕೂಡಲ ಸಂಗಮದೇವಾ ಪೂಜೆ-ಧ್ಯಾನಗಳು ನನ್ನ ಸ್ವಾನುಭವಗಳು.

೯೨೨ ಕಣ್‌ಗಳ ಮುಂದಣಿಂದ ಶ್ರೀಗುರುಲಿಂಗ ಹಿಂಗಿದರೆ
ವ್ರತಕ್ಕೆ ಭಂಗವಾದುದೆಂದು ಕೊಟ್ಟನಯ್ಯಾ
ಶ್ರೀಗುರು ಕರಸ್ಥಳದಲ್ಲಿ ಪ್ರಾಣಲಿಂಗವ
ಆ ಲಿಂಗ ಮುಟ್ಟಲೊಡನೆ
ತನು ಪ್ರಸಾದ ಮನಪ್ರಸಾದ ಧನಪ್ರಸಾದವಾಯಿತ್ತು:
ಇಂತು ಸರ್ವಾಂಗ ಪ್ರಸಾದ ವಾಯಿತ್ತು,
ಕೂಡಲ ಸಂಗಮದೇವಾ.

ದೃಷ್ಟಿಯಿಂದ ಶ್ರೀ ಗುರುಲಿಂಗ ಮಾಯವಾದ ಕಾರಣ ವ್ರತನಿಯಮಕ್ಕೆ ಭಂಗವಾಯಿತೆಂದು ತಿಳಿದು ಶ್ರೀ ಗುರು ನನ್ನ ಕೈಗಳಲ್ಲಿ ಪ್ರಾಣಲಿಂಗವನ್ನು ಕೊಟ್ಟನು; ಆ ಲಿಂಗ ಸ್ಪರ್ಶವಾದೊಡನೆ ತನು-ಮನ-ಧನಗಳೆಲ್ಲವೂ ಈಶ್ವರ ಕರುಣೆಗೆ ಪಾತ್ರವಾದವು; ಎಲ್ಲ ಅಂಗಾಂಗಗಳೂ ಪಾವನವಾದವುಕೂಡಲ ಸಂಗಮದೇವಾ.

೯೨೩ ಕಣ್‌ಗಳ ನೋಟ, ಹೃದಯದ ಜ್ಞಾನ;
ಮನದಲ್ಲಿ ಮಾತನಾಡುತಿರ್ದೆನಯ್ಯಾ
ಜೇನಮಳೆಗಳು ಕರೆದುವು:
ಅಮೃತಕಳೆಗಳು ಸುರಿದುವು!
ಕೂಡಲ ಸಂಗಮದೇವರೆಂಬ
ರಸಸಾಗರ ದೊಳೋಲಾಡುತಿರ್ದೆನಯ್ಯಾ !

ಕಣ್ಣುಗಳ ದೃಷ್ಟಿಯನ್ನು ಜ್ಞಾನನಳಿಗೆಯ ಮುಖಾಂತರ ಹಾಯಿಸಿ ಹೃದಯದಲ್ಲಿರಿಸಿ, ಮನಾಂತರಾಳದಲ್ಲಿ ಧ್ಯಾನ ಮಾಡುತ್ತಿದ್ದೆ. ಆಗ ಆನಂದಮಯ ಜೀವನದೊಂದಿಗೆ ಕೂಡಲ ಸಂಗಮ ದೇವರ ಕರುಣಾ ರಸದಲ್ಲಿ ಈಜುತ್ತಲಿದ್ದೆ.

**೯೨೪ ಕರ್ಣದ ಸೂತಕ ಹೋಯಿತ್ತು ಸದ್ಗುರು ವಚನದಿಂದ;**
**ಕಣ್ಗಳ ಸೂತಕ ಹೋಯಿತ್ತು ಸದ್ಭಕ್ತರ ಕಂಡೆನಾಗಿ;**
**ಕಾಯದ ಸೂತಕ ಹೋಯಿತ್ತು ನಿಮ್ಮ ಚರಣವ**
**ಮುಟ್ಟಿದೆನಾಗಿ;**
**ನಾನಾ ಸೂತಕ ಹೋಯಿತ್ತು ನಿಮ್ಮ ಶರಣರ ಅನುಭಾವವ**
**ಕೇಳಿದೆನಾಗಿ !**
**ಕೂಡಲ ಸಂಗಮ ದೇವಯ್ಯಾ,**
**ಎನ್ನ ನಾನಾ ಸೂತಕ ಹೋಯಿತ್ತು ನೀವಲ್ಲದನ್ಯವಿಲ್ಲದಾಗಿ.**

ಸದ್ಗುರು ವಚನ ಕೇಳಿದ್ದರಿಂದ ನನ್ನ ಕಿವಿಗಳು ಪಾವನವಾದವು; ಶ್ರೇಷ್ಠ ಭಕ್ತರ ದರ್ಶನವಾದ್ದರಿಂದ ನನ್ನ ಕಣ್ಣುಗಳು ಪವಿತ್ರವಾದವು; ನಿಮ್ಮ ಚರಣಗಳ ಸ್ಪರ್ಶದಿಂದ ನನ್ನ ದೇಹದ ಪಾಪ ಕಳೆಯಿತು; ಕೂಡಲ ಸಂಗಮದೇವಾ, ನಿಮ್ಮ ಶರಣರ ಅನುಭವ ನುಡಿಗಳ ಪ್ರಭಾವದಿಂದ ನನ್ನ ಬಗೆಬಗೆಯ ಪಾಪ ಸಮೂಹವು ನಾಶವಾಯಿತು. - ನೀವೆ ನನ್ನ ದೈವತ.

**೯೨೫ ಕಾಯದೊಳಗೆ ಕಾಯವಾಗಿರ್ದೆಯಲ್ಲ ಹಂಸಾ:**
**ಸಂಸಾರ ಮಾಯಾಪಾಶವ ಬಿಡಲೊಲ್ಲದೆ**
**ಡಿಂಬವ ನೆಚ್ಚಿ ಕೆಟ್ಟೆಯಲ್ಲಾ ಹಂಸಾ,**
**ಜೀವ ಶೂನ್ಯವಾಗಿ ಕೂಡಲ ಸಂಗನ ಶರಣರು**
**ಲಿಂಗವಾಗಿ ಹೋದುದನರಿಯಾ, ಹಂಸಾ?**

ಎಲೆ ಜೀವಾತ್ಮನೆ, ದೇಹದೊಳಗೆ ದೇಹಭಾವರೂಪಿಯಾಗಿ ಕುಳಿತು ಸಂಸಾರದ ಮಾಯಾಪಾಶದಲ್ಲಿ ಮೋಹಿಸಿ ಬಿದ್ದು, ಆ ಸಂಸಾರವೇ ನಿಜ ವೆಂದು ನಂಬಿ ನೀನು ಕೆಟ್ಟುಹೋದೆ; ಶರೀರದಲ್ಲಿ ಶರೀರಭಾವ

ತಳೆದ ಜೀವನವನ್ನು ತ್ಯಾಗ ಮಾಡಿ, ಆತ್ಮ ರೂಪಿಗಳಾಗಿ ಬೆಳಗಿದ ಕೂಡಲ ಸಂಗನ ಶರಣರನ್ನು ನೀನು ತಿಳಿಯಲಾರೆಯ ? ಜೀವಾತ್ಮನೆ !

**೯೨೬ ಕುಲವ ನೋಡದೆ, ಛಲವ ನೋಡದೆ, ನಿಲವ ನೋಡದೆ**
**ಕೂಡಿದ ಬಳಿಕ ಅಲ್ಲಿ ಹೆಚ್ಚು ಕುಂದನರಸಲುಂಟೆ ?**
**ಮುಂದುವರಿದು ಜಂಗಮಕ್ಕೆ ನಿಮ್ಮ ಕಾರುಣ್ಯವನು**
**ಪದೇಶ ಮಾಡಿದ ಬಳಿಕ**
**ಬಂದುದ ಬಂದಂತೆ ಸಮನಿಸಿಕೊಳ್ಳಬೇಕಲ್ಲದೆ**
**ಅಂತಿಂತೆನಬಾರದು ಕೇಳಯ್ಯಾ !**
**ನೀನು ನಿರಾಕಾರ ಸಾಕಾರವೆಂಬೆರಡು ಮೂರ್ತಿಯ**
**ಧರಿಸಿರ್ದೆಯಾಗಿ**
**ಒಂದ ಜರಿದು ಒಂದ ಹಿಡಿದಿಹೆನೆಂದರೆ ಅದೆ ಕೊರತೆ,**
**ನೋಡಾ ಪ್ರಭುವೆ, ಕೂಡಲ ಸಂಗಮದೇವಾ.**

ಜಾತಿಭೇದ, ಸ್ಥಿತಿಭೇದ, ಇಚ್ಛಾಭೇದ, ಯಾವ ತರಹದ ಭೇದಗಳನ್ನೂ ಎಣಿಸದೆ ನಿನ್ನಲ್ಲಿ ಐಕ್ಯರಾದವರಲ್ಲಿ- ಮತ್ತೆ ಅವರಲ್ಲಿ ಹೆಚ್ಚಿನ ದೋಷಗಳನ್ನು ಹುಡುಕಬೇಕೆ ? ನಿಮ್ಮ ಕರುಣಾ ಪ್ರಸಾದ ಜಂಗಮನಿಗೆ ದೊರೆತ ಬಳಿಕ ಅವನಲ್ಲಿ ಕುಂದು ಕೊರತೆಗಳನ್ನು ಲೆಕ್ಕಿಸದೆ, ಅವನು ಯೋಗ್ಯನೆಂದೆನಬೇಕು; ಯಾಕಂದರೆ, ಕೂಡಲ ಸಂಗಮದೇವಾ, ನೀನೇ ನಿರಾಕಾರನೂ ಮತ್ತು ಸಾಕಾರನೂ ಆಗಿರುವದರಿಂದ ನಿನ್ನಲ್ಲಿ ಭೇದವ ಮಾಡುವದು ನಮ್ಮ ಅಜ್ಞಾನದ ಲಕ್ಷಣವಾಗಿದೆ ಪ್ರಭು !

**೯೨೭ ಕೃಷಿ ಕೃತ್ಯ ಕಾಯಕದಿಂದಾದಡೇನು?**
**ತನು ಮನ ಬಳಲಿಸಿ ತಂದು ದಾಸೋಹವ ಮಾಡುವ**
**ಪರಮ ಸದ್ಭಕ್ತನ ಪಾದವ ತೋರಯ್ಯಾ ಎನಗೆ**
**ಅದೆಂತೆನೆ ಆತನ ತನು ಶುದ್ಧ, ಆತನ ಮನಶುದ್ಧ**
**ಆತಂಗೆ ಉಪದೇಶವ ಮಾಡಿದಾತನೆ ಪರಮ ಸದ್ಗುರು.**
**ಅಂತಪ್ಪ ಸದ್ಭಕ್ತನ ಮನೆಯೆ ಕೈಲಾಸವೆಂದು ಹೊಕ್ಕು**

**ಲಿಂಗಾರ್ಚನೆಯ ಮಾಡುವ ಜಂಗಮವೇ ಜಗತ್ಪಾವನ**
**ಇಂತಪ್ಪವರ ನಾನು ನೆರೆ ನಂಬಿ ನಮೋ ನಮಃ**
**ಎಂಬೆನಯ್ಯಾ**
**ಕೂಡಲ ಸಂಗಮ ದೇವಾ.**

ಹೊಲ ಮನೆ ಮಾಡಿಕೊಂಡಿದ್ದ ಒಕ್ಕಲಿಗನೇ ಆಗಲಿ ಅಥವಾ ಬೇರಾವ ಉದ್ಯೋಗ ಮಾಡಿ ದೇಹ ಶ್ರಮದಿಂದ, ಮನ ಪರಿಶ್ರಮದಿಂದ ದುಡಿದು ಸಂಪಾದಿಸಿದ್ದನ್ನು ದಾಸೋಹವ ಮಾಡುವಂತಹ ಉತ್ತಮಭಕ್ತನ ಪಾದ ಸೇವೆ ಮಾಡುವ ಭಾಗ್ಯ ಕೊಡು; ಆತನ ನಡೆ-ನುಡಿ, ಆಚಾರ-ವಿಚಾರಗಳು ಪರಮಪೂಜ್ಯವಾದವುಗಳು; ಅವರ ಮನೆಯೇ ಕೈಲಾಸವು! ಅವರ ಮನೆಗಳಲ್ಲಿ ಲಿಂಗಪೂಜೆ ಮಾಡುವ ಜಂಗಮನೇ ಜಗತ್ತಿಗೆ ವಂದ್ಯನು. ಅಂತಹ ಜಂಗಮನಿಗೆ ನಾನು ಶರಣು ಹೋಗುವೆ ಕೂಡಲಸಂಗಮದೇವಾ!

**೯೨೮ ಕ್ರಿಯಾಜ್ಞಾನ ಸಂಬಂಧವೆಂದು ನುಡಿದರು;**
**ಕ್ರಿಯಾಜ್ಞಾನ ಸಂಬಂಧವೆಂತಿರ್ಪುದೆಂದರಿಯರು !**
**ಕ್ರಿಯೆಯಲ್ಲಿ ಅಂಗಲಿಂಗ ಸಂಬಂಧವನರಿಯರು,**
**ಜ್ಞಾನದಲ್ಲಿ ಲಿಂಗಜಂಗಮ ಸಂಬಂಧವನರಿಯರು.**
**ಕ್ರಿಯೆಯಲ್ಲಿ ಅರ್ಪಿತ ಪ್ರಸಾದ ಸಂಬಂಧವರಿದು,**
**ಜ್ಞಾನದಲ್ಲಿ ತೃಪ್ತ ಪರಿಣಾಮವನರಿದು,**
**ಕ್ರಿಯೆಯೊಳಗಿರ್ದು ಜ್ಞಾನ ಸಂಪನ್ನನಾಗಿರಬಲ್ಲ ಶರಣಂಗೆ**
**ಕ್ರಿಯೆಯೆ ತನು, ಜ್ಞಾನವೇ ಪ್ರಾಣ.**
**ತನು ಲಿಂಗವಾಗಿ, ಪ್ರಾಣ ಜಂಗಮವಾಗಿ**
**ತನು ಸಯವಾಡಿ, ಪ್ರಾಣವ ಲಿಂಗ ಜಂಗಮಕ್ಕರ್ಪಿಸಿ**
**ನಿರಂತರ ಸಾವಧಾನಿಯಾಗಿರಬಲ್ಲ ಪ್ರಸಾದಿಗಳ**
**ಎನಗೊಮ್ಮೆ ತೋರಿ ಸಲಹಾ,**
**ಕೂಡಲ ಸಂಗಮ ದೇವಾ.**

ಕರ್ಮೇಂದ್ರಿಯಗಳ ಕರ್ಮ, ಜ್ಞಾನೇಂದ್ರಿಯಗಳ ಜ್ಞಾನ ಇವೆರಡು ಪರಸ್ಪರ ಸಂಬಂಧವಿಟ್ಟುಕೊಂಡಿವೆ ಎಂದು ಹೇಳುತ್ತಾರೆ; ಆದರೆ ಅವುಗಳ

ನಿಜವಾದ ನಂಟುತನ ತಿಳಿದವರಿಲ್ಲ; ಕರ್ಮಗಳಲ್ಲಿ ದೇಹ ಮತ್ತು ಆತ್ಮನ ಸಂಬಂಧವೇನೆಂಬುದು ತಿಳಿಯರು; ಜ್ಞಾನದಲ್ಲಿ ಆತ್ಮ ಹಾಗು ಜಂಗಮರ ಸಾಮರಸ್ಯವನ್ನು ತಿಳಿಯರು; ಕರ್ಮಗಳನ್ನು ಆಚರಿಸುತ್ತ ಜ್ಞಾನಿಯಾದ ಶರಣನಿಗೆ ತನ್ನ ದೇಹವೆ ಲಿಂಗ, ಪ್ರಾಣವೇ ಜಂಗಮ; ಆದುದರಿಂದ ಕೂಡಲ ಸಂಗಮ ದೇವಾ, ದೇಹವನ್ನು ಸವಿಸಿ ಪ್ರಾಣವನ್ನು ಲಿಂಗ-ಜಂಗಮರ ಸಂತೋಷಕ್ಕಾಗಿ ತ್ಯಾಗ ಮಾಡಿದ ಮತ್ತು ಯಾವಾಗಲೂ ಆನಂದ ಚಿತ್ತರಾದ ಪ್ರಸಾದಿಗಳ ಸನ್ನಿಧಾನದಲ್ಲಿ ನನ್ನನ್ನಿರಿಸಿ ಸಲಹು.

**೯೨೯ ಗುರು ಕಾರುಣ್ಯವೆ ಸದಾಚಾರ, ಗುರು ಕಾರುಣ್ಯವೆ ಶಿವಾಚಾರ**
**ಗುರು ಕಾರುಣ್ಯವೆ ಪ್ರಸಾದ ರುಚಿ!**
**ಮುಂದೆ ಗುರು ಹಿಂದೆ ಲಿಂಗ,**
**ಕೂಡಲ ಸಂಗಮದೇವಾ.**

ಗುರುವಿನ ಕೃಪೆಯೆಂಬುದೇ ಸದಾಚಾರ; ಶಿವಾಚಾರ; ಗುರುವಿನ ಆಶೀರ್ವಾದವೇ ಪ್ರಸಾದದ ತಿರುಳು; ಮೊದಲು ಗುರು ದರ್ಶನ; ತದನಂತರ ಆತ್ಮದರ್ಶನ, ಕೂಡಲ ಸಂಗಮದೇವಾ.

**೯೩೦ ಗುರುಲಿಂಗ ಜಂಗಮದ ಹೆಸರಿನಿಂದ ಕಾಯಕವ ಮಾಡಿ,**
**ಗುರುಚರಕೆ ವಂಚಿಸಿ,**
**ತಂದೆ ತಾಯಿ ಬಂಧು ಬಳಗ ಹೆಂಡಿರು ಮಕ್ಕಳು ಒಡಹುಟ್ಟಿದರೆಂದು**
**ಸಮಸ್ತ ಪದಾರ್ಥವ ಭಾಗವ ಮಾಡುವನೊಬ್ಬ ಭಕ್ತದ್ರೋಹಿ,**
**ಕೂಡಲ ಸಂಗಮದೇವಾ.**

ಮಂತ್ರೋಪದೇಶಕನಾಗಿಯೂ, ಜಂಗಮ ವೇಷಧಾರಿಯಾಗಿಯೂ ಭಿಕ್ಷೆಬೇಡಿ ಭಕ್ತರಿಂದ ಸಂಪತ್ತನ್ನು ಪಡೆದು, ಗುರುಗಳನ್ನು ವಂಚಿಸಿ, ತನ್ನ ತಂದೆ–ತಾಯಿ ಹೆಂಡಿರು ಮಕ್ಕಳು ಬಂಧುಗಳಲ್ಲಿ ಆ ಧನವನ್ನು ಹಂಚುವವನು ಭಕ್ತದ್ರೋಹಿ ಕೂಡಲ ಸಂಗಮದೇವಾ.

೯೩೧ ಗುರುವಿಂಗೆ ತನುವ ಕೊಟ್ಟು, ಲಿಂಗಕ್ಕೆ ಮನವಕೊಟ್ಟು,
ಜಂಗಮಕ್ಕೆ ಧನವಕೊಟ್ಟು
ಇಂತೀ ತ್ರಿವಿಧಕ್ಕೆ ತ್ರಿವಿಧವ ಕೊಟ್ಟು,
ನಾನು ಶುದ್ಧನಾದೆನು ಕಾಣಾ,
ಕೂಡಲ ಸಂಗಮದೇವಾ.

ನನ್ನ ತನು-ಮನ ಧನಗಳನ್ನು ಮೂರು ಪ್ರಕಾರದ ಪೂಜೆಗಾಗಿ, ಮಹೇಶನ ತ್ರಿಗುಣರಾದ ಗುರುವಿಗೆ, ಲಿಂಗಕ್ಕೆ ಮತ್ತು ಜಂಗಮ ದೇವನಿಗೆ ನಿರ್ವಂಚನೆಯಿಂದರ್ಪಿಸಿ ನಾನು ಪುನೀತನಾದೆನು ಕೂಡಲ ಸಂಗಮದೇವಾ

೯೩೨ ಘನ ಗಂಭೀರ ವಾರಿಧಿಯೊಳಗೆ ತೋರುವ ತೆರೆಗಳು
ಆ ವಾರಿಧಿಯ ಬಿಟ್ಟು ತೋರಬಲ್ಲುವೆ?
ಜಗದೊಳಗೆ ಕೂಡಿ ಪರಿಪೂರ್ಣವಾದ ಬಳಿಕ
ಇದಿರ ನೋಡಿ ಜರಿದು ನುಡಿವ ಠಾವಾವುದು ಹೇಳಯ್ಯಾ?
ಕೂಡಲ ಸಂಗಮ ದೇವಯ್ಯಾ,
ನಿಮ್ಮ ನೀವು ಪರಿಣಮಿಸಿಕೊಂಬುದಲ್ಲದೆ ಭಿನ್ನವ
ಮಾಡಲುಂಟೆ?

ಮಹಾಸಮುದ್ರದಲ್ಲಿ ಓಲಾಡುವ ತೆರೆಗಳು ಸಮುದ್ರವನ್ನು ಬಿಟ್ಟು ಬೇರೆಡೆಯಲ್ಲಿ ಕಣ್ಣಿಗೆ ಕಾಣಬರುವುದು ಸಾಧ್ಯವಿಲ್ಲ; ಅದರಂತೆ ಭೂಮಂಡಲದಲ್ಲೆಲ್ಲ ವ್ಯಾಪಿಸಿ ಪರಿಪೂರ್ಣರೂಪನಾದ ನಿನ್ನನ್ನು ಇಂಥ ಸ್ಥಳದಲ್ಲಿ ನೀನಿಲ್ಲವೆಂಬ ನಿಂದಾಸ್ಪದವಾದ ಸ್ಥಳ ಯಾವುದಿದೆ ನೀನೆ ಹೇಳು ? ಕೂಡಲ ಸಂಗಮದೇವಾ ನೀನು ಸೃಜಿಸಿದ ಚರಾಚರಗಳೆಲ್ಲವೂ ನಿಮ್ಮಲ್ಲಿಯೇ ನೆಲೆಗೊಂಡಿದೆಯಲ್ಲದೆ ಅವುಗಳು ಭಿನ್ನವೆಂದು ಹೇಳಲು ಬರುವಂತಿಲ್ಲ.

೯೩೩ ಜೀವನ ಬಾಗಿಲಲ್ಲಿ ಭ್ರಮೆಯ ತಡೆದು;
ಆತ್ಮನ ಬಾಗಿಲಲ್ಲಿ ಪ್ರಕೃತಿಯ ತಡೆದು,
ಪರಮನ ಬಾಗಿಲಲ್ಲಿ ಚಿತ್ರವ ತಡೆದು,
ಮಿಕ್ಕದ ಅವಯವಗಳ ದೆಶೆಯಿಂದ ಇಂದ್ರಿಯಂಗಳ ತಿಳಿದು

ಇಂತೀ ಜೀವ ಆತ್ಮ ಪರಮ ತ್ರಿವಿಧ ಗುಣಂಗಳು ತಲೆದೋರದೆ
ಕರ್ಮೇಂದ್ರಿಯ, ಭಾವೇಂದ್ರಿಯ ಜ್ಞಾನೇಂದ್ರಿಯ–
ಇಂತೀ ತ್ರಿವಿಧವು ಸ್ವಾನುಭವದಲ್ಲಡಗಿ,
ಓಂಕಾರದ ಪಂಚಾಕ್ಷರದ ಮೂಲದ ಉಭಯದ ಮೊಳೆ
ಮುರಿದು,
ಐವತ್ತೊಂದು ಭೇದದ ಸೂತಕದ ಸುಳು ಹಡಗಿ,
ಹಿಂದು ಮುಂದಣ ಎಚ್ಚರಿಕೆ ಅಳವಟ್ಟಪ್ಪುದು,
ಕೂಡಲ ಸಂಗಮ ದೇವರಲ್ಲಿ–
ಬಸವಣ್ಣನ ಮುಂದಣೆಚ್ಚರಿಕೆಗುಂದದಂತೆ
ಉಚ್ಛಡಿಸುತ್ತಿರ್ದೆನು.

ಜೀವನದಲ್ಲಿ ಭ್ರಮೆ ನಿರಸನ ಮಾಡಿದೆ; ಆತ್ಮನಿಗೆ ಪುನರ್ಜನ್ಮದ ಬಾಧೆಯನ್ನು ತಡೆದೆನು; ಪರಮಾತ್ಮನಲ್ಲಿ ಮನಸ್ಸನ್ನು ಸ್ಥಿರವಾಗಿರಿಸಿದೆನು; ಇಂದ್ರಿಯಂಗಳ ಜ್ಞಾನವಾಗಿ ಜೀವ-ಆತ್ಮ(ಜಡ) ಮತ್ತು ಪರಮಾತ್ಮ ಎಂಬ ಮೂರು ಭಾಗಗಳು, ಕರ್ಮೇಂದ್ರಿಯ, ಭಾವೇಂದ್ರಿಯ ಜ್ಞಾನೇಂದ್ರಿಯ ಎಂಬ ಜ್ಞಾನತ್ರಯಗಳು ಅನುಭವಕ್ಕೆ ಬಂದು ನನ್ನ ಎಲ್ಲ ಪಾಪಗಳು ಸರ್ವನಾಶವಾದುದಲ್ಲದೆ ಓಂಕಾರಮಂತ್ರ ಫಲದಿಂದ ನನ್ನ ಹಿಂದಿನ ಹಾಸು ಮುಂದಿನ ಜನ್ಮಗಳ ಜ್ಞಾನೋದಯವಾಯ್ತು; ಕೂಡಲ ಸಂಗಮದೇವಾ!

೯೩೪ ಜ್ಞಾನಾಮೃತವೆಂಬ ಜಲಧಿಯ ಮೇಲೆ
ಸಂಸಾರವೆಂಬ ಹಾವಸೆ ಬಂದು ಮುಸುಕಿಹುದು:
ನೀರ ಮೊಗೆವರೆ ಬಂದು ನೂಂಕುವುದಲ್ಲದೆ ತೆರಳದು
ಮರಳಿ ಮರಳಿ ಮುಸುಕುವುದ ಮಾಣದಯ್ಯಾ,
ಆಗಳೂ 'ಎನ್ನುವನು ನೆನೆಯುತ್ತಿರಬೇಕೆ'ಂದು.
ಬೇಗ ಗುರು ಒಪ್ಪಯಿಸ್ಸಿ ತನು ಪ್ರಸಾದವೆಂದು ಕುರುಹ
ತ್ರಿಕಾಲ ಮಾಡ ಹೇಳಿದ ಲಿಂಗ ಪೂಜೆಯ ತನ್ನನರಿಯ
ಬೇಕೆಂದು,

**ಕೆರೆಯ ನೀರನುಂಡು ತೊರೆಯ ನೀರ ಹೊಗಳುವ**
**ಅರೆಮರುಳಗಳ ಮೆಚ್ಚ ನಮ್ಮ ಕೂಡಲ ಸಂಗಮದೇವಾ.**

ಜ್ಞಾನವೆಂಬ ತಿಳಿಗೊಳದಲ್ಲಿ ಸಂಸಾರದ ಜೊಂಡು ಹಾವಸೆ ಬೆಳೆದು ನಿಂತಿದೆ; ನೀರಿನ ತೆರೆಗಳ ಹೊಡೆತದಿಂದ ಅದು ಅಲುಗಾಡುತ್ತದೆ ವಿನಃ ಕತ್ತರಿಸಿಹೋಗಲಾರದಾಗಿದೆ; ಮತ್ತೆ ಮತ್ತೆ ಮುಸುಕು ಹಾಕುತ್ತದೆ; ಆ ಕ್ಷಣದಲ್ಲಿ ನಿಮ್ಮ ಪಾದಗಳನ್ನು ನಾನು ಧ್ಯಾನಿಸುತ್ತಿರುವೆನೆಂದು ಬೇಗನೆ ಗುರು ಕರುಣೆಯಾಗಿ ಲಿಂಗ ಪೂಜಾ ಮಾಡಿದಫಲವೆಂದುಸಾರದಿಂದ ಮುಕ್ತ ನಾಗಲು ಅನುಕೂಲನಾಗು ದೇವಾ; ಅವನ ಕೃಪೆಯಿಂದ ಭವಬಂಧನದಿಂದ ಮುಕ್ತಿಹೊಂದಿ ಬೇರೆ ದೇವರನ್ನು ಕೊಂಡಾಡುವ ಅರ ಹುಚ್ಚರನ್ನು ಕೂಡಲ ಸಂಗಮ ದೇವನು ಮೆಚ್ಚಿಕೊಳ್ಳುವದಿಲ್ಲ.

೯೩೫ **ತನುವ ಕೊಟ್ಟೆನೆಂದು ನುಡಿದು ಗುರುವಚನಕ್ಕೆ ದೂರವಾದೆ**
**ಮನವ ಕೊಟ್ಟೆನೆಂದು ನುಡಿದು ಲಿಂಗಮುಖಕ್ಕೆದೂರವಾದೆ.**
**ಧನವ ಕೊಟ್ಟೆನೆಂದು ನುಡಿದು ಜಂಗಮ ಮುಖಕ್ಕೆ ದೂರ ವಾದೆ.**
**ಕೂಡಲ ಸಂಗಮ ದೇವಯ್ಯಾ,**
**ನಿಮಗೆ ಮಾಡಿದೆನೆಂದು ನುಡಿದು ಕೆಟ್ಟಕೇಡಿಂಗೆ ಕಡೆಯಿಲ್ಲ.**

ದೇಹವನ್ನು ಗುರುಸೇವೆ ಅರ್ಪಣೆ ಮಾಡಿದೆ ಎಂದು ನುಡಿದ ಕಾರಣ ಗುರೂಪದೇಶಕ್ಕೆ ಬಾಹಿರನಾದೆ; ಲಿಂಗ ಪೂಜೆಗೆ ಮನಸ್ಸು ಮೀಸಲನಾಗಿರಿಸಿದೆ ಎಂದ ಮಾತ್ರಕ್ಕೆ ಲಿಂಗ ಕೃಪೆಯಾಗಲಿಲ್ಲ; ಜಂಗಮಾರ್ಚನೆಗೆ ಧನವೆಲ್ಲವನ್ನು ವೆಚ್ಚಮಾಡಿದೆ ಎಂದ ತಪ್ಪಿಗೆ ಜಂಗಮರ ಆಶೀರ್ವಾದ ಲಭಸಲಿಲ್ಲ; ಕೂಡಲ ಸಂಗಮದೇವಾ, ನಿಮಗೆ ಸರ್ವಸ್ವವನ್ನು ಧಾರೆಯೆರೆದೆನೆಂದು ಬಾಯಿತಪ್ಪಿ ನುಡಿದೆನಾದರೆ ನನ್ನ ವಿನಾಶಕ್ಕೆ ಕೊನೆಯೇಯಿಲ್ಲ.

೯೩೬ **ತನುವ ಕೊಟ್ಟು ತನು ಬಯಲಾಯಿತ್ತು,**
**ಮನವ ಕೊಟ್ಟು ಮನ ಬಯಲಾಯಿತ್ತು,**
**ಧನವ ಕೊಟ್ಟು ಧನ ಬಯಲಾಯಿತ್ತು.**

**ಇಂತೀ ತ್ರಿವಿಧವ ಕೊಟ್ಟ ಕಾರಣ**
**ಕೂಡಲ ಸಂಗಯ್ಯನಲ್ಲಿ ಬಸವಣ್ಣಂಗೆ ಬಯಲ ಸಮಾಧಿ**
**ಯಾಯಿತ್ತು!**

ತನು--ಮನ--ಧನಗಳನ್ನು ಯಾವದೇ ಫಲಾಪೇಕ್ಷೆಯಿಲ್ಲದೆ ಈ ಮೂರೂ ಮೋಹದ ಮಣಿಗಳನ್ನು ಕೂಡಲ ಸಂಗಮದೇವರಿಗೆ ಕೊಟ್ಟ ಕಾರಣ ಬಸವಣ್ಣಂಗೆ ಸಂಗಮದೇವರ ಸನ್ನಿಧಾನದಲ್ಲಿ ಬಯಲ ಸಮಾಧಿ ದೊರೆಯಿತು.

**೯೩೭ ತನುವ ಬೇಡಿದಡೀವೆ, ಮನವ ಬೇಡಿದಡೀವೆ,**
**ಧನವ ಬೇಡಿದಡೀವೆ ನಿಮ್ಮ ಶರಣರಿಗೆ.**
**ಎನಗೆ ಬೇಕೆಂಬ ಭಾವ ಮನದಲ್ಲಿ ಹೊಳೆದರೆ**
**ಘನಮಹಿಮ ನಿಮ್ಮ ಶರಣರ ಪಾದದಾಣೆ.**
**ಮನ ವಚನ ಕಾಯದಲ್ಲಿ ನೀವಲ್ಲದೆ ಮತ್ತೊಂದನರಿದೊಡೆ**
**ಕೂಡಲ ಸಂಗಮದೇವಾ,**
**ಮತ್ತೆ ಮರಳಿ ಭವವೆಂಬ ಘೋರದಲ್ಲಿಕ್ಕಯ್ಯಾ !**

ನಿಮ್ಮ ಶರಣರು ತನು-ಮನ-ಧನ ಈ ಮೂರು ಬೇಡಿದರೂ ನಾನು, ಎನಗೆಬೇಕೆಂಬ ಆಶೆಯನ್ನು ಕಿಂಚಿತ್ತಾದರೂ ಮನದಲ್ಲಿ ತಾರದೆ ನಿಮ್ಮಪಾದದಾಣೆಗೂ ಕೊಟ್ಟು ಬಿಡುತ್ತೇನೆ; ಅಲ್ಲದೆ ಮನದಲ್ಲಿ ನಿಮ್ಮ ಮೂರ್ತಿ, ಮಾತಿನಲ್ಲಿ ನಿಮ್ಮ ಧ್ಯಾನ, ಕಾಯದಲ್ಲಿ ನಿಮ್ಮ ಸೇವೆಯ ಹೊರತು ಬೇರೆ ಬೆಸಗಿದರೆ ಕೂಡಲ ಸಂಗಮದೇವಾ ಮತ್ತೆ ಈ ಸಂಸಾರವೆಂಬ ನರಕದಲ್ಲಿಡು.

**೯೩೮ ತಾ ಸವಿದಲ್ಲದೆ ಆ ಸವಿಯ ಲಿಂಗಕ್ಕರ್ಪಿಸಲಾಗದು.**
**ಅದೇನು ಕಾರಣವೆಂದರೆ:**
**ಆ ಲಿಂಗವು ಕಹಿ-ಸಿಹಿ ಎಂದರಿಯದಾಗಿ!**
**ಇದು ಕಾರಣ,**

**ಕಹಿ ಎಂದು ಕಳೆದು, ಸಿಹಿ ಎಂದು ಕೊಂಡುದಾದರೆ**
**ಕೊಂಡುದು ಕಿಲ್ಬಿಷ, ಕೂಡಲ ಸಂಗಮದೇವಾ.**

ತಾನು ಮೊದಲು ಅರ್ಪಿಸಬೇಕಾದ ವಸ್ತುಗಳ ರುಚಿಸವಿಯದೆ ಲಿಂಗಕ್ಕೆ ನೈವೇದ್ಯ ಮಾಡಬಾರದು; ಯಾಕೆಂದರೆ, ಆ ಲಿಂಗಕ್ಕೆ ಕಹಿ ಮತ್ತು ಸಿಹಿ ಎಂಬುದು ತಿಳಿಯಲಾರದು. ಆದ ಕಾರಣ ಕಹಿ ಎಂಬುದನ್ನು ಲಿಂಗಕ್ಕೆ ಬಿಟ್ಟು—ಸಿಹಿ ಎಂಬುದನ್ನು ತಾನು ಸ್ವೀಕರಿಸಿದರೆ ಆ ಮೃಷ್ಟಾನ್ನವು ನರವಿಷವಾಗಿ ಪರಿಣಮಿಸುತ್ತದೆ ಕೂಡಲ ಸಂಗಮದೇವಾ!!

**೮೩೯ ತೋರುವನಯ್ಯಾ ಶಿವನು, ಅಡಗುವನಗಲುವನಯ್ಯಾ ಶಿವನು.**

**ಕಣ್ಗಳ ಮುಂದೆ ಕಾಯಗೊಂಡು,ಮನದ ಮುಂದೆ ಕನಸಾಗಿ**
**ಕಾಡುವನಯ್ಯಾ ಶಿವನು.**
**ಒಲ್ಲದೊಡಲ್ಲಿಯೆ ಇದ್ದು ಹಲವೆಡೆಯಲ್ಲಿ ತೋರುವನು;**
**ಹಲವೆಡೆಯಲ್ಲೈದಿ ಒಂದೇ ರೂಪಾಗಿರ್ಪನು.**
**ಕೂಡಲ ಸಂಗಮದೇವನು ಚಿನ್ಮಯನಾಗಿ ಎನಗಸಾಧ್ಯನು!**

ಒಮ್ಮೆ ಹತ್ತಿರವಿದ್ದು ಇಲ್ಲದಂತೆ, ಮತ್ತೊಮ್ಮೆ ದೂರನಿಂತು, ದೃಷ್ಟಿಗೆ ಸ್ಪಷ್ಟರೂಪನಾಗಿ, ಮನದಲ್ಲಿ ಕನಸಿನ ಕಣ್ಮಣಿಯಾಗಿ ಹೀಗೆ ನಾನಾರೂಪಧಾರಿಯಾಗಿ ಕಾಡುವನು ಶಿವನು; ಮನಸ್ಸಿಗೆ ಬಾರದಿದ್ದರೆ ನಿಂತಲ್ಲಿಯೇ ನಿಂತು—ದಶದಿಕ್ಕುಗಳಲ್ಲಿ ತನ್ನರೂಪಾತಿಶವನ್ನು ತೋರಿಸುತ್ತಾನೆ! ಜಗದ ತುಂಬೆಲ್ಲ ತನ್ನ ಒಂದೇ ರೂಪವನ್ನು ತೋರಿಸುತ್ತಾನೆ; ಆದರೆ ಕೂಡಲ ಸಂಗಮ ದೇವರು ನನ್ನ ಮನಸ್ಸನ್ನು ತುಂಬಿಕೊಂಡಿರುವ ಕಾರಣ ಅವನನ್ನು ತಿಳಿಯುವದು ನನಗೆ ಅಸಾಧ್ಯವಾಗಿದೆ.

**೮೪೦ ದಾಸೀ ಪುತ್ರನಾಗಲಿ ವೇಶ್ಯಾಪುತ್ರನಾಗಲಿ ಶಿವದೀಕ್ಷೆಯಾದ ಬಳಿಕ**

**ಸಾಕ್ಷಾತು ಶಿವನೆಂದು ವಂದಿಸಿ ಪೂಜಿಸಿ**
**ಪಾದೋದಕ ಪ್ರಸಾದವ ಕೊಂಬುದೆ ಯೋಗ್ಯ**

**ಹೀಗಲ್ಲದೆ ಉದಾಸೀನವ ಮಾಡಿ ಬಿಡುವವರಿಗೆ**
**ಪಂಚ ಮಹಾಪಾತಕ ನರಕ, ಕಾಣಾ,**
**ಕೂಡಲ ಸಂಗಮ ದೇವಾ.**

ಶಿವ ದೀಕ್ಷೆಯಾದ ನಂತರ ಇವನು ದಾಸಿಯ ಮಗ, ಇವನು ಸೂಳೆಯ ಮಗ ಎಂದು ಅವಹೇಳನೆ ಮಾಡದೆ ಅವನು ಸಾಕ್ಷಾತ್ ಶಿವಸ್ವರೂಪನೆಂದು ಮಾನ್ಯಮಾಡಿ, ನಮಸ್ಕಾರ ಪೂಜಾದಿಗಳನ್ನು ಮಾಡಿ ಪಾದೋದಕ ಪ್ರಸಾದವನ್ನು ಸ್ವೀಕರಿಸುವದು ಕಲ್ಯಾಣ; ಯಾರಾದರೂ ಅವರ ಬಗ್ಗೆ ಜಿಗುಪ್ಸೆ ಪಟ್ಟು ಪ್ರಸಾದವನ್ನು ನಿಂದಿಸಿದರೆ ಅದು ಮಹಾ ಪಾಪ-ನರಕ, ಕೂಡಲ ಸಂಗಮದೇವಾ.

೯೪೧ **ದಿಟವ ನುಡಿವುದು ನುಡಿದಂತೆ ನಡೆವುದು.**
**ಹುಸಿಯ ನಡೆದು ತಪ್ಪುವ ಪ್ರಪಂಚಿಯನೊಲ್ಲ**
**ಕೂಡಲ ಸಂಗಮ ದೇವ.**

ಸತ್ಯವನ್ನು ನುಡಿದು ಸತ್ಯದ ಸೊಲ್ಲಿನಂತೆ ನಡೆಯಬೇಕು; ಅದು ದೇವನಿಗೆ ಒಪ್ಪಿಗೆ; ಸುಳ್ಳುಮಾತಾಡಿದವರನ್ನು, ನುಡಿದಂತೆ ನಡೆಯದವರನ್ನು ಕೂಡಲ ಸಂಗಮ ದೇವರು ಮೆಚ್ಚುವದಿಲ್ಲ.

೯೪೨ **ಪಟವಾಕಾಶವಡರಿ. ಎಂದೆಡೆ,**
**ಪಟ ಸೂತ್ರದ ಸಂಚ ಕೆಳಗಿಪ್ಪುದು, ನೋಡಾ !**
**ವ್ಯೋಮದಲ್ಲಿ ಚರಿಸುವ ಸೋಮ—ಸೂರ್ಯರೆಂದಡೆ**
**ಹೇಮಗಿರಿಯ ಸಂಚ ತಪ್ಪದು ನೋಡಾ !**
**ಭೂಮಿಯನೊಲ್ಲದೆ ಗಗನಕ್ಕೆ ಹಾರಿದವಂಗೆ**
**ಆ ವ್ಯೋಮದಲ್ಲಿ ನಿಲುವುದಕ್ಕೆ ಒಂದೆಡೆಯುಂಟೆ ?**
**ಮಣ್ಣ ಮರನುಳಿದು ತೋರುವ ಹಣ್ಣು ರುಚಿಯುಂಟೆ ?**
**ನಮ್ಮ ಕೂಡಲ ಸಂಗನ ಶರಣರೊಳಗಿರ್ದು**
**ಸೀಮೆಯ ಮೀರಿದ ನಿಸ್ಸೀಮನು ಸಿದ್ಧರಾಮನೆಂಬ**
**ಮಾತು ಅಂತಿರಲಯ್ಯಾ ಪ್ರಭುವೇ !**

ಪಟವು ಆಕಾಶದಲ್ಲಿ ಏರಿ ಹಾರಾಡುತ್ತಿದ್ದರೂ ಅದರ ಸೂತ್ರವು ನೆಲದ ಮೇಲೆ ಇರುತ್ತದೆ; ಸೂರ್ಯ–ಚಂದ್ರರು ನಭೋಮಂಡಲದಲ್ಲಿ ಪಯಣ ಮಾಡುತ್ತಿದ್ದರೂ ಅವರು ಹಿಮಗಿರಿಯನ್ನು ದಾಟದೇ ಚಲಿಸಲಾರರು; ಭೂಮಿಯನ್ನು ಬಿಟ್ಟು ಆಗಸದಲ್ಲಿರಬೇಕೆಂದು ಬಯಸಿ ಜಿಗಿದರೆ ಅಲ್ಲಿ ನಿಲ್ಲಲಿಕ್ಕೂ ಜಾಗವಿಲ್ಲ! ಮಣ್ಣನ್ನು ಬಿಟ್ಟು ಬೆಳೆದ ಮರದ ಹಣ್ಣಿಗೆ ರುಚಿಯಿರುವದಿಲ್ಲ! ಕೂಡಲ ಸಂಗನ ಶರಣರೊಳಗೊಬ್ಬನಾಗಿ ದೇವತ್ವಕ್ಕೆ ಏರಿದ ಸಿದ್ಧರಾಮನು ಲೋಕಪ್ರಸಿದ್ಧನಾದನು ಪ್ರಭುವೆ!

**೯೪೩ ಪರಿಯಾಣ ಭಾಜನವೆಂಬರು, ಪರಿಯಾಣ ಭಾಜನವಲ್ಲ, ನೋಡಾ;**
**ಮಹಾಲಿಂಗಕ್ಕೆ ತನ್ನ ಶ್ರೀಮನವೇ ಭಾಜನವು !**
**ಬೀಸರವೋಗದ ಮೀಸಲವಾಗರ್ಪಿಸ ಬಲ್ಲಡೆ**
**ಕೂಡಿ ಕೊಂಡಿಪ್ಪನು ಕೂಡಲ ಸಂಗಮದೇವನು.**

ಪಾಪ ವಿಮೋಚನೆ ಮಾಡಿಕೊಳ್ಳುವದೆಂಬುದೊಂದು ಸಾಧನ ಮಾರ್ಗವೆಂದು ನುಡಿಯುತ್ತಾರೆ. ಆದರೆ ಅದು ಸಾಧನವೂ ಅಲ್ಲ, ಯೋಗವೂ ಅಲ್ಲ; ಮಹಾಲಿಂಗನಿಗೆ ತನ್ನ ನಿರ್ಮಲ ಮನಸ್ಸೆ ಯೋಗಸಾಧನ. ನಮ್ಮ ಮನಸ್ಸನ್ನು ವಿಶುದ್ಧಗೊಳಿಸದೆ ಭಗವಂತನಿಗರ್ಪಿಸಿದರೆ ಕೂಡಲ ಸಂಗಮನು ಮುಕ್ತಿಸಂಪದ ಕೊಡುತ್ತಾನೆ.

**೯೪೪ ಬಯಲು ಮೂರ್ತಿಯಾಗಿ ನಿಂದನೊಬ್ಬ ಶರಣ:**
**ಆತನ ವಿದ್ಯಾಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ**
**ಆತನ ಶಾಂತಿ ಸೈರಣೆಯಿಂದ ಹುಟ್ಟಿದಾತ ವಿಷ್ಣು**
**ಆತನ ಕೋಪ ಕ್ರೋಧದಿಂದ ಹುಟ್ಟಿದಾತ ರುದ್ರ**
**ಈ ಮೂರು ಪೀಠವಂತಿರಲಿ !**
**ಆ ಶರಣನನರಿದು "ಶರಣೆ" ನುತಿರ್ದೆನು,**
**ಕೂಡಲ ಸಂಗಮ ದೇವಾ.**

ವಿಶ್ವಚೈತನ್ಯನಾದೊಬ್ಬ ಶರಣನು ಮೂರ್ತ ಸ್ವರೂಪನಾಗಿ ನಿಂತನು; ಅವನ ಜ್ಞಾನಾಂಗವಾಗಿ ಹುಟ್ಟಿದವನು ಬ್ರಹ್ಮನು; ಶಾಂತಿರಸದಿಂದ ವಿಷ್ಣು

ಹುಟ್ಟಿದನು; ಅವನ ಕ್ರೋಧಾಗ್ನಿಯಿಂದ ರುದ್ರದೇವನು ಹುಟ್ಟಿದನು; ಅಮೂಲ ಪುರುಷನಾದ ಶರಣನನ್ನು ತಿಳಿದು ಅವನಿಗೆ ಶರಣುಹೋದೆನು ಕೂಡಲ ಸಂಗಮದೇವಾ!

೯೪೫ ಬ್ರಹ್ಮೋಪದೇಶವಾಯಿತ್ತೆಂದು ಬ್ರಹ್ಮದೊಡನೆ ಧಿಃಕ್ಕರಿಸ ಬೇಡ,
ಶಿವಜ್ಞಾನ ದೀಪ್ತಿಯಾಯಿತ್ತೆಂದು ಶಿವಶರಣರೊಡನೆ ಧಿಃಕ್ಕರಿಸಬೇಡ,
ಕರ್ಮಜ್ಞಾನವಾಯಿತ್ತೆಂದು ಕರ್ಮವ ಹಳಿಯಬೇಡ,
ಇದು ಕಾರಣ, ಕೂಡಲ ಸಂಗಯ್ಯ ಸಾಕ್ಷಿಯಾಗಿ,
ಇವರೆಲ್ಲರೂ ಸಜ್ಜನ ಶುದ್ಧ ಶಿವಾಚಾರಕ್ಕೆ ಹೊರಗು.

ಬ್ರಹ್ಮಜ್ಞಾನ ಸಾಧನ ಉಪದೇಶ ದೊರೆತಿದೆ ಎಂದು ಸಂಸಾರವನ್ನು ಧಿಃಕ್ಕರಿಸ ಬೇಡ; ಶಿವಜ್ಞಾನ ಪ್ರಜ್ಞೆಯಾಗಿದೆ ಎಂದು ಶಿವಶರಣರನ್ನು ನಿಂದೆ ಮಾಡಬೇಡಾ; ಕರ್ಮೇಂದ್ರಿಯಗಳ ಜ್ಞಾನವಿದೆ ಎಂದ ಮಾತ್ರಕ್ಕೆ ಮಾಡತಕ್ಕ ಕರ್ಮಗಳನ್ನು ತ್ಯಗಳ ಬೇಡಾ; ಆದರೆ ಈ ಮೂವರು ಕೂಡಲ ಸಂಗಮನ ಸಾಕ್ಷಿಯಾಗಿ, ಸಜ್ಜನ ಶುದ್ಧ ಶಿವಾಚಾರಕ್ಕೆ ಬಾಹಿರರು.

೯೪೬ ಭಕ್ತನು ಶಾಂತನಾಗಿರಬೇಕು.
ತನ್ನ ಕುರಿತು ಬಂದ ಠಾವಿನಲ್ಲಿ ಸತ್ಯನಾಗಿರಬೇಕು;
ಭೂತ ಹಿತವಚನವ ನುಡಿಯಬೇಕು;
ಲಿಂಗ-ಜಂಗಮದಲ್ಲಿ ಕುಂದು-ನಿಂದೆಗಳಿಲ್ಲದಿರಬೇಕು;
ಸಕಲ ಪ್ರಾಣಿಗಳ ತನ್ನಂತೆ ಭಾವಿಸಬೇಕು;
ತನು-ಮನ-ಧನ,ಗುರು-ಲಿಂಗ-ಜಂಗಮಕ್ಕೆ ಸಮರ್ಪಿಸಬೇಕು
ಅಪಾತ್ರ ದಾನಗೆಯ್ಯದಿರಬೇಕು;
ಸಕಲ ಇಂದ್ರಿಯಂಗಳೂ ತನ್ನ ವಶಗತವಾಗಿರಬೇಕು;
ಇದೇ ಮೊದಲಲ್ಲಿ ಬೇಹ ಶೌಚ, ನೋಡಾ;
ಲಿಂಗವ ಪೂಜಿಸಿ ಪ್ರಸಾದವ ಪಡೆವಡೆ
ಎನಗಿದೆ ಸಾಧನವು, ನೋಡಾ, ಕೂಡಲ ಸಂಗಮದೇವಾ-

ಭಕ್ತನು ಯಾವಗಲೂ ಶಾಂತ ಸ್ವಭಾವದವನಾಗಿದ್ದು ತನ್ನೆಡೆಗೆ ಬಂದ ಜನರೊಡನೆ ಸತ್ಯವನ್ನಾಡಬೇಕು; ದಯಾಳುತನದಿಂದ ವರ್ತಿಸ

ಬೇಕು; ಲಿಂಗ-ಜಂಗಮರಲ್ಲಿಯ ಗುಣದೋಷಗಳನ್ನು ಎಣಿಸಬಾರದು; ಮತ್ತು ಎಲ್ಲ ಪ್ರಾಣಿಗಳು ತನಗೆ ಸರಿಸಮಾನವಾದವುಗಳೆಂದು ತಿಳಿಯ ಬೇಕು; ತನು ಮನಾದಿಗಳನ್ನು ಲಿಂಗ-ಜಂಗಮರಿಗೆ ಅರ್ಪಿಸಿ-ಕೂಡಲ ಸಂಗಮನ ಪ್ರಸಾದವನ್ನು ಪಡೆಯಬೇಕಾದುದೆ ನನ್ನ ಸಾಧನವು.

**೯೪೭ ಭವಿಯು ಭಕ್ತನ ಮಾಡುವುದೇ ಅನಾಚಾರ:**
**ಭಕ್ತನ ಭವಿಯು ಮಾಡುವುದೇ ಸದಾಚಾರ:**
**ಭವಿಯ ಪ್ರಸಾದವ ಭಕ್ತಕೊಂಬುದೇ ಸದಾಚಾರ,**
**ಭಕ್ತನ ಪ್ರಸಾದವ ಭವಿ ಕೊಂಬುವುದೇ ಅನಾಚಾರ,**
**ಇದು ಕಾರಣ, ಭವಿಯ ಪ್ರಸಾದವ ಕೊಂಡು**
**ನಾನು 'ಭವಂ ನಾಸ್ತಿ'ಯಾದೆ, ಕಾಣಾ, ಕೂಡಲ ಸಂಗಮ ದೇವಾ.**

ಭವದಿಂದ ಮುಕ್ತಿಯನ್ನು ಪಡೆಯಲು ಸಿದ್ಧಸ್ಥಿತಿಯಲ್ಲಿ ನೆಲೆಸಿದ ಶರಣನನ್ನು-ಇನ್ನೂ ಸಾಧಕನಾಗಿ ಭಕ್ತಿಯ ರೂಪರೇಕ್ಷೆಗಳನ್ನು ತಿಳಿಯಲು ಪ್ರಯತ್ನಿಸುತ್ತಿರುವ ಭಕ್ತನ ಸ್ಥಲದಲ್ಲಿ ನಿಲ್ಲಿಸುವದು ಅನಾಚಾರ; ಆದರೆ ಸಾಧಕನಾದ ಭಕ್ತನನ್ನು ಒಳ್ಳೆಯ ಮಾರ್ಗದರ್ಶನದಿಂದ-ಶರಣಸ್ಥಲದಲ್ಲಿ ನಿಲ್ಲುವಂತೆ ಮಾಡುವದೇ ಸದಾಚಾರ; ಆದುದರಿಂದ ಉತ್ತಮರಾದ ಶರಣರ ಪ್ರಸಾದವನುಂಡು ನಾನು ಪುನರ್ಜನ್ಮದ ಭಯತಪ್ಪಿಸಿಕೊಂಡೆ ಕೂಡಲ ಸಂಗಮ ದೇವಾ! ( ಭವಿ = ಶಿವ, ಶಿವ ಸ್ವರೂಪಿ ಜಂಗಮ—ಶರಣ ಎಂದು ಇಲ್ಲಿ ಅರ್ಥ ಮಾಡಲಾಗಿದೆ

**೯೪೮ ಮನ ಮುಟ್ಟದ ಅರ್ಪಿತಕ್ಕೆ ತನುವೇ ಅರ್ಪಿತ:**
**ತನು ಮುಟ್ಟದ ಭಕ್ತಿಗೆ ಮನವೇ ಅರ್ಪಿತವಯ್ಯಾ,**
**ಎನ್ನ ತನು ಮನವೆಲ್ಲವು ನಿಮ್ಮ ಚರಣಕ್ಕೆ ನೈವೇದ್ಯ ನೋಡಯ್ಯಾ.**

**ಶ್ರೀ (ಶ್ಲೋಕ) ದೀರ್ಘದಂಡ ನಮಸ್ಕಾರಂ | ನಿರ್ಲಜ್ಜಂ ಗುರುಸನ್ನಿಧೌ ||**
**ಶರೀರಮರ್ಥಪ್ರಾಣಂಚ | ಸದ್ಗುರು ಭ್ಯೋ ನಿವೇದಯೇತ್ ||**

**ಇಂತೆಂದುದಾಗಿ, ತ್ರಾಹಿ, ತ್ರಾಹಿ, ಶರಣಾರ್ಥಿ!**
**ನೀವೇ ಬಲ್ಲಿರಿ, ಕೂಡಲ ಸಂಗಮ ದೇವಾ.**

ಮನಃಪೂರ್ವಕವಾಗಿ ಸಲ್ಲಿಸಿದ ಪೂಜೆಯ ಫಲದಾಸೆಗೆ ಈದೇಹವನ್ನೇ ಈಶನ ಸೇವೆಗೆಸಮರ್ಪಿಸಿರುವೆನು; ದೈಹಿಕವಾಗಿ ಮಾಡಿದ ಭಕ್ತಿಯ ಫಲ ದಾಸೆಗಾಗಿ ನನ್ನಮನಸ್ಸೇ ಈಶನಧ್ಯಾನಕ್ಕೆ ಮೀಸಲವಾಗಿದೆ; ಹೇ ಭಕ್ತನಿಧಿ! ನನ್ನ ದೇಹ ಮತ್ತು ಮನಸ್ಸುಗಳೆರಡೂ ನಿಮ್ಮ ಚರಣ ಸೇವೆಗೆ ನೈವೇದ್ಯ ಮಾಡಿರುವೆನು; ಆದುದರಿಂದ ಸರ್ವಜ್ಞರಾದ ನೀವು, ಕೂಡಲ ಸಂಗಮ ದೇವಾ ಶರಣು ಬಂದ ಈ ಭಕ್ತನನ್ನು ರಕ್ಷಿಸಬೇಕು.

**೯೪೯ ಮನೆ ನೋಡಾ, ಬಡವರು: ಮನ ನೋಡಾ, ಸಂಪನ್ನರು !**
**ಧನ ನೋಡಾ, ಬಡವರು : ಘನ ಮನ ಸಂಪನ್ನರು !**
**ಕೂಡಲ ಸಂಗನ ಶರಣರು ಕೆರುಳಿಲ್ಲದ ಕಲಿಗಳು,**
**ಆರಿಗೂ ಉಪಮಿಸಬಾರದು.**

ಜನನ—ಮರಣಗಳ ಬಾಧೆ ತಪ್ಪಿಸಿಕೊಂಡು ಬಂಟರಾಗಿ ಮೆರೆಯುವ ಕೂಡಲ ಸಂಗಮ ದೇವರ ಶರಣರು ವ್ಯವಹಾರಜೀವನದಲ್ಲಿ ಬಡವರಾಗಿದ್ದರೂ ಅವರು ಸಯ್ಯುಮಧರ್ಮದಲ್ಲಿ ಸಂಪನ್ನರು-ಉತ್ತಮ ಮನೋಭೂಮಿಕೆಯುಳ್ಳವರು; ಶರಣರಿಗೆ ಸರಿಸಮಾನರಾದವರು ಯಾರೂಇಲ್ಲ!

**೯೫೦ ಮಂತ್ರ ಯೋಗ, ಹಠಯೋಗ, ಲಯಯೋಗ, ಭಕ್ತಿ ಯೋಗದ ಮೇಲೆನಿಂದ,**
**ರಾಜಯೋಗದ ಮೇಲೆ ನುಡಿವುದು ಕಾಣಿರೇ—**
**(ಶ್ಲೋಕ) ಯೋಗಾತೀತಂ ಮನಾತೀತಂ । ಭಾವಾತೀತಂ ನಿರಂಜನಂ ॥**
**ಸರ್ವಶೂನ್ಯಂ ನಿರಾಕಾರಂ | ಪರಮಾನಂದಮವ್ಯಯಂ ॥**
**ಎಂದುದಾಗಿ, ಶಿವಜೀವ: ಲಿಂಗಪ್ರಾಣಿ**
**ಶಿವಯೋಗವೆಂಬುದೇ ಐಕ್ಯ !**

**ಮಹಾಲಿಂಗೈಕ್ಯದ ನಿಲವ ಅನುಮಾನಿಗಳೆತ್ತ ಬಲ್ಲರು**
**ಕೂಡಲ ಸಂಗಮ ದೇವಾ ?**

ಅಂತರ್ಯಾಮಿಯಾದ ಶಿವನು, ಮಂತ್ರಯೋಗ, ಹಠಯೋಗ, ವಿನಾಸಿ ಯೋಗ, ಭಕ್ತಿಯೋಗ ಮತ್ತು ರಾಜಯೋಗಗಳಿಗೆಲ್ಲ ಮೀರಿದವನಾಗಿದ್ದಾನೆ; ಪ್ರಾಣನಲ್ಲಿ ಅಡಗಿ ಕುಳಿತಿರುವ ಅಂತರಾತ್ಮನು ಶಿವನೊಂದಿಗೆ ಕೂಡಿಕೊಳ್ಳುವದೇ ಐಕ್ಯ! ಜೀವಾತ್ಮಾ-ಅಂತರಾತ್ಮಾ-ಪರಮಾತ್ಮರ ಏಕರೂಪವೇ ಮಹಾಲಿಂಗೈಕ್ಯವು; ಕೂಡಲ ಸಂಗಮ ದೇವಾ, ಈ ಮಾತು ದ್ವೈತಮತಿಗಳಿಗೆ ತಿಳಿಯಲಾರದು!

**೯೫೧ ಮರ ಗಿಡ, ಬಳ್ಳಿ ಧಾನ್ಯಂಗಳ ಬೆಳಸೆಲ್ಲವ ತರಿಚರಿದು,**
**ಪ್ರಾಣವ ಕೊಂಡುಂಡು ಶರೀರವ ಹೊರೆವ ದೋಷಕ್ಕೆ**
**ಇನ್ನಾವುದು ವಿಧಿಯಯ್ಯಾ ?**
**ಒಂದಿಂದ್ರಿಯ ಮೊದಲಾಗಿ ಐದಿಂದ್ರಿಯ ಕಡೆಯಾದ**
**ಜೀವಜಾಲ ಮೊಲ್ಲದೇ ಚರಾಚರವೆಲ್ಲವ ?**
**ಅದು ಕಾರಣ,**
**ಕೂಡಲ ಸಂಗನ ಶರಣರು ಲಿಂಗಕ್ಕರ್ಪಿಸಿ**
**ಪ್ರಸಾದವ ಕೊಂಡು ನಿರ್ದೋಷಿಗಳಾಗಿ ಬದುಕಿದರು.**

ಹಾಯಾಗಿ ಬೆಳೆದು-ಹಣ್ಣುಹಂಪಲಗಳನ್ನು ಹೊತ್ತು ನಿಂತಿರುವ ಕರುಣಾ ಜೀವಿಗಳಾದ ಸಸ್ಯಗಳನ್ನು ಪೀಡಿಸಿ, ಅವುಗಳಿಗೆ ತೊಂದರೆಕೊಟ್ಟು ಅವುಗಳ ಅಸುವ ಹೀರಿ ರಸಕುಡಿದು ಈ ನನ್ನ ಶರೀರ ಸಮರ್ಥಮಾಡಿಕೊಳ್ಳುವ ಪಾಪಕ್ಕೆ ಯಾವ ಶಿಕ್ಷೆ ಕೂಡಲ ಸಂಗಮದೇವಾ? ಪಂಚಕರ್ಮೇಂದ್ರಿಗಳಿಂದ ಕೂಡಿದ ಈ ಜೀವನವು ಇಡೀ ಸೃಷ್ಟಿಯನ್ನೇ ನುಂಗುತ್ತದೆ; ಇದನ್ನು ತಿಳಿದ ಶರಣರು ತಮ್ಮ ಶರೀರವನ್ನು ಲಿಂಗಕ್ಕರ್ಪಿಸಿ ಈ ಪಾಪದಿಂದ ಮುಕ್ತರಾದರು.

**೯೫೨ ಮಾಟವಿಲ್ಲದ ಕೂಟವದೇತಕೋ?**
**ಕೂಟವಿಲ್ಲದ ಮಾಟವದೇತಕೋ?**

**ಮಾಟಕೂಟವೆಂಬೆರಡರ ಅನುವನರಿಯಬೇಕು,**
**ಸಟೆಯಿಲ್ಲದ ದಿಟ ಘಟಿಸಿ, ಸ್ವಯವಾಗಬೇಕು.**
**ಮಾಟಕೂಟವೆಂಬೆರಡರ ಅನುವನರಿತಾಗಳೆ-ಭಕ್ತಿ.**
**ಇದೇ ಕೂಟ, ಕೂಡಲ ಸಂಗಮ ದೇವಾ.**

ನಯ-ವಿನಯಗಳಿಲ್ಲದ ನಿಷ್ಠೆ ಅಯೋಗ್ಯವಾದದ್ದು; ನಿಷ್ಠೆಯಿಲ್ಲದ-ನಯ-ವಿನಯಗಳು ಉಪಯೋಗಕ್ಕೆ ಬಾರದವು; ನಯವಿನಯಗಳ ಮತ್ತು ನಿಷ್ಠೆಯ ಸಂಬಂಧಗಳನ್ನು ತಿಳಿದುಕೊಳ್ಳಬೇಕು; ಸತ್ಯದ ನಿಜ ಭಾವ ತಿಳಿನುಕೊಂಡು ತಾದಾತ್ಮ್ಯರಾಗ ಬೇಕು; ಆಗ ಭಕ್ತಿಉದಯಿಸಿ ಮುಕ್ತಿ ಪಥಕ್ಕೆ ಹೊಂದಿಕೊಳ್ಳುತ್ತೇವೆ; ಕೂಡಲ ಸಂಗಮ ದೇವಾ !

**೯೫೩ ಮಾಡುವಂತಿರಬೇಕು, ಮಾಡದಂತಿರಬೇಕು:**
**ಮಾಡುವ ಮಾಟದೊಳಗೆ ತಾನಿಲ್ಲದಂತಿರಬೇಕು:**
**ಕೂಡಲ ಸಂಗಮದೇವರ ನೆನೆವುತ್ತ ನೆನೆವುತ್ತ**
**ನೆನೆಯದಂತಿರಬೇಕು!**

ಭಕ್ತನು ತನ್ನ ಕಾಯಕರ್ಮಗಳನ್ನು ನಿತ್ಯವೂ ಮಾಡಿದರೂ ಕಿಂಚಿತ್ತು ಆಯಾಸಗೊಳ್ಳದೆ ನಗು ಮೊಗದಿಂದ-ತಾನಾವ ಕಾರ್ಯಗಳನ್ನು ಮಾಡಿಲ್ಲ ವೆಂಬಂತೆ ತೋರಿಸಿಕೊಳ್ಳುತ್ತಾನೆ; ಶರಣನು ತನ್ನ ಪ್ರಭಾವದಿಂದ ಗಣಂ ಗಳಿಗೆ ಪ್ರೇರಣೆ ಮಾಡಿ ಸಕಲ ಕಾರ್ಯವನ್ನು ಮಾಡಿಸಿ, ತಾನು ಸ್ವತಃ ಮಾಡದಿದ್ದರೂ, ಲೋಕಕ್ಕೆಕಲ್ಯಾಣ ಮಾಡುತ್ತಾನೆ. ಭಕ್ತನು ಕರ್ಮಕ ರ್ತೃವಾದರೆ, ಶರಣನು ಕರ್ಮಪ್ರೇರಕನಿರುತ್ತಾನೆ.

**೯೫೪ ಮಾಡುವಲ್ಲಿ ಎನ್ನ ನಾನರಿದು ಮಾಡಿದೆನಾದಡೆ,**
**ನೀಡುವಲ್ಲಿ ಎನ್ನ ನಾನರಿದು ನೀಡಿದೆನಾದಡೆ,**
**ನೀಡುವಲ್ಲಿ ರುಚಿಗೆ ಮನವೆಳಸಿ ಹಾರೈಸಿದೆನಾದಡೆ,**
**ನಿಮಗಂದೇ ದ್ರೋಹವಯ್ಯಾ!**
**ಮಾಡುವಲ್ಲಿ ನೀಡುವಲ್ಲಿ ಶುದ್ಧನಿಲ್ಲದಿರ್ದಡೆ;**

**ನೀನಂದೆ ಮೂಗ ಕೊಯಿ,**
**ಕೂಡಲ ಸಂಗಮದೇವಾ.**

ಲಿಂಗ—ಜಂಗಮ ಪೂಜೆ ಮಾಡುವಾಗ "ನಾನು" ಮಾಡುತ್ತಿರುವೆನೆಂದು ಅಹಂಕಾರ ಹುಟ್ಟಿದರೆ, ಜಂಗಮ — ಗಣಂಗಳಿಗೆ ದಾಸೋಹ ಮಾಡಿಸುತ್ತಿರುವಾಗ "ನಾನು" ಎಡೆ ನೀಡುತ್ತಿರುವೆನೆಂಬ ಅಹಂಕಾರ ಹುಟ್ಟಿದ್ದಾದರೆ; ಮತ್ತು ಜಂಗಮಾರ್ಚನೆಗಿಂತ ಮೊದಲು ಆ ಅಡಿಗೆಯ ಸವಿಗೆ ನಾನು ಮನಸೋತರೆ, ಆ ದಿನವೆ ನಿಮ್ಮ ಭಕ್ತಿಗೆ ನಾನು ದ್ರೋಹ ಮಾಡಿದಂತಾಗುತ್ತದೆ. ಶುಚಿ ಮನವಿಲ್ಲದ ದಿನವೇ ನನಗೆ ತಕ್ಕ ಶಿಕ್ಷೆ ಕೊಡು, ಕೂಡಲ ಸಂಗಮದೇವಾ ?

**೯೩೩ ಮಾಯೆವಿಡಿದು ಜೀವಿಸುವ ಜೀವಕನಲ್ಲ !**
**ಅದೇನು ಕಾರಣ?**
**ಆತ ಘನಲಿಂಗವಿಡಿದು ಜೀವಿಸುವ ಜೀವಕನಾಗಿ.**
**ಹಸಿ ವಿಡಿದು ಭುಂಜಿಸುವ ಭುಂಜಕನಲ್ಲ!**
**ಅದೇನು ಕಾರಣ?**
**ಆತ ಮಹಾ ಪ್ರಸಾದವಿಡಿದು ಭುಂಜಿಸುವ ಭುಂಜಕನಾಗಿ.**
**ವಿಷಯ ವಿಡಿದು ರಂಜಿಸುವ ರಂಜಕನಲ್ಲ!**
**ಅದೇನು ಕಾರಣ?**
**ಆತ ಸಹಜವಿಡಿದು ರಂಜಿಸುವ ರಂಜಿಕನಾಗಿ-**
**ಇಂತೀ ತ್ರಿವಿಧ ಒಂದೆಂದರಿದು**
**ಪರಮಾರ್ಥಬಲ್ಲಿ ಚರಿಸುವ ಶರಣಂಗೆ ಶರಣೆನುತಿರ್ದೆನಯ್ಯಾ**
**ಕೂಡಲ ಸಂಗಮದೇವಾ.**

ಸತ್ಕಲಾರೂಪನು, ಚಿತ್ಕಲಾರೂಪನು, ಆನಂದ ಕಲಾರೂಪನು ಒಬ್ಬನೇ ಎಂದು ತಿಳಿದು ಶಿವಾದ್ವೈತಿಯಾಗಿ, ಕ್ರಿಯಾಭಕ್ತಿ, ಜ್ಞಾನ ಭಕ್ತಿ, ಮತ್ತು ಮಹಾಜ್ಞಾನ ಭಕ್ತಿಗಳೆಲ್ಲವನ್ನು ಏಕನಿಷ್ಠೆಯಿಂದ ಆಚರಿಸಿ ಮಾಯಾ ಮೋಹಗಳನ್ನು ಕೊಂದು ಪರಮಾರ್ಥದಾರಿಯಲ್ಲಿ ಸಾಗಿದ ಶರಣನಿಗೆ ಶಿರಬಾಗುವೆನು ಕೂಡಲ ಸಂಗಮ ದೇವಾ !

೯೫೬ ಮುಂಜಾವದಲ್ಲೆದ್ದು ಲಿಂಗದಂಘ್ರಿಯ ಮುಟ್ಟಿ
ಸುಪ್ರಭಾತದಲ್ಲಿ ಶಿವಶರಣರ ಮುಖವ ನೋಡುವದು.
ಹುಟ್ಟಿದ ಜನ್ಮಕ್ಕೆ ಇದೆ ಸಫಲವು,
ಸತ್ಯವಚನವಿಂತೆಂದುದಾಗಿ.
ಇಂತಲ್ಲದವರನೊಲ್ಲ ನಮ್ಮ ಕೂಡಲ ಸಂಗಮದೇವ.

ಕೋಳಿಕೂಗದ ಮುನ್ನವೆ ಎದ್ದು ಶಿವಶರಣರ ದರ್ಶನ ತೆಗೆದು ಕೊಂಡು, ಸರೋಜ ಮಿತ್ರ ನುದಯಿಸುವ ಮುನ್ನ ಶಿವಲಿಂಗಪಾದಕ್ಕೆ ನಮಸ್ಕಾರ ಮಾಡಿದರೆ ಈ ಜನ್ಮದಲ್ಲಿ ಹುಟ್ಟಿಬಂದದ್ದಕ್ಕೆ ಜೀವನ ಸಾರ್ಥಕ ವಾಗಿ ಉತ್ತಮ ಫಲ ಸಿಗುತ್ತದೆ; ಹೀಗೆ ಸತ್ಯಸಂಧರ ವಾಣಿ ಸಾರುತ್ತದೆ; ಈ ರೀತಿ ಆಚರಿಸದಿದ್ದವರನ್ನು ಕೂಡಲ ಸಂಗಮ ದೇವರು ಮೆಚ್ಚುವ ದಿಲ್ಲ !

೯೫೭ ಮೆಲ್ಲಮೆಲ್ಲನೆ ಭಕ್ತನೆನಿಸಿಕೊಂಬೆ:
ಮೆಲ್ಲಮೆಲ್ಲನೆ ಮಾಹೇಶ್ವರ ನೆನಿಸಿಕೊಂಬೆ:
ಮೆಲ್ಲಮೆಲ್ಲನೆ ಪ್ರಾಸಾದಿ ಎನಿಸಿಕೊಂಬೆ:
ಮೆಲ್ಲಮೆಲ್ಲನೆ ಪ್ರಾಣಲಿಂಗಿ ಎನಿಸಿಕೊಂಬೆ:
ಮೆಲ್ಲಮೆಲ್ಲನೆ ಶರಣನೆನಿಸಿಕೊಂಬೆ:
ಮೆಲ್ಲಮೆಲ್ಲನೆ ಐಕ್ಯನೆನಿಸಿಕೊಂಬೆ:
ಮೆಲ್ಲಮೆಲ್ಲನೆ ಷಟ್‌ಸ್ಥಳವ ಮೀರಿ ನಿರವಯ ಸ್ಥಲವ
ನೆಯ್ದುವೆನಯ್ಯಾ ಕೂಡಲ ಸಂಗಮದೇವಾ.

ಹೇ ದಯಾನಿಧೆ ಕೂಡಲ ಸಂಗಮ ದೇವಾ ! ನಿಮ್ಮ ಕೃಪೆಯಿಂದ ಮೊದಲು ಭಕ್ತನಾಗುವೆ; ಅನಂತರ ಕ್ರಮವಾಗಿ, ಮಹೇಶ್ವನಾಗುವೆ; ಪ್ರಸಾದಿಯಾಗುವೆ; ಪ್ರಾಣಲಿಂಗಿಯಾಗುವೆ; ಶರಣನಾಗುವೆ; ಐಕ್ಯಮೆಟ್ಟಿಲ ದಲ್ಲಿ ನಿಲ್ಲುವೆ; ಈ ಪ್ರಕಾರ ತರಗತಿಹೊಂದುತ್ತ ಈ ಆರು ಸ್ಥಲಗಳನ್ನು ದಾಟಿ ಬಯಲಾಗುವೆನು.

೯೫೮ ಲಿಂಗಕ್ಕೆಂದೆ ನೆನೆವೆ, ಲಿಂಗಕ್ಕೆಂದೆ ಮಾಡುವೆ,
ಲಿಂಗಕ್ಕೆಂದೆ ಕೊಡುವೆ ನಾನಯ್ಯಾ.

ಸಕಲ ಪದಾರ್ಥಂಗಳ ಲಿಂಗಕ್ಕೆಂದೆ ಭಾವಿಸುವೆ:
ಅಂಗಗುಣಂಗಳನರಿಯೆನಯ್ಯಾ.
ಲಿಂಗಕ್ಕೆಂದೆ ಕಾಮಿಸುವೆನು ನಿಃಕಾಮಿಯಾಗಿ.
ಎನ್ನ ದೇಹೇಂದ್ರಿಯ ಮನಃಪ್ರಾಣಾದಿಗಳು ಲಿಂಗದ ಸತಿಯರಾಗಿ
ಲಿಂಗಕ್ಕೆಂದೆ ಬಯಸಿ, ಲಿಂಗಪ್ರಾಣಿಗಳಾದ ಕಾರಣಾ
ಲಿಂಗಕ್ಕೆಂದೆ ಬಯಸಿ, ಲಿಂಗಪ್ರಾಣಿಗಳಾದ ಕಾರಣಾ
ಲಿಂಗಕ್ಕೆಂದೆ ಕೈಕೊಂಡೆನು:
ಅನರ್ಪಿತ ನರಿಯೆ, ಕೂಡಲ ಸಂಗಮದೇವಾ.

ನಾನು ಪೂಜಿಸುವದು, ನೈವೇದ್ಯ ಮಾಡುವದು-ದಾನಕೊಡುವದು ಎಲ್ಲವೂ ಲಿಂಗಪ್ರೀತ್ಯರ್ಥವಾಗಿಯೇ; ಐಹಿಕ ಸುಖವನ್ನು ತ್ಯಾಗಮಾಡಿ ಫಲಾಪೇಕ್ಷೆಯಿಲ್ಲದೆ ನಾನು ಪ್ರೇಮಮಾಡುವದು ಲಿಂಗದೊಲವಿಗಾಗಿ; ನನ್ನ ಸರ್ವಾಂಗಗಳೂ ಲಿಂಗಕ್ಕೆ ಸತಿಯರಾಗಿ ಲಿಂಗಾನುವರ್ತಿಗಳಾದ ಕಾರಣ ಲಿಂಗಸೇವೆಗೆಂದೆ ನಾನು ಈ ಮಾರ್ಗ-ಈ ವ್ರತ ಕೈಕೊಂಡೆನು ಕೂಡಲ ಸಂಗಮ ದೇವಾ !

೯೫೯ ಲಿಂಗ ಗಂಭೀರ ನಿಸ್ಸಂಗಿಯ ಸಂಗವೇನೆಂಬೆನಯ್ಯಾ?
ಪರಮಾರ್ಥದಿಂದ ಗಮಿಸುವ ಗಮನವ ನಾನೇನೆಂಬೆನಯ್ಯಾ ?
ಕೂಡಲ ಸಂಗನ ಶರಣರು ಕಾಯದ ನೆವದಿಂದ
ಅರ್ಪಿಸುವ ಬೆಡಗ ನಾನೇನೆಂಬೆ?

ಲಿಂಗಧ್ಯಾನದಲ್ಲಿ ಚಿತ್ತಚಂಚಲವಾದವರ ಸಹವಾಸ ಎಂತಹದೆಂದು ಹೇಳಲಿ? ಪರಮಾರ್ಥಕ್ಕಾಗಿ ಶ್ರಮಿಸುವ ಜೀವನದ ಮಹತಿ ಏನೆಂದು ವರ್ಣಿಸಲಿ ! ಕೂಡಲ ಸಂಗಮ ದೇವರ ಶರಣರು ರಕ್ಷಿಸುವದಿಲ್ಲ ಎಂಬ ಉಪಾಯದಿಂದ ಸಂಸಾರ ಪರಿತ್ಯಾಗ ಮಾಡುವವರನ್ನು ಏನೆಂದು ಕರೆಯಲಿ !!

**೯೬೦ ಲೋಕದಿಚ್ಛೆಯ ನಡೆವವನಲ್ಲ; ಲೋಕದಿಚ್ಛೆಯ ನುಡಿವ ವನಲ್ಲ;**
**'ಲೋಕ ವಿರಹಿತ ಶರಣ, ಶರಣ ವಿರಹಿತ ಲೋಕ'**
**ಎಂಬುದು ಕಾಣಬಂದಿತ್ತು, ನೋಡಾ !**
**ಲಿಂಗವೆ ಗೂಡವಾಗಿ, ಜಂಗಮಕೆ ಸ್ವಾಯತವಾಗಿ,**
**ಪ್ರಸಾದವೆ ಪ್ರಾಣವಾಗಿ ಪರಿಣಾಮದಲ್ಲಿಪ್ಪ ನೋಡಯ್ಯಾ;**
**ಕೂಡಲ ಸಂಗಮದೇವಾ,**
**ನಿಮ್ಮ ಶರಣ ಚನ್ನಬಸವಣ್ಣಂಗೆ "ನಮೋನಮಃ" ಎಂಬೆನು**

ಜನ ಮೆಚ್ಚಿಕೊಳ್ಳುವಂತೆ ನಡೆಯುವವನು, ಮಾತನಾಡುವವನು ಶರಣನಲ್ಲ; ಶರಣನು ಬಾಹ್ಯ ಪ್ರಪಂಚದಿಂದ ಅಲಿಪ್ತನು; ವಿಷಯಿಗಳು ಶರಣರ ಸತ್ಸಂಗದಿಂದ ದೂರವಿರುತ್ತಾರೆ; ಲಿಂಗನು ಅಂತರಾತ್ಮನಾಗಿ ಜಂಗಮನಲ್ಲಿ ನೆಲೆಸಿ—ಕರುಣದಿಂದ ಜೀವಾತ್ಮನನ್ನಾಗಿ ಮಾಡಿಕೊಂಡು ದಯಾಳು ಮೂರ್ತಿಯಾಗಿ ಕಣ್ಣಿಗೆ ತೋರುತ್ತಾನೆ ! ಕೂಡಲ ಸಂಗಮ ದೇವಾ, ನಿಮ್ಮ ಶರಣ ಚನ್ನಬಸವಣ್ಣನಿಗೆ ಸಾಷ್ಟಾಂಗವೆರಗುವೆನು.

**೯೬೧ ವನದ ಕೋಗಿಲೆ ಮನೆಗೆ ಬಂದರೆ, ತನ್ನ ವನವನೆನೆ ವುದು ಮಾಣ್ಬುದೆ ?**
**ಮಲೆಯ ಗಜವು ಮನೆಗೆ ಬಂದರೆ, ತನ್ನ ಮಲೆಯ ನೆನೆ ವುದ ಮಾಣ್ಬುದೆ ?**
**ಕೂಡಲ ಸಂಗನ ಶರಣರು ಮರೆದು ಮರ್ತ್ಯಕ್ಕೆ ಬಂದರೆ,**
**ತಮ್ಮ ಆದಿ ಮಧ್ಯಾಂತರಂಗದ ಲಿಂಗವ ನೆನೆವುದ ಮಾಣ್ಬರೆ ?**

ವಸಂತ ಕಾಲದಲ್ಲಿ ವನಗಳಲ್ಲಿ ಮಧುರ ಗೀತ ಹಾಡುವ ಕೋಗಿಲೆ ಯನ್ನು ಮನೆಯಲ್ಲಿ ಪಂಜರದಲ್ಲಿ ಹಾಕಿಟ್ಟರೆ ಅದು ವನದ ರಮಣೀಯತೆ ಯನ್ನು ನೆನೆದು ಹಾಡುತ್ತದೆ; ಮಲೆನಾಡ ಆನೆಯನ್ನು ಹಿಡಿದು ಮನೆ ಯಲ್ಲಿ ಕಟಿದರೆ ಅದು ಮಲೆನಾಡ ಸವಿನೆನಪನ್ನು ಮರೆಯಲಾರದು; ಒಂದು

ವೇಳೆ ಮೈಮರೆತು ಕಾರಣಾಂತರಗಳಿಂದ ಕೂಡಲಸಂಗಮದೇವರ ಶರಣರು ಇಹಲೋಕದಲ್ಲಿ ಹುಟ್ಟಿಬಂದರೆ, ಈ ಪೂರ್ವದಲ್ಲಿ ಮತ್ತುಮಧ್ಯಂತರದಲ್ಲಿ ಗತಿಸಿದ ಜೀವನದ ಅಂತರಂಗದಲ್ಲಿ ಲಿಂಗವನ್ನು ಮರೆತು ಬಿಡುವದು-ನಾಮೋಚ್ಚರಣೆ ಮಾಡದೆ ಇರುವದು ಎಂದಿಗೂ ಸಾಧ್ಯವಿಲ್ಲ.

**೯೬೨ ವೇದ ವೇದಾಂತಗಳಿಗೆ ಅಸಾಧ್ಯವಾದ ಅನುಪಮ ಲಿಂಗವ**

**ತಂದು ಕೊಟ್ಟನಯ್ಯಾ ಸದ್ಗುರು ಎನ್ನ ಕರಸ್ಥಲಕ್ಕೆ**
**ನಾದ ಬಿಂದುಕಳೆಗಳಿಗೆ ಭೇದ್ಯವಾದ ಅಚಲಿತ ಲಿಂಗವ**
**ತಂದು ಕೊಟ್ಟನಯ್ಯಾ ಸದ್ಗುರು ಎನ್ನಕರಸ್ಥಲಕ್ಕೆ**
**ವಾಙ್ಮನಕ್ಕ ಗೋಚರವಾದ ಅಖಂಡಿತ ಲಿಂಗವ**
**ತಂದು ಕೊಟ್ಟನಯ್ಯಾ ಸದ್ಗುರು ಎನ್ನ ಕರಸ್ಥಲಕ್ಕೆ**
**ಇನ್ನು ನಾನು ಬದುಕಿದೆನು, ನಾ ಬಯಸುವ ಬಯಕೆ**
**ಕೈಸಾರಿತಿಂದು ಕೂಡಲ ಸಂಗಮ ದೇವಾ.**

ವೇದಗಳಿಗೆ ನಿಲುಕದ, ಶಬ್ದ-ಬಿಂದು,-ತೇಜ ಗಳಿಗೂ ಭೇದಿಸಲಸಾಧ್ಯವಾದ, ಧ್ವನಿ,-ಮತ್ತು ಮನಸ್ಸಿಗೂ ತಿಳಿಯದಂಥ, ಅನುಪಮವಾದಂಥ, ನಿಶ್ಚಲವಾದಂಥ, ಪರಿಪೂರ್ಣವಾದಂಥ ಲಿಂಗವನ್ನು ನನ್ನ ಗುರುಗಳು ನನ್ನ ಕರಕಮಲದಲ್ಲಿಟ್ಟದ್ದ ಕಾರಣ ನಾನು ಬದುಕಿರಲು ಸಾಧ್ಯವಾಯಿತು; ಮತ್ತು ನನ್ನ ಮನೋಬಯಕೆ ಇಂದು ಪೂರೈಸಿತು ಕೂಡಲ ಸಂಗಮ ದೇವಾ !

**೯೬೩ ಶರಣ ಲಿಂಗದಲ್ಲಿ ಕೂಡಲು ಮಹಾಪದಾರ್ಥವಯ್ಯಾ**
**ದೃಢಾ ದೃಢಾಂಗ ಮಧ್ಯಸ್ಥನಾಗಿ**
**ಕೂಡಲ ಸಂಗಮ ದೇವರ ನಾಮವತಿಸುಖವೆಂದುದು.**

ಶರಣನು ಲಿಂಗದಲ್ಲಿ ಬೆರೆಯಲು ಅವನು ಮಹಾವಿಭೂತಿಯಾಗುವನು; ಅವನು ಅಜರಾಮರನಾಗುವನು; ಕೂಡಲ ಸಂಗಮ ದೇವರ ನಾಮ ಸ್ಮರಣೆಯು ಸಕ್ಕರೆಯ ಸವಿಸವಿದಂತೆ ಸುಖದಾಯಕವಾಗಿದೆ ಎಂದು ನುಡಿವನು.

೯೬೪ ಶಿವನೇ ಜಗತ್ರಯಕ್ಕೊಡೆಯನೆಂದುದು ವೇದ;
ಉತ್ಪತ್ತಿ – ಸ್ಥಿತಿ – ಲಯ ಕಾರಣನೆಂದುದು ವೇದ;
'ಈಶ್ವರಃ ಸರ್ವ ಜಗತ್ ಪ್ರಭುಃ ಪ್ರೇರಕೋ ವಿಶ್ವ
ಭುಕ್' ಎಂದುದು ಶ್ರುತಿ.
ಇದು ಕಾರಣ, ಕೂಡಲ ಸಂಗಮದೇವನೊಬ್ಬನೇ
ದೇವನು.

ಮೂಲೋಕದೊಡೆಯನಾದವನು, ಹುಟ್ಟು, ಬದುಕು, ಸಾವುಗಳಿಗೂ ಕಾರಣನಾದವನೂ ಶಿವನೆಂದು ವೇದಗಳು ಸಾರುತ್ತವೆ; ಈಶ್ವರನು ವಿಶ್ವವ್ಯಾಪಿಯೂ, ವಿಶ್ವಚೈತನ್ಯನೂ ಮತ್ತು ವಿಶ್ವದ ಪ್ರಭುವೂ ಆಗಿರುವನೆಂದು ಶ್ರುತಿ ಹೇಳುತ್ತದೆ; ಆದ ಕಾರಣ ಜಗದ್ರಕ್ಷಕನಾದ ಕೂಡಲ ಸಂಗಮದೇವನೊಬ್ಬನೆ ದೇವನು—ಮತ್ತಾರೂ ಅಲ್ಲ.

೯೬೫ ಶ್ರೀಗುರು ಪ್ರಾಣಲಿಂಗವನು ಕರತಳಾಮಳಕವ ಮಾಡಿ
ಕರಸ್ಥಲಕ್ಕೆ ತಂದು ಕೊಟ್ಟನಾಗಿ,
ಒಳಗೆನ್ನದೆ ಹೊರಗೆನ್ನದೆ ಆ ಲಿಂಗವ ನಚ್ಚಿ ಮೆಚ್ಚಿ
ಹರುಷದೊಳೋಲಾಡುವೆ.
ಅದೆಂತೆಂದೊಡೆ—
(ಶ್ಲೋಕ) ಯತೋ ವಾಚೋ ನಿವರ್ತಂತೆ | ಅಪ್ರಾಪ್ಯ
ಮನಸಾ ಸಹ ‖
ನಾದ ಬಿಂದು ಕಳಾತೀತಂ | ಗುರುಣಾ ಲಿಂಗ ಮುದ್ಭ
ವಮ್ ‖
ಇಂತೆಂದುದಾಗಿ, ಮಹಾಘನಲಿಂಗವ ಪಡೆದು ಆನಂ
ದಿಸುವೆ
ಕೂಡಲ ಸಂಗಮ ದೇವಾ.

ಸರ್ವಾತೀತವಾದ ಲಿಂಗವು ಶ್ರೀ ಗುರುವಿನ ಕರುಣೆಯಿಂದ ನನಗೆ ಲಭಿಸಿದೆ; ಹಗಲಿರುಳೂ ಕುಳಿತಲ್ಲಿ, ನಿಂದಲ್ಲಿ, ಹೋದಲ್ಲಿ, ಬಂದಲ್ಲಿ, ಬಹು

ವಾಗಿ ಮೆಚ್ಚಿಕೊಂಡು ಹಾಡಿ ಕುಣಿದು ಸುಖದಿಂದಿರುವೆ; ಆ ಮಹಾಘನ ಲಿಂಗವನ್ನು ಕಣ್ಣಾರೆಕಂಡು ಆನಂದ ಭರಿತನಾಗುವೆನು ಕೂಡಲ ಸಂಗಮ ದೇವಾ.

**೯೬೬ ಸಂಜೆಯ ಮಂಜಿನ ಕಪ್ಪು: ಅಂಜಿದಡೆ ಶಂಕೆ ಅದೃಶ್ಯವಾಗಿ ನಿಂದಿತ್ತು**
**ತನ್ನ ಭಾವದ ನಟನೆ ನಡೆವನ್ನಕ್ಕ ನಡೆಯಿತ್ತು;**
**ಅರುನಿಂದಲ್ಲಿಯೇ ನಿಂದಿತ್ತು.**
**ಅದರಂತುವನರಿದಡೆ ಹಿಂದೆ ಮುಂದೆ,**
**ಕೂಡಲ ಸಂಗಮ ದೇವರ ನಿಲವು ತಾನೆ !**

ಸೂರ್ಯಾಸ್ತವಾಗಿ ಸುತ್ತಲು ಮಬ್ಬುಗತ್ತಲು ಹರಡಿದೆ; ಆ ಮಬ್ಬು ಗತ್ತಲೆಯಲ್ಲಿ ಮುಂದೆ ಹೋಗಲು ಅಂಜಿಕೆಯಾದರೆ ಮನಸ್ಸಿನಲ್ಲಿ ರೂಪ ಗೊಂಡ ಭೂತವು ಮನಸ್ಸಿನಿಂದ ಮರೆಯಾಗಿ ಹೊರಗೆ ಬಂದು ಎದುರಿಗೆ ನಿಂತಿದೆ; ಅಂಜಿಕೆಯು ಮಾಯವಾಗದ ಹೊರತು ಅದು ತನ್ನ ಜಗಬಿಟ್ಟು ಕದಲದೆ ನಿಂತಿರುತ್ತದೆ; ಆದರೆ ಭೀತಿಯ ಭೂತನನ್ನು ಹೊಡೆದೋಡಿಸಿ ಅಂತರಂಗದಲ್ಲಿ ವಿಚಾರ ಮಾಡಿ ತಿಳಿದರೆ ಅಲ್ಲಿ ಕೂಡಲ ಸಂಗಮ ದೇವರು ನಿಂತುಕೊಂಡಿದ್ದಾನೆ.

**೯೬೭ ಹಲವು ಕಾಲ ಹಂಸನ ಸಂಗವಿದ್ದರೇನೋ,**
**ಬಕ ಶುಚಿಯಾಗಬಲ್ಲುದೆ?**
**ಕಲ್ಪತರುವಿನ ಸಂಗವಿದ್ದರೇನೋ,**
**ಕೊರಡು ಕೊನರಾಗಿ ಫಲಿಸಬಲ್ಲುದೆ?**
**ಗಂಗಾನದಿಯೊಳಗೆ ಪಾಷಾಣ ವಿದ್ದರೇನೋ,**
**ಮೃದುವಾಗಬಲ್ಲುದೆ?**
**ಕಾಶೀ ಕ್ಷೇತ್ರದಲ್ಲಿ ಶುನಕವಿದ್ದರೇನೋ,**
**ಅದರ ಕ್ಷೀರ, ಪಂಚಾಮೃತಕ್ಕೆ ಸಲ್ಲುವುದೆ?**
**ತೀರ್ಥದಲ್ಲಿ ಗರ್ದಭವಿದ್ದರೇನೋ, ಕಾರಣಿಕನಾಗಬ ಲ್ಲುದೆ?**

**ಖಂಡುಗ ಹಾಲೊಳಗೆ ಒಂದು ಇದ್ದಲಿ ಇದ್ದರೇನೋ,**
**ಬಿಳುಪಾಗ ಬಲ್ಲುದೆ?**
**ಕೂಡಲ ಸಂಗಮದೇವಾ,**
**ನಿಮ್ಮ ಶರಣರ ಸಂಗ ವಿದ್ದಡೇನೋ,**
**ಅಸಜ್ಜನನು ಸದ್ಭಕ್ತನಾಗಬಲ್ಲನೆ?**

ಜಾತಿ-ಸ್ವಭಾವಗಳನ್ನು ಯಾವ ವಸ್ತುವಾಗಲಿ, ಪ್ರಾಣಿಯಾಗಲಿ, ಕೇವಲ ಉತ್ತಮಸ್ವಭಾವ ಜಾತಿ-ವಸ್ತುಗಳೊಂದಿಗೆ,ಪ್ರಾಣಿವರ್ಗಗಳೊಂದಿಗೆ ಕೂಡಿಕೊಂಡಿರುವದರಿಂದ ಸ್ವಭಾವ ತಿದ್ದಿಕೊಳ್ಳುವದು ಅಸಾಧ್ಯ! ಆದ ಕಾರಣ ದುಷ್ಟ ಮನುಷ್ಯನು ಶರಣರ ಸಹವಾಸ ಮಾಡಿದರೂ ಅವನು ಭಕ್ತ ನಾಗಲಾರನು; ಕೂಡಲ ಸಂಗಮದೇವಾ!

**೯೬೮ ಹಸಿವರತಲ್ಲದೆ ಪ್ರಸಾದಿಯಲ್ಲ;**
**ತೃಷಿಯರತಲ್ಲದೆ ಪಾದೋದಕಿಯಲ್ಲ;**
**ನಿದ್ರೆಯರತಲ್ಲದೆ ಭವವಿರಹಿತನಲ್ಲ.**
**ಅನಲ ಪವನ ಗುಣವರತಲ್ಲದೆ ಜನನ-ಮರಣವಿರಹಿತನಲ್ಲ.**
**ಇದು ಕಾರಣ,**
**ಕೂಡಲ ಸಂಗಯ್ಯನಲ್ಲಿ ಎಲ್ಲರಿಗೆಲ್ಲಿಯದೋ ಲಿಂಗೈಕ್ಯ?**

ಹಸಿವೆಯು ಸಂಪೂರ್ಣವಾಗಿ ಹಿಂಗದ ಹೊರತು ಪ್ರಸಾದಿಯಾಗಲಾರೆನು; ನೀರಡಿಕೆಯೂ ಪರಿಪೂರ್ಣವಾಗಿ ಕಡಿಮೆಯಾಗದ ವಿನಃ ಪಾದೋದಕ ಸಿಗುವದಿಲ್ಲ; ನಿದ್ರಾಸಕ್ತಿಯು ತೊಲಗದ ಹೊರತು ಭವದಿಂದ ಮುಕ್ತಿ ದೊರೆಯಲಾರದು; ಸಿಟ್ಟು ಮತ್ಸರ ಗುಣಗಳನ್ನು ಬಿಡದ ಹೊರತು ಜನನ-ಮರಣ ಚಕ್ರದಿಂದ ಪಾರಾಗುವದು ಅಶಕ್ಯ; ಆದುದರಿಂದ ಕೂಡಲ ಸಂಗಮ ದೇವರಲ್ಲಿ ಎಲ್ಲರಿಗೂ ಮುಕ್ತಿ ಸಂಪದ ದೊರೆಯಲಾರದು.

**೯೬೯ ಹಾವ ಕಿಚ್ಚ ಮುಟ್ಟಿಹ ಶಿಶುವೆಂದು**
**ಹೆತ್ತ ತಾಯಿ ಮಗನ ಬೆಂಬತ್ತಿ ಬಪ್ಪಂತೆ—**
**ಎನ್ನೊಡ ನೊಡನೆ ಕೂಡಲ ಸಂಗಮ ದೇವ**
**ಕಾಯ್ದು ಕೊಂಡಿಪ್ಪನಯ್ಯಾ!**

ಸಂಣ ಮಗುವು ಸರಿಯುತ್ತ ಸರಿಯುತ್ತ ಸಂದಿಯಲ್ಲಿ ಹಾವನ್ನಾಗಲಿ, ಒಲೆಯೊಳಗಿನ ಬೆಂಕಿಯನ್ನಾಗಲಿ ಹಿಡಿದು, ಕೈ ಮೈಗೆ ಘಾಯವ ಮಾಡಿಕೊಂಡು ಜೀವನಕ್ಕೆ ಅಪಾಯ ಮಾಡಿಕೊಂಡೀತೆಂದು ಹಡೆದ ತಾಯಿ ಮಗುವಿನ ಬೆನ್ನಹಿಂದೆ ಬರುವಂತೆ, ನನ್ನ ರಕ್ಷಣೆಗೆ ಕೂಡಲ ಸಂಗಮ ದೇವನು ನನ್ನನ್ನು ಕಾಯುತ್ತನಿಂತಿರುವನು.

**೯೭೦ ಅವಳ ವಚನ ಬೆಲ್ಲದಂತೆ: ಹೃದಯದಲ್ಲಿಪ್ಪುದೆಲ್ಲ ನಂಜುಕಂಡಯ್ಯಾ:**

**ಕಂಗಳ ಲೊಬ್ಬನ ಕರೆವಳು,**
**ಮನದಲೊಬ್ಬನ ನೆನೆವಳು,**
**ವಚನದಲೊಬ್ಬನ ನೆರೆವಳು !**
**ಇಂತಿವಳ ತನು ಒಂದೆಸೆ, ಮನ ಒಂದೆಸೆ, ಮಾತೊಂದೆಸೆ!**
**ಈ ಮಾನಸಗಳ್ಳಿಯ ನನ್ನವಳೆಂದು ನಂಬುವ**
**ಕುರಿನರರನೇ ನೆಂಬೆನಯ್ಯಾ, ಕೂಡಲಸಂಗಮ ದೇವಾ?**

ಸವಿಮಾತುಗಳನ್ನಾಡುತ್ತ ಮರಳು ಮಾಡುವ ಇವಳ ಹೃದಯದಲ್ಲಿ ವಿಷ ತುಂಬಿದೆ; ಕಣ್ಣ ಸನ್ನೆಮಾಡಿಕರೆಯುವುದು ಒಬ್ಬನನ್ನು; ಮನಸಿನ ನಲ್ಲಿ ಮಗುದೊಬ್ಬನ ಕನವರಿಕೆ; ಕೊನೆಗೆ ಮಾತು ಕೊಟ್ಟು ಕೂಡುವದು ಇನ್ನೊಬ್ಬನಲ್ಲಿ; ತಾಳಮೇಳವಿಲ್ಲದ ಈ ಹೆಂಗಸಿನ ಸಂಗಬಯಸುವ ಕ್ಷುದ್ರ ಮಾನವನ್ನು ಏನೆಂದು ಕರೆಯಲಿ ಕೂಡಲ ಸಂಗಮ ದೇವಾ ! ಡಾಂಭಿಕ ಭಕ್ತರ ಭಕ್ತಿಯು ಈ ಹೆಂಗಸಿನಂತೆ.

**೯೭೧ ಹೇಡಿ ಬಿರುದ ಕಟ್ಟಿದರೆ ಕಲಿಯಪ್ಪನೇ ?**

**ಒರೆಯ ಬಿಚ್ಚಿರಿಯದಿರ್ದಡೆ ಲೋಕ ಮೆಚ್ಚುವುದೆ?**
**ಚಲ್ಲಣವನುಟ್ಟು ಗರುಡಿಯ ಕಟ್ಟಿ, ಸಾಧನೆಯ ಮಾಡುವನಂತೆ**
**ತನ್ನ ತಪ್ಪಿಸಿಕೊಂಡೊಡೆ ಶಿವನು ಮೆಚ್ಚುವನೆ?**
**ಅರಿಯದವರಿಗೆ ಒಳ್ಳೆಹೆಡೆಯೆತ್ತಿ ತೋರಿದಂತೆ**
**ಬೊಳ್ಳೆಗನ ಭಕ್ತಿ, ಕೂಡಲ ಸಂಗಮ ದೇವಾ.**

ಅಂಜುಬುರುಕನು ಉದ್ದುದ್ದ ಬಿರುದುಗಳನ್ನು ಬರೆದುಕೊಂಡರೆ ಅವನು ಶೂರನಾಗುವದಿಲ್ಲ. ಅವನು ಒರೆಯಿಂದ ಖಡ್ಗವನ್ನು ಹೊರತೆಗೆದು ವೈರಿಗಳ ಸಂಹಾರ ಮಾಡದಿದ್ದರೆ ಜಗತ್ತು ತನ್ನ ಮೆಚ್ಚಿಕೆಯನ್ನು ತೋರಿಸುವುದಿಲ್ಲ; ಕಾವಿಯನ್ನು ಬಳೆದುಕೊಂಡು ಮಲ್ಲಗಾಸಿತೊಟ್ಟು ಮಲ್ಲಯುದ್ಧ ಮಾಡದೆ ತಾನು ಹಿಂದೆ ಸರಿದರೆ ದೇವರು ಒಪ್ಪುವದಿಲ್ಲ; ಇಂಥವರ ಭಕ್ತಿ ಮೋಸಗಾರನ ಭಕ್ತಿ ಇದ್ದ ಹಾಗೆ ಕೂಡಲು ಸಂಗಮ ದೇವಾ.

೯೭೨ ಹೊಯಿದವರೆನ್ನ ಹೊರೆದವರೆಂಬೆನು
ಬಯಿದವರೆನ್ನ ಬಂಧುಗಳೆಂಬೆನು
ನಿಂದಿಸಿದವರೆನ್ನ ತಾಯಿತಂದೆಗಳೆಂಬೆ:
ಆಳಿಗೊಂಡವರೆನ್ನ ಆಳ್ದರೆಂಬೆ:
ಜರಿದವರೆನ್ನ ಹೊನ್ನ ಶೂಲದಲ್ಲಿಕ್ಕಿದವರು
ಕೊಂಡಾಡಿದವರೆನ್ನ ಆಳ್ದರೆಂಬೆ:
ಕೂಡಲ ಸಂಗಮ ದೇವಾ.

ನನ್ನನ್ನು ಹೊಡೆದವರು ನನ್ನನ್ನು ರಕ್ಷಿಸಿದ ತಾಯಿತಂದೆಗಳು; ಬಯಿದವರು ನನ್ನ ಬಂಧುಗಳು; ನನ್ನನ್ನು ಜರೆದು-ಹೀಯಾಳಿಸುವವರು ನನ್ನ ದೊರೆಗಳು; ಕುತ್ಸಿತ ಮಾತುಗಳನ್ನಾಡಿದವರು ನನ್ನ ಜನ್ಮಾಂತರ ಬಂಧುಗಳು; ಕೂಡಲ ಸಂಗಮ ದೇವಾ ನನ್ನನ್ನು ಹೊಗಳಿ ಹರಸುವವರೆ ನನ್ನ ವೈರಿಗಳು; ನನ್ನನ್ನು ಗಲ್ಲಿಗೇರಿಸಿ ಕೊಂದವರು.

## —: ಗಣಭಾಷ್ಯ ರತ್ನಮಾಲಾ :—

೯೭೩ ಅಂಗದ ಮೇಲೆ ಲಿಂಗ ಸಾಹಿತ್ಯವಾದ ಬಳಿಕ
ಗ್ರಾಮಲಿಂಗಪೂಜೆಯ ಮಾಡಲಾಗದು
ಅದೇನು ಕಾರಣವೆಂದರೆ ಅಂಗದ ಲಿಂಗವು ರಂಗದ ಕಲ್ಲ
ತಾಗುವುದಾಗಿ !
ಆವುದು ಘನವೆಂಬೆ? ಆವುದು ಕಿರಿದೆಂಬೆ?
ತಾಳಸಂಪುಟಕ್ಕೆ ಬಾರದ ಘನವು !
ಅದೆಂತೆಂದೊಡೆ:

(ಶ್ಲೋಕ) ಪ್ರಾಣಲಿಂಗಮವಿಶ್ವಸ್ಯ | ಗ್ರಾಮಲಿಂಗಂ ಯಃ ಸಮಾಚರೇತ್ |
ಶ್ವಾನಯೋನಿಶತಂ ಗತ್ವಾ | ಚಂಡಾಲಗೃಹಮಾಚರೇತ್||
ಲೋಕದ್ವಯ ಹಿತಂ ವಕ್ತುಂ | ಜ್ಞಾತುಂ ವಾ ಕೋನ ಪಂಡಿತಃ |
ತತ್‌ಕ್ರಿಯಾಮಧೀತ್ವಾತು । ಮುನ ಯೋಪಿನ ಪಂಡಿತಾಃ ||
ಎಂದುದಾಗಿ,
ದೀರ್ಘದಂಡ ಗುರುಸ್ಪರ್ಶನ, ಕರಮುಟ್ಟಿ ಲಿಂಗಸ್ಪರ್ಶನ,
ಸಿರಮುಟ್ಟಿ ಜಂಗಮ ಸ್ಪರ್ಶನ !
ಇದನರಿಯದೆ ಹತ್ತಿರೆ ಇದ್ದ ಲಿಂಗವ ಕಿರಿದು ಮಾಡಿ,
ದೂರದಲ್ಲಿದ್ದ ಲಿಂಗವ ಹಿರಿದು ಮಾಡಿ ಹೋದೆನಾದೊಡೆ
ವ್ರತಗೇಡಿಯಾಗಿ ನೂರು ಬಾರಿ ಹೊಲೆಯರ ಮನೆಯ
ನಾಯಾಗಿ ಹುಟ್ಟಿಸುವನು, ಕೂಡಲ ಸಂಗಮ ದೇವನು.

ದೇಹವು ಲಿಂಗದಿಂದ ಕೂಡಿದ ಬಳಿಕ ಅದು ಪಾಪರಹಿತವಾಗಿ ಶುದ್ಧ ವಾಗುತ್ತದೆ; ಆ ಲಿಂಗಾಂಗವು ಪುನಃ ಬೇರಾವ ಕಲ್ಲು ಲಿಂಗಕ್ಕೆ ಬಾಗಿ ನಮಿ ಸುವದು ಹೇಯವಾದುದು; ಆತ್ಮಲಿಂಗವು ಪ್ರತಿಮೆಯ ಲಿಂಗಕ್ಕಿಂತ ಘನ ವಾದದ್ದು; ಗುರುವಿಗೆ ದೀರ್ಘದಂಡ ನಮಸ್ಕಾರ ಮಾಡಬೇಕು; ಲಿಂಗಕ್ಕೆ ಕೈಜೋಡಿಸಿ ನಮಸ್ಕರಿಸಬೇಕು; ಜಂಗಮನಿಗೆ ಸಿರಬಾಗಿ ನಮಿಸಬೇಕು; ಹೀಗೆ ವರ್ತಿಸುವಾಗ್ಗೆ ಆತ್ಮಲಿಂಗವನ್ನು ಕೀಳುಮಾಡಿ ಕಲ್ಲು ಪ್ರತಿಮೆಯ ಲಿಂಗವನ್ನು ಶ್ರೇಷ್ಠವೆಂದು ತಿಳಿದರೆ ಅವನ ವ್ರತಕ್ಕೆ ಬಾಧೆ ಬಂದುದರಿಂದ ಕೂಡಲ ಸಂಗಮ ದೇವನು ಅವರನ್ನು ಹೊಲೆಯರ ಮನೆಯ ನಾಯಿಯ ನ್ನಾಗಿ ಮಾಡಿ ಹುಟ್ಟಿಸುತ್ತಾನೆ.

೯೭೪ ಅಂಡಜ, ಸ್ವೇದಜ, ಉದ್ಭಿಜ, ಜರಾಯುಜವೆಂಬ
ನಾಲ್ಕು ಯೋನಿಗಳಲ್ಲಿ ಬರುತ್ತಿಹ
ಅನಂತಕೋಟಿ ಜೀವಿಗಳು ಸತ್ತ ಪಾಪವು

ವಿಧಿಯು ತಾಗುವುದೇ ಅಯ್ಯಾ ?
ಕಾನನದೊಳಗೊಂದು ಕಾಡುಗಿಚ್ಚು ಹುಟ್ಟಿ;
ಧಿಗಿಲು ಭುಗಿಲೆಂದು ಉರಿ ಸುಳಿಗೊಂಡು
ಅಟ್ಟಿಸುಡುವಲ್ಲಿ,
ಅನಂತ-ಕೋಟಿ ಜೀವಿಗಳು ಸತ್ತ ಪಾಪವು
ಅಗ್ನಿಯು ತಾಗುವುದೇ ಅಯ್ಯಾ ?
ಕಾಳಮೇಘ ಗಗನದಿಂ ಸುರಿಯೆ, ಈ ಭೂಮಿ
ಜರ್ಜರಿತವಾಗಿ
ಹಳ್ಳ ಕೊಳ್ಳ ತೊರೆ ತುಂಬಿ, ದಶದಿಕ್ಕುಗಳೆಲ್ಲ ಭರಿತವಾಗಿ
ನದಿಯೊಲಿದು ಪುರಂಗಳಂ ಹೊಗಲು, ಅಲ್ಲಿ
ಅನಂತ ಕೋಟಿಜೀವಿಗಳು ಸತ್ತ ಪಾಪವು
ಮಳೆಯು ತಾಗುವುದೇ ಅಯ್ಯಾ ?
ದಶದಿಕ್ಕುಗಳಲ್ಲಿ ಭರಿತವಾಗಿ, ಪವನ ನೊಲಿದು
ಬ್ರಹ್ಮಾಂಡವ ಮುಟ್ಟಿ ಮಲೆತು ಬೀಸುವಲ್ಲಿ,
ಅನಂತಕೋಟಿ ಜೀವಿಗಳು ಸತ್ತ ಪಾಪವು
ವಾಯುುವ ತಾಗುವುದೆ, ಅಯ್ಯಾ ?
ಧರೆಹತ್ತಿ ಉರಿಯೆ; ಬ್ರಹ್ಮಾಂಡವನುರಿತಾಗಲು, ಕೆಂಡದ
ಮಳೆ ಸುರಿಯೆ
ಸುರಾಸುರರುಗಳೆಲ್ಲ ಭುಗಿಲ್ಲೆಂದುರಿದು
ಸತ್ತ ಅತಿ ವಿಶೇಷವಾದ ಪಾಪವು
ಧರೆಯು ತಾಗುವುದೆ, ಅಯ್ಯಾ ?
ಉತ್ಪತ್ತಿಸ್ಥಿತಿಲಯು ಕಾಲಕಲ್ಪಿತನಲ್ಲಿ
ಪ್ರಳಯುರಹಿತ, ನಮ್ಮ ಕೂಡಲ ಸಂಗಮ ದೇವಾ.

ಜೀವ ಜಾತಿಗಳು ತಮ್ಮ ಕರ್ಮಾನುಸಾರ ಮಾಡಿದ ಪಾಪಗಳು ಮಾಡಿದವರಿಗಲ್ಲದೆ ಹುಟ್ಟಿಸಿದ ಬ್ರಹ್ಮನಿಗೆ ಪಾಪವು ಹತ್ತುವುದಿಲ್ಲ; ಬೆಂಕಿಯಲ್ಲಿ ಬಿದ್ದು ಸತ್ತುಹೋದ ಪ್ರಾಣಿಗಳ ಪಾಪವು ಅಗ್ನಿಗೆ ತಟ್ಟುವದಿಲ್ಲ; ಅತಿವೃಷ್ಟಿ

ಯಾಗಿ ಹೊಳೆ ಹಳ್ಳಿಗಳಿಗೆ ಮಹಾಪೂರ ಬಂದು ಊರುಗಳು ಹಾಳಾಗಿ ಜನರು ಸತ್ತರೆ ಪಾಪವು ಮಳೆಗೆ ಬಾರದು; ಬಿರುಗಾಳಿ ಭಯಂಕರವಾಗಿ ಬೀಸಿ ಅನಾಹುತಗಳು ಸಂಭವಿಸಿ ಪ್ರಾಣನಾಶವಾದರೆ ಆ ಪಾಪವು ಗಾಳಿಗೆ ಅಂಟಿಕೊಳ್ಳುವದಿಲ್ಲ; ಅಗ್ನಿ ಪ್ರಳಯವಾಗಿ ರಾಕ್ಷಸಾದಿಗಳೆಲ್ಲ ಸತ್ತು ಹೆಚ್ಚಿನ ಪಾಪ ಸಂಭವಿಸಿದಾಗ ಆ ಪಾಪ ಅಗ್ನಿಗೆ ಹತ್ತುವುದಿಲ್ಲ; ಹುಟ್ಟು ಬದುಕು ಸಾವು ಯಮನಿಂದ ಮಾಡಲ್ಪಟ್ಟವುಗಳಲ್ಲ; ಆದುದರಿಂದ ಕೂಡಲ ಸಂಗಮದೇವರು ಅಜರಾಮಜನು-ಸಾವಿಲ್ಲದ ಸಾನಂದಬ್ರಹ್ಮನು.

**೯೭೫ ಅನುಭಾವ, ಅನುಭಾವವೆಂದೆಬಿರಿ:**

**ಅನುಭಾವವೆಂಬುದು ನೆಲದ ಮರೆಯ ನಿಧಾನ ಕಾಣಿರೋ,**
**ಅನುಭಾವವೆಂಬುದು ಅಂತರಂಗದ ರತ್ನ ಕಾಣಿರೋ,**
**ಅನುಭಾವವೆಂಬುದು ಶಿಶು ಕಂಡ ಕನಸು ಕಾಣಿರೋ,**
**ಅನುಭಾವವೆಂಬುದು ರಚ್ಚೆಯ ಮಾತೆ?**
**ಅನುಭಾವವೆಂಬುದು ಸಂತೆಯ ಸುದ್ದಿಯೆ?**
**ಅನುಭಾವವೆಂಬುದು ಬೀದಿಯ ಪಸಾರವೆ?**
**ಏನೆಂಬೆ, ಹೇಳಾ, ಮಹಾಘನವನು?**
**ಆನೆ ಮಾನದೊಳಗಡಗುವದೆ ದರ್ಪಣ ದೊಳಗಲ್ಲದೆ?**
**ಕಂಡ ಕಂಡಲ್ಲಿ ಗೋಷ್ಠಿಯಾಗಿ ನಿಂದಲ್ಲಿಯೇ ಅನುಭಾವ?**
**ಬಂದ ಬಂದಲ್ಲ ಪ್ರಸಂಗವ ಮಾಡುವ**
**ಹಂದಿ ಕುನ್ನಿಗಳ ನೇನೆಂಬೆನಯ್ಯಾ, ಕೂಡಲ ಸಂಗಮ ದೇವಾ ?**

ಜೀವನದಲ್ಲಿ ದುಡಿತದಫಲವಾಗಿ ಸಿದ್ಧಿ ದೊರಕಿದೆ ಎಂದು ಎಲ್ಲರೂ ಹೇಳುತ್ತಾರೆ; ಆ ಅನುಭವವು ಇಲ್ಲವೆ ಸಿದ್ಧಿಯು ನೆಲದಲ್ಲಿ ಹೂಳಿಟ್ಟ ಸಂಪತ್ತಿನಂತಿದೆ; ಅಂತರಂಗದಲ್ಲಿ ಅಡಗಿರುವ ರತ್ನದಂತಿದೆ; ಸಣ್ಣಕೂಸುಗಳು ನೋಡಿದ ಕನಸಿನಂತಿದೆ; ಈ ಅನುಭವವು ಸಂತೆಯ ಸುದ್ದಿಯಲ್ಲ-ಧರ್ಮಸಾಲೆಯ ಕೂಟವಲ್ಲ; ಅಥವಾ ವಿಷಯಾಮಿಷಗಳ ಮಾತಲ್ಲ! ಅನುಭವಸಿಗು

ವದು ಅತಿಕಷ್ಟಮಯವಾದುದು; ಆನೆಯು ಕನ್ನಡಯಲ್ಲಿ ತನ್ನ ಪೂರ್ಣ ಪ್ರತಿಬಿಂಬದೊಂದಿಗೆ ಕಾಣುವಂತೆ-ಅಳತೆಯ ಕೋಲುಗಳಿಂದ ಅದರ ಆಕೃತಿ ತೋರಿಸಲು ಬರುವುದಿಲ್ಲ; ಕಾರಣ ಸಿಕ್ಕ ಸಿಕ್ಕ ಹಾಗೆ ಮಾತನಾಡಿ ಪವಾಡಗಳನ್ನು ಮಾಡುವ ತಿಳಿಗೇಡಿ ಕುನ್ನಿಗಳಿಗೆ ಏನು ಹೇಳಲಿ ಕೂಡಲ ಸಂಗಮ ದೇವಾ ?

**೯೭೬ ಅಂಧಕಾರವೆಂಬ ಗಹ್ವರದೊಳಗೆ ನಿದ್ರೆಯೆಂಬ ರಾಕ್ಷಸಿ**
**ವೀರರ ನಿಗ್ರಹಿಸಿ ನೀರವಮಾಡಿ, ಧೀರರ ಧೃತಿಗೆಡಿಸಿ,**
**ಶಾಪಾನುಗ್ರಹ ಸಮರ್ಥರ ಸತ್ತ್ವಂತಿರಿಸಿ,**
**ನಿಚ್ಚ ನಿಚ್ಚ ಜೀವನಾಶ ಮಾಡುತ್ತಿದ್ದಾಳೆ, ನೋಡಾ.**
**ಕೂಡಲ ಸಂಗಮದೇವಾ.**

ಕತ್ತಲೆಯಿಂದ ತುಂಬಿದ ಈ ಗುಹೆಯಂತಿರುವ ದೇಹದಲ್ಲಿ ನಿದ್ರಾರಾಕ್ಷಸಿ ಸೇರಿಕೊಂಡು ಮೀರಾಧಿ ವೀರರನ್ನು, ಮಹಾರಥಿಕರನ್ನೂ ಬಲಹೀನರನ್ನಾಗಿ ಮಾಡಿದ್ದಲ್ಲದೆ, ಯೋಗಿಗಳನ್ನು ಮಾತಾಡದಂತೆ ಮಾಡಿ ಅವರ ತಪಃಶಕ್ತಿಯನ್ನು ನುಂಗಿ ಅವರನ್ನು ನಿರ್ಜೀವಿಗಳನ್ನಾಗಿ ಮಾಡಿದ್ದಾಳೆ; ಹೀಗೆ ನಿದ್ರಾರಾಕ್ಷಸಿಯು ದಿನದಿನವೂ ಪ್ರಾಣಹಾನಿ ಮಾಡುತ್ತಲಿದ್ದಾಳೆ ಕೂಡಲ ಸಂಗಮ ದೇವಾ !

**೯೭೭ ಅಮೂಲ್ಯನು, ಅಪ್ರಮಾಣನು, ಅಗೋಚರ ಲಿಂಗವು;**
**ಆದಿ ಮಧ್ಯಾಂತರವಿಲ್ಲದ ಲಿಂಗವು;**
**ಸ್ವತಂತ್ರ ಲಿಂಗವು ನಿತ್ಯ ನಿರ್ಮಲ ಲಿಂಗವು;**
**ಅಯೋನಿ ಸಂಭವನಯ್ಯಾ, ನಮ್ಮ ಕೂಡಲ**
**ಸಂಗಮ ದೇವ !**

ಮೂಲ-ಕೊನೆಗಳಿಲ್ಲದ ಲಿಂಗವು, ಅಳತೆ-ಬೆಲೆಗಳಿಂದ ಮೀರಿದವನು; ಕಣ್ಣಿಗೆ ಕಾಣದ ಲಿಂಗವು ಸರ್ವಸ್ವತಂತ್ರವು-ನಿತ್ಯ ಶುದ್ಧವು ಆಗಿರುತ್ತದೆ; ಯಾಕೆಂದರೆ ಜನನ ಮರಣ ರಹಿತನಾದುದರಿಂದ, ನಮ್ಮ ಕೂಡಲ ಸಂಗಮ ದೇವರು ಸಕಲಾತ್ಮನು !

೯೭೮ ಅಯ್ಯಾ, ಅಯ್ಯಾ, ಕರ್ಮದಾಗರವ ಹೊಕ್ಕು,
ವಿಷಯದ ಬಲೆಯಲ್ಲಿ ಸಿಲುಕಿ,
ಅಯ್ಯಾ, ದೇಹ ಮೋಹವೆಂಬ ಮಹಾದುಃಖಕ್ಕೀಡಾಗಿ,
ಅಯ್ಯಾ, ಸಾಯುತ್ತಿದ್ದೇನೆ, ಬೇಯುತ್ತಿದ್ದೇನೆ !
ಅಯ್ಯಾ, ಅಯ್ಯಾ, ತಪ್ಪೆನ್ನದು !
ಈ ಮೊರೆಯ ವಿಚಾರಿಸಿ ಕಾರುಣ್ಯವ ಮಾಡು.
ಅಯ್ಯಾ ಆಳಿನ ಅಪಮಾನ ಆಳ್ದಂಗೆ ಬಪ್ಪಂತೆ
ಅಯ್ಯಾ ಎನ್ನ ಳಲು ತಪ್ಪದು ನಿಮಗೆ
ಅಯ್ಯಾ, ಕಾರುಣ್ಯವ ಮಾಡು, ಕಾರುಣ್ಯವ ಮಾಡು,
ಕೂಡಲ ಸಂಗಮ ದೇವಾ.

ಹೇ ಪ್ರಭುವೆ, ಕರ್ಮಗಳ ಸಾಗರವಾದ ಸಂಸಾರದಲ್ಲಿ ಹುಟ್ಟಿ ವಿಷಯಗಳ ಪಂಜರದಲ್ಲಿ ಬಿಂಧಿತನಾಗಿದ್ದ ಕಾರಣ ಈ ದೇಹದ ಮೇಲಿನ ಮೋಹವು ಮಿತಿ ಮೀರಿ ನನ್ನನ್ನು ದುಃಖ ಸಮುದ್ರದಲ್ಲಿ ದೂಡಿದೆ; ಈ ತಪ್ಪು ನನ್ನದಾಗಿದೆ; ಆದರೆ ದೇವಾ, ನನ್ನ ಈ ಮೊರೆ ಕೇಳಿ ನನಗೆ ದಯದೋರು; ನಾನು ಮಾಡಿದ ಅಪರಾಧಕ್ಕೆ ನೀನೆ ತಪ್ಪುಗಾರನಾಗುವೆ; ಕಾರಣ ಕರುಣೆದೋರಿ ಈ ಸಂಸಾರ ಬಂಧನದಿಂದ ಬಿಡುಗಡೆಮಾಡು ಕೂಡಲ ಸಂಗಮದೇವಾ !

೯೭೯ ಅಯ್ಯಾ, ಎನಗೆ ಶ್ರೀ ವಿಭೂತಿಯೆ ಮನದೈವ,
ಅಯ್ಯಾ, ಎನಗೆ ಶ್ರೀ ವಿಭೂತಿಯೆ ಸರ್ವಕಾರಣ,
ಅಯ್ಯಾ, ಎನಗೆ ಶ್ರೀ ವಿಭೂತಿಯೆ ಸರ್ವಸಿದ್ಧಿ,
ಅಯ್ಯಾ, ಎನಗೆ ಶ್ರೀ ನಿಭೂತಿಯೆ ಸರ್ವವಶ್ಯ,
ಅಯ್ಯಾ, ಕೂಡಲ ಸಂಗಮ ದೇವಾ,
ಶ್ರೀ ಮಹಾಭಸಿತವೆಂಬ ಪರಂಜ್ಯೋತಿ ನೀವಾದಿರಾಗಿ,
ಅಯ್ಯಾ, ಎನಗೆ ವಿಭೂತಿಯೆ ಸರ್ವಸಾಧನವಯ್ಯಾ !

ದಯಾಮಯ ತಂದೆಯೆ, ವೈಭವವೂ ಪವಿತ್ರವೂ ಆದ ಭಸ್ಮವೆ ನನ್ನ ಆರಾಧ್ಯದೇವತಾ; ಸಂಸಾರ ಮಾಯೆಯನ್ನು ನನ್ನ ಹಿಡಿತದಲ್ಲಿಟ್ಟುಕೊಳ್ಳ

ಲು ಮತ್ತು ಜೀವನದಲ್ಲಿ ತತ್ವಸಿದ್ಧಿಯನ್ನು ಪಡೆಯಲು ಶ್ರೀ ವಿಭೂತಿಯೇ ಕಾರಣ ವಿರುತ್ತದೆ; ಯಾಕೆಂದರೆ ಆ ಭಸ್ಮದಲ್ಲಿರುವ ಸೌಂದರ್ಯದ ಬೆಳಕು, ಕೂಡಲ ಸಂಗಮದೇವಾ! ನೀವೆ ಆಗಿದ್ದುದರಿಂದ–ಆ ವಿಭೂತಿ ಧಾರಣ ಮಾಡುವುದೆ ನನಗೆ ಸಾಧನ ಮಾರ್ಗವಾಗಿದೆ.

**೯೮೦ ಅಯ್ಯಾ, ಎನ್ನವರೆನ್ನ ಕೊಂಡಾಡಿ,**
**ಬಿನ್ನಾಣವೆಂಬ ಹೊನ್ನಶೂಲದ ಮೇಲಿಕ್ಕಿದರಯ್ಯಾ !**
**ಗಾಯ ಪರಿಪೂರ್ಣವಾಗಿ ತಾಗಿತ್ತು !**
**ಜಂಗಮ ರೂಪಾಗಿ ಬಂದೆನ್ನ ಹೊಯ್ದು ಬಯ್ದು ಜಡಿದು ಝಂಕಿಸಿ**
**ಪ್ರಸಾದವೆಂಬ ಮದ್ದನಿಕ್ಕಿ ಸಲಹಯ್ಯಾ,**
**ಕೂಡಲ ಸಂಗಮ ದೇವಾ.**

ನನ್ನ ಬಂಧುಗಳು ನನ್ನನ್ನು ಬಹಳವಾಗಿ 'ಹೊಗಳಿ, ಹಿರಿಕೊಡೆ ಹಿಡಿದು ನಾನು ನಿಮಗೆ ಏನೂ ಕೇಳಿಕೊಳ್ಳಲು ಬಾರದಂತೆ, ಬಂಗಾರದ ಶೂಲಕ್ಕೇರಿಸಿದರು; ಗಾಯವು ತುಂಬಿಕೊಂಡು ಮೈಮನಗಳೆರಡೂ ನೊಂದಿವೆ; ಕೂಡಲ ಸಂಗಮ ದೇವಾ, ಈಗ ನೀವು ಜಂಗಮ ರೂಪದಿಂದ ಬಂದು ನನಗೂ ಛೀ ತೂ ಹಾಕಿ ನಿಮ್ಮ ಕರುಣೆಯ ಪ್ರಸಾದಕೊಟ್ಟು ನನ್ನ ಭವರೋಗದೂರು ಮಾಡಿ ಕಾಪಾಡಬೇಕು;

**೯೮೧ ಅಯ್ಯಾ, ಎಳಗರು ತಾಯ ನರಸಿ ಬಳಲುವಂತೆ,**
**ಅಯ್ಯಾ, ನಿಮ್ಮ ನರಸಿ ಬಳಲುತ್ತಿದ್ದೇನೆ.**
**ಅಯ್ಯಾ, ನೀವೆನ್ನ ಮನಕ್ಕೆ ಪ್ರಸಾದವಮಾಡಿ ಕಾರುಣ್ಯವ ಮಾಡಿರಯ್ಯಾ !**
**ನೀವೆನ್ನ ಮನಕ್ಕೆ ನೆಲೆವನೆಯಾಗಿ ಕಾರುಣ್ಯವ ಮಾಡಿರಯ್ಯಾ !**
**ನೀವಿನಿತು ಲೇಸನೀಯಯ್ಯಾ, ಅಂಬೇ, ಅಂಬೇ,**
**ಕೂಡಲ ಸಂಗಮ ದೇವಾ.**

ಆಕಳ ಕರುವು ತನ್ನ ತಾಯಿಯನ್ನು ಹುಡುಕಿಕೊಂಡು ಬರುವಂತೆ ನಾನು ನಿಮ್ಮನ್ನು ಹುಡುಕಿಕೊಂಡು ಬರುತ್ತಿದ್ದೇನೆ; ನೀವು ನನ್ನ ಮನದಲ್ಲಿ ನೆಲೆಸಿ ನನಗೆ ದಯತೋರಿ ನನ್ನನ್ನು ಉತ್ತಮನನ್ನಾಗಿ ಮಾಡಬೇಕು. ಕೂಡಲ ಸಂಗಮ ದೇವಾ !

**೯೮೨ ಅಸುರ ನೈಶ್ವರ್ಯನೆಣೆಸುವರೆ –**
**ಸೀತೆಗೆ ಸರಿ– ಮಿಗಿ ಲೆನಿಸುವ ಸತಿಯರೆಂಟು ಕೋಟಿ;**
**ಮತಿವಂತಶಿರಃಪ್ರಧಾನರೆಂಟು ಕೋಟಿ**
**ಲೆಕ್ಕವಿಲ್ಲದ ದಳವು, ಲಕ್ಷ ಕುಮಾರರು;**
**ದಿಕ್ಪಾಲಕರವನ ಮನೆಯ ಬಂಧನದಲ್ಲಿಪ್ಪರು;**
**ಸುರಸತಿಯರ ನೆಲ್ಲರನಾತ ಸೆರೆವಿಡಿಯಾಳಿದ !**
**ಶಿವನೇ ನೀ ಕರುಣಿಸಿದಂತಿರದೆ,**
**ಪರವಧುವಿನ ಬೇಟವವನ ಪ್ರಾಣವ ಕೊಂಡಿತ್ತು !**
**ಇದನರಿದು ಪರವಧುವಿಗೆಳಸುವವರ ಕಂಡು**
**ಗರುಡ ಕಂಡ ಸರ್ಪ ಧರೆಗಿಳಿವಂತೆ ಅಡಗಿರ್ಪೆನಯ್ಯಾ,**
**ಕೂಡಲ ದೆಂಗಮದೇವಾ.**

ರಾಕ್ಷಸರ ಮತ್ತು ದುರ್ಜನರ ಸಂಪತ್ತು ಎಷ್ಟಿದ್ದರೂ ಅದು ಕೆಲಸಕ್ಕೆಬಾರದು; ಪತೀವೃತಾ ಶಿರೋಮಣಿಯಾದ ಸೀತಾದೇವಿಯನ್ನು ಸರಿಗಟ್ಟಲು ಎಂಟುಕೋಟಿ ಸತಿಯರಿಗೆ ಸಾಧ್ಯವಿಲ್ಲ; ಬುದ್ಧಿವಂತ ಶ್ರೇಷ್ಠ ಮಂತ್ರಿಗಳು ಎಂಟುಕೋಟಿ; ಅಪಾರ ಸೈನ್ಯಬಲ ಒಂದು ಲಕ್ಷಮಕ್ಕಳು; ಇಂಥ ರಾಕ್ಷಸನ ಮನೆಯ ಚಾಕರರಾಗಿ ಅಷ್ಟದಿಕ್ಪಾಲಕರಿರುತ್ತಾರೆ; ದೇವತೆಗಳೆಲ್ಲರ ಹೆಂಡಂದಿರನ್ನು ಸೆರೆಹಿಡಿದುಕೊಂಡು ತನ್ನಾಧಿನದಲ್ಲಿಟ್ಟುಕೊಂಡನು; ಈ ರೀತಿ ಪರಸ್ತ್ರೀಯರ ಬೇಟೆಯಾಡಿದ ಆ ದುಷ್ಟ ರಕ್ಕಸನನ್ನು ಅವನ ದೈವವೇ ಕೊಂದು ಹಾಕಿತು; ನೀವು ಕೃಪೆಮಾಡಿದಂತೆ ಇರಲಿಕ್ಕೆ ಅವನಿಗೆ ಭಾಗ್ಯವಿಲ್ಲ! ಆದುದರಿಂದ ಕೂಡಲ ಸಂಗಮ ದೇವಾ, ಪರಸ್ತ್ರೀಯರ ಸಂಗಕ್ಕೆ ಮನಸೋಲುವವರನ್ನು ಕಂಡು ನಾನು, ಗರುಡನ ಕಣಿಗೆಬಿದ್ದ ಹಾವು ಅಂಜಿ ಭೂಮಿಯೊಳಗೆ ಸೇರಿಕೊಳ್ಳುವಂತೆ ಅಡಗಿಕೊಂಡಿರುವೆ.

೯೮೩ ಆದಿಯಲ್ಲೊಬ್ಬ ಶರಣ ಮೂರ್ತಿಯಾದ
ಆ ಶರಣನ ಮೂರ್ತಿಯಿಂದ ಸದಾಶಿವನಾದ;
ಆ ಸದಾಶಿವನ ಮೂರ್ತಿಯಿಂದ ಜ್ಞಾನಶಕ್ತಿಯಾದಳು;
ಆ ಸದಾಶಿವಂಗೆ ಜ್ಞಾನ ಶಕ್ತಿಗಿಬ್ಬರಿಗೆಯೂ ಶಿವನಾದ;
ಅ ಶಿವಂಗೆ ಇಚ್ಛಾಶಕ್ತಿಯಾದಳು,
ಆ ಶಿವಂಗೆ ಇಚ್ಛಾಶಕ್ತಿಗಿಬ್ಬರಿಗೆಯೂ ರುದ್ರನಾದ;
ಆ ರುದ್ರಂಗೆ ಕ್ರಿಯಾಶಕ್ತಿಗಿಬ್ಬರಿಗೆಯೂ ವಿಷ್ಣುವಾದ;
ಆ ವಿಷ್ಣುವಿಗೆ ಲಕ್ಷ್ಮಿಯಾದಳು,
ಆ ವಿಷ್ಣುವಿಗೆ ಮಹಾಲಕ್ಷ್ಮಿಗಿಬ್ಬರಿಗೆಯೂ ಬ್ರಹ್ಮನಾದ;
ಆ ಬ್ರಹ್ಮಂಗೆ ಸರಸ್ವತಿಗಿಬ್ಬರಿಗೆಯೂ
ನರರು ಸುರರು ದೇವರ್ಕಳು ಹೆಣ್ಣು ಗಂಡು ಸಚರಾಚರ ಸಹಿತವಾಗಿ
ಎಂಬತ್ತು ನಾಲ್ಕು ಲಕ್ಷ ಜೀವಜಂತುಗಳ ಜಾತಿ
ಎಂದರೆ ಜಗವಾಯಿತು; ಹೊರೆಯೆಂಬಡೆ ಆಕಾಶದಲ್ಲಿ ನಿಂದರು !
ಗರುಡ ಗಂಧರ್ವ ಸಿದ್ಧ ವಿದ್ಯಾಧರರು ಮೊದಲಾದ ದೇವ ಸಮೂಹಂಗಳೆಲ್ಲಾ
ಕೂಡಲ ಸಂಗಮದೇವಾ,
ನೀವು ಮನದಲ್ಲಿ ಸಂಕಲ್ಪಿಸಿ ಆಗೆಂದೊಡಾದವು !

'ಸತ್' ಶಕ್ತಿಯು ತನ್ನ ಇಚ್ಛಾನುಸಾರ ಜಗದಗಲ-ಉದ್ದ-ಸುತ್ತ ಮುತ್ತ-ಮೇಲೆ ಕೆಳಗೆ ಹಬ್ಬಿಕೊಂಡಿತು; ಆಗ ಮೊದಲು ಆ ಶಕ್ತಿಯು ಶರಣನ ರೂಪದಲ್ಲಿ ಧರೆಯ ಮೇಲೆ ಕಾಣಿಸಿಕೊಂಡಿತು; ಮುಂದೆ ಸದಾಶಿವ ಮತ್ತು ಜ್ಞಾನಶಕ್ತಿಯ ಮಿಲನದಿಂದ ಶಿವನು ಹುಟ್ಟಿದನು; ರುದ್ರನಿಗೆ ಆದಿ ಶಕ್ತಿಯ ಸಂಗವಾಗಿ ವಿಷ್ಣು ಹುಟ್ಟಿದನು ವಿಷ್ಣುವಿಗೆ ಲಕ್ಷ್ಮಿಯು ಸತಿಯಾದ ಕಾರಣ - ಬ್ರಹ್ಮದೇವನು ಜನಿಸಿದನು; ಈ ಸೃಷ್ಟಿಕರ್ತನಾದ ಬ್ರಹ್ಮನಿಗೆ ಮತ್ತು ಸರಸ್ವತಿದೇವಿಯರಲ್ಲಿ ಸಮ್ಮೋಹ ಬೆಳೆದು ಇಂದಿನ ಸೃಷ್ಟಿಸಿ

ನಿರ್ಮಾಣವಾಯಿತು; ಆದರೆ ಕೂಡಲ ಸಂಗಮ ದೇವಾ ಇದೆಲ್ಲವೂ ನಿನ್ನ ಚಿಚ್ಛಕ್ತಿಯ ರಸ ಕೃತಿ !

೯೮೪ ಇನ್ನೇವೆನಿನ್ನೇವೆನಯ್ಯಾ ?
ಎನ್ನ ಮನವೆಂಬ ಮರ್ಕಟನ ದಾಳಿ ಘನವಾಯಿತ್ತು :
ಎನ್ನ ನಿಂದಲ್ಲಿ ನಿಲಲೀಯದು; ಎನ್ನ ಕುಳಿತಲ್ಲಿ ಕುಳ್ಳಿರಲೀಯದು;
ಕ್ಷಣದಲ್ಲಿ ಪಾತಾಳ ಕೈದುತಿದೆ. ಕ್ಷಣದಲ್ಲಿ ಆಕಾಶ ಕೈದುತಿದೆ,
ಕ್ಷಣದಲ್ಲಿ ದಿಗ್ದೇಶ ಕೈದುತಿದೆ!
ಕೂಡಲ ಸಂಗಮದೇವಾ,
ಈ ಮನವೆಂಬ ಮರ್ಕಟನ ದಾಳಿಯನೆಂದಿಗೆ ನೀಗಿ
ಎಂದು ನಿಮ್ಮೊಡಗೂಡುವೆನಯ್ಯಾ?

ನನ್ನ ಮನಸ್ಸಿನ ಮಂಗತನ ಹೆಚ್ಚಾಗಿದೆ; ಕ್ಷಣಾರ್ಧದಲ್ಲಿ ಪೃಥ್ವಿ—ಆಕಾಶಗಳೆಲ್ಲವನ್ನೂ-ಪಾತಾಳ ಲೋಕವನ್ನೂ ಸುತ್ತಾಡಿಸುತ್ತದೆ; ಕೂಡಲ ಸಂಗಮ ದೇವಾ, ಈ ಮಂಗನ ಮುಷ್ಟಿಯಿಂದ ಎಂದು ಬಿಡುಗಡೆಯಾಗಿ ನಿಮ್ಮ ಪಾದದಲ್ಲಿ ಸೇರುವೆ ಎಂಬುದನ್ನೇ ನಾನು ನಿಮಗೆ ಕೇಳಿಕೊಳ್ಳುತ್ತಿರುವೆ !

೯೮೫ ಈ ರೇಳು ಭುವನವನು ಒಡಲೊಳಗಿಂಬಿಟ್ಟುಕೊಂಡು
ಲಿಂಗರೂಪಾಗಿ ಭಕ್ತನ ಕರಸ್ಥಲಕ್ಕೆ ಬಂದು
ಪೂಜೆಗೊಂಡಿತ್ತು ನೋಡಾ.
ಅಂತಹ ಅಗಮ್ಯ ಅಗೋಚರ ಲಿಂಗವೆಂದರಿದು
ಭಕ್ತನು ತಾನು ಹಿಂದೆ ನಡೆದ
ಜೂಜು ಬೇಂಟೆ ಚದುರಂಗ ಲೆತ್ತ ಪಗಡೆಯಾಟಂಗಳಂ
ಪರಿಹಾಸಕರ ಕೂಡಿಕೊಂಡು ಕಲೆದಾಡುವುದಂ ಬಿಟ್ಟು,
ಬಂಧುವ ತೊರೆದು,

ಮುಂದೆ ಶಿವಪಥದಲ್ಲಿ ನಡೆಯಬಲ್ಲಾತನೆ ಶಿವಭಕ್ತನಲ್ಲದೆ,
ಹಣದಾಸೆಗೆ ಹಂಗಿಗನಾಗಿ, ಗುಣದಾಸೆಗೆ ಅಮೇಧ್ಯವ
ತಿಂದು,
ಬಂಧುಗಳ ಬಿಟ್ಟು ಭಕ್ತಿ ಇಲ್ಲವೆ ಉಂಟೆ ಎಂಬ ಪಂಚ
ಮಹಾಪಾತಕರ
ಮುಖವ ನೋಡಲಾಗದು; ಅವರ ಮಾತ ಕೇಳಲಾಗದು.
ಅದೆಂತೆಂದೊಡೆ:
ಕತ್ತೆ ಭಕ್ತನಾದರೆ ಕಿಸುಕುಳವ ತಿಂಬುದ ಮಾಣ್ಬುದೆ?
ಬೆಕ್ಕು ಭಕ್ತನಾದರೆ ಇಲಿಯ ತಿಂಬುದ ಮಾಣ್ಬುದೆ?
ಹಂದಿ ಭಕ್ತನಾದರೆ ಹಡಿಕೆಯ ತಿಂಬುದ ಮಾಣ್ಬುದೆ?
ಶುನಕ ಭಕ್ತನಾದರೆ ಮೂಳೆಮಾಂಸವ ತಿಂಬುದ
ಮಾಣ್ಬುದೆ ?
ಕೋಳಿಯ ತಂದು ಹಂಜರವ ಕೂಡಿ ಅಮೃತಾನ್ನವನಿಕ್ಕಿ
ಸಲಹಿದಡೆ
ಅದು ತಾನೆ ಮತ್ತೆ ತಿಂಬ ಹಡುಕಿಂಗೆ ಬಿತ್ತವನಿಕ್ಕುವದ
ಮಾಣ್ಬುದೆ?
ಇಂತೀ ಭವಿತನಕ್ಕೆ ಹೇಸಿ ಭಕ್ತನಾದ ಬಳಿಕ
ಅನಾಚಾರವ ಬಿಟ್ಟು ಸದಾಚಾರನಲ್ಲಿ ನಡೆಯಬೇಕು.
ಗುರುವಾದಡಾಗಲಿ ಭಕ್ತನಾದಡಾಗಲಿ:
ತಾನು ಹಿಂದೆ ಭವಿಯಾಗಿದ್ದಾಗ ಭುಂಜಿಸುತ್ತಿದ್ದ
ಸುರೆ ಮಾಂಸ ಭಂಗಿ ಭವಿಸಂಗ ಭವಿಪಾಕ
ಇಂತಿವ ಬಿಡದಿರ್ದವರುಗಳು
ಆ ಕತ್ತೆ ಬೆಕ್ಕು ಸೂಕರ ಸೊಣಗ ಕೋಳಿಗಿಂದ
ತ್ತತ್ತ ಕಡೆ ನೋಡಿರೆ
(ಶ್ಲೋಕ) ಕಿಂ ಮಾಂಸಂ ಕಾ ಶಿವೇಭಕ್ತಿಃ| ಕಿಂ ಮದ್ಯಂ ಕಃ
ಶಿವಾರ್ಚಕಃ ||
ಮದ್ಯಮಾಂಸರತಾನಂ (ಚ) ದೂರೇ ತಿಷ್ಠಾಮಿ ಶಂಕರೀ||
ಪಶುಂ ಹತ್ವಾ ಸುರಾಂ ಪೀತ್ವಾ| ಕೃತ್ವಾ ಫಲಲಭೋಜನಂ||

ಯೇ ನೈವಂ ಗಮ್ಯತೇ ಸ್ವರ್ಗಂ। ನರಕಂ ತೇನಗಮ್ಯತೇ॥
ಎಂದುದಾಗಿ,
ಚಿನ್ನದ ಬೆಟ್ಟವ ಸೇರಿದವನು ಕಣ್ಣುಕಾಣದಿಪ್ಪಂತೆ
ಗಣೆಯ ನೇರಿದ ಡೊಂಬ ಮೆಯ್ಮರೆದಿಪ್ಪಂತೆ
ಅಂತಕ್ಕೆ ಹೋದ ಬಂಟ ಕೈಮರೆದಿಪ್ಪಂತೆ
ನಡು ನೀರಿಗೆ ಹೋದ ಹರಿಗೋಲು ತಲೆಕೆಳಗಾದಂತೆ
ಕಾಣಾ,

ಕೂಡಲ ಸಂಗಮದೇವಾ-

ಸಕಲ ಲೋಕಗಳನ್ನೂ ತನ್ನಲ್ಲಡಗಿಸಿಕೊಂಡಿರುವ ಪರಮಾತ್ಮಲಿಂಗವು ಇಷ್ಟಲಿಂಗವಾಗಿ ಬಂದು ಭಕ್ತನಿಂದ ಪೂಜೆಮಾಡಿಸಿಕೊಳ್ಳುತ್ತಲಿದೆ; ಭಕ್ತನಾಗಿರುವವನು ಬಂಧು ಬಳಗ ಮಡದಿ ಮಕ್ಕಳನ್ನು ತೊರೆದು ಏಕನಿಷ್ಠನಾಗಿದ್ದುಕೊಂಡು, ಎಲ್ಲ ದುರ್ಗುಣಗಳನ್ನು ಬಿಟ್ಟು ಶಿವಗುಣಿಯಾಗಿ ಲಿಂಗಾನುವರ್ತಿಯಾಗಿ ನಡೆಯುವವನೇ ಭಕ್ತನು; ಹೀಗೆ ಆಚರಿಸದ ಪಂಚ ಮಹಾಪಾತಕಿಗಳ ಮುಖವನ್ನು ನೋಡಬಾರದು; ಇವರ ಭಕ್ತಿ ಕತ್ತೆ, ಬೆಕ್ಕು, ಹಂದಿ, ನಾಯಿ, ಕೋಳಿ - ಇವುಗಳ ಜಾತಿಗುಣ ಭಕ್ತಿ ಇದ್ದ ಹಾಗೆ, ಆದ ಕಾರಣ ಸುರೆ- ಮಾಂಸಾದಿಗಳ ಸೇವನೆ ಬಿಟ್ಟು ಸದಾಚಾರಿಯಾಗಿ ನಡೆಯಬೇಕು; ಇಲ್ಲವಾದರೆ ನಡುಹೊಳೆಯಲ್ಲಿ ಹರಿಗೋಲು ಮುಳುಗಿದ ಅವಸ್ಥೆ ಇವರದಾಗುತ್ತದೆ; ಕೂಡಲ ಸಂಗಮದೇವಾ !

೯೮೬ ಉಪದೇಶವ ಮಾಡುವ ಗುರು ಒಬ್ಬನಲ್ಲದೆ, ಲಿಂಗವೊಂದೆ ಯಲ್ಲದೆ—
ಪತಿಗೊಂದು ಲಿಂಗ, ಸತಿಗೊಂದು ಲಿಂಗ,
ಸುತನಿಗೊಂದು ಲಿಂಗ, ಸೋದರಗೊಂದು ಲಿಂಗ;
ದಾಸಿಗೊಂದು ಲಿಂಗ, ಭೃತ್ಯನಿಗೊಂದು ಲಿಂಗ,
ಇಂತೀ ಒಂದು ಮನೆಗೆ ಇಬ್ಬರು ಗುರು ಅದಕ್ಕೆ ಎರಡು
ಲಿಂಗವುಂಟೆ ?
ಅದೆಂತೆಂದೊಡೆ :- ಶಿವನ ವಾಕ್ಯ—

(ಶ್ಲೋಕ) ದಾಸೀ ಗೋಪಾಲ ಭೃತ್ಯಾನಾಂ | ಗೃಹಸ್ಥ ಸುತಯೋಃ ಶಿವಃ ||
ಲಿಂಗ ಸಾಹಿತ್ಯಃ ಸರ್ವೇಷಾಂ| ಅನ್ಯಶ್ಚಾಂಡಾಲವದ್‌ಗೃಹಂ||
ಮತ್ತೆಯುಂ
,, ಗುರುರೇಕೋ ಲಿಂಗಮೇಕಂ। ದೀಕ್ಷೈಕಾ ಪ್ರಸಾದಮೇಕಂ||
ಏತದ್ ದ್ವಯ ಮಿದಂ ದೇವಿ। ವಿಶೇಷಂ ಪಾತಕಂ ಭವೇತ್||
ಎಂದುದಾಗಿ,
ಇಂತೀ ಒಂದು ಮನೆಗೆ ಗುರು ಲಿಂಗವೆರಡು ಮಾಡಿ ನಡದಡೆ
ಅಘೋರ ನರಕದಲಿಕ್ಕುವ, ನೋಡಾ,
ನಮ್ಮ ಕೂಡಲ ಸಂಗಮ ದೇವರು.

ಒಂದು ಕುಟುಂಬಕ್ಕೆ ಉಪದೇಶ ಕೊಡುವ ಗುರುಗಳು ಒಬ್ಬರೇ ಇರುತ್ತಾರೆ; ಪೂಜೆ ಮಾಡಿಸಿಕೊಳ್ಳುವ ಲಿಂಗವು ಒಂದೇ ಇರುತ್ತದೆ; ಆದರೆ ಪತಿ–ಪತ್ನಿ–ಸುತ–ಸೋದರ, ದಾಸಿ, ಆಳು ಹೀಗೆ ಪ್ರತಿಯೊಬ್ಬರಿಗೂ ಬೇರೆ ಬೇರೆ ಗುರು ಮತ್ತು ಲಿಂಗವು ಎಂದು ಭಾವಿಸಿದವರನ್ನು ಕೂಡಲ ಸಂಗಮ ದೇವರು ಭಯಂಕರವಾದ ನರಕಯಾತನೆಗೆ ಗುರಿ ಮಾಡುತ್ತಾನೆ!

೯೮೭ ಎನಗೆ ನಾನೇ ಹಗೆ ನೋಡಯ್ಯಾ: ಎನಗೆ ನಾನೆ ಕೆಳೆ ನೋಡಯ್ಯಾ!
ನಿಮ್ಮ ಸದ್ಭಕ್ತರೊಡನೆ ವಿರೋಧ ಮಾಡಿದೊಡೆ ಎನ್ನ ಕೊಲುವುದಾಗಿ
ನಿಮ್ಮ ಪುರಾತನರಿಗಂಜಿ ಬೆಸಗೊಂಡೊಡೆ ಎನ್ನ ಕಾಯ್ವುದಾಗಿ
ಅನ್ಯ ಹಗೆ ಎಲ್ಲಿ, ಕೆಳೆ ಎಲ್ಲಿ?
ಬಾಗಿದ ತಲೆಯ ಮುಗಿದ ಕೈಯಾಗಿರಿಸು
ಕೂಡಲ ಸಂಗಮದೇವಾ.

ಕೂಡಲ ಸಂಗಮದೇವರೆ, ಬೇರೆ ವೈರಿಗಳೆಂಬುವವರು, ಮಿತ್ರರೆಂಬು ವವರು ಯಾರೂ ಇಲ್ಲ! ನನ್ನ ಸದ್ಗುಣಗಳೇ ನನ್ನ ಮಿತ್ರರು; ನನ್ನ

ದುರ್ಗುಣಗಳೇ ನನ್ನ ವೈರಿಗಳು. ಆದ ಕಾರಣ ಯಾವಾಗಲೂ ನಿಮ್ಮ ಶರಣರಿಗೆ ಬಾಗಿ ನಮಿಸುವ ಒಳ್ಳೆಯ ಬುದ್ಧಿಯನ್ನು ದಯಪಾಲಿಸು.

**೯೮೮ ಎನ್ನ ಮನವೆಂಬ ಮರ್ಕಟನು ತನುವಿಕಾರವೆಂಬ**
**ಅಲ್ಪಸುಖದಾಸೆಗಾಡಿ,**
**ವೃಥಾ ಭ್ರಮಣಗೊಂಡು, ನಾನಾ ದೆಸೆಗೆ ಲಂಘಿಸಿ,**
**ಅಳಲಿಸಿ ಬಳಲಿಸುತ್ತಿದೆ, ನೋಡಾ !**
**ಕೂಡಲ ಸಂಗಮ ದೇವರೆಂಬ ವೃಕ್ಷಕ್ಕೆ ಲಂಘಿಸಿ**
**ಅಪರಿಮಿತ ಸುಖವನೈದದು ನೋಡಾ**

ಯಾವ ಗೊತ್ತು ಗುರಿಯಿಲ್ಲದೆ ನಿಶ್ಚಿತ ಸುಖದ ಕಲ್ಪನೆಯಿಲ್ಲದೆ ನನ್ನ ಮಂಗ ಬುದ್ಧಿ ಅತ್ತಿತ್ತ ತಿರುಗಿ ಬಹು ದುಃಖಿಯಾಗಿದೆ; ಸಿಕ್ಕ ಸಿಕ್ಕ ಮರಗಳಿಗೆ ಹಾರಿ ಮೈ ಕೈ ನೋವು ಮಾಡಿದೆ; ಚಿರ ಶಾಂತಿದಾಯಕವಾದ ಕೂಡಲ ಸಂಗಮ ದೇವರೆಂಬ ಕ್ರಿಯಾಶುದ್ಧಿ ವೃಕ್ಷಕ್ಕೆ ಬಂದು ಕುಳಿತು ಕೊಳ್ಳಲೊಲ್ಲದು ! ಏನು ಮಾಡಲಿ ಪ್ರಭು ?

**೯೮೯ ಎನ್ನಯ್ಯಾ, ನಿಮ್ಮನರಸುತಲಿದ್ದೇನೆ;**
**ಎನ್ನಯ್ಯಾ, ಕೀಟಧ್ಯಾನದಲ್ಲಿ ನಿಮ್ಮ ನರಸುತಲಿದ್ದೇನೆ !**
**ಎನ್ನಯ್ಯಾ, ಕೂಡಲ ಸಂಗಮ ದೇವಾ,**
**ಭ್ರಮರನ ಲೇಸಿನಂತೆ ಕಾರುಣ್ಯವ ಮಾಡು;**
**ತಪ್ಪೆನ್ನದು, ಶಿವಧೋ, ಶಿವಧೋ !!**

ನನ್ನ ಮನದಾಣ್ಮ ಕೂಡಲ ಸಂಗಮ ದೇವಾ, ಜೇನ ಹುಳವು ಗುಂಜಾರವ ಮಾಡುತ್ತ ಎಲೆಯಿಂದ ಎಲೆಗೆ ಹೂವಿನಿಂದ ಹೂವಿಗೆ ಹಾರಿ ಮಧುವನ್ನು ಹುಡುಕಿ ಹೀರಿಕೊಳ್ಳುವಂತೆ ನಾನು ನಿಮ್ಮನ್ನು ಹುಡುಕುತ್ತಲಿದ್ದೇನೆ; ನೀವು ಕರುಣೆ ತೋರಿ ಕಾಪಾಡಬೇಕು !

**೯೯೦ ಒಡವೆ ಭಂಡಾರ ಕಡವರ ದ್ರವ್ಯವ**
**ಬಡ್ಡಿಯ ವ್ಯವಹಾರಕ್ಕೆ ಕೊಟ್ಟು**

ಮನೆಯ ಗೊಂಟೆನಲ್ಲಿ ಹೊಯ್ದು ಕೊಂಡಿದ್ದೆನಾದರೆ,
ಅದು ಎನ್ನರ್ಥವಲ್ಲ; ಅನರ್ಥವೆಂಬೆ.
ಸಂಗಮ ದೇವಾ ನೀ ಜಂಗಮ ರೂಪಾಗಿ ಬಂದು
ಆ ಧನವನು ನೀ ಬಲ್ಲಂತೆ ಎನ್ನ ಮುಂದೆ ಸೂರೆಗೊಳ್ಳುತ್ತಿದ್ದರೆ
ನಾನು ಬೇಕು ಬೇಡೆಂದು ಮನದಲ್ಲಿ ಮರುಗಿದೆನಾದೊಡೆ
ನಿಮ್ಮಾಣೆ, ನಿಮ್ಮ ಪ್ರಮಥರಾಣೆ: ಮನದೊಡೆಯಾ, ನೀನೇ ಬಲ್ಲೆ !
ಕಾಮನೇಮವೆಂಬ ಸಿಂಧು ಬಲ್ಲಾಳನ ವಧುವ
ಸರ್ವಭುವನದೊಡೆಯ ಸಂಗಮ ದೇವರು ಬೇಡುವಂತಲ್ಲಾ:
ಎನ್ನ ಸತಿ ನೀಲಲೋಚನೆ ಪೃಥ್ವಿಗಗ್ಗಳಿಯ ಚೆಲುವೆ;
ಆಕೆಯನು ಸಂಗಮದೇವಾ, ನೀ ಜಂಗಮರೂಪಾಗಿ ಬಂದು
ಎನ್ನ ಮುಂದೆ ಸಂಗವ ಮಾಡುತ್ತಿರಲು
ಎನ್ನೊಡನಿರ್ದ ಸತಿಯೆಂದು ಮಾಯಕ್ಕೆ ಮರುಗಿದೆನಾದೊಡೆ
ನಿಮ್ಮಾಣೆ, ನಿಮ್ಮ ಪ್ರಮಥರಾಣೆ; ಮನದೊಡೆಯಾ, ನೀನೇ ಬಲ್ಲೆ !
ಪ್ರತ್ಯಕ್ಷವಾಗಿ ಸಿರಿಯಾಳ ಸೆಟ್ಟಿ ಚಂಗಳವ್ವೆಯರ ಮನೆಗೆ ಬಂದು,
ಅವರ ಮಗನ ಬೇಡುವಂತಲ್ಲಾ:
ಸಂಗಮ ದೇವಾ, ನಿಮ್ಮ ಹೆಸರ ಚಿಕ್ಕ ಸಂಗಯ್ಯನಿದ್ದಹನು:
ನೀ ಜಂಗಮ ರೂಪಾಗಿ ಬಂದು ಆತನ ಹಿಡಿದು
ಎನ್ನ ಮುಂದೆ ಹೆಡಗುಡಿಯ ಕಟ್ಟಿ ಚಿನಿಖಂಡವ ಮಾಡಿ
ಬಾಣಸವ ಮಾಡುವಾಗಲು

ಎನ್ನುದರದಲ್ಲಿ ಬಂದ ಪುತ್ರನೆಂದು ಮಾಯಕ್ಕೆ ಮರುಗಿದೆ
ನಾದೊಡೆ
ನಿಮ್ಮಾಣೆ, ನಿಮ್ಮ ಪ್ರಮಥರಾಣೆ; ಮನದೊಡೆಯಾ,
ನೀನೇ ಬಲ್ಲೆ !

ಇಂತೀ ತ್ರಿವಿಧವು ಹೊರಗಣವು:
ಎನ್ನ ನೋವಿನೊಳಗಲ್ಲಾ, ಎನ್ನ ಬೇನೆಯೊಳಗಲ್ಲಾ!
ಇನ್ನು ನಾನಿದ್ದಹೆ; ಕದ್ದ ಕಳ್ಳನ ಕಟ್ಟುವಂತೆ ಕಟ್ಟಿ
ನೀ ಜಂಗಮ ರೂಪಾಗಿ ಬಂದು ಎನ್ನಂಗದ ಮೇಲೆ ಶಸ್ತ್ರವ
ನಿಕ್ಕಿನೋಡು;
ಬಸಿದ ಶೂಲ ಪ್ರಾಪ್ತಿಯ ಮಾಡಿನೋಡು;
ಸೂಜಿಯ ಮೊನೆಯಂತಿರ್ದ ಶೂಲದ ಮೇಲಿಕ್ಕಿನೋಡು;
ನವ ಖಂಡವಮಾಡಿ ಕಡಿ ಕಡಿದು ನೋಡು;
ಆ ಶೂಲವ್ನೈದೈದು ಮುಖವಾಗಿ ಹಾಯುವಾಗ
( ಆ ಹಾವಿನಿಂದ ? ) ಹರಿತಿನಿಸಿ ನೋಡು!
ಈ ರೀತಿಯಲ್ಲಿ ಎನ್ನ ಭಂಗವಡಸಿ ನೋಡಿದಡೆಯೂ
ಲಿಂಗಾರ್ಚನೆಯ ಮಾಡುವುದ ಬಿಡೆ,
ಜಂಗಮ ದಾಸೋಹವ ಮಾಡುವುದ ಬಿಡೆ,
ಪಾದ ತೀರ್ಥ ಪ್ರಸಾದ ಕೊಂಬುದ ಬಿಡೆ!
ಇಂತೀ ತ್ರಿವಿಧಕ್ಕೆ ರೋಷವ ಮಾಡಿ ಬಿಟ್ಟೆನಾದೊಡೆ
ನಿಮ್ಮಾಣೆ, ನಿಮ್ಮ ಪ್ರಮಥರಾಣೆ!
ಇನಿತರೊಳಗೆ ತಪ್ಪುಳ್ಳೊಡೆ ಮೂದಲಿಸಿ ಮೂಗ ಕೊಯಿ,
ಕೂಡಲ ಸಂಗಮ ದೇವಾ,

ಮಾಯೆಯೊಳಗಾಗಿ, ಮೋಹಕ್ಕೆ ಮನಸೋತು ಪರರ ಧನದಿಂದ ಬಡ್ಡೀ ವ್ಯವಹಾರಮಾಡಿ ದುಡ್ಡು ಸಂಪಾದಿಸಿದರೆ ಅದು ನನ್ನ ಧನವಲ್ಲ! ಅದು ಅನ್ಯಾಯದಅಧರ್ಮದ ಧನವು, ಆ ಧನವನ್ನು ಜಂಗಮ ರೂಪದಿಂದ ನೀವೇಬಂದು ಸೂರುಮಾಡಿದರೆ ನಾನದಕ್ಕೆ ಅಡ್ಡ ಬರುವುದಿಲ್ಲ; ನನ್ನ ಮನದ ದೃಢತೆಯನ್ನು

ನೀವು ಬಲ್ಲಿರಿ! ಅತಿ ಸುಂದರಿಯಾದ ನನ್ನ ಮಡದಿ ನೀಲಲೋಚನೆಯೊಂದಿಗೆ ನೀವು ಜಂಗಮ ರೂಪದಿಂದ ಬಂದು ಕೂಟಮಾಡಿದರೆ ನಾನು ಆ ವ್ಯಾಮೋಹಕ್ಕೊಳಗಾಗುವದಿಲ್ಲ! ನನ್ನ ಮಗ ಚಿಕ್ಕ ಸಂಗನನ್ನು ಹೆಡೆಮುರಿಗೆ ಕಟ್ಟಿ ಕೊಂದು ಅಡಿಗೆ ಮಾಡಿದರೂ ನಾನು ಅಳುಕಲಾರೆ, ಇದಲ್ಲದೆ ನನ್ನಂತರಂಗವನ್ನು ಪರೀಕ್ಷಿಸಿ ಪರಿ ಪರಿಯಿಂದ ಕಾಡಿಸಿ, ಹೊಡೆಸಿ, ಸುಡಿಸಿ, ಹಾವುಗಳನ್ನು ಮೈಮೇಲೆಸೆದು ಅವುಗಳಿಂದ ನನ್ನ ದೇಹವನ್ನು ತಿನಿಸಿ– ಏನು ಬೇಕಾದದ್ದು ಮಾಡಿದರೂ ನಾನು ಲಿಂಗ ಪೂಜೆಯನ್ನು, ಜಂಗಮ ದಾಸೋಹವನ್ನು ಮತ್ತು ತೀರ್ಥಪ್ರಸಾದ ಸ್ವೀಕರಿಸುವದನ್ನು ಬಿಡುವದಿಲ್ಲ; ಈ ಮಾತುಗಳಲ್ಲಿ ಏನಾದರೂ ತಪ್ಪಿದ್ದರೆ ನನ್ನ ಮೂಗು ಕತ್ತರಿಸಿ ಬಿಡು ಕೂಡಲ ಸಂಗಮದೇವಾ!

೯೯೧ ಕೇಳಿ ಭೋ, ಕೇಳಿ ಭೋ, ವಿಪ್ರರೆಲ್ಲರು:
ಬ್ರಹ್ಮಾಂಡ ಪುರಾಣದಲ್ಲಿ ಬ್ರಹ್ಮನುಡಿದ ವಾಕ್ಯವ!
(ಶ್ಲೋಕ) ವಿಪ್ರಾಣಾಂ ವೇದವಿದುಷಾಂ | ವೇದಾಂತಜ್ಞಾನ ವೇದಿನಾಂ ||
ಸಿತೇನ ಭಸ್ಮನಾ ಕಾರ್ಯಂ | ತ್ರಿಪುಂಡ್ರಮಿತಿ ಪದ್ಮಭೂಃ ||
ಎಂದುದಾಗಿ,
ನಂಬಿ ಧರಿಸಿರಿ ಭೋ ವಿಪ್ರರೆಲ್ಲರೂ ಶ್ರೀಮಹಾಭಸಿತವ!
ಇದ ನಂಬಿಯೂ ನಂಬದೆ,
ಅಜ್ಞಾನದಿಂದೆ ಶ್ರೀ ಮಹಾಭಸಿತವ ಬಿಟ್ಟು
ಮಣ್ಣುಮಸಿಯು, ಮರದ ರಸಂಗಳಂ
ಮೋಹದಿಂದ ನಿಮ್ಮ ಹಣೆಯಲ್ಲಿ ಬರೆದುಕೊಂಡಿರಾದೊಡೆ,
ನಮ್ಮ ಕೂಡಲ ಸಂಗಮದೇವರಲ್ಲಿ
ನಿಮ್ಮ ಅಧಿದೈವವೇ ನಿಮ್ಮ ಕಿವಿ ಮೂಗಂ ಕೊಯ್ದು
ಇಟ್ಟಿಯ ಲೊರಸಿ, ಕನ್ನಡಿಯ ತೋರಿ
ನಡೆಸಿ ನರಕದಲ್ಲಿ ಕೆಡಹದೆ ಬಿಡ, ಕಾಣಿಂ ಭೋ.

**ಇದನರಿದು ಮರೆಯದೆ ಧರಿಸಿಂ ಭೋ: ಕೆಡಬೇಡ,**
**ಕೆಡಬೇಡ !**

**ಮಹತ್ತಪ್ಪ ಭಸಿತವ ಧರಿಸಿ ಮುಕ್ತಾಯರಾಗಿರೊ!**

ಎಲ್ಲ ಬ್ರಾಹ್ಮಣೋತ್ತಮರು ಈ ಮಾತನ್ನು ಅನುಲಕ್ಷಿಸಬೇಕು; ಬ್ರಹ್ಮಾಂಡ ಪುರಾಣದಲ್ಲಿ ಬ್ರಹ್ಮನು ಹೀಗೆ ಹೇಳಿದ್ದಾನೆ; ಸಕಲ ವೇದ ಪಾರಂಗತರಾದ ಬ್ರಾಹ್ಮಣರು ಮಹಾ ಭಸ್ಮವನ್ನು ಮೂರೆಳೆಯಾಗಿ ಹಣೆಯಲ್ಲಿ ಧರಿಸಬೇಕು. ಈ ಮಹಾ ಭಸಿತವನ್ನು ಹಚ್ಚಿಕೊಳ್ಳುವದನ್ನು ಬಿಟ್ಟು ಮತ್ತಿತರ ಗಿಡ ರಸ ಗಂಧಗಳನ್ನು ಹಚ್ಚಿಕೊಂಡದ್ದಾದರೆ ನಿಮ್ಮ ನಿಮ್ಮ ಕುಲದೇವರೆ ನಿಮ್ಮನ್ನು ಶಿಕ್ಷಿಸಿ-ನರಕಕ್ಕೆ ಕಳಿಸದೇ ಬಿಡುವುದಿಲ್ಲ. ಕಾರಣ ಶ್ರದ್ಧೆಯಿಂದ ಭಸ್ಮವನ್ನು ಹಚ್ಚಿಕೊಂಡು ಪುನೀತರಾಗಿರಿ!

**೯೯೨ ಗುರು-ಶಿಷ್ಯ ಸಂಬಂಧವನೇನೆಂದುಪಮಿಸುವೆನಯ್ಯಾ ?**
**ಗುರುವಿನ ಒಂದಾಗಿ ಹೋಗಲು ಬಾರದು;**
**ಅದೇಕೆಂದರೆ, ಗುರುವಿನ ನೆರಳು ಮೆಟ್ಟದ ಹಾಗೆ**
**ಹೋಗಬೇಕು.**
**ಗುರುವಿದ್ದ ಊರಲಿರಲು ಬಾರದು;**
**ಅದೇಕೆಂದರೆ, ತ್ರಿಕಾಲದಲ್ಲಿ ನಮಸ್ಕರಿಸಿದಲ್ಲದೆ**
**ಇರಬಾರದು.**
**ಗುರುವಿನಿದಿರಲ್ಲಿ ಆಸನ ವಿಕ್ಕಿ ಕುಳ್ಳಿರಬಾರದು;**
**ಅದೇನು ಕಾರಣವೆಂದರೆ, ಆಸನವಿಲ್ಲದೆ ಭೃತ್ಯನಾಗಿ**
**ಕುಳ್ಳಿರಬೇಕು.**
**ಗುರುವಿನ ಸಮ ಪಙ್ತಿಯಲ್ಲಿ ಲಿಂಗಾರ್ಚನೆಯ**
**ಮಾಡಲಾಗದು;**
**ಅದೇನು ಕಾರಣವೆಂದರೆ**
**ಗುರುವಿಂಗೆ ಆರೋಗಣೆಯ ಮಾಡಿಸಿದ ಬಳಿಕ**
**ಪ್ರಸಾದವಂ ಕೊಂಬುದು.**
**ಗುರುವಂತಹ ನಿಂತಹನೆಂದು ಕನಸಿನಲ್ಲಿ ಮನಸಿನಲ್ಲಿ**
**ನಿಂದ್ಯವ ಮಾಡಿದಡೆ**

**ಅಘೋರ ನರಕದಲ್ಲಿಕ್ಕದೆ ಬಿಡುವನೆ,**
**ನಮ್ಮ ಕೂಡಲ ಸಂಗಮ ದೇವರು?**

ಗುರು ಶಿಷ್ಯರಲ್ಲಿ ಬಾಂಧವ್ಯ ಹೀಗಿರಬೇಕು: ಯಾವಾಗಲೂ ಶಿಷ್ಯನು ಗುರುಗಳನ್ನು ಸರಿಗಟ್ಟಿಕೊಳ್ಳಬಾರದು; ಮತ್ತು ಅವರನ್ನು ಕನಸು ಮನಸಿನಲ್ಲಿ ಸಹ ಹಳಿಯಬಾರದು; ಹಾಗೆ ಮಾಡಿದ್ದಾದರೆ ಕೂಡಲ ಸಂಗಮದೇವರು ಅಂಥ ಶಿಷ್ಯರನ್ನು ರವ ರವ ನರಕ್ಕೆ ದೂಡುತ್ತಾನೆ; ಗುರುಗಳಿದ್ದ ಊರಲ್ಲಿ ಶಿಷ್ಯನಿರಕೂಡದು; ಅವರನ್ನು ಹಿಂಬಾಲಿಸಿ ಹೋಗಬಾರದು; ಅವರೆದುರಿಗೆ ಆಸನದ ಮೇಲೆ ಎತ್ತರವಾಗಿ ಕುಳಿತುಕೊಳ್ಳಬಾರದು; ಅವರೊಡನೆ ಅವರ ಸಾಲಿನಲ್ಲಿ ಪೂಜೆಗೆ ಕುಳಿತುಕೊಳ್ಳಬಾರದು; ಕಾರಣಗಳೇನಂದರೆ, ತ್ರಿಕಾಲ ನಮಸ್ಕಾರ ಮಾಡದೆ ಇರಬಾರದು ಅವರಿಗೆ; ಅವರ ನೆರಳು ತುಳಿಯದಂತಿರಬೇಕು; ಅವರಿಗೆ ಅಪಮಾನ ಮಾಡಿದಂತಾಗುತ್ತದೆ, ಗುರುವಿಗೆ ನೈವೇದ್ಯ ಮಾಡಿದ ಬಳಿಕ ಪ್ರಸಾದ ಸ್ವೀಕರಿಸಬೇಕು, ಈ ಎಲ್ಲ ಕಾರಣಗಳನ್ನರಿತು ನಡೆಯಬೇಕು.

**೯೯೩ ದೇವ ದಾನವ ಮಾನವಾದಿ ಗಳೊಳಗಾದ ಎಲ್ಲ ಜೀವರುಗಳಲ್ಲಿ**
**ಹಿರಿದು ಕಿರಿದೆನ್ನದೆ ನಿದ್ರೆಯ ಬಲೆಯ ಬೀಸಿ ಸರಿದು ತೆಗೆಯಲೊಡನೆ**
**ಅರಿವು ಮರೆಯಿತ್ತು, ನೋಟ ಜಾರಿತ್ತು,**
**ಬುದ್ಧಿ ತೊರೆಯಿತ್ತು, ದೇಹವೊರಗಿತ್ತು!**
**ಇದು ನಿಚ್ಚ ನಿಚ್ಚ ಬಹ ಹೋಹ ಸಕೀಲವನಾರೂ ಅರಿಯರು**
**ನೋಡಾ, ಕೂಡಲ ಸಂಗಮದೇವಾ.**

ಪ್ರಾಣಿಮಾತ್ರರೆಲ್ಲರಿಗೂ ನಿದ್ರೆಯ ಬಲೆಯನ್ನು ಬಿಸಿ ನಂತರ ತೆಗೆದರೆ ಅವರಲ್ಲಿದ್ದ ತಿಳುವಳಿಕೆ-ದೃಷ್ಟಿ-ಬುದ್ಧಿ, ಎಲ್ಲವೂ ಮಸಳಿಸಿ ಹಾಳಾಗಿ ಹೋಗುತ್ತವೆ; ಈ ರೀತಿ ದಿನ ದಿನವೂ ಬಂದು ಹೋಗುವ ಈ ಮರುವಿನ ಸಂಕಟವನ್ನು ಯಾರೂ ತಿಳಿದುಕೊಂಡಿಲ್ಲ ಕೂಡಲ ಸಂಗಮದೇವಾ!

೯೯೪ ನೋಡಿರೆ ಪೂರ್ವದತ್ತವ:
ವರುಣ ಹೆಳವ, ರವಿ ಕುಷ್ಟ, ಶುಕ್ರನಂಧಕ;
ಶನಿಗೆ ಸಂಕಲೆ, ಬಲಿಗೆ ಬಂಧನ, ಸೀತೆಗೆ, ದ್ರೌಪದಿಗೆ ಸೆರೆ;
ಹರಿ ಹಂದಿಯಾದ ಆರ್ಹಂಗೆ ಲಜ್ಜೆ, ಬ್ರಹ್ಮನ ಸಿರ ಹೋಯಿತ್ತು;
ಬಲ್ಲಿದನೆಂಬವನ ಕೆಡಿಸಿತ್ತು, ವಿಧಿ;
ಜತ್ತುಕನೆಂಬವನ ಕತ್ತೆಯ ಮಾಡಿತ್ತು,
ದಶಮುಖನ ನಾಯಡೋಣೆಯಲ್ಲುಣಿಸಿತ್ತು,
ದೇವೇಂದ್ರನ ಮೆಯ್ಯನಾಣುಗೆಡಿಸಿತ್ತು,
ಶೂದ್ರಕನ ತಲೆಯ ಕಂಚಿಯಲ್ಲಿ ಕಟ್ಟಿತ್ತು.
ಕೂಡಲ ಸಂಗಮದೇವಾ,
ನೀ ಮಾಡಿದ ಮಾಯೆ ಅನಂತರನಾಳಿಗೊಂಡಿತ್ತು.

ವಿಧಿಯ ಮುಂದೆ ಓಡುವವರಾರೂ ಇಲ್ಲ! ಆ ಮಾಯಾವಿಯ ಕೈಗೆ ಸಿಕ್ಕು ವರುಣನು ಕುಂಟನಾದನು; ಸೂರ್ಯನು ಕುಷ್ಟರೋಗಿಯಾದನು; ಶುಕ್ರಾಚಾರ್ಯರು ಕುರುಡರಾದರು; ಶನಿದೇವನಿಗೆ ಬೇಡಿಯಾಯಿತು; ಬಲಿಚಕ್ರವರ್ತಿಗೆ ಪಾತಾಳವಾಸವಾಯ್ತು; ಸೀತಾದೇವಿ ದ್ರೌಪದಿಯರು ರಾವಣ ದುರ್ಯೋಧನರ ಕೈಸೆರೆಯಾದರು; ವಿಷ್ಣುವು ಹಂದಿಯ ರೂಪ ಧರಿಸಿದನು; ಬ್ರಹ್ಮನ ಮಾನ ಹೋಯಿತು; ಅಲ್ಲದೆ ದಾನವರಾದ ಜತ್ತುಕ-ರಾವಣರು ಕತ್ತೆ ನಾಯಿಗಳಾದರು; ಇಂದ್ರನ ರೂಪ ಕುರೂಪವಾಯಿತು. ಕೂಡಲ ಸಂಗಮದೇವಾ, ನಿನ್ನಿಂದ ಹುಟ್ಟಿದ ಮಾಯೆ ದೇವ ದಾನವರನ್ನು ಕಾಡಿದೆ; ಕಾಡುತ್ತಲಿದೆ!

೯೯೫ ಪಿತನಾಚಾರವನುದ್ಧರಿಸುವಾತ ಪುತ್ರನಲ್ಲದೆ
ಗತಿಗೆಡಿಸುವಾತ ಪುತ್ರನಲ್ಲ.
ಅದೆಂತೆಂದೊಡೆ-
ತಂದೆಯಂಗದ ಮೇಲಣ ಲಿಂಗವ ಹಿಂಸಿಸಿ

ತಾನು ಕಟ್ಟಿಕೊಂಡು ಆತನ ಸುಡುವ ಪ್ರಾಣಿಗಳು ನೀವು
ಕೇಳಿರೆ;
ಹೋದಾತ ಭೂತ ಪ್ರಾಣಿ, ಕಟ್ಟಿಕೊಂಡಾತ ಪ್ರೇತಲಿಂಗ
ಸಂಸ್ಕಾರಿ !
ಇದಕ್ಕೆ ಆಗಮ ಸಾಕ್ಷಿ;
(ಶ್ಲೋಕ) ಪ್ರೇತಲಿಂಗಸ್ಯ ಸಂಸ್ಕಾರೀ। ಭೂತಪ್ರಾಣಿಷು
ಜಾಯತೆ ॥
ಸುಪ್ರಭಾತೆ ಮುಖಂ ದೃಷ್ಟ್ವಾ। ಕೋಟಿ ಜನ್ಮನಿ ಸೂಕರಃ॥
ಎಂದುದಾಗಿ,
ಗುರುವಾಗಿ ಲಿಂಗ ಸಾಹಿತ್ಯನ ಮಾಡಿದಾತಂಗೆಯೂ
ಮಾಡಿಸಿ ಕೊಂಡಾತಂಗೆಯೂ
ಇವರಿಬ್ಬರ ಸಾಕ್ಷಿಯಾಗಿ ಕುಳ್ಳಿರ್ದು ಮಾಡಿಸಿದವರಿ
ಗೆಯೂ
ಇಂತೀ ತ್ರಿವಿಧಕ್ಕೆ ಕೋಟಿ ಜನ್ಮ ನರಕ ತಪ್ಪದು.
ಕೂಡಲ ಸಂಗಮದೇವಾ.

ತಂದೆಯ ಆಚಾರಗಳನ್ನು ಸಂಪ್ರದಾಯಗಳನ್ನು ಉದ್ಧಾರ ಮಾಡು ವವನೇ ಮಗನು; ಕೆಡಿಸಿ ಹಾಳು ಮಾಡುವವನು-ತಂದೆಯನ್ನು ಗತಿಗೆಡಿ ಸುವವನೂ ಮಗನೇ ಅಲ್ಲ ! ತಂದೆಯು ಧರಿಸಿದ ಲಿಂಗವನ್ನು ಕಿತ್ತು ಕೊಂಡು ಅವನನ್ನು ಹಿಂಸಿಸಿ ತಾನು ಆ ಲಿಂಗವನ್ನು ಕಟ್ಟಿಕೊಂಡು ಅವ ನನ್ನು ತಳಮಳಗೊಳಿಸುವವರು ನರಪಶುಗಳು. ಸತ್ತವನು ಭೂತವಾದರೆ ಆ ಲಿಂಗವನ್ನು ಕಟ್ಟಿಕೊಂಡವನು ಕುಕರ್ಮಿ; ಇಂಥ ಕುಕರ್ಮಿಗಳ ಗುರು ವಾಗಿ ಲಿಂಗಧಾರಣೆ ಮಾಡಿಸಿದರೆ ಮಾಡಿಸಿದವನೂ ಹಾಗೂ ಕಟ್ಟಿಕೊಂಡ ವನೂ ಇಬ್ಬರೂ ಕೋಟಿ ಜನ್ಮಗಳಲ್ಲಿ ನರಕಯಾತನೆ ಅನುಭವಿಸಬೇಕಾ ಗುತ್ತದೆ ಕೂಡಲ ಸಂಗಮದೇವಾ !

೯೯೬ ಭಕ್ತನಾಗಿ ಭವಿಯ ಮನೆಯಲುಂಬ
ಅನಾಚಾರಿಯ ತೋರದಿರಯ್ಯಾ ಎನಗೆ.

ನೊಸಲಲ್ಲಿ ಒಂದು ಕಣ್ಣುಳ್ಳವ ನಾದೊಡೆಯೂ ಆಗಲಿ,
ಅಂಗದ ಮೇಲೆ ಲಿಂಗಸಂಬಂಧವಿಲ್ಲದಿರ್ದಡೆ
ಅವನ ಮನೆಯಲ್ಲಿ ಮಾಡಿದ ಪಾಕ
ಶ್ವಾನ ಮಾಂಸಕ್ಕೆ ಸರಿಯೆಂಬುದಾಗಿ, ಬಲ್ಲವರೊಲ್ಲರು.
ಶಿವಭಕ್ತರಲ್ಲದವರ ಮನೆಯಲುಂಡರೆ
ಜನ್ಮ ಜನ್ಮದಲ್ಲಿ ಶ್ವಾನಯೋನಿಯಲ್ಲಿ ಬಪ್ಪುದು ತಪ್ಪದು
ಎಲೆ ಲಿಂಗವೆ ನೀನಿಲ್ಲದವನ ಮನೆಯಲ್ಲಿ ತಿಂಬವಗೆ
ಹುಳುಗೊಂಡವೆ ಪ್ರಾಪ್ತಿಯಯ್ಯಾ,
ಕೂಡಲ ಸಂಗಮದೇವಾ.

ಭಕ್ತನೆಂದು ಹೇಳಿಕೊಂಡು ಭವಿಯ ಮನೆಯಲ್ಲಿ ಊಟ ಮಾಡುವ ವನ ಮುಖವನ್ನು ನಾನು ನೋಡುವದಿಲ್ಲ. ಮುಕ್ಕಣ್ಣನೇ ಆಗಲಿ ಅವನಂಗದ ಮೇಲೆ ಲಿಂಗವಿಲ್ಲದಿದ್ದರೆ ಅವನ ಮನೆಯ ಅನ್ನವು ನಾಯಿಯ ಮಾಂಸವಾಗುತ್ತದೆ; ಆದಕಾರಣ ಶಿವಭಕ್ತರಲ್ಲದವರ ಮನೆಯಲ್ಲಿ ಊಟವನ್ನು ಎಂದಿಗೂ ಮಾಡಲಾರೆ ! ಹೇ ಲಿಂಗವೆ, ನೀನಿಲ್ಲದ ಮನೆಯಲ್ಲಿ ಊಟ ಮಾಡುವ ಭಕ್ತನಿಗೆ ಜನ್ಮ ಜನ್ಮಗಳಲ್ಲಿ ನರಕ ಪ್ರಾಪ್ತಿಯಾಗಲಿ, ಕೂಡಲ ಸಂಗಮದೇವಾ.

೯೯೭ ರೂಪ ಚಕ್ರ ನಯನದಿಂ ನಡೆವುದು;
ಶಬ್ದ ಚಕ್ರ ಶ್ರೋತ್ರದಿಂ ನಡೆವುದು;
ಸೌರಭ ಚಕ್ರ ಘ್ರಾಣದಿಂ ನಡೆವುದು;
ರುಚಿ ಚಕ್ರ ಜಿಹ್ವೆಯಿಂದೆ ನಡೆವುದು;
ಸ್ಪರ್ಶಚಕ್ರ ತ್ವಕ್ಕಿನಿಂದೆ ನಡೆವುದು;
ಈ ಐದರಿಂದೆ ನಡೆಯುತ್ತ ಲೋಕಾದಿಗಳೆಲ್ಲವು
ಹೀಗೆಯೆ ಕೆಟ್ಟು ಹೋದವು.
ಈ ಐದರ ಕಥನದಲ್ಲಿ ಈ ಸಂಸಾರವೆಂಬ ವಿಧಿಯ ಕೈಯಲ್ಲಿ
ಹರಿ ಬ್ರಹ್ಮ ಸುರರು ಮೊದಲಾದವರೆಲ್ಲರೂ
ಕೆಟ್ಟು ಹೋದರು ನೋಡಾ, ಕೂಡಲ ಸಂಗಮ ದೇವಾ.

ಪಂಚೇಂದ್ರಿಯಗಳ ಈ ಮಹಾಚಕ್ರದಿಂದಲೆ ಪ್ರಪಂಚ ಸಾಗುತ್ತ ಆದರ ಸೆಳವಿನಲ್ಲಿ ಬಿದ್ದು ಲೋಕವೆಲ್ಲ ನಾಶವಾಯಿತು; ಹರಿಹರ ಬ್ರಹ್ಮಾದಿ ಗಳೆಲ್ಲರೂ ಈ ಸಂಸಾರ ಮಾಯದಲ್ಲಿ ತೊಡಗಿ ಕೆಟ್ಟುಹೋದರು; ಏನು ಹೇಳಲಿ ಕೂಡಲ ಸಂಗಮ ದೇವಾ !

೯೯೮ ಲಿಂಗವೊಂದೆ, ನಾಮಂಗಳು ಬೇರಾಗಿಹುವಯ್ಯಾ
ಪರಮ ಪತೀವ್ರತೆಗೆ ಗಂಡನೊಬ್ಬನೆ.
ಮತ್ತೊಬ್ಬರ ಬಳಿಗೆ ಹೋದರೆ, ತನ್ನ ಗಂಡ
ಕಿವಿ ಮೂಗ ಕೊಯ್ಯದೆ ಮಾಣ್ಬನೆ?
ಹಲವು ಲಿಂಗದ ಪ್ರಸಾದವ ಹಂಚಿಕೊಂಡು ತಿಂಬ
ಈ ಕುನ್ನಿ ಮಾನವರ ಕೂಗಿಡೆ, ಕೂಗಿಡೆ, ನರಕದಲಿಕ್ಕದೆ ಮಾಣ್ಬನೆ.
ಕೂಡಲ ಸಂಗಮದೇವಾ?

ದೇವರೊಬ್ಬನೇ ನಾಮಗಳು ಹಲವು; ಆದರೆ ಈ ತಾರತಮ್ಯವನ್ನು ತಿಳಿಯದ ಮಾನವರು ಅನೇಕ ದೇವರುಗಳ ತೀರ್ಥ ಪ್ರಸಾದಗಳನ್ನು ಸ್ವೀಕರಿಸುತ್ತಾರೆ; ಪರಮ ಪತಿವ್ರತೆಗೆ ಪತಿಯೊಬ್ಬನೆ; ಆದರೆ ತನ್ನ ಹೆಂಡತಿ ಪರ ಪುರುಷನ ಬಳಿ ಹೋದರೆ ಅವಳನ್ನು ಆ ಪತಿ ದಂಡಿಸುವಂತೆ ಕೂಡಲ ಸಂಗಮ ದೇವರು ಈ ಎರಡು ಬಗೆಯ ಮನದ ಭಕ್ತರನ್ನು ದಂಡಿಸದೆ ಬಿಡುವುದಿಲ್ಲ.

೯೯೯ ವಚನಾಮ ಭಾವವ ಮಾಡುವಯ್ಯಗಳಿರಾ
ನಿಮಗೆ ವಚನ ಪ್ರಾಣಲಿಂಗವೊ, ಅಲ್ಲದೆ,
ದಾಸೋಹ ಪ್ರಾಣಲಿಂಗವೋ ?
ಆ ರೂಢವನೆ ಕಲಿತು ಅಂಗ ಸಂಗದಲ್ಲಿಪ್ಪುದು ಪ್ರಾಣಲಿಂಗವೊ, ಅಲ್ಲದೆ,
ದಾಸೋಹ ಪ್ರಾಣಲಿಂಗವೊ?
ಎಲ್ಲಾ ಮಾತುಗಳ ಹಲ್ಲಣಿಸಿಕೊಂಡು
ಬಲು ಹುಲಿಯು ಬೆನ್ನಲ್ಲಿ ಬಪ್ಪ ತೆರನಂತೆ—

**ಬಲ್ಲವರಿಗೆ ಬಲ್ಲವರು ನಮ್ಮ ಜಂಗಮದಾಸೋಹಿಗಳು.**
**ಕೂಡಲ ಸಂಗಮ ದೇವರರಿದರೆ**
**ನಿಮ್ಮ ಹಲ್ಲ ಕಳೆವರು ಕಾಣಿರೋ!**

ವಚನಗಳನ್ನೋದಿ ಕ್ಷಣಾನಂದ ಅನುಭೋಗಿಸುವ ಅಪ್ಪಗಳಿರಾ, ನಿಮಗೆ ವಚನವೇ ಮೆಚ್ಚಿಕೆಯದೋ ಅಥವಾ ದಾಸೋಹ ಮೆಚ್ಚಿಕೆಯದೋ? ಯೋಗವನ್ನು ಕಲಿತು ತಲ್ಲೀನತೆಯನ್ನು ಹೊಂದಿ ಆನಂದ ಚಿತ್ತರಾದ ಯೋಗಿಗಳೆ ನಿಮಗೆ ದೇಹಮರೆತಿರುವದು ಶ್ರೇಷ್ಠವೋ ಅಥವಾ ದಾಸೋಹವು ಶ್ರೇಷ್ಠವೊ? ಈ ಎಲ್ಲ ಮಾತುಗಳನ್ನು ಹಂಗಿಸುತ್ತ ದೊಡ್ಡ ಹುಲಿ ಬೆನ್ನ ಹಿಂದೆಯೇ ಬರುವ ಹಾಗೆ ಬರುವ ನಮ್ಮ ಜಂಗಮ ದಾಸೋಹಿಗಳು ತಿಳಿದವರಿಗೆ ತಿಳಿದಾರು; ಸಿಕ್ಕವರಿಗೆ ತಿಳಿಯಲಾರರು! ಈ ವಿಚಾರ ಕೂಡಲ ಸಂಗಮ ದೇವರಿಗೆ ತಿಳಿದರೆ ನಿಮ್ಮ ಹಲ್ಲುಗಳನ್ನು ಕಿತ್ತಿ ಹಾಕುತ್ತಾನೆ.

**೧೦೦೦ ಶ್ವಾನ ಮಡಕೆಯನಿಳುಹಿ ಬೋನವ ತಿಂಥು**
**ಏರಿಸಲರಿಯದಂತೆ**
**ನಾನು ಷಟ್‌ಸ್ಥಲವನೋದಿ ಏನ ಮಾಡುವೆನಯ್ಯಾ.**
**ಅವಗುಣಂಗಳೆನ್ನ ಬಿಡದನ್ನಕ್ಕ?**
**ಕಾರ್ಯವುಳ್ಳಕರ್ತ ಜಂಗಮ ಲಿಂಗದಲ್ಲಿ**
**ನಾನು ದಾಸೋಹವ ಮಾಡಲರಿಯದೆ ಕೆಟ್ಟೆನು,**
**ಕೂಡಲ ಸಂಗಮದೇವಾ.**

ನಾಯಿ ಗಡಿಗೆಗಳನ್ನು ಕೆಳಗೆ ಕೆಡವಿ ಅನ್ನವನ್ನು ತಿನ್ನುತ್ತದೆ; ಆದರೆ ಅದಕ್ಕೆ ಮೇಲೆತ್ತಿ ಇಡಲು ಬಾರದು; ಹಾಗೆ ನನ್ನ ದುರ್ಗುಣಗಳು ನಾಶವಾಗದೆ ನಾನು ಷಟ್‌ಸ್ಥಲ ವಚನಗಳನ್ನೋದಿ ಏನು ಮಾಡಲಿ? ಕಾರ್ಯಕಾರಣಿಗಳಾದ ಜಂಗಮ-ಲಿಂಗಕ್ಕೆ ದಾಸೋಹವನ್ನು ಮಾಡದೆ ನಾನು ಹಾಳಾದೆನು; ಕೂಡಲ ಸಂಗಮದೇವಾ!

೧೦೦೧ ಸದ್ಭಕ್ತಂಗೆಯೂ ಜಂಗಮ ಲಿಂಗಕ್ಕೆಯೂ ಭಾಜನ ಬೇಕೆಂಬ
ಶಾಸ್ತ್ರಸಾಧಕರು ನೀವು ಕೇಳಿರೋ!
'ಭಕ್ತದೇಹಿಕದೇವ'ನೆಂದು ಶ್ರುತಿ ಸಾರುತಿದೆ:
ಅರಿದು ಮರೆಯದಿರಿ!
ಮರವೆಯಿಂದ ಬ್ರಹ್ಮನ ಸಿರಹೋಯಿತು;
ಮರವೆಯಿಂದ ದಕ್ಷನ ತಲೆಯು ನೀಗಿ
ಕುರಿದಲೆಯಾದುದನರಿಯಿರೇ ?
ಮರೆಯದೆ ವಿಚಾರಿಸಿ ನೋಡಿ:
ಭಕ್ತಂಗೂ ಲಿಂಗಕ್ಕೂ ಭೇದವಿಲ್ಲ;
ಇನ್ನು ಆ ಭಕ್ತಂಗೆಯೂ ಆ ಜಂಗಮಲಿಂಗಕ್ಕೆಯೂ ಭೇದವಿಲ್ಲ;
ಬೇರ್ಪಡಿಸಿ ನುಡಿಯಲುಂಟೆ?
ಇನ್ನು ಆಗುರುವಿಂಗೆಯೂ ಅ ಭಕ್ತಂಗೆಯೂ ಸಂಕಲ್ಪ ವಿಲ್ಲ;
ಅದೆಂತೆಂದೊಡೆ :
ಮೆಟ್ಟು ರಕ್ಷೆ, ಮುಟ್ಟುವಯೋನಿ, ಅಶನ, ಶಯನ, ಸಂಯೋಗ,
ಮಜ್ಜನ, ಭೋಜನ– ಇಂತಿವನು
ಗುರು ಲಿಂಗ ಜಂಗಮ ಸಹಿತವಾಗಿ ಭೋಗಿಸುವ ಸದ್ಭಕ್ತಂಗೆ
ನಾನು ನಮೋ ನಮಃ ಎಂಬೆನು
ಅಂದೆಂತೆಂದೊಡೆ:
(ಶ್ಲೋಕ) ಅರ್ಥಪ್ರಾಣಾಭಿಮಾನಾಶ್ಚ | ಗುರುಲಿಂಗಂತು ಜಂಗಮಃ||
ತಲ್ಲಿಂಗಜಂಮಪ್ರಾಣಂ | ಭಕ್ತಸ್ಥಲಂ ಸುಬುದ್ಧಿಮಾನ್ ||
ಎಂದುದಾಗಿ,

ಇದನರಿತು ಅರ್ಥ ಪ್ರಾಣಾಭಿಮಾನಗಳನ್ನು ಗುರುಲಿಂಗ ಜಂಗಮಕ್ಕೆ ಸಮರ್ಪಿಸಿ,
ಆ ಗುರುಲಿಂಗ ಜಂಗಮವನೆ ಪ್ರಾಣವಾಗಿಹ ಸದ್ಭಕ್ತಂಗೆಯೂ
ಆ ಗುರುಲಿಂಗ ಜಂಗಮಕ್ಕೆಯೂ
ಏಕ ಭಾಜನ ಏಕ ಭೋಜನ ವಲ್ಲದೆ, ಭಿನ್ನ ಭಾಜನ ಭಿನ್ನ ಭೋಜನವುಂಟೆ ?
ಇಲ್ಲವಾಗಿ, ಅದೇನು ಕಾರಣವೆಂದರೆ
ಆ ಸದ್ಭಕ್ತನ ಅಂಗನೆಂಬ ಗೃಹದಲ್ಲಿ ಜಂಗಮವಿಪ್ಪನಾಗಿ
ಇದನರಿದು ಬೇರೆ ಮಾಡಿ ನುಡಿಯಲಾಗದು.
ಚೆನ್ನಯ್ಯ ನೊಡನುಂಬುದು ಆವ ಶಾಸ್ತ್ರ ?
ಕಣ್ಣಪ್ಪಸವಿದುದ ಸವಿವುದಿದಾವ ಶಾಸ್ತ್ರ ?
ಭಕ್ತ ದೇಹಿಕ ದೇವನಾದ ಕಾರಣಾ
ಅದೆಂತೆಂದೊಡೆ:
( ಶ್ಲೋಕ ) ಭಕ್ತಜಿಹ್ವಾಗ್ರತೋ ಲಿಂಗಂ | ಲಿಂಗಜಿಹ್ವಾಗ್ರತೋರುಚಿಃ||
ರುಚಿ ಜಿಹ್ವಾಗ್ರೆ ಪ್ರಸಾದಂ | ಪ್ರಸಾದಂ ಪರಮಂ ಪದಂ ||
ಇಂತೆಂಬ ಪುರಾಣ ವಾಕ್ಯವನರಿದು
ಸದ್ಭಕ್ತನೂ ಗುರು ಲಿಂಗ ಜಂಗಮವೂ
ಈ ನಾಲ್ವರೂ ಒಂದೇ ಭಾಜನದಲ್ಲಿ ಸಹ ಭೋಜನ ಮಾಡುವರಿಂಗೆ
ಇನ್ನೆಲ್ಲಿಯು ಸಂಕಲ್ಪವೊ, ಇನ್ನೆಲ್ಲಿಯು ಸೂತಕವೊ, ಇನ್ನೆಲ್ಲಿಯು ಪಾತಕವೊ,
ಕೂಡಲ ಸಂಗಮ ದೇವಾ ?

ಭಕ್ತನು ಮತ್ತು ದೇವನು ಬೇರೆಬೇರೆಯಲ್ಲ; ಯಾಕಂದರೆ ದೇವನು ಭಕ್ತನ ದೇಹದಲ್ಲಿರುತ್ತಾನೆ. ಅವರೀರ್ವರಿಗೂ ಬೇರೆ ಬೇರೆ ನೈವೇದ್ಯಗ

ಳನ್ನು ಮಾಡಬಾರದು. ಮಾಡಿದರೆ ದೇವರಲ್ಲಿ ಎರಡು ಭಾವವಿಟ್ಟ ಕಾರಣ ನರಕಪ್ರಾಪ್ತಿಯಾಗುತ್ತದೆ; ದೇವನು ಭಕ್ತನಲ್ಲಿದ್ದ ಕಾರಣವೇ ಶಿವನು ಚೆನ್ನಯ್ಯನು ಊಟ ಮಾಡಿ ಬಿಟ್ಟುದನ್ನು ಉಂಡನು; ಹಾಗೆಯೇ ಬೇಡರ ಕಣ್ಣಪ್ಪನು ತಿಂದು ರುಚಿ ನೋಡಿದ ಪದಾರ್ಥಗಳನ್ನು ಶಿವನು ತಿಂದು ಮೆಚ್ಚಿದನು. ಈ ಮಾತನ್ನು ತಿಳಿದು ಕೂಡಲ ಸಂಗಮನಲ್ಲಿ ಎರಡು ಬುದ್ಧಿ ಎರಡು ಭಾವ ಮಾಡಬಾರದು !

೧೦೦೨ **ಸೋಮವಾರ ಮಂಗಳವಾರವೆಂದು ಮಾಡುವ ಭಕ್ತನ**
**ಲಿಂಗ ಭಕ್ತಂಗೆಂತು ಸರಿಯೆಂಬೆನಯ್ಯಾ?**
**ದಿನ ಶ್ರೇಷ್ಠವೊ ಲಿಂಗಶ್ರೇಷ್ಠವೊ ?**
**ದಿನ ಶ್ರೇಷ್ಠವೆಂದು ಮಾಡುವ ದುರಾಚಾರಿಯ ಮುಖವ ನೋಡಲಾಗದು**
**ಆ ದಿನ ಘನವೆಂದು, ಆ ದಿನವೆ ದೈವವೆಂದು ಮಾಡುವನಾಗಿ**
**ಆತ ದಿನದ ಭಕ್ತನು**
**ಲಿಂಗ ಭಕ್ತನು ಲಿಂಗವೇ ಘನವೆಂದು, ಲಿಂಗವೇ ದೈವವೆಂದು ಮಾಡುವನಾಗಿ**
**ಆತ ಲಿಂಗ ಭಕ್ತನು.**
**ಅಂತಾ ದಿನದ ಭಕ್ತಂಗೆಯೂ ಲಿಂಗಭಕ್ತಂಗೆಯೂ ಸಮವೆಂದೊಡೆ**
**ಪಂಚ ಮಹಾಪಾತಕ ತಪ್ಪದು.**
**ಅದೆಂತೆಂದೊಡೆ:**
**( ಶ್ಲೋಕ ) ಸೌಮ್ಯೌ ಭೌಮ್ಯೌ ವ್ಯತೀಪಾತೇ । ಸಂಕ್ರಾಂತಿ ಶಿವರಾತ್ರ ಯೋಃ ॥**
**ಏಕಭುತ್ತ್ಯೋಪವಾಸೇನ । ನರಕೇ ಕಾಲಮಕ್ಷಯಮ್॥**
**ಎಂದುದಾಗಿ,**
**ಇದು ಕಾರಣ ದಿನವಾರಂಗಳು ಶ್ರೇಷ್ಠವೆಂದು**

**ಏಕಭುಕ್ತೋಪವಾಸಂಗಳ ಮಾಡುವ ಭಕ್ತಂಗೆ**
**ಕುಂಭಿ ಪಾತಕ ನಾಯಕ ನರಕ ತಪ್ಪದು,**
**ಕೂಡಲ ಸಂಗಮ ದೇವಾ**

ಸೋಮವಾರ ಮಂಗಳವಾರಗಳೆಂದು ಆಯಾ ದಿನಗಳಲ್ಲಿ ಉಪವಾಸಾದಿಗಳನ್ನು ಆಚರಿಸುವವನು ಲಿಂಗ ಭಕ್ತನಿಗೆ ಸರಿಯಾಗಲಾರನು; ಈತನು ದಿನಗಳು ಶ್ರೇಷ್ಠವೆಂದು ತಿಳಿದು ದಿನದ ಭಕ್ತನಾಗುತ್ತಾನೆ; ಆತನು ಲಿಂಗವೇ ಶ್ರೇಷ್ಠವೆಂದು ನಂಬಿ ಲಿಂಗ ಭಕ್ತನಾಗುತ್ತಾನೆ; ಇವರಿಬ್ಬರೂ ಸರಿಸಮಾನರೆಂದೆನ್ನುವ ಮನುಜರಿಗೆ ಪಂಚ ಮಹಾ ಪಾತಕದ ಪಾಪ ಘಟಿಸುತ್ತದೆ. ಆದುದರಿಂದ ದಿನ ವಾರಗಳನ್ನು ಆಚರಿಸುವ ಭಕ್ತನಿಗೆ ನರಕ ತಪ್ಪಿದ್ದಲ್ಲ, ಕೂಡಲ ಸಂಗಮದೇವಾ !

**೧೦೦೩ ಹಣವ ಕೊಟ್ಟು ಹಾದರವ ಮಾಡುವದರಿಂದ**
**ತಾರವ ಕೊಟ್ಟು ಸೂಳೆಗೆಯ್ಯ ಬಾರದೆ ?**
**ಧರ್ಮವ ಮಾಡುವಲ್ಲಿ ಕರ್ಮವುಂಟು:**
**ಧರ್ಮ ಕರ್ಮದ ಭೇದವನರಿದು ಮಾಡಲರಿಯರು, ನೋಡಾ**
**ಅಡಗ ತಿಂಬುವಂಗೆ ಸುರೆಯ ಕುಡಿವಂಗೆ ಕೊಟ್ಟರೆ ಆ ಫಲ ತಪ್ಪದು,**
**ಕೂಡಲ ಸಂಗಮ ದೇವಾ.**

ದುಡ್ಡು ಕೊಟ್ಟು ಹಾದರ ಮಾಡುವುದು ಪಾಪ; ಕಾರಣ ಭಗವಂತನ ನಾಮ ಸಂಕೀರ್ತನೆ ಹಾಡುವ ದಾಸಿ ಯಾಗಿರುವದು ಉತ್ತಮ; ಧಾರ್ಮಿಕ ಕಾರ್ಯ ಮಾಡುವಲ್ಲಿ ಕರ್ಮವು ಇದ್ದೇ ಇದೆ; ಧರ್ಮ ಕರ್ಮಗಳಲ್ಲಿರುವ ಅಂತರವನ್ನು ತಿಳಿದುಕೊಳ್ಳಬೇಕು; ಮಾಂಸ ಮದ್ಯ ಸೇವನೆ ಮಾಡುವವರಿಗೂ ಶಿವತತ್ವ ಉಪದೇಶ ಮಾಡಿದರೆ ಅವರು ಪಾಪ ಕರ್ಮಗಳನ್ನಳಿದು ಪುಣ್ಯಫಲವನ್ನು ಉಣ್ಣಲೇಬೇಕು;ಅದು ತಪ್ಪದು!

೧೦೦೪ ಹಾವು ಹದ್ದು ಕಾಗೆ ಗೂಗೆ ಅನಂತಕಾಲ ಬದುಕವೆ ?
ಬೇಡವೋ ಮಾನವಾ, ಲೇಸೆನಿಸಿಕೊಂಡು ಬದುಕೆವೋ
ಮಾನವಾ, ಶಿವಭಕ್ತ ನಾಗಿ !
ನಮ್ಮ ಕೂಡಲ ಸಂಗಮ ದೇವರ ಭಕ್ತಿವಿಡಿದು
ಐದು ದಿವಸವಾದರೂ ಬದುಕಿದರೆ ಸಾಲದೆ ?

ಎಲೆ ತಿಳಿಗೇಡಿ ಮಾನವಾ ಹದ್ದು ಗೂಗೆಗಳು ಬದುಕುವಂತೆ ನೂರು ವರ್ಷ ಬಾಳುವದಕ್ಕಿಂತಲೂ ಶಿವಭಕ್ತನಾಗಿ, ಕೂಡಲ ಸಂಗಮದೇವರ ಸದ್ಭಕ್ತನಾಗಿ ಐದು ದಿವಸ ಬಾಳು ನಿನ್ನ ಜನ್ಮ ಸಾರ್ಥಕವಾಗುತ್ತದೆ !

೧೦೦೫ ಸಮತೆ ಸನ್ಮತದಿಂದ ನಿಜಗುರು ಕಾರುಣ್ಯದಿಂದ
ಸತ್ತ್ವರಜಸ್ತಮದ ಕ್ರೋಧನಳಿಯದನ್ನಕ್ಕರ
ಅನು ಭಾವವೆಲ್ಲಿಯದೋ?
ಆತ್ಮಸ್ತುತಿ ಪರನಿಂದೆ ಅಸಹ್ಯ ಅನೃತ ತರ್ಕ ಉಡುಗದ
ನ್ನಕ್ಕರ
ಅನುಭಾವವೆಲ್ಲಿಯದೋ?
ಅರಿಷಡ್ವರ್ಗಳ ದಶವಾಯುಗಳ ವಿಕಳ ಮಾನ ಬಿಡದ
ನ್ನಕ್ಕರ
ಅನುಭಾವವೆಲ್ಲಿಯದೋ?
ಮದ ಮತ್ಸರ ವೈತಾಳ ಸಂಪಾದನವಲ್ಲದೆ
ಅನುಭಾವವೆಲ್ಲಿಯದೋ?
ಸಮತೆ ಸಜ್ಜನಿಗೆ ಸಮಯಾಚಾರದ ನಿಜಪಥವು
ದುರಾಚಾರಿಗಳಪಡುವುದೆ?
ನಮ್ಮ ಕೂಡಲ ಸಂಗನ ಶರಣರಿಗಲ್ಲದೆ
ಅನುಭಾವವೆಲ್ಲರಿಗೆಲ್ಲಿಯದೋ?

ಅನುಭವವು ಸಿಗಬೇಕಾದರೆ ಮೊದಲು ಗುರುಕರುಣೆ ಬೇಕು; ಗುರು ಕರುಣೆಯಿಂದ ಸತ್ವ ರಜ ಸ್ತಮ ಕ್ರೋಧಗಳನ್ನೂ, ಅರಿ ಷಡ್ವರ್ಗಗಳನ್ನೂ

ಕಳೆದುಕೊಳ್ಳಬೇಕು. ಆಗ ಅನುಭವವು ಸಿಗುತ್ತದೆ. ಮದ ಮತ್ಸರಗಳಿಂದ ಅನುಭಾವ ದೊರೆಯುವದಿಲ್ಲ; ಸಮದೃಷ್ಟಿ, ಸರಳ ಸ್ವಭಾವ, ಲಿಂಗಾನುವರ್ತಿ-ಶಿವಾನುವರ್ತಿಯಾಗಿರುವದು ಎಲ್ಲರಿಗೂ ಅದರಲ್ಲಿಯೂ ದುರ್ಗುಣಿಗಳಿಗೂ ದೊರೆಯಲಾರದು. ಕೂಡಲ ಸಂಗನ ಶರಣರಿಗೆ ಮಾತ್ರ ಇವೆಲ್ಲವುಗಳು ಸಾಧ್ಯ !

## ಸಿಂಗಿ ರಾಜ ಪುರಾಣ

**೧೦೦೬ ಅಂಜದಿರು, ಅಳುಕದಿರು, ಕುಂದದಿರು, ಕುಸಿಯದಿರು;**
**ಏನೋ ಎಂತೋ ಎಂದು ನಗಲಾಗದೇ, ಅಯ್ಯಾ!**
**ಕೂಡಲ ಸಂಗಮದೇವಾ, ಮೌನವೇ ಮಗನೊಡನೆ?**

ಅಂಜಬೇಡಾ, ದುಃಖಿಸಬೇಡಾ, ಕುಗ್ಗಬೇಡಾ, ಬಲಗುಂದಬೇಡ ಎಂದು ಹೇಳಿ ನೀನು ನಕ್ಕು ನಗಿಸಬಾರದೇ ತಂದೆಯೇ! ಕೂಡಲ ಸಂಗಮದೇವಾ ನಿನ್ನ ಮಗನೊಂದಿಗೆ ಮಾತನಾಡುವದಿಲ್ಲವೆ ?

**೧೦೦೭ ಆನೆ ಭಂಡಾರ ಲಾಯದ ಕುದುರೆ**
**ಬೇಡುವರಿಲ್ಲದೆ ಬಡವಾದೆನಯ್ಯಾ.**
**ಮುನ್ನ ಬೇಡಿದೆ ಸಿಂಧುಬಲ್ಲಾಳನ ವಧುವನು**
**ಇನ್ನು ಬೇಡದೊಡೆ ನಿಗಳವನಿಕ್ಕುವೆ.**
**ಬೇಡಿದ ಶರಣರಿಗೆ ನೀಡದಿರ್ದಡೆ,**
**ತಲೆದಂಡ! ಕೂಡಲ ಸಂಗಮದೇವಾ.**

ಸವೆಯಲಾರದಷ್ಟು ಸಂಪತ್ತಿದೆ; ಉತ್ತಮ ಕುದುರೆ ಸವಾರಿಗೆ ಸಿದ್ಧವಿದೆ; ಬೇಡುವ ಭಕ್ತರಿಲ್ಲದ್ದಕ್ಕಾಗಿ ನಾನು ಬಡವನಾದೆ; ಈ ಮುಂಚೆಯೇ ನೀವು ಸಿಂಧು ಬಲ್ಲಾಳನ ಹೆಂಡತಿಯನ್ನು ಬೇಡಿರುವೆ; ಆದರೆ ಇನ್ನು ಬೇಡದಿದ್ದರೆ ಮತ್ತು ಬೇಡಿದ ಶರಣರಿಗೆ ನಾನು ಕೊಡದಿದ್ದರೆ ನನಗೆ ತಲೆದಂಡ ಹಾಕು ಕೂಡಲ ಸಂಗಮದೇವಾ !

೧೧೦೮ ಈ ಕಯ್ಯಲೆ ಸುಖವು: ಈ ಕಯ್ಯಲೆ ದುಃಖವು,
ಏಕಯ್ಯ ನೀ ನಮ್ಮ ಬರಿದೆ ಬಳಲಿಸುವೆ?
ನಾನಾರ ಸೇರುವೆನಯ್ಯಾ? ಆರು ಇಲ್ಲದ ದೇಸಿಗ ನಾನು,
ಕಾಣಾ,
ಕೂಡಲ ಸಂಗಮದೇವಾ.

ಇದೇ ಕೈಯಿಂದಲೇ ಸುಖವೂ ಇದೇ ಕೈಯಿಂದಲೇ ದುಃಖವೂ ಉಂಟಾಗುತ್ತದೆ; ಆದುದರಿಂದ ನೀನು ಸುಮ್ಮನೇ ನಮ್ಮನ್ನು ಕಾಡಿಸಬೇಡಾ; ನಾನು ಹೋಗುವದಾದರೂ ಎಲ್ಲಿಗೆ? ನಾನು ಪರದೇಶಿ; ಕೂಡಲ ಸಂಗಮದೇವಾ !

೧೧೦೯ ಉರಿವ ಕೊಳ್ಳಿಯ ಮಂಡೆಯ ಮೇಲಿಕ್ಕಿದರೆ,
ಉರಿವುದಲ್ಲದೆ ಮಾಣ್ಬುದೆ, ಅಯ್ಯಾ?
ಕಲ್ಲಗುಗ್ಗರಿಯ ಮೆದ್ದರೆ ಹಲ್ಲು ಹೋಹುದು ಮಾಣ್ಬುದೆ?
ಕೂಡಲ ಸಂಗನ ಶರಣರ ಕೂಡೆ ಸರಸಬೇಡಾ; ಮರಣ
ತಪ್ಪದು.

ಉರಿಯುವ ಕಟ್ಟಿಗೆಗಳನ್ನು ತಲೆಯ ಮೇಲಿಟ್ಟುಕೊಂಡರೆ ತಲೆ ಸುಟ್ಟು ಹೋಗುತ್ತದೆ. ಕಲ್ಲು ಹರಳುಗಳ ಗುಗ್ಗರಿ ತಿಂದರೆ ಹಲ್ಲುಗಳು ಮುರಿದು ಹೋಗುತ್ತವೆ; ಹಾಗೆ ಕೂಡಲ ಸಂಗಮ ದೇವರ ಶರಣರೊಂದಿಗೆ ಚೇಷ್ಟೆಯಾಡಿದರೆ ಮರಣವೇನೂ ತಪ್ಪಿದ್ದಲ್ಲ; ಅದು ನಿಶ್ಚಿತ !

೧೧೧೦ ಎನ್ನ ಕಾಯಕ್ಕೆ ಕಾಹ ಹೇಳುವರಲ್ಲದೆ,
ಮನಕ್ಕೆ ಕಾಹ ಹೇಳುವರಿಲ್ಲಯ್ಯಾ.
ಅಣಕದ ಮಿಂಡ ತಗವ ನೋಡಿ ಕಂಡೆನವ್ವ;
ಈತನ ಲೀಲೆಗಂಡಾನು ಬೆರಗಾದೆ.
ಕೂಡಲ ಸಂಗಮದೇವ ಎನ್ನ ಮನಕ್ಕೆ ಕಾಹ
ಹೇಳಿದನವ್ವ.

ಎಲ್ಲರೂ ನನ್ನ ದೇಹ ಕಾಪಾಡಿಕೊಳ್ಳಲು ಹೇಳಿದರು; ಆದರೆ ನನ್ನ ಮನಸ್ಸನ್ನು ರಕ್ಷಿಸಿಕೊಳ್ಳೆಂದು ಯಾರೂ ಹೇಳಲಿಲ್ಲ; ಉಪಹಾಸ್ಯದ ಬಂಟನ ಸ್ಥಿತಿ ಕಣ್ಣಾರೆ ಕಂಡೆನು; ಅವರ ಲೀಲೆಗಳನ್ನು ನೋಡಿ ಬೆರಗಾದೆನು; ಕೂಡಲ ಸಂಗನು ದೇವರು ನನ್ನ ಮನಸ್ಸನ್ನು ಕಾಪಾಡಿಕೊಳ್ಳಲು ಹೇಳಿದರು !

**೧೦೧೧ ಎನ್ನಂಗದ ಮೇಲಿದ್ದ ಲಿಂಗವ ದಿಟ ಮಾಡಲರಿಯೆನು,**
**ಜಂಗಮವೆ ಲಿಂಗವೆಂಬ ಮಾತೆನಗೆ ಕಷ್ಟ,**
**ಕಲಹ ಕುಡುಗೋಪಿ ನಾನಯ್ಯ;**
**ದುರ್ಮುಖ ದುರಾಚಾರಿ ನಾ ನೆನಗೆ ಕರುಣಿಸು,**
**ಕೂಡಲ ಸಂಗಮದೇವಾ.**

ನನ್ನ ದೇಹವ ಮೇಲಿರುವ ಪ್ರಾಣಲಿಂಗವನ್ನು ನಿಜವನ್ನಾಗಿ ಮಾಡಲು ನನಗೆ ಶಕ್ತಿ ಸಾಲದು. ಜಂಗಮನು ಲಿಂಗವೆಂದು ಹೇಳುವ ಮಾತ್ರ ನನಗೆ ನಂಬಲಸಾಧ್ಯವಾಗಿದೆ; ಜಗಳಗಂಟ, ಸಿಡುಕನು, ದುರಾಚಾರಿಯು ನಾನು; ನನಗೆ ನೀ ಕರುಣಿಸಿ ಕಾಯಬೇಕು ಕೂಡಲ ಸಂಗಮ ದೇವಾ.

**೧೦೧೨ ಒಡೆಯರುಳ್ಳಾಳಿಂಗೆ ಕೇಡಿಲ್ಲ ಕಾಣಿರೋ!**
**ಊರೆನ್ನದೆ ಅಡವಿಯೆನ್ನದೆ, ಆಳನರಸಿ ಬಹಳ ಆಳಿದರುಂಟೆ?**
**ಚೋಳದ ವಾಳಿಗೆ ಬಿಜ್ಜಳಂಗೆ ಆಳಾದರೇನು?**
**ವೇಳವಾಳಿಂಗೆ ಕೂಡಿಕೊಂಡಿಪ್ಪ**
**ಕೂಡಲ ಸಂಗಮದೇವ.**

ಸಾಕಿ ಸಲಹುವ ದಯಾಮಯ ಒಡೆಯರಿದ್ದ ಆಳುಗಳಿಗೆ ಯಾವಾಗಲೂ ಕೇಡಿಲ್ಲ; ಊರು ಊರುಗಳನ್ನು ತಿರುಗುತ್ತ, ಅಡವಿ ಅಡವಿ ತಿರುಗುತ್ತ ಆಳನ್ನು ಹುಡುಕಿಕೊಂಡು ಬರುವ ಯಜಮಾನರುಂಟೆ ? ಇಲ್ಲ ! ನಾನು ಹೊಟ್ಟೆಯ ಪಾಡಿಗಾಗಿ ಬಿಜ್ಜಳನ ಚಾಕರನಾದರೇನು ಚಿಂತೆ; ಕೂಡಲ ಸಂಗಮ ದೇವರು ಆ ಆಳಿನೊಂದಿಗೆ ನೆರೆಕೂಡಿಕೊಂಡಿರುತ್ತಾರೆ.

೧೦೧೩ ಓದಿ ಸುವಣ್ಣಗಳಂತೆ ಮಾತನಾಡ ಕಲಿಸುವರಲ್ಲದೆ
ಮನ ಮಾತಾಡ ಕಲಿಸಲಿಲ್ಲವಯ್ಯಾ;
ಧನಕ್ಕೆ ಮುನಿವರಲ್ಲದೆ ಎನ್ನ ಮನಕ್ಕೆ ಮುನಿವರಿಲ್ಲಯ್ಯ;
ಧನಕ್ಕೆ ಮುನಿದವರಿಗೆ ಮುನಿದ ಎನ್ನ ಮನಕ್ಕೆ ಮುನಿದ
ಕೂಡಲ ಸಂಗಮದೇವ, ಮಡಿವಾಳ ಮಾಚಯ್ಯನು.

ಓದಲು ಕಲಿಸುವ ಗುರುಗಳಹಾಗೆ ನನಗೆ ಮಾತನಾಡಲು ಗಿಳಿಗೆ ಹೇಳಿಕೊಟ್ಟಂತೆ ಕಲಿಸಿದರು; ಆದರೆ ನನಗೆ ಜ್ಞಾನವನ್ನು ಕೊಡಲಿಲ್ಲ; ದುಡ್ಡು ದೊರೆಯಲಿಲ್ಲವೆಂದು ಸಿಟ್ಟಾದರು; ಆದರೆ ನನ್ನ ಕೆಟ್ಟ ಮನಸ್ಸಿಗೆ ಯಾರೂ ಅಸಹ್ಯಪಟ್ಟುಕೊಳ್ಳಲಿಲ್ಲ; ಆದರೆ ದ್ರವ್ಯಕ್ಕೆ ಸಿಟ್ಟಾದವರಿಗೆ ಮಡಿವಾಳ ಮಾಚಯ್ಯನು ಮೆಚ್ಚಿಕೊಳ್ಳಲಿಲ್ಲ; ಕೆಟ್ಟಿದ್ದ ನನ್ನ ಮನಸ್ಥಿತಿಗೆ ಕೂಡಲ ಸಂಗಮ ದೇವರು ಮೆಚ್ಚಿಕೊಳ್ಳಲಿಲ್ಲ !

೧೦೧೪ ಓಡದಿರೋಡದಿರು, ನಿನ್ನ ಬೇಡುವವನಾನಲ್ಲ;
ಶಿವನೇ, ನೋಡುವೆ ಕಣ್ಣತುಂಬ;
ಆಡಿ ಪಾಡಿ ನಲಿದಾಡುವೆ
ಬೇಡೆನ್ನ ಕೂಡೆ ಮಾತನಾಡಲಾಗದೆ ?
ಎಲೆ ಕೂಡಲ ಸಂಗಮದೇವಾ, ನೀನಾಡಿಸುವ ಗೊಂಬೆ
ನಾನು.

ಹೇ ಕೂಡಲಸಂಗಮದೇವಾ, ನೀನು ಆಟವಾಡಿಸಿದಂತೆ ಆಡುವ ಗೊಂಬೆಯಾದ ನನ್ನೊಡನೆ ಮಾತನಾಡುವದಿಲ್ಲವೆ? ನೀನು ಓಡಿಹೋಗಬೇಡಾ; ಕಾಡಿ ಬೇಡುವ ಭಕ್ತನು ನಾನಲ್ಲ! ಶಿವನೆ, ನಿನ್ನ ರೂಪವನ್ನು ದೃಷ್ಟಿತುಂಬ ನೋಡಿ, ಹಾಡಿ ಪಾಡಿ ಮೈದುಂಬಿ ಕುಣಿದಾಡುವೆ.

೧೦೧೫ ಕಂಗಳಿಲ್ಲದ ನೋಟ, ಲಿಂಗವಿಲ್ಲದ ಮಾಟ,
ಜಂಗಮವಿಲ್ಲದ ಊಟ, ಪ್ರಸಾದ ವಿಲ್ಲದೆ ಪರ ಹಿಂಗಿತ್ತು.
ಶಿವಲೋಕವಿನ್ನೆಲ್ಲಿಹುದೋ ?

**ಲಿಂಗಕ್ಕೆ ಮಾಡಿದ ಬೋನವ ಸಿಂಬುಕ ತಿಂಬಂತೆ**
**ಹಿಂಗಿತ್ತು ಶಿವಲೋಕ ಇನ್ನೆಲ್ಲಿಹುದೋ ?**
**ಬಂದ ಸಮಯುವ ನರಿಯುದೆ ಉದರವ ಹೊರೆವರ**
**ಕೂಗೆಡೆ, ನರಕದಲ್ಲಿಕ್ಕನೆ ಕೂಡಲ ಸಂಗಮದೇವ ?**

ಕುರುಡ ನೋಟ, ಲಿಂಗವಿಲ್ಲದ ಪೂಜೆ, ಜಂಗಮವಿಲ್ಲದ ದಾಸೋಹ ಎಲ್ಲವೂ ವ್ಯರ್ಥ; ಸ್ವರ್ಗದಾಶೆ ಬಹುದೂರ! ಲಿಂಗ ಜಂಗಮರಿಗೆ ಮಾಡಿದ ಊಟವನ್ನು ರಾಕ್ಷಸ ಉಂಡಂತೆಯಾದರೆ ಶಿವಲೋಕ ದೊರೆಯುವದು ಹೇಗೆ? ಸಮಯವನರಿತು ನಡೆಯದೆ ಕೇವಲ ಹೊಟ್ಟೆತುಂಬಿಕೊಳ್ಳುವ ಆಶೆಯುಳ್ಳ ಭಕ್ತರು ಮುಕ್ತಿಯ ಬಯಸಿದರೆ ಸಿಗುವುದು ಹೇಗೆ? ಅಂಥವರನ್ನು ಕೂಡಲ ಸಂಗಮ ದೇವರು ನರಕದಲ್ಲಿಡುತ್ತಾನೆ.

**೧೦೧೬ ಕುಂಡಲಿಗನೊಂದು ಕೀಡೆಯ ತಂದು ತನ್ನಂತೆ ಮಾಡಿತಲ್ಲ !**
**ಎಲೆ ಮಾನವಾ, ಕೇಳಿನಂಬಯಾ, ನೋಡಿ ನಂಬಯ್ಯಾ, ಎಲೆ ಮಾನವಾ !**
**ಕೂಡಲ ಸಂಗನ ಶರಣರ ಅನುಭಾವ**
**ಇದರಿಂದ ಕಿರುಕಳನೆ, ಎಲೆ ಮಾನವಾ ?**

ಕುಂಡಲಿಗ ಎಂಬ ಒಂದು ಜಾತಿಯ ಹುಳುವು ಬೇರೊಂದು ಕೀಟಕ ವನ್ನು ಹಿಡಿದು ತಂದು ಅದನ್ನು ತನ್ನಾಕಾರದಂತೆ ಮಾಡಿತು; ಕಾರಣ ಕೂಡಲ ಸಂಗಮದೇವರ ಶರಣರ ಮಹಿಮೆಯನ್ನು ಅನುಭಾವವನ್ನು ಕೇಳಿ ನಂಬು, ನೋಡಿ ನಂಬು ಎಲೆ ಮಾನವನೇ!

**೧೦೧೭ ಕುಲದೈವ ಮನದೈವವೆನಗೆ ನಿಮ್ಮವರಯ್ಯಾ;**
**ತನು ಮೀಸಲು, ಮನ ಮೀಸಲು, ನಯನ ಮೀಸಲು ದೇವ,**
**ಕೂಡಲ ಸಂಗಮದೇವ, ನಿಮ್ಮ ಶರಣರಿಗೆನ್ನ**

ನನ್ನ ಇಷ್ಟದೇವತೆಯೂ, ಆರಾಧ್ಯದೇವತೆಯೂ ನಿಮ್ಮ ಶರಣರೆ ನನಗೆ, ಅವರಿಗೆ ನನ್ನ ಸರ್ವ ಇಂದ್ರಿಯಗಳೂ ಮೀಸಲು; ಅವರ ಸೇವೆಯೆ ನನಗೆ ಸದ್ಗತಿಯಾಗಿದೆ, ಕೂಡಲ ಸಂಗಮದೇವಾ!

**೧೦೧೮ ಕೊಡುವಾತ ಸಂಗ, ಕೊಂಬಾತ ಸಂಗ, ಕಾಣಿರೆಲವೋ;**
**ನರಮಾನವರ ಕೊಡುವರೆಂಬವರ ಬಾಯಲ್ಲಿ ಬಾಲಹುಳು ಗಳು ಸುರಿಯವೆ ?**
**ಮೂರು ಲೋಕಕ್ಕೆ ನಮ್ಮ ಕೂಡಲ ಸಂಗಯ್ಯ ಕೊಡುವ ಕಾಣಿರೆಲವೋ**

ಮೂರು ಲೋಕಗಳಿಗೆ ಅನ್ನವಸ್ತ್ರಾದಿಗಳನ್ನು ಕೊಟ್ಟು ರಕ್ಷಿಸುವವನು ಕೂಡಲ ಸಂಗಮ ದೇವರು; ಕೊಡುವವನೂ ಮತ್ತು ಪಡೆಯುವವನೂ ಸಂಗಮನೇ ಆಗಿರುವಾಗ ನಾನು ಕೊಡುವೆನೆಂದು ಹೇಳುವ ನರಪ್ರಾಣಿಗಳ ಬಾಯಿಯಲ್ಲಿ ಕ್ರಿಮಿಗಳು ಸುರಿಯುತ್ತವೆ !

**೧೦೧೯ ಕೋಡಗನೇಡಿಸ ಬೇಡೆಂದಡೆ ಮಾಣದು,**
**ತೋಡುವ ಹೆಗ್ಗಣ ಮಾಳಿಗೆಯೆಂದಡೆ ಮಾಣದು,**
**ಗಾಡಿಗ ದೂಷಕರಾಡಬೇಡ ಎಂದಡೆ ಮಾಣರು**
**ಕೂಡಲ ಸಂಗಮದೇವ ಕೇಡುಗ ತಾನಲ್ಲಿ;**
**ಆಡುವ ಅಜ್ಞಾನಿಗಳ ಕಾಯಕವಯ್ಯಾ**

ಎಲೆ ಮಂಗವೆ ನಮ್ಮನ್ನು ಕಾಡಬೇಡವೆಂದು ಕೇಳಿದರೆ ಅದು ತನ್ನ ಕಿಡಿಗೇಡಿತನ ಬಿಡದು; ನೆಲ ಕೆದರುವ ಹೆಗ್ಗಣಕ್ಕೆ ಇದು ಮಾಳಿಗೆ ಇದನ್ನು ಕೆದರ ಬೇಡವೆಂದರೆ ಅದು ಕೇಳುವುದಿಲ್ಲ; ದಾರಿ ಹೋಕರು ಕೆಟ್ಟನುಡಿಯ ಬೇಡವೆಂದರೆ ಕೇಳುವದಿಲ್ಲ; ಆದುದರಿಂದ ಅಜ್ಞಾನಿಗಳು ತಮ್ಮ ದುರ್ಬುದ್ಧಿಗೆ ತಿಳಿದ ಹಾಗೆ ಮಾತನಾಡಿದರೆ ಕೂಡಲ ಸಂಗಮ ದೇವರು ಎಂದಿಗೂ ಅವರಿಗೆ ಕೆಡಕು ಬಯಸುವವನಲ್ಲ !

**೧೦೨೦ ದರ್ಪಣವು ಬೇರೆ ಕಂಚಲ್ಲ, ಬಟ್ಟಲವು ಬೇರೆ ಕಂಚಲ್ಲ;**
**ಭಾಂಡ ಒಂದೆ, ಭಾಜನ ಬೇರೆ;**

**ಬೆಳಗೆ ಕನ್ನಡಿ ಎನಿಸಿತಯ್ಯಾ**
**ಅರಿದಡೆ ಶರಣನು ಮರೆದಡೆ ಮಾನವ**
**ಮರೆಯದೆ ಪೂಜಿಸು ಕೂಡಲ ಸಂಗನ**

ಕನ್ನಡಿಯೂ ಬಟ್ಟಲವೂ ಒಂದೇ ಕಂಚಿನಿಂದಾದವುಗಳು; ಆದರೆ ಧಾತು ಒಂದೇ ರೂಪಾಕಾರಗಳು ಬೇರೆ ಬೇರೆ; ಅದನ್ನೇ ಬೆಳಗಿದೆರೆ ಅದು ಕನ್ನಡಿಯಾಗುತ್ತದೆ; ಈ ರೀತಿ ತಿಳಿದರೆ ಶರಣನು, ಇಲ್ಲವಾದರೆ ಮಾನವ; ಆದುದರಿಂದ ಸರಿಯಾಗಿ ತಿಳಿದು ಮರೆಯದಂತೆ ಕೂಡಲ ಸಂಗಮ ದೇವರನ್ನು ಆರಾಧಿಸು !

**೧೦೨೧ ದೇವಲೋಕಕ್ಕೆ ಸರಿ ಬೇರೆ ಲೋಕವಿಲ್ಲ**
**ಶಿವಮಂತ್ರಕ್ಕೆ ಸರಿ ಬೇರೆ ಮಂತ್ರವಿಲ್ಲ;**
**ಜಗಕಿಕ್ಕಿದೆ ಮುಂಡಿಗೆಯ ನೆತ್ತಿಕೊಳ್ಳಿ !**
**ಕೂಡಲ ಸಂಗಮನಲ್ಲದೆ ದೈವವಿಲ್ಲ.**

ದೇವಲೋಕವನ್ನು ಸರಿಗಟ್ಟಿಕೊಂಡು ಮೆರೆಯುವ ಬೇರಾವ ಲೋಕಗಳಿಲ್ಲ; ಎಲ್ಲ ಮಂತ್ರಗಳಿಗೂ ಶಿವಮಂತ್ರವೇ ಶ್ರೇಷ್ಠವಾದದ್ದು; ಜಗತ್ತಿನಲ್ಲಿ ಬೆಳಸಿದ ಬೆಳೆಗಳನ್ನು ಆರಿಸಿಕೊಳ್ಳಿರಿ; ಕೂಡಲ ಸಂಗಮನೇ ಸಕಲ ದೈವವು.

**೧೦೨೨ ಧನ ಧಾನ್ಯ ಹೋಯಿಂತೆಂದಡೆ,**
**ಮನ ಬೆದರಿದಡೆ, ಚಿತ್ತ ಹೆದರಿದಡೆ,**
**ತನು ತೆರಳಿದಡೆ, ಭಾವ ಓಸರಿಸಿದಡೆ**
**ನಿಮ್ಮಾಣೆ ನಿಮ್ಮ ಪ್ರಮಥರಾಣೆ !**
**ತನುಮನಧನವನಲ್ಲಾಡಿಸಿ ನೋಡುವ ಒಡೆಯನು ನೀನೆ !**
**ಹರಣವ ನೋಲೆತ್ತೊಡೆ ಕಳವಳನೇ**
**ಕೂಡಲ ಸಂಗಮದೇವಾ?**

ಧನ ಧಾನ್ಯಗಳು ಹಾಳಾಗಿ ಹೋದರೂ, ಮನಸ್ಸು ಬೆಚ್ಚಿ ಹೆದರಿದರೂ, ಈ ದೇಹ ಕೊರಗಿ ನಸಿಸಿದರೂ, ಈ ಜೀವ ಬೇಸರವಾಗಿದೆಂದು

ಅನಿಸಿದರೂ ನಾನು ಕಳವಳಗೊಳ್ಳುವುದಿಲ್ಲ ! ನಿಮ್ಮಾಣೆ ನಿಮ್ಮ ಪ್ರಮಥರ ಆಣೆ ! ಕೂಡಲ ಸಂಗಮದೇವಾ;

೧೦೨೩ ನಿಮ್ಮ ಪ್ರಸಾದವ ಮುಟ್ಟಿ ಕರ್ಮ ಹರಿಯಿತ್ತು;
ನಿಮ್ಮ ಪ್ರಸಾದವನುಂಡು ಭವಗೆಟ್ಟೆನಯ್ಯಾ.
ಮನಪರುಷ, ದೃಷ್ಟಿ ಪರುಷ, ಭಾವ ಪರುಷ,
ನಡೆಪರುಷ ನುಡಿಪರುಷವಾಯಿತ್ತು; ಲಿಂಗಗಣಂಗಳ.
ಕೂಡಲ ಸಂಗಮದೇವ ನಿಮ್ಮ ಶರಣರ ಅನುಭಾವದಿಂದ
ನಾನು ಸುಖಿಯಾದೆ.

ನಿಮ್ಮ ಪ್ರಸಾದ ಮಹಿಮೆಯಿಂದ ನಾನು ಭವ ಕರ್ಮಗಳಿಂದ ಬಿಡುಗಡೆ ಹೊಂದಿದೆನು; ಅಲ್ಲದೆ ನನ್ನ ಮನಸ್ಸು, ದೃಷ್ಟಿ ಭಾವ, ನಡೆ ನುಡಿಗಳೆಲ್ಲವೂ ಪರಿಶುದ್ಧವಾದುವು; ಕೂಡಲ ಸಂಗಮದೇವ ಶರಣರ ಅನುಭವದಿಂದ ನಾನು ಸುಖಿಯಾಗಿರುವೆನು.

೧೦೨೪ ನಿಮ್ಮ ನೋಡಲೆನ್ನ ಹರಣ ವಿದ್ದುದು;
ನಿಮ್ಮ ನಗಲಲೊಡನೆ ಎನ್ನಹರಣವೆಲ್ಲಿಯುದೋ ?
ಇರುಳಿಹುದು ಒಂದು ಜುಗ ಮೇಲೆ ಕೆಡೆದಂತೆ;
ಹಗಲನಾವ ಪರಿಯೊಳಾಳವಾಡುವೆನಯ್ಯಾ ?
ಕೊಡಲ ಸಂಗನ ಶರಣರನಗಲುವ ಥಾವತಿಗಿಂತ
ಮರಣವೇ ಲೇಸಯ್ಯಾ.

ಹೇ ಪ್ರಭು ನಿಮ್ಮನ್ನು ಮನದಣೀ ನೋಡಲೋಸುಗ ಜೀವನವು ಇದ್ದುದು; ನಿಮ್ಮಿಂದ ದೂರವಾದ ಬಳಿಕ ಈ ಜೀವ ಇದ್ದರೆಷ್ಟು? ಯುಗಗಳಂತಿರುವ ಈ ಹಗಲು ರಾತ್ರಿಗಳನ್ನು ಕಳೆಯುವುದು ಹೇಗೆ? ಈ ರೀತಿ ಶರಣರಿಂದ ದೂರವಿರುವದಕ್ಕಿಂತಲೂ ಸಾಯುವುದೇ ಒಳಿತು.

೧೦೨೫ ಬಲೆಗೆ ಸಿಕ್ಕಿದ ಮೃಗದಂತೆ ನಾನಯ್ಯಾ;
ಮರಿದಪ್ಪಿದ ಹುಲ್ಲೆಯಂತೆ,

**ದೆಸೆದೆಸೆಗೆ ಬಾಯಿಬಿಡುತಿರುವೆನಯ್ಯಾ**
**ನಾನಾರ ಸಾರುವೆನಯ್ಯಾ?**
**ತಾಯಾಗಿ, ತಂದೆಯಾಗಿ ನೀನೆ ಸಕಲ ಬಂಧು**
**ಬಳಗವು ನೀನೆ**
**ಕೂಡಲ ಸಂಗಮ ದೇವಾ.**

ಬಲೆಗೆ ಸಿಕ್ಕುಬಿದ್ದ ಮೃಗದಂತೆಯೂ ಮರಿಯನ್ನು ಕಳೆದು ಕೊಂಡ ಚಿಗರೆಯಂತೆಯೂ ನಾನು ಹಲುಬುತ್ತಿರುವೆ; ಕೂಡಲ ಸಂಗಮ ದೇವಾ, ತಂದೆ–ತಾಯಿ, ಬಂಧು ಬಳಗ ನೀನೆ ಆಗಿರುವಾಗ ಇನ್ನಾರ ಬಳಿ ಮೊರೆ ಇಡಲಿ?

೧೦೨೬ **ಬೆದರಿಸುವ, ಬೆಚ್ಚಿಸುವ, ಮುಯ್ಯಾನುವ,**
**ಮೇಳವಾಡುವ,**
**ಅಳಿಗೊಳಿಸುವ, ಅಳಲಿ ನುಡಿಸುವ, ಬಳಲಿಸುವ,**
**ಒತ್ತಿನೋಡುವ !**
**ಒಳಹೊರಗೆ ಹೊಳೆದು ಹೋಹ, ಕೇಳದೆ ಬಹ,**
**ಬೇಳುವಮಾಡುವ, ನೀಳವಾಡುವ, ಹೊಳೆದು ಹೋಹ !**
**ನಾನಿದಕ್ಕಂಜೆ ಕೂಡಲ ಸಂಗಮ ದೇವ !**

ಹೇ ಕೂಡಲ ಸಂಗಮದೇವಾ, ಹೆದರಿಸಿದರೂ, ಮೇಲೆಬಿದ್ದರೂ, ದುಃಖಕೊಟ್ಟರೂ, ಕಾಡಿಸಿದರೂ, ಅಗ್ನಿಯಲ್ಲಿ ಹಾಕಿ ದಹಿಸಿದರೂ; ಕಣ್ಣಿಗೆ ಕಂಡು ನೀನು ಮಾಯವಾಗಿ ಹೋದರೂ;ನಾನು ನಿನ್ನ ಈ ಯಾವವ್ಯಾಪಾರ ಗಳಿಗೂ ಅಂಜುವದಿಲ್ಲ !

೧೦೨೭ **ಭಕ್ತನೆಂತೆಂಬೆ ಭವಿಯ ಸಂಗ ಬಿಡದನ್ನಕ್ಕರ,**
**ಮಹೇಶ್ವರ ನೆಂತೆಂಬೆ ಪರಸ್ತ್ರೀ ಪರಾರ್ಥ ಬಿಡದನ್ನಕ್ಕರ,**
**ಪ್ರಸಾದಿಯೆಂತೆಂಬೆ ಆದಿ ವ್ಯಾಧಿನಷ್ಟವಾಗದನ್ನಕ್ಕರ,**
**ಪ್ರಾಣಲಿಂಗಿಯೆಂತೆಂಬೆ ಪ್ರಾಣಲಿಂಗದಲ್ಲಿ ಸ್ವಸ್ಥಿರವಾಗ**
**ದನ್ನಕ್ಕರ,**

ಶರಣನೆಂತೆಂಬೆ ಪಂಚೇಂದ್ರಿಯನಷ್ಟವಾಗದನ್ನಕ್ಕರ,
ಐಕ್ಯನೆಂತೆಂಬೆ ಜನನ ಮರಣ ರಹಿತವಾಗದನ್ನಕ್ಕರ?
ಇವೆಲ್ಲ ಒಂದೊಂದು ಭಾಷೆ; ಮೋಕ್ಷವ್ರತವನೇ ಮಂಗಳ
ನರಿಯೆ,
ನಿಮ್ಮ ಶರಣರ ತೊತ್ತು ಭೃತ್ಯಾಚಾರವ ಮಾಡುವೆ,
ಕೂಡಲ ಸಂಗಮ ದೇವಾ !

ಭಕ್ತನಾಗಲು ಭವಿಯ ಸಂಗ ಬಿಡಬೇಕು; ಮಹೇಶ್ವರನಾಗಲು ಪರಸ್ತ್ರೀ ಪರಧನದ ಆಶೆ ಬಿಡಬೇಕು; ಪ್ರಸಾದಿಯಾಗಲು ಪೂರ್ವ ಜನ್ಮದ ಪಾಪಗಳನ್ನು ಕಳೆದುಕೊಳ್ಳಬೇಕು; ಪ್ರಾಣಲಿಂಗಿಯಾಗಬೇಕಾದರೆ, ಆ ಪ್ರಾಣಲಿಂಗದಲ್ಲಿ ಚಿತ್ತಸ್ಥಿರವಾಗಬೇಕು; ಶರಣನಾಗಬೇಕಾದರೆ, ಇಂದ್ರಿಯ ನಿಗ್ರಹ ಮಾಡಬೇಕು; ಐಕ್ಯನಾಗಬೇಕಾದರೆ, ಹುಟ್ಟು ಸಾವುಗಳಿಂದ ಬಿಡುಗಡೆಹೊಂದಬೇಕು; ಕೂಡಲ ಸಂಗಮದೇವಾ ನಿಮ್ಮ ಶರಣರ ಆಳಾದ ನನಗೆ ಈ ಯಾವ ಮೋಕ್ಷದ ವ್ರತನೇಮಗಳು ತಿಳಿದಿಲ್ಲ; ನನಗೆ ಶರಣರ ಸೇವೆಯೇ ಅಪೂರ್ವ ವಸ್ತು !

೧೦೨೮ ಲಿಂಗ ಮುಖದಿಂದ ಬಂದ ಪ್ರಸಾದ ವಲ್ಲದೆ ಕೊಂಡಡೆ,
ಮಕ್ಕಳಡಗು ನರಮಾಂಸವಯ್ಯಾ;
ಲಿಂಗಾರ್ಪಿತವಲ್ಲದ ಉದಕವ ಕೊಂಡಡೆ, ಸುರೆಮೂತ್ರ;
ನಿಮ್ಮ ಗಣಾಚಾರಕ್ಕೆ ಸಲೆ ಲಿಂಗಾರ್ಪಿತವಲ್ಲದೆ
ಹುಲ್ಲುಕಡ್ಡಿಯ ಇರಿದೆನಾದಡೆ,
ನಾಯ ಎಲವು ಬದ್ಧ ಮಲಕ್ಕೆ ಬಾಯಿ ತೆಗೆದಂತೆ !
ನಿಮಗೆತ್ತಿದ ಕರದಲ್ಲಿ ಮತ್ತೊಂದಕ್ಕೆ ಕೈಯಾಂತಡೆ,
ಅನ್ಯಕ್ಕೆ ತಲೆವಾಗಿದಡೆ ವ್ರತಭಂಗ,
ಅಳವರಿಯದೆ ನುಡಿದೆನು;
ನುಡಿದ ನುಡಿಯ ಕಡೆಮುಟ್ಟ ಸಲಿಸುವೆನಯ್ಯಾ.
ಸಲಿಸದಿರ್ದಡೆ ತಲೆದಂಡ ಕೂಡಲ ಸಂಗಮದೇವ !

ಲಿಂಗಾರ್ಚನೆ ಆರೋಗಣೆಗೆ ಸಲ್ಲಿಸದೇ ಇದ್ದ ಪ್ರಸಾದ ತೀರ್ಥಗಳು ಮಲ ಮೂತ್ರ-ಮಾಂಸಗಳಿದ್ದಂತೆ! ಪ್ರಭು, ನಿಮ್ಮ ಗಣಂಗಳಿಗೆ ಅರ್ಪಿಸದೆ ಒಂದು ಹುಲ್ಲು ಕಡ್ಡಿಯನ್ನು ಕಚ್ಚಿದೆನಾದರೆ ಅದು ಎಲುವು ತಿಂದಂತೆ! ನಿಮಗಾಗಿ ನೈವೇದ್ಯಕ್ಕೆ ಮಾಡಿದ ಅಡಿಗೆಯಲ್ಲಿ ನಾನು ಬಯಸಿದರೆ, ಬೇರೆ ದೇವರಿಗೆ ನಮಸ್ಕರಿಸಿದರೆ ವ್ರತಭಂಗವಾಗಲಿ; ನಾನು ಆಡಿದಂತೆ ಕಡೆಯವರೆಗೆ ನಡೆದುಕೊಳ್ಳದಿದ್ದರೆ ನನ್ನನ್ನು ತಲೆ ಹೊಡೆದು ನಿನ್ನ ಇಚ್ಛೆಪೂರೈಸಿಕೊಳ್ಳು ಕೂಡಲ ಸಂಗಮದೇವಾ !

**೧೦೨೯ ವಿಭೂತಿ ರುದ್ರಾಕ್ಷಿಯಿದ್ದವರ ಲಿಂಗವೆಂಬೆ,**
**ಇಲ್ಲದವರ ಭವಿಗಳೆಂಬೆ;**
**ಕೂಡಲ ಸಂಗಮದೇವ, ಸದ್ಭಕ್ತರ ನೀನೆಂಬೆ.**

ಭಸ್ಮಧೂಳನ ಮಾಡಿ ರುದ್ರಾಕ್ಷಿಗಳನ್ನು ಶಿರದಲ್ಲಿ ಹಾಕಿದವರು ಲಿಂಗಮೂರ್ತಿಗಳು, ಇಲ್ಲದವರೇ ಭವಿಗಳು; ಕೂಡಲ ಸಂಗಮದೇವಾ, ನೀನೇ ಸದ್ಭಕ್ತನ ದೊರೆ !

**೧೦೩೦ ಸದಾಚಾರವ ಕಂಡು ಲಾಂಛನ ಪಕ್ಷವ ನೋಡದವರಿಗೆ**
**ಇಹದೊಳು ಪರದೊಳು ಗತಿಯಿಲ್ಲ; ಕಾಣಿರೋ!**
**ಮಣ್ಣೆತ್ತಾದೊಡೇನು? ತನ್ನತ್ತೇ ಗೆಲಬೇಕೆಂಬುದ**
**ಕ್ಕೊಲಿವನು,**
**ನಮ್ಮ ಕೂಡಲ ಸಂಗಮದೇವಯ್ಯನು.**

ಉತ್ತಮಾಚಾರಗಳುಳ್ಳ ಜಂಗಮರ ದರ್ಶನಪಡೆಯದವರಿಗೆ ಇಲ್ಲಿಯೂ, ಸ್ವರ್ಗದಲ್ಲಿಯೂ, ಸದ್ಗತಿ ಇಲ್ಲ; ಮಣ್ಣಿನ ಎತ್ತಾದರೇನು? ತಾನೇ ಗೆಲ್ಲಬೇಕೆಂದು ಕೂಡಲ ಸಂಗಮದೇವರು ಕರುಣಿಸುತ್ತಾನೆ.

**೧೦೩೧ ಹುತ್ತವ ಕಂಡಲ್ಲಿ ಹಾವಾಗಿ, ನೀರಕಂಡಲ್ಲಿ ಹೊಳೆಯಾ**
**ದವನ ಮೆಚ್ಚುವನೆ?**
**ಚಾರದ ಭವಕ್ಕೆ ಬರಿಸುವನಲ್ಲದೆ ಮೆಚ್ಚುವನೆ?**

**ಅಘೋರ ನರಕವನುಣಿಸುವನಲ್ಲದೆ ಮೆಚ್ಚುವನೆ?**
**ಅಟೆಮುಟೆದ ಭಕ್ತರ ಕಂಡರೆ ಕೋಟಲೆಗೊಳಿಸುವನು**
**ಕೂಡಲ ಸಂಗಮದೇವ !**

ಕುದುರೆಯ ಕಂಡು ಕಾಲು ನೋಯುವಂತೆ, ಹಲವು ದೇವರನ್ನು ನಂಬಿದವರೆಗೆ ಲಿಂಗ ಪ್ರಭುವು ಒಲಿಯುವದಿಲ್ಲ; ಅವರನ್ನು ನೀಚ ಯೋನಿಗಳಲ್ಲಿ ಹುಟ್ಟಿಸಿ, ಭಯಂಕರ ನರಕದಲ್ಲಿಡುತ್ತಾನೆ; ಅರೆಭಕ್ತರನ್ನು ಕಾಡಿಸಿ ಕಾಡಿಸಿ ದಣಿಸುವನು ಕೂಡಲ ಸಂಗಮದೇವರು !

**೧೦೩೨ ಹಿಂದೆ ಸಂದ ಭಕ್ತರಂ ತಾನೊಂದೊಂದ ಬೇಡಿ ಕಾಡುವನಲ್ಲ,**
**ಹಿಂದೆ ಬೆನ್ನಿಲಿ ಬಂದು ಬಳಲಿದೆ,**
**ಇನ್ನೊಂದ ಬೇಡೆನಂಜದಿರಯ್ಯಾ;**
**ಆಶಾ ಪಾಶವೆನ್ನಲ್ಲುಳ್ಳೊಡೆ ಕೂಡಲ ಸಂಗಾ ನಿಮ್ಮಾಣೆ!**

ಆಗಿಹೋದ ಭಕ್ತರನ್ನು ಕಾಡಿಬೇಡುವವನು ನಾನಲ್ಲ; ನಿಮ್ಮ ಬೆನ್ನ ಹಿಂದೆ ಹಿಂಬಾಲಿಸಿ ಬಂದು ದಣಿದಿರುವೆ; ಇನ್ನೆನನ್ನೂ ಬೇಡುವುದಿಲ್ಲ ಅಂಜಬೇಡಾ ತಂದೆಯೆ! ನಿಮ್ಮಾಣೆಗೂ ನನ್ನಲ್ಲಿ ಯಾವ ಆಶೆಗಳೂ ಇಲ್ಲ!

## ಪ್ರಭು ಲಿಂಗ ಲೀಲೆ

**೧೦೩೩ ಇದ್ದ ಪರಿ ಇಂತು ಅರಿದೆ ನೋಡಯ್ಯಾ:**
**ನಿಂದರೆ ನೆರಳಿಲ್ಲ, ನಡೆದರೆ ಹೆಜ್ಜೆಯಿಲ್ಲ;**
**ಭೂತಳದೊಳಗೆ ತಾನು ಕಂಡುದಿಲ್ಲ ಇಂತಪ್ಪ ಅನ್ಯಾಯದ ಸುಳುಹ.**

**ಅಹುದಹುದು ಅರಿದು ಜಂಗಮಸ್ಥಲ**
**ಇಂತುಟಲ್ಲದೆ ಎಂತುಟು ಹೇಳಾ?**
**ಆಪ್ಯಾಯಾನದರಿಕೆಯ ಹೊಲಬ ಕಾಣಬಾರದು.**
**ಊಡಿದರೆ ಉಣ್ಣನೋ ಉಂಬನೋ?**

ಉಂಬುದುಂಟಾದರೆ ನೀಡುವೆನು
ಕೂಡಲ ಸಂಗಮ ದೇವರಿಗೆ ಚೆನ್ನಬಸವಣ್ಣನು
ಅಹುದೆನಲಿಕೆ.

ಪ್ರಭುವೆ ನೀನು ಇರುವ ರೀತಿಯನ್ನು ಹೀಗೆ ತಿಳಿದೆನು; ನೀನು ನಿಂತರೆ ನಿನಗೆ ನೆರಳಿಲ್ಲ,— ನಡೆದರೆ ಹೆಜ್ಜೆಗಳು ಮೂಡುವುದಿಲ್ಲ; ಆದರೆ ಈ ಭೂಮಿಯ ಮೇಲೆ ನಿರಾಕಾರ ವಸ್ತುವನ್ನು ನಾನು ನೋಡಿಲ್ಲ; ನಿಜ, ನಿಜ, ಜಂಗಮನು ಹೇಗೆ ಇರುವನೆಂಬುದನ್ನು ತಿಳಿದು ಹೇಳು? ಹೀಗೆ ಸಾಕಾರನಲ್ಲದ ಲಿಂಗಕ್ಕೆ ಊಟವನಿಕ್ಕಿದರೆ ಉಣ್ಣುವುದೋ ಇಲ್ಲವೋ ತಿಳಿಯದು; ಉಣ್ಣುವ ಹಾಗಾದರೆ ಉಣ ಬಡಿಸುವೆನು!

೧೦೩೪ ಎನ್ನವಗುಣವ ಸಂಪಾದಿಸದಿರಯ್ಯಾ;
ಪ್ರತಿಯಿಲ್ಲದನುಪಮ ನೀನು, ನಿನಗಾನು ಸರಿಯೆ?
ಅನುಪಮರಹಿತ ಕೂಡಲ ಸಂಗಮ ದೇವ,
ನೀ ಮಾಡಲಾನಾದೆನಯ್ಯಾ.

ನಿನ್ನನ್ನು ಯಾವ ವಿಧಿಯೆಲ್ಲಿಯೂ ಹೋಲಲು ನಾನು ಅಸಮರ್ಥನು; ಯಾಾಗೂ ಯಾವ ವಸ್ತುವಿಗೂ ಹೋಲಿಕೆ ಕೊಟ್ಟು ಹೇಳಲು ಬಾರದಂಥ ಚಿದಾತ್ಮನು ನೀನು; ನಿನ್ನ ಆಶೀರ್ವಾದದಿಂದಲೆ ನಾನು ಹುಟ್ಟಿದ್ದು.

೧೦೩೫ ಕಾಯದ ಲಜ್ಜೆಯು ಕಲ್ಪಿತವಳಿದು, ಜೀವದ ಲಜ್ಜೆಯು
ಮೋಹವನಳಿದು,
ಮನದ ಲಜ್ಜೆಯು ನೆನಹುಸುಟ್ಟು,
ಭಾವದ ಕೂಟ ಬತ್ತಲೆಯೆಂದರಿದು,
ತವಕದ ಸ್ನೇಹವ್ಯವಹಾರಕ್ಕೆ ಹೋಗದ
ಕೂಡಲ ಸಂಗಮ ದೇವರಲ್ಲಿ,
ಎನ್ನ ಹೆತ್ತ ತಾಯಿ ಮಹಾದೇವಿಯಕ್ಕನ ನಿಲವು
ನೋಡಾ, ಪ್ರಭುವೇ.

ದೇಹದ ಮೇಲಿನ ಮಮತೆ ಹಾಗು ನಾಚಿಕೆಯನ್ನು ಇಚ್ಛಾಶಕ್ತಿಯು ದೂರುಮಾಡಿತು; ಜೀವದ ಮೇಲಿನ ಮೋಹವನ್ನು ಮತ್ತು ಮನಸ್ಸಿನ ಕಲ್ಮಿಷವೆಂಬ ನಾಚಿಕೆಯನ್ನು ನಿಮ್ಮ ನೆನಹು ಸುಟ್ಟುಹಾಕಿತು; ಭಾವನಾತ್ಮಕವಾಗಿ ದೇವರಲ್ಲಿ ನೆರೆಯುವದು ಪರಿಶುದ್ಧವಾದುದು ಎಂದು ತಿಳಿದೆನು; ಆತುರವಾದ ಸ್ನೇಹವನ್ನು ಕೂಡಲ ಸಂಗಮ ದೇವರು ಮಾಡುವುದಿಲ್ಲ; ಅಂಥ ನಿರಂಜನನಲ್ಲಿ ನನ್ನನ್ನು ಹಡೆದ ತಾಯಿ ಮಚಾವಿಯಕನು ಏಕ್ಯಹೊಂದಿ ಬೆಳಗುತ್ತಿರುವ ಆ ಪ್ರಭೆಯನ್ನು ನೋಡು ಪ್ರಭುವೆ!

**೧೦೩೬ ಕೆದರಿದ ತಲೆಯು ತೊನೆವ ನಡೆಯು ಬುಗುಟಿನ ಕರಸ್ಥಲದ,**
**ಅನಿಮಿಷದಿಂ ಬಹಿರಂಗದ ವಚನವ ತಪ್ಪಿ ಇದಿರುಗೊಯಿಲು ತಾಗಿ**
**ಪುಬ್ಬೊಡೆದು ಕಣ್ಣುತೆರೆದು ಕಿವಿಹರಿದು ಜೋಲುವ ರಕ್ತಧಾರೆಯು,**
**ಗಾಳಿಯು ಧೂಳಿಯು ಮಳೆಯು ಜೋರಿನ ಬೆನ್ನ ಬಾಸುಳದ,**
**ಎಡಬಲದ ಬದಿಯು ತಟ್ಟಿನ ಮುಳ್ಳುದರುದಿನ ಕಂಕುಳ ಸೀಳು ಕಂಡು**
**ನೋಡುವ ಜನರು ಬೆರಗಾಗೆ ಪೊರವಾರಿನ ಮನೆಯು ದಿಗಂಬರದ**
**ಬಣಗು ಸುರಿವುತ್ತ ಆಪ್ಯಾಯನವರಿತು ಬಿದ್ದು ಮೊಣಕಾಲೊಡೆದು**
**ಹೊಸ ಹುಣ್ಣಿನ ರಕ್ತದ ಜೋರು ಹರಿದು ಮುಂಗಾಲು ತಲೆಯೊಡೆದು**
**ಕಣಕಾಲು ಸಂದು ತಪ್ಪಿ ಕಿರಿಬೆರಳು ಎಡಹಿ ಬೊಟ್ಟೊಡೆದು**
**ಗಾಯದ ಉಗುರು ಟೊಂಕದ ಬರಗುಂಟನ ನೋಡಾ, ಚೆನ್ನಬಸವಣ್ಣ.**

**ಅತ್ಯಂತ ಮಲಿನ ಕೂಡಲ ಸಂಗಮದೇವರ ಕುರುಹು**
**ವಿಪರೀತ!**
**ನೋಡುವರೆ ಭಯಂಕರವಾಗಿದೆ, ಅಯ್ಯಾ.**

ಅತಿ ಹೊಲಸು ತುಂಬಿದ ಮತ್ತು ತಲೆ ಕೆದರಿ ಮೈಕೈಯಲ್ಲ ರಕ್ತಮಯವಾದ, ಮುಳ್ಳುಗಳು ನಟ್ಟುಕಾಲುಗಳಲ್ಲಿ ರಕ್ತಸುರಿಸುತ್ತ ವಿಕಾರ—ರೂಪಗೊಂಡ ಈ ಕೂಡಲ ಸಂಗಮದೇವರ ಈ ಗುರುತುಗಳು ನೋಡಲು ಭಯಾನಕವಾಗಿವೆ.

**೧೦೩೭ ಗುರುವೇ ಬೋನ, ಶಿಷ್ಯನೇ ಮೇಲೋಗರ,**
**ಲಿಂಗಕ್ಕೆ ಪದಾರ್ಥ ಅರ್ಪಿತವಯ್ಯಾ;**
**ಘನಕ್ಕೆ ಮನವೆ ಅರ್ಪಿತ ಮನಕ್ಕೆ ಮಹವೆ ಅರ್ಪಿತ**
**ಘನದೊಳಗೆ ಮನವು ತಲ್ಲೀಯವಾದ ಬಳಿಕ**
**ಅರ್ಪಿಸುವ ಭಕ್ತರಾರು ಆರೋಗಿಸುವದೇವರಾರು ?**
**ನಿತ್ಯತೃಪ್ತನುಣಕಲಿತ ನೆಂದಡೆ ಅರ್ಪಿಸಲುಂಟೆ ದೇವ,**
**ಮತ್ತೊಂದನು ?**
**ಕೂಡಲ ಸಂಗಮ ದೇವಾ, ಪ್ರಭುವೆ, ಸುಚಿತ್ತದಿಂದ**
**ಆರೋಗಿಸಯ್ಯಾ.**

ಗುರುಕರುಣೆಯೇ ಅಡಿಗೆ; ಶಿಷ್ಯನು ಮಾಡುವ ಭಕ್ತಿ ಮೇಲೋಗರ; ಗುರು– ಶಿಷ್ಯರ ಈ ಅಪ್ರತಿಮ ಸುಂದರ ಭಾವವು ಲಿಂಗಕ್ಕೆ ಆರೋಗಣೆಯಾಯಿತು; ಘನಲಿಂಗಕ್ಕೆ ಮನವೊಲಿದು ಮನಕ್ಕೆ ಆ ಮಹಾಲಿಂಗ ಪ್ರಸಾದ ಸಿಕ್ಕು ಮನಸ್ಸು ಲಿಂಗವಿಲಾಸದಲ್ಲಿ ಮಗ್ನವಾದರೆ ಅಲ್ಲಿ ಅರ್ಪಿಸುವ ಭಕ್ತರು—ಉಣ್ಣುವ ದೇವರು ಬೇರೆ ಬೇರೆಯಾಗಲಾರರು; ನಿತ್ಯ ಸುಖಿಯಾದ ದೇವನು ಉಣ್ಣುವದನ್ನು ಕಲಿತರೆ ಬೇರೆ ಯಾವ ಪದಾರ್ಥಗಳನ್ನು ಉಣ್ಣಲು ಕೊಡುವದು ಸಾಧ್ಯ ? ಕೂಡಲ ಸಂಗಮದೇವಾ ಒಳ್ಳೆಯ ಮನದಿಂದ ನನ್ನ ಭಕ್ತಿಯ ಪಾಕವನ್ನು ಊಟಮಾಡು.

೧೦೩೮ ತೊರೆಯುದಕವ ಕೆರೆಯುಂಡು ತೃಪ್ತನಾಗಲು ಆ
ತೆರೆಯುದಕವ
ಹಲವು ಕೆಲವು ಸ್ಥಾವರ ಜಂಗಮಂಗಳುಂಡು
ತೃಪ್ತಿವಡೆದಂತೆ
ಪ್ರಭುದೇವರ ತೃಪ್ತಿ ಅಸಂಖ್ಯಾತ ಮಹಾಗಣಂಗಳೆಲ್ಲಕ್ಕೆ
ತೃಪ್ತಿಯಾಯಿತ್ತು ನೋಡಾ !
ಬಸುರ ಹೆಂಗಸು ಉಂಡಲ್ಲಿ ಒಡಲ ಶಿಶು ತೃಪ್ತಿಯಾದಂತೆ
ಸಚರಾಚರವೆಲ್ಲವು ತೃಪ್ತಿಯಾದುವು ನೋಡಾ !
ಕೂಡಲ ಸಂಗಮ ದೇವಾ,
ಪ್ರಭುದೇವರ ಪ್ರಸಾದದ ಮಹಿಮೆಗೆ ನಮೋನಮಃ
ಎಂಬೆನು

ಹಳ್ಳದ ನೀರನ್ನು ಕೆರೆ ಕುಡಿದು, ಆ ಕೆರೆಯ ನೀರನ್ನು ಹಲವು ಭೂಮಿಗಳೂ ಮತ್ತು ಚರಾ ಚರ ಪಕ್ಷಿ ಪ್ರಾಣಿಗಳೂ ಕುಡಿದು ಸಂತೋಷ ಗೊಳ್ಳುವಂತೆ ಪ್ರಭುದೇವರು ಸಂತಸಗೊಂಡರೆ ಅವರ ಎಲ್ಲ ಗಣಗಳೂ ಸಂತೋಷಗೊಂಡಂತೆ; ಹೇಗೆಂದರೆ – ಬಸುರು ಹೆಣ್ಣುಮಗಳು ಊಟಮಾ ಡಿದರೆ ಗರ್ಭದಲ್ಲಿರುವ ಅರ್ಭಕನಿಗೂ ತೃಪ್ತಿಯಾಗುತ್ತದೆ; ಕೂಡಲ ಸಂಗ ಮ ದೇವಾ, ಪ್ರಭುಗಳು ಹರುಷಚಿತ್ತಿಗಳಾದರೆ ಜಗವೆಲ್ಲವೂ ನಗುತ್ತದೆ, ಆನಂದ ಮುದ್ರೆಗೊಳ್ಳುತ್ತದೆ; ಅವರ ಪ್ರಸಾನ ಮಹಿಮೆಗೆ ನಾನು ತಲೆ ಬಾಗುವೆನು !

೧೦೩೯ ದೇವ ದೇವ ಮಹಾಪ್ರಸಾದ ನಿಮ್ಮಡಿಗಳೆಂದಡಲ್ಲದೆ
ಇನ್ನೆನಗೆ ಬೇರೆ ಸ್ವಾತಂತ್ರ್ಯವುಂಟೆ ?
ಸಂದ ಸಂಶಯ ವುಂಟೇ ?
ದರ್ಪಣ ದೊಳಗಣ ಪ್ರತಿಬಿಂಬವ ನೋಡುವ ಮನಕ್ಕೆ
ಭಿನ್ನಭಾವವುಂಟೆ ?
ಚರಿಸಿ ಬಹ ಅನಂತ ಸುಳುಹಿನೊಳಗೆ ನೀನೊಬ್ಬ,
ನಿನ್ನೊಳಗೆ ಅನಂತ ಸುಳುಹು ಅಡಗಿದುವು.

**ನಿನಗೆ ಮಾಡಿದ ಸುಯಿಧಾನವ ನೀಡುವೆ ಅವಧರಿಸಯ್ಯಾ,**
**ಕೂಡಲ ಸಂಗಮ ದೇವ.**

ಹೇ ದೇವನೇ, ನಿಮ್ಮ ಪಾದಾರವಿಂದಗಳನ್ನು ನೆನೆದಾಗಲೆ ನನಗೆ ಮಹಾಪ್ರಸಾದದ ವರವು ದೊರೆಯುತ್ತದೆ; ಅದಲ್ಲದೆ ನಾನು ಸ್ವಾತಂತ್ರ್ಯನಲ್ಲ! ಕನ್ನಡಿಯಲ್ಲಿ ನನ್ನ ಪ್ರತಿಬಿಂಬವನ್ನು ನೋಡುವ ನನಗೆ ನಾನು ಬೇರೆ ಪ್ರತಿಬಿಂಬ ಬೇರೆ ಎಂಬ ದ್ವಿಭಾನವುಂಟಾಗುವದು ಸುಳ್ಳು; ಜಗವೆಲ್ಲ ಹಬ್ಬಿಕೊಂಡಿರುವ ಅಸಂಖ್ಯಾತ ಸುಳುಹುಗಳಲ್ಲಿ ನೀನೂ ಓರ್ವನು; ನಿನ್ನಲ್ಲಿ ಆ ಅಸಂಖ್ಯಾತ ಸುಳುಹುಗಳು ಅಡಗಿಕೊಂಡಿವೆ; ಅವಧರಿಸು ಕೂಡಲಸಂಗಮ ದೇವಾ!

**೧೦೪೦ ಧ್ಯಾನ ಮೌನವೆಂಬ ಶಬ್ದವ ಹಿಡಿದು**
**ನಿಮ್ಮಗೆಲಲರಿಯುದೆ**
**ಅಹಂಕಾರವೆಂಬ, ಧಾರೆಯೆಂಬ ಮೊನೆಶಸ್ತ್ರವ ಹಿಡಿದು**
**ಕೆಟ್ಟೆನಯ್ಯಾ.**
**ಜಂಗಮ ಲಿಂಗವೆಂಬ ಭಾಷೆ ಪಲ್ಲಟವಾಯಿತ್ತು.**
**ಜಂಗಮ ಲಿಂಗವೆಂಬ ದೀಕ್ಷಾಶಸ್ತ್ರದಲ್ಲಿ ಎನ್ನ ಹೊಯ್ದು**
**ಬಯ್ದು ರಕ್ಷಿಸು,**
**ಕೂಡಲ ಸಂಗಮ ದೇವಾ.**

ಧ್ಯಾನ ಮೌನವೆಂಬ ವ್ರತಗಳನ್ನು ಆಚರಿಸಿ ನಿಮ್ಮನ್ನು ಗೆಲ್ಲುವ ತಿಳಿವಳಿಕೆ ನನ್ನಲ್ಲೆ ಉದಿಸಲಿಲ್ಲ! ಅಹಂಕಾರದಿಂದ ನಾನು ಹಾಳಾದೆನು; ಜಂಗಮ ಲಿಂಗಗಳಿಂದ ಬಹೂದೂರ ಬಂದೆನು; ಜಂಗಮ ದೀಕ್ಷಾ, ಲಿಂಗದೀಕ್ಷಾ ಎಂಬ ಈ ಎರಡು ಶಸ್ತ್ರಗಳಿಂದ ನನ್ನನ್ನು ಹೊಡೆದು ಘಾಯಗೊಳಿಸಿ ನನ್ನ ಸರ್ವ ಪಾಪ ರಕ್ತ ಹರಿದು ಹೋಗಿಸಿ ನೀನು ಕಾಪಾಡು ಕೂಡಲ ಸಂಗಮ ದೇವಾ. ।

**೧೦೪೧ ನಾನು ಭಕ್ತನಲ್ಲವಯ್ಯಾ.**
**ನಾನು ಕಪಟವೇಷಡಂಭಕನಯ್ಯಾ,**

**ಕೂಡಲ ಸಂಗಮದೇವಾ,**
**ಎನ್ನ ಭಕ್ತಿಮಳಲೊಟ್ಟಿಲು ಎಂಬುದ ನೀವು ತೋರಿದಿರಾಗಿ**
**ಎನಗೆ ಅರಿಯು ಬಂದಿತಯ್ಯಾ ಪ್ರಭುವೆ.**

ನಾನು ಭಕ್ತನಲ್ಲದ ಕಾರಣ ನಾನು ಅಯೋಗ್ಯನು, ಕಪಟ ವೇಷದ ಡಂಭಾಚಾರಿ ಇರುವೆನು ಕೂಡಲ ಸಂಗಮದೇವಾ, ನನ್ನ ಭಕ್ತಿಯು ಮಳಲಗೋಡೆಯಂತೆ ಎಂಬುದನ್ನು ನೀವು ತೋರಸಿ ಕೊಟ್ಟರಿ; ಇಂದು ನನಗೆ ನಿಜ ಮಾತು ತಿಳಿಯಿತು ಪ್ರಭುವೆ !

**೧೦೪೨ ರೂಪಿಲ್ಲದವಂಗೆ ಒಲಿದವರಿಗೆ ತನುವಿನ ಹಂಗುಂಟೇ?**
**ಮನವಿಲ್ಲದವಂಗೆ ಮೆಚ್ಚಿದವರಿಗೆ ಅಭಿಮಾನದ ಹಂಗುಂಟೇ ?**
**ದಿಗಂಬರಗೊಲಿದವಂಗೆ ಕೌಪಿನದ ಹಂಗುಂಟೇ?**
**ಕೂಡಲ ಸಂಗಮ ದೇವಯ್ಯಾ.**
**ಮಹಾದೇವಿಕ್ಕನೆಂಬ ಭಕ್ತೆಯ ರೂಪಿಂಗೆ**
**ಆವ ಹೊಲ್ಲೆಯವಿಲ್ಲಾ, ಪ್ರಭುವೆ.**

ರೂಪಿಲ್ಲದವನನ್ನು ಮನಸ್ಸಿಲ್ಲದವನನ್ನು ಪ್ರೀತಿಯಿಂದ ಮೆಚ್ಚಿದವರಿಗೆ ದೇಹದ ಪರಿವೆ ಮತ್ತು ಅಭಿಮಾನಗಳು ಇರುವುದಿಲ್ಲ; ದಿಗಂಬರನಿಗೆ ಮೆಚ್ಚಿಕೊಂಡರು ಲಂಗೋಟಿಯ ಮೇಲೆ ಮಮತೆ ಇಡುವರೆ? ಆದರ ಆತಂಕದಲ್ಲಿರುವುದಿಲ್ಲ; ಆದುದರಿಂದ ಕೂಡಲ ಸಂಗಮದೇವಾ ಮಹಾದೇವಿಯಕ್ಕದ ರೂಪಕ್ಕೆ ಆವ ಮೈಲಿಗೆಯೂ ಇಲ್ಲ; ಅದು ಪೂರ್ಣ ಪವಿತ್ರವಾಗಿದೆ.

## ಲಿಂಗಲೀಲಾ ವಿಲಾಸ ಚಾರಿತ್ರ್ಯ

**೧೦೪೩ ಅನುಭಾವವಿಲ್ಲದ ಭಕ್ತಿ ಅನುವಿಂಗೆ ಬಾರದು;**
**ಅನುಭಾವವಿಲ್ಲದ ಲಿಂಗ ಸಮರಸ ಸುಖವನೀಯದು;**
**ಅನುಭಾವವಿಲ್ಲದ ಪ್ರಸಾದ ಪರಿಣಾಮವ ಕೊಡದು,**
**ಅನುಭಾವವಿಲ್ಲದೆ ಅತಿಯ ಕೂಡದು.**
**ತನ್ನಲ್ಲಿ ತಾನಿನ್ನಿಹಿತವುಳ್ಳೊಡೆ ಶಿವಶರಣರ ಸಂಗ**

**ವೇತೆಕ್ಕೆನಲುಂಟೆ ?**

**ಕೂಡಲ ಸಂಗಮ ದೇವಯ್ಯಾ;**

**ನಿಮ್ಮ ಅನುಭಾವವ ಮಾತಿನ ಮಥನವೆನಬಹುದೆ ?**

ಪರಿಶ್ರಮವಿಲ್ಲದೆ ಮಾಡುವ ಭಕ್ತಿಯು ಆಪತ್ಕಾಲದಲ್ಲಿ ಉಪಯೋಗಕ್ಕೆ ಬಾರದು; ಅನುಭವಸಿಗದೆ ದೇಹದಲ್ಲಿ ಲಿಂಗವನ್ನು ಕಟ್ಟಿಕೊಂಡವರಿಗ ಸಮರಸ ಸುಖವನ್ನು ಕೊಡಲಾರದು; ದೇಹದಂಡವಿಲ್ಲದೆ ಗಳಿಸಿದ ಪ್ರಸಾದವು ಮುಕ್ತಿಯನ್ನು ಕೊಡಲಾರದು; ಕಾರಣ ಜೀವನದಲ್ಲಿ ಸಾಕಷ್ಟು ತಾಳ್ಮೆಯು ಸಂಘಟನೆಯಾಗದ ವಿನಃ ಊರು ಊರು ತಿರುಗಬಾರದು; ತನ್ನ ಪ್ರಾಣದಲ್ಲಿ-ಅಂತರಂಗದಲ್ಲಿ-ಪರಮಾತ್ಮನು ಕೂಡಿಕೊಂಡಿರುವನೆಂದ ಮಾತ್ರಕ್ಕೆ ಶಿವಶರಣರ ಸಹವಾಸವೇತಕ್ಕೆ ಎಂದು ಹೇಳಲು ಬಾರದು; ಕೂಡಲ ಸಂಗಮ ದೇವಾ, ನಿಮ್ಮನ್ನು ನೆರೆನಂಬಿಕೂಡುವುದು ಬರೆ ಮಾತಿನ ಮಾಲೆಯಿಂದ ದುಸ್ಸಾಧ್ಯವು.

**೧೦೪೪ ಅಂತರಂಗದೊಳಗಿರ್ದ ನಿರವಯಲಿಂಗವನು ಸಾವಯ ಲಿಂಗವಮಾಡಿ**

**ಶ್ರೀ ಗುರುಸ್ವಾಮಿ ಕರಸ್ಥಲಕ್ಕೆ ತಂದು ಕೊಟ್ಟು.**

**ಲಿಂಗವು ಅಂತರಂಗವನಾವರಿಸಿ, ಅಂತರಂಗದ ಕರಣಂಗಳೆ ಕಿರಣಂಗಳಾಗೆ,**

**ಆ ಬೆಳಗುವ ಚಿದಾಂಶವು ಪ್ರಾಣಲಿಂಗವು;**

**ಅಮರ ಚೈತನ್ಯವೇ ಭಾವಲಿಂಗವು,**

**ಇದನರಿದು ನೋಡುವ ನೋಟ**

**ಭಾವ ಪರಿಪೂರ್ಣವಾಗಿ ತಾನಾದುದಲ್ಲದೆ,**

**ಇದಿರಿಟ್ಟು ತೋರುವುದಿಲ್ಲವಾಗಿ**

**ಅಖಂಡ ಪರಿಪೂರ್ಣವಪ್ಪ ನಿಜವು ತಾನೆ ಕೂಡಲ ಸಂಗಮದೇವ.**

ಅಂತರಂಗದಲ್ಲಿ ನಿರಾಕಾರನಾಗಿ ಕೂಡಿಕೊಂಡಿರುವ ಅಂತರಾತ್ಮನನ್ನು ಸಾಕಾರ ಮೂರ್ತಿಯನ್ನಾಗಿ ಮಾಡಿ ನನ್ನ ಅಂಗೈಯಲ್ಲಿ ಶ್ರೀಗುರುಗಳು ತಂದು ಕೊಟ್ಟರು; ಆಅಂತರಾತ್ಮನು ಕಿರಣಗಳಿಂದ ಯುಕ್ತನಾಗಿ ಬೆಳಗುವ

ಚಿತ್ತದ ಒಂದಂಗವಾಗಿದ್ದ ಪ್ರಾಣಲಿಂಗವೆ ಇರುತ್ತಾನೆ; ಅಪ್ರತಿಭವಾದ ಚೇತನಾ ಶಕ್ತಿಯೇ ಭಾವಲಿಂಗವು; ಅದು ಸಾಕ್ಷಿಯಾಗಿ ಕಾಣುವುದಿಲ್ಲ; ಸತ್ಯನೂ ಪರಿಪೂರ್ಣನೂ ಆದವನೇ ಕೂಡಲ ಸಂಗಮ ದೇವರು.

**೧೦೪೫ ಅರಿದಿಹೆನೆಂದೊಡೆ ಅರಿಹಿಂಗಸಾಧ್ಯ**
**ನೆನೆದಿಹೆನೆಂದೊಡೆ ನೆನಹಿಂಗಸಾಧ್ಯ!**
**ಭಾವಸಿಹೆನೆಂದೊಡೆ ಭಾವಕ್ಕಸಾಧ್ಯ!**
**ವಾಙ್ ಮಾನಸಕ್ಕ ಗೋಚರನು ಅರಿವಪರಿಯೆಂತಯ್ಯ ಗುರುತೋರದನ್ನಕ್ಕ ?**
**ಗುರುಶಿಷ್ಯರ ವಾದದಲ್ಲಿ ಸ್ವಯಂಜ್ಯೋತಿರ್ಲಿಂಗ**
**ಅವಯುವಪ್ಪುದೆಂಬ ಶೃತಿ ಹುಸಿಯೇ?**
**ಕೂಡಲ ಸಂಗಮ ದೇವಯ್ಯಾ;**
**ನಿಮ್ಮ ಮಹಾನುಭಾವ ಮಥನದಿಂದ ಎನ್ನಲ್ಲಿ ನಿಜವ ನೆಲೆಗೊಳಿಸಾ?**

ತಿಳಿವಳಿಕೆಗೂ, ಧ್ಯಾನಕ್ಕೂ, ಕಲ್ಪನೆಗೂ, ಮಾತಿಗೂ, ಮನಸ್ಸಿಗೂ ಕಾಣದವನು ನಿಲುಕದವನು ಆದ ಪರಮಾತ್ಮನನ್ನು ಶ್ರೀ ಗುರುವು ತೋರಿಸಿದ ವಿನಃ ನಾನು ನೋಡುವುದು ಕಷ್ಟ;ಗುರು ಶಿಷ್ಯರ ವಾದದ ಸರಣಿಯಲ್ಲಿ ಸ್ವತಃ ಜ್ಯೋತಿರ್ಲಿಂಗನು ಮಾತಿನ ರೂಪವಾಗಿ ಧಾರಾಳವಾಗಿ ಹರಿಯುವನು ಎಂಬ ಮಾತು ಸುಳ್ಳಲ್ಲ! ಕೂಡಲ ಸಂಗಮದೇವ, ನಿಮ್ಮ ಮಹಿಮೆಯ ಮಧುರತೆಯಿಂದ ನನ್ನಲ್ಲಿ ಸತ್ಯವು ನೆಲೆಗೊಳ್ಳುವಂತೆ ಕರುಣಿಸಿರಿ.

**೧೦೪೬ ಅರಿಯಲಿಲ್ಲ ಮರೆಯಲಿಲ್ಲ;**
**ನಿಜವು ನಿಂದಿತ್ತಾಗಿ, ನಿರ್ನಾಮವಾಗಿತ್ತಾಗಿ, ನಿಷ್ಪತ್ತಿಯಾಯಿತ್ತು.**
**ಅಗಮ್ಯದಲ್ಲಿ ಗಮನ ಕೆಟ್ಟಿತ್ತು; ನಿಂದಲ್ಲಿ ನಿರಾಳವಾಯಿತ್ತು.**
**ಕೂಡಲ ಸಂಗಮ ದೇವರಲ್ಲಿ ಶಬ್ದ ಮುಗ್ಧವಾಯಿತ್ತು.**

ಸತ್ಯವು ನೆಲೆಗೊಂಡು, ಪಾಪವು ನಾಶವಾಗಿ ಜೀವನ್ಮುಕ್ತಿಯು ಮಾರ್ಗ ನಾನಿದ್ದ ಸ್ಥಳದಲ್ಲಿಯೆ ಸರಳವಾದ ಕಾರಣ ಕೂಡಲ ಸಂಗಮ ದೇವರಲ್ಲಿ ನಾನು ಮೌನ ತಳೆದೆನು;ಆದುದರಿಂದ ಪೂರ್ಣಜ್ಞಾನದ ತಿಳಿವುಂಟಾಗಲಿಲ್ಲ ಮತ್ತು ತಿಳಿದಷ್ಟನ್ನು ಮರೆಯಲಿಲ್ಲ.

**೧೦೪೭ ಅರಿವಿನ ಆಪ್ಯಾಯನಕ್ಕೆ ಅನುಭಾವವೇ ತೃಪ್ತಿ !**

**ಅರಿವು ನೆರೆ ಕೂಡಿ ಆಕಾರವೇ ಪ್ರಾಣವಾಗಿ ವಿಶ್ರಮಿಸಿದ ಬಳಿಕ**
**ಶ್ರೀ ಗುರು ಕೃಪೆಯ ಮಾಡಿದ ಪ್ರಾಣಲಿಂಗದ ಘನವೆಂತೆಂದೊಡೆ**
**ಮತ್ಸ್ಯ ನುಂಗಿದ ಮಾಣಿಕ್ಯದಂತೆ,**
**ಮುತ್ತು ನುಂಗಿದ ನೀರಿನಂತೆ,**
**ಕಣ್ಣಲಿ ನುಂಗಿದ ನೋಟದಂತೆ,**
**ಬಯಲನೊಳಕೊಂಡ ಬ್ರಹ್ಮಾಂಡದೊಳಗಿಪ್ಪ ಸ್ವಯಾನುಭಾವಿಗಳ**
**ಅನುಭಾವವ ತೋರಿ ಬದುಕಿಸಾ, ಕೂಡಲ ಸಂಗಮದೇವ.**

ಜ್ಞಾನದ ಹಸಿವು ಹಿಂಗಿ ಸಂತುಷ್ಟನಾಗಬೇಕಾದರೆ ಪರಮಾತ್ಮನ ಸಾಕ್ಷಾತ್ಕಾರವೇ ಸಂತುಷ್ಟಿಗೆ ಕಾರಣವಿದೆ; ಜ್ಞಾನವು ಪಕ್ವವಾಗಿ ಸಾಕಾರ ಮಯ ಜೀವವಾಗಿ ನನ್ನಲ್ಲಿ ನಿಂತ ಬಳಿಕ ಗುರು ಕೃಪೆಯಿಂದ ಸಂಬಂಧ ಬೆಳೆದ ಆ ಮಹಾತ್ಮನ ಇರವು ಹೀಗಿದೆ:- ಮೀನವು ಮಾಣಿಕ್ಯವನ್ನು ತಿಂದು ಸಾದೃಶ್ಯವಾಗಿ ಅದರ ತೇಜಪಡೆದಂತೆ, ಮುತ್ತುರೂಪ ಧರಿಸುವಾಗ ತನ್ನ ಗರ್ಭದಲ್ಲಿಟ್ಟುಕೊಂಡ ನೀರಿನಿಂದ ತೇಜಸತ್ವವನ್ನು ಪಡೆದಂತೆ, ಕಣ್ಣುಗಳಲ್ಲಿ ಅಡಗಿರುವ ದೃಷ್ಟಿ ತೇಜದಂತೆ, ವಿಶ್ವವನ್ನೆಲ್ಲ ತನ್ನ ಅಂತರಂಗದಲ್ಲಿಟ್ಟುಕೊಂಡು ತಾನು ಈ ವಿಶ್ವದಲ್ಲಿಯೇ ಸಶರೀರನಾಗಿರುವ ಅನುಭವಿಕ ಶರಣರ ದರ್ಶನ ಮಾಡಿಸಿ ನನ್ನನ್ನು ಕಾಪಾಡು ಕೂಡಲಸಂಗಮದೇವಾ !

೧೦೪೮ ಅರಿವಿನ ತೃಪ್ತಿಗೆ ಅನುಭಾವವೇ ಆಶ್ರಯು.
ಲಿಂಗಾನುಭವದಿಂದ ನಿಮ್ಮ ಕಂಡೆನ್ನ ಮರೆದೆ,
ಕೂಡಲ ಸಂಗಮದೇವ.

ನಿಜವಾದ ಪರಮಾತ್ಮ ಕಲ್ಪನೆಯೇ ಜ್ಞಾನಕ್ಕೆ ಸಂತೋಷವನ್ನುಂಟು ಮಾಡುತ್ತದೆ; ಕಾರಣ ಜ್ಞಾನ ಮಾರ್ಗದಿಂದಲೇ ಲಿಂಗಸಾಕ್ಷಾತ್ಕಾರವನ್ನು ಪಡೆದು ನಾನು ನನ್ನನ್ನು ಮರೆತೆನು; ಕೂಡಲ ಸಂಗಮದೇವಾ!

೧೦೪೯ ಅರಿವು ಮರವೆಯೊಳಡಗಿ ಮರವೆ ಅರಿವಿನೊಳಡಗಿ
ತೆರಹಿಲ್ಲದಿದ್ದೆನೆಂಬ ಹಮ್ಮಿದೇನೋ?
ಬ್ರಹ್ಮಾದ್ಯಹ್ಮವ ನುಂಗಿ ಮತ್ತೆ ಆ ಪರಬ್ರಹ್ಮವೂ
ನಾನೆಂಬ ಹಮ್ಮಿದೇನೊ? ಹಮ್ಮಿದೇನೋ?
ಆದಿ ಶೂನ್ಯವು ಶೂನ್ಯ,
ಮಧ್ಯ ಶೂನ್ಯವು ಶೂನ್ಯ,
ಅಂತ್ಯ ಶೂನ್ಯವು ಶೂನ್ಯವಾದ ಬಳಿಕ
ಅಲ್ಲಿಂದತ್ತ ನಿಂದ ನಿಲವನಾರು ಬಲ್ಲರು, ಹೇಳಾ?
ಬಯಲು ಚಿತ್ರಿಸಿದ ಚಿತ್ರವನು ಬಯಲೇ ಅರಿವಂತೆ
ಕೂಡಲ ಸಂಗಮದೇವ, ನಿಮ್ಮ ಶರಣರ ನಿಲವು.

ಅರಿವಿನಲ್ಲಿ ಮರವಿನಲ್ಲಿ ಮತ್ತು ಮರವಿನಲ್ಲಿ ಅರಿವಿನಲ್ಲಿ, ಭೇದವ ಮಾಡದೆ ನಾನೇ ಅಲ್ಲಿ ವಾಸಮಾಡಿರುವೆನೆಂಬ ಅಭಿಮಾನ ಎಂತಹದು? ಬ್ರಹ್ಮನಿಂದ ಬ್ರಹ್ಮನು ಹುಟ್ಟಿ ಮತ್ತೆ ಆ ಪರಬ್ರಹ್ಮನೂ ನಾನೇ ಎನ್ನುವ ಈ ಮಾತು ಎಂತಹ ಅಹಂಕಾರದ್ದು! ಆದಿಮಧ್ಯಾಂತರಗಳಲ್ಲಿ ಎಲ್ಲೆಲ್ಲಿಯೂ ಶೂನ್ಯವೇ ಶೂನ್ಯವಾಗಿರುವಾಗ ಮತ್ತು ಆ ಶೂನ್ಯತ್ವದಿಂದ ಆಚೆಗೆ ನಿಂತಿರುವ ಸತ್ ಚೇತನವನ್ನು ತಿಳಿದವರು ಯಾರು? ಭೂಮ್ಯಾಕಾಶಗಳ ಮಧ್ಯದಲ್ಲಿ ನಿರ್ಮಿತವಾದ ಈ ಬಯಲನ್ನು ಅದರ ಪರಿಭಾವವನ್ನು ಕರ್ತೃವೇ ತಿಳಿಯಬೇಕು; ಹಾಗೆ ಕೂಡಲ ಸಂಗಮದೇವಾ, ನಿಮ್ಮ ಶರಣರನ್ನು ಶರಣರೇ ತಿಳಿಯುತ್ತಾರೆ; ಬೇರಾವ ಕ್ಷುಲ್ಲಕ ನರಪ್ರಾಣಿಗಳು ತಿಳಿಯಲಾರರು!

೧೦೫೦ ಅರ್ಥ ಪ್ರಾಣ ಅಭಿಮಾನದಲ್ಲಿ ವಂಚನೆ ಇಲ್ಲದಿರುವುದೇ ಭಕ್ತಿ.

ಹೆಚ್ಚು ಕುಂದಿಲ್ಲದಿಹುದೇ ಸಮಯಾಚಾರ,
ತನುವಂಚನೆ ಮನವಿಕಾರ ಬಿಡದು ನಾನಿನಿನ್ನೇವೆನಯ್ಯಾ ?
ತನುವನಲ್ಲಾಡಿಸಿ ನೋಡಿದಲ್ಲಿ, ಮನವನಲ್ಲಾಡಿಸಿ ನೋಡಿದಲ್ಲಿ
ಧನವನಲ್ಲಾಡಿಸಿ ನೋಡಿದಲ್ಲಿ, ಧೃಢವಿಲ್ಲದಿದ್ದೊಡೆ
ಒಡೆಯನ ಕಂಡು ನಾಯಿ ಬಾಲವ ಬಡಿದು ಕೊಂಬಂತೆ
ಅದಕೇನು ವೆಚ್ಚ ಹತ್ತಿದುದುಂಟೆ, ಕೂಡಲಸಂಗಮದೇವಾ?

ತನು, ಮನ, ಧನಗಳನ್ನು ನಿರ್ವಿಕಾರ ನಿರ್ವಂಚನೆಯಿಂದ ಸಮರ್ಪಿಸುವದೇ ನಿಜವಾದ ಭಕ್ತಿ; ಹಾಗೆ ಮಾಡುವಲ್ಲಿ ದುರಹಂಕಾರ ಬಿಡುವುದೆ ಸಮಯಾಚಾರ; ಹೀಗೆ ತನು, ಮನ, ಧನಗಳನ್ನ ನಿಷ್ಕಾಮ ಬುದ್ಧಿಯಿಂದ ಅರ್ಪಿಸುವಾಗ ನನ್ನ ಮನದಲ್ಲಿ ಅಲ್ಪವಾದರೂ ಆಶೆ ಉಳಿದರೆ, ಯಜಮಾನನನ್ನು ಕಂಡು ನಾಯಿ ತನ್ನ ಬಾಲವನ್ನು ಅಲ್ಲಾಡಿಸುವಂತೆ ಅದು ದುರ್ಭಾಗ್ಯದ ಲಕ್ಷಣವೇ ಸರಿ ಕೂಡಲ ಸಂಗಮದೇವಾ !

೧೦೫೧ ಆಚಾರ ಅನಾಚಾರವಾಯಿತ್ತು, ಸೀಮೆ ನಿಸ್ಸೀಮೆಯೂಯಿತ್ತು.

ಪ್ರಾಣ ಸಂಚ ತಪ್ಪಿ ಲಿಂಗಸಂಚನಾಯಿತ್ತು.
ಎಲ್ಲಿ ಶಬ್ದವಲ್ಲಿಯೇ ಲಿಂಗ ಸ್ವಾಯತವಾಯಿತ್ತು
ಎಲ್ಲಿ ಸೋಂಕಲ್ಲಿಯೇ ಲಿಂಗ ಸ್ವಾಯತವಾಯಿತ್ತು
ಎಲ್ಲಿ ರೂಪವಲ್ಲಿಯೇ ಲಿಂಗ ಸ್ವಾಯತವಾಯಿತ್ತು
ಎಲ್ಲಿ ರುಚಿ ಅಲ್ಲಿಯೇ ಲಿಂಗ ಸ್ವಾಯತವಾಯಿತ್ತು
ಎಲ್ಲಿ ಗಂಧವಲ್ಲಿಯೇ ಲಿಂಗ ಸ್ವಾಯತವಾಯಿತ್ತು
ಕೂಡಲ ಸಂಗಮದೇವರ ಕರುಣ ರಸಾಬ್ಧಿ
ಕಡೆ ನೋಡಿ ಪರಿಯಿತಯ್ಯಾ ಎನ್ನ ಮೇಲೆ !

ಪುನರ್ಜನ್ಮದ ಭಯ ತಪ್ಪಿ ಲಿಂಗೈಕ್ಯನಾಗುವ ಪರ್ಯಾಯ ಕಾಲ ಬಂದುದರಿಂದ ನನ್ನ ಆಚಾರ ಅನಾಚಾರಗಳೆಂಬ ಬೇಡಿಗಳು ಕಳಚಿದವು;

ನನ್ನ ಆತ್ಮಕ್ಕೆ ಈ ಮೊದಲಿದ್ದ ಸಂಸಾರದ ಬಂಧನ ಇಲ್ಲದಾಗಿ ಅದು ಹದ್ದು ಗಡಿಗಳನ್ನು ದಾಟಿ ನಿಂತಿದೆ; ಕಾರಣ, ಧ್ವನಿ, ಸ್ಪರ್ಶ,ರೂಪ,ಸ್ವಾದ ಮತ್ತು ಗಂಧ ಇವುಗಳೆಲ್ಲವೂ ಇದ್ದಲ್ಲಿ ಲಿಂಗವೂ ನಿಜರೂಪದಿಂದಲೇ ಇರುತ್ತದೆ; ಕೂಡಲ ಸಂಗಮ ದೇವರ ಕರುಣ ರಸದ ಸಮುದ್ರದ ಮೇಲಿನ ಗಾಳಿ ನನ್ನ ಮೇಲೆ ಬೀಸಿದ ಕಾರಣ ನನ್ನ ಸರ್ವಪಾಪಗಳೂ ನಾಶವಾದವು.

**೧೦೫೨ ಆಡಿನ ಕೊರಳಲ್ಲಿ ಮೊಲೆಯಿದ್ದರೇನು ಅಮೃತವಡ-**
**ಕುಂಟೇ ?**
**ಭಕ್ತನಾದಲ್ಲಿ ಫಲವೇನು ಶಿವಪದವನರಿಯದನ್ನಕ್ಕ ?**
**ದಕ್ಕಾಲಿ ಬಿದ್ದ ಪಣ್ಣಿನಂತೆ ಜಂಗಮದ ಮೇಲೆ ಹರುಷವಿಲ್ಲದ**
**ನೋಟ,**
**ಕೂಡಲ ಸಂಗನ ಶರಣರ ಬೆರಸದ ಹರುಷ ಅರಸಿಯ**
**ನೋಟದಂತೆ.**

ಆಡಿನ ಕೊರಳಲ್ಲಿ ಮೊಲೆಗಳಿದ್ದರೂ ಅವುಗಳಲ್ಲಿ ಹಾಲು ಇರುವದಿಲ್ಲ; ಹಾಗೆಯೇ ಶಿವಪಥದಲ್ಲಿ ನಡೆಯದ ಭಕ್ತರು ಭಕ್ತಿಯನ್ನು ಮಾಡಿ ನಿರರ್ಥಕವು; ಹಣ್ಣಿನ ಮೇಲೆ ಕೊಳೆತು ಹೋಗುವಂತಹ ಕಲೆಗಳು ಇದ್ದ ಹಾಗೆ, ಜಂಗಮ ದೇವರನ್ನು ಹರುಷಭರಿತ ನೋಟದಿಂದ ನೋಡದಿದ್ದರೆ ಮತ್ತು ಸಂಗನ ಶರಣರ ಕಂಡು ಹರುಷಗೊಳ್ಳದ ಮನವು ಇದ್ದರೆ ಅದು ದುಷ್ಟ ರಾಣಿಯ ಕಾಮವಾಸನಾ ಪೂರ್ಣ ದೃಷ್ಟಿಯಂತೆ ಆಗುತ್ತದೆ.

**೧೦೫೩ ಆದಿ ಪುರುಷನ ಮನವು ಮಹವನಕ್ಕಾಡೆ**
**ಮತ್ತಲ್ಲಿಯೆ ಆನಂದದಿಂದ ಆ ನಿರವಯವ ಬೆಸಲಾಯಿತ್ತು;**
**ಧರೆ ಅಂಬವಾರಿಧಿ ಸಹಿತ ಜಾರೆಯೆಂದರೆ ಜಗದಲ್ಲಿ ನಿಂದರು;**
**ಚೌರಾಶಿ ಲಕ್ಷ ಜೀವಜಾಲಂಗಳು ಹಾರೆಯೆಂದರೆ ಆಕಾಶ-**
**ದಲ್ಲಿ ನಿಂದರು;**
**ಗರುಡ ಗಂಧರ್ವ ಸಿದ್ಧ ವಿದ್ಯಾಧರ ದೇವರ್ಕಳು ಮೊದಲಾದ**
**ದೇವ ಸಮೂಹಂಗಳೆಲ್ಲಾ, ಕೂಡಲ ಸಂಗಮದೇವಾ,**
**ನೀವು ಮನದಲ್ಲಿ ಸಂಕಲ್ಪಿಸಿ ಆಗೆಂದೊಡೆ ಆದವು.**

ಆದಿ ಪುರುಷನು ತನ್ನ ಇಚ್ಛಾಶಕ್ತಿಯಿಂದ ಪೃಥ್ವಿಯನ್ನು ತುಂಬಿ ಕೊಂಡನು; ಆಗ ಅಲ್ಲಿ ಆನಂದ ತುಂದಿಲನಾದ ಪುರುಷನು ನಿರಾಕಾರತ್ವ ದಿಂದ ಸಾಕಾರತ್ವವನ್ನು ಹೊಂದಿದನು; ಜಗತ್ತು, ಆಕಾಶ ಮತ್ತು ಸಮು ದ್ರಗಳು ನೀನು ಜಾರಳೆಂದು ನುಡಿದರೂ ಈ ಭೂಮಿಯ ಮೇಲೆ ನಿಂತನು; ಎಂಬತ್ತಾಲ್ಕು ಲಕ್ಷ ಜೀವರಾಶಿಗಳು ತಮ್ಮಲ್ಲಿರುವುದು ಬೇಡ ಇಲ್ಲಿಂದ ತೊಲಗು ಎಂದರೆ-ಆಕಾಶದಲ್ಲಿ ನಿಂತನು; ಹೇ ಕೂಡಲ ಸಂಗಮ ದೇವ, ದೇವತೆಗಳ ಸಮೂಹವೆಲ್ಲವೂ ನಿಮ್ಮ ಸಂಕಲ್ಪದಿಂದಲೇ ಆದವರು.

**೧೦೫೪ ಎನ್ನ ಕಾಯದ ಕರಸ್ಥಳದಲ್ಲಿ ಪ್ರಭುದೇವರ ಕಂಡೆನು;**
**ಎನ್ನ ಮನದ ಕರಸ್ಥಳದಲ್ಲಿ ಚೆನ್ನಬಸವನ ಕಂಡೆನು;**
**ಎನ್ನ ರೂಹಿನ ಕರಸ್ಥಳದಲ್ಲಿ ಮಡಿವಾಳಯ್ಯನ ಕಂಡೆನು,**
**ಒಳಹೊರಗು ಹೊರಗೊಳಗೆಂಬ ಭೇದವನರಿಯದೆ ಇದ್ದೆನು**
**ಕೂಡಲ ಸಂಗಮ ದೇವಾ, ನಿಮ್ಮ ಶರಣರು ಎನ್ನ ಪಾವನ ಮಾಡಿದ**
**ಪರಿಣಾಮವ ಅಂತಿಂತೆನಲಮ್ಮದೆ ನಮೋನಮಃ ಎನುತಿರ್ದೆನು.**

ನನ್ನಂತರಂಗದಲ್ಲಿ ಜ್ಞಾನಿ ಪ್ರಭುದೇವರನ್ನು ಕಂಡೆನು; ನನ್ನ ಮನದ ಮೊನೆಯಲ್ಲಿ ಕರ್ಮನಿಷ್ಠ ಚೆನ್ನಬಸವಣ್ಣನನ್ನು ನೋಡಿದೆನು; ನನ್ನ ಆತ್ಮನಲ್ಲಿ ಮಡಿವಾಳಯ್ಯನನ್ನು ಕಂಡೆನು; ಹೊರಗೂ ಒಳಗೂ ಎಂಬ ಭೇದ ಭಿನ್ನವ ಮಾಡದೆ ನಾನು ನಡೆದ ಕಾರಣ ಕೂಡಲ ಸಂಗಮ ದೇವಾ, ನಿಮ್ಮ ಶರಣರು ನನ್ನನ್ನು ಪುನೀತನನ್ನಾಗಿ ಮಾಡಿದ ಫಲವು ಹೀಗೆ ಹಾಗೆ ಎನ್ನುವ ಧೈರ್ಯವಿಲ್ಲದೆ ಅವರಿಗೆ ನಮಸ್ಕರಿಸುವೆನು!

**೧೦೫೫ ಎಮ್ಮವರಿಗೆ ಸಾವಿಲ್ಲ; ಎಮ್ಮವರು ಸಾವರಿಯರು;**
**ಸಾವೆಂಬುದು ಸ್ವಯವಲ್ಲ.**
**ಲಿಂಗದಲ್ಲಿ ಉದಯವಾದ ಲಿಂಗೈಕ್ಯಂಗೆ**
**ಆ ಲಿಂಗದಲ್ಲಿಯಲ್ಲದೆ ಬೇರೆ ಮತ್ತೊಂದೆಡೆಯುಂಟೆ,**
**ಕೂಡಲ ಸಂಗಮ ದೇವ?**

ನಮ್ಮ ಶರಣರಿಗೆ ಸಾವು ಇಲ್ಲ; ಅವರು ಸಾವನ್ನು ತಿಳಿಯಲಾರರು; ಅವರಿಗೆ ಸಾವು ಸಮೀಪಿಸಿಲ್ಲ; ಲಿಂಗದಲ್ಲಿ ಉದ್ಭವಿಸಿದವರಿಗೆ ಮತ್ತು ಆ ಲಿಂಗದಲ್ಲಿಯೇ ಐಕ್ಯರಾಗುವವರಿಗೆ ಮರಣವೆಂಬುದು ಬೇರಿಲ್ಲ; ಅವರು ಮತ್ತೆಲ್ಲಿಯೂ ತಮ್ಮ ಅಸುವ ಬಿಡಲಾರರು; ಕೂಡಲ ಸಂಗಮ ದೇವ !

**೧೦೫೬ ಐದುದೇ ಬ್ರಹ್ಮನ ಕಪಾಲ ಕರದಲ್ಲಿ?**
**ಐದುದೇ ವಿಷ್ಣುವಿನ ನಯನ ಪಾದದಲ್ಲಿ?**
**ಐದುದೇ ಕಾಮನ ಸುಟ್ಟ ವಿಭೂತಿ ಮೈಯಲ್ಲಿ?**
**ಐದುದೇ ಕಾಲನ ಸುಟ್ಟ ಕಿಡಿಗಣ್ಣೆ ನೊಸಲಲ್ಲಿ?**
**ಇದಕ್ಕೆ ಮುಖ ಮೂದಲೇ ಕಯ್ಯಾ, ಕೂಡಲ ಸಂಗಮದೇವಾ.**

ಲೋಕ ಕಲ್ಯಾಣಿ ಶಿವನು ಬ್ರಹ್ಮನ ತಲೆಯನ್ನು ರುಂಡಮಾಲೆ ಮಾಡಿ ಧರಿಸಿದನು; ವಿಷ್ಣುವಿನ ಕಣ್ಣು ಶಿವನಪಾದಗಳಿಗೆ ಬಿಲ್ವವಾಗಿ ಅರ್ಪಿತವಾಯಿತು; ಕಾಮನ ಸುಟ್ಟ ಬೂದಿಯು ವಿಭೂತಿಯಾಯಿತು; ಕಾಲಾಂತಕನನ್ನು ಸುಟ್ಟ ಅಗ್ನಿನೇತ್ರವು ಶಿವನ ಹಣೆಯಲ್ಲಿ ನಿಂತಿದೆ. ಹೀಗಿದ್ದ ಕಾರಣ ಲಿಂಗಮುಖವು ಹೀಗೆ ಹಾಗೆ ಎಂದು ನಿಂದಿಸುವುದು ಕಡು ಮೂರ್ಖತನ ಕೂಡಲ ಸಂಗಮ ದೇವಾ !

**೧೦೫೭ ಒಲಿದು ಬಲ್ಲಹ ಬಿಡಲು ಹೊಲಗೇರಿಯೆಂಬ ಹೆಸರುಂಟೆ ?**
**ಅಯ್ಯಾ, ಲಿಂಗವಿರ್ದ ಭಕ್ತನ ಮನೆ ಕೈಲಾಸವೆಂದು ನಂಬಬೇಕು.**

**ಲೋಕದ ಡಂಬಕರ ಮಾತು ಬೇಡ;**
**ಕೂಡಲ ಸಂಗನ ಶರಣರಿದ್ದುದೇ ಕೈಲಾಸ!**

ಎಲ್ಲವನೂ ಬಲ್ಲ ವೀರ ಲಿಂಗವು ಒಲಿದು ಬಂದು ತನ್ನ ಪಾದ ಧೂಳವನ್ನು ಧರೆಯಲ್ಲಿ ಬಿಟ್ಟು ಹೋಗಲು ಇಲ್ಲಿ ಹೊಲಗೇರಿಯೆಂಬುದೇನೂ ಇಲ್ಲ. ಎಲ್ಲವೂ ಪವಿತ್ರ ಯಾತ್ರಾಸ್ಥಳವು; ಲಿಂಗವು ವಾಸವಾಗಿದ್ದ ಭಕ್ತನ

ಮನೆಯೇ ಕೈಲಾಸವು; ಡಾಂಭಿಕರಗೆ ಮಾತು ಕೇಳಲು ನನಗೆ ಇಚ್ಛೆಯಿಲ್ಲ; ಕೂಡಲ ಸಂಗನ ಶರಣರ ಸನ್ನಿಧಿಯೇ ಕೈಲಾಸವು.

೧೦೫೮ ಕಂಗಳ ಪೂಜೆ ಲಿಂಗಕರ್ಪಿತ !

ಮನವುಟ್ಟಿದಾರೋಗಣೆಯೆಂಬುದೇನೋ ?
ಸಂಕಲ್ಪವಿರಹಿತ ನಿಮ್ಮ ಶರಣಂಗೆ, ಆಗಮವಿರಹಿತ
ಶರಣನಲ್ಲದೇನೋ ?

ಶರಣಂಗೆ ಸೀಮೆಯೆಂಬುದೇನೋ ?
ಕಾಯದ ಕೈ ಲಿಂಗಾರ್ಪಿತ ಅದು ಕಿಲ್ಬಿಷ,
ಕೂಡಲ ಸಂಗಮ ದೇವಾ

ಕಣ್ಣು ತುಂಬ ದಯಾಮಯ ಮೂರ್ತಿಯನ್ನು ನೋಡುವ ಹರುಷದ ನೋಟವು ಲಿಂಗಕ್ಕೆ ಒಪ್ಪಿಸಿದ್ದಾಗಿದೆ; ಮನಸ್ಸು ಮೆಚ್ಚಿದ ನೈವೇದ್ಯವೆಂಬುದು ಏನು? ನಿರಿಚ್ಛಾಸಕ್ತರಾದ ನಿಮ್ಮ ಶರಣರು ಜನನ ಮರಣದಿಂದ ತಪ್ಪಿಸಿಕೊಂಡು ಸೀಮಾತೀತರಾಗಿರುತ್ತಾರೆ; ಕೇವಲ ಕೈಮುಗಿಯುವುದು ನರಕ ಸಮಾನ ಕೂಡಲ ಸಂಗಮ ದೇವಾ.

೧೦೫೯ ಕಲ್ಲೊಳಗೆ ಹೊನ್ನುಂಟು, ಉದಕದೊಳಗೆ ಅಗ್ನಿ
ಯುಂಟು,

ಹಾಲೊಳಗೆ ತುಪ್ಪವುಂಟು, ಅಂತರ್ಯಾಮಿಯಲ್ಲಿ ಶಿವನಿ—
ಹನು

ಇದೇನು ಕತ್ತಲೆ ಕಾಣಬಾರದು:
ತೋರಬಲ್ಲ ಗುರು ಸುಳಿಯನು, ಕೂಡಲ ಸಂಗಮ ದೇವಾ

ಕಲ್ಲಿನಲ್ಲಿ ಬಂಗಾರವಿದೆ; ನೀರಿನಲ್ಲಿ ಬೆಂಕಿಯಿದೆ; ಹಾಲಿನಲ್ಲಿ ತುಪ್ಪವುಂಟು; ಇವುಗಳು ಆಯಾ ವಸ್ತುಗಳಲ್ಲಿ ಸಮ್ಮಿಲಿತವಾಗಿರುವಂತೆ ಅಂತರಾತ್ಮನಲ್ಲಿ ಶಿವನು ಕೂಡಿಕೊಂಡಿರುತ್ತಾನೆ; ಆದರೆ ಅಜ್ಞಾನದ ಕತ್ತಲೆ ಕವಿದ ಕಾರಣ ಶಿವನು ನಮಗೆ ಕಾಣುವುದಿಲ್ಲ; ಅಂತರಾತ್ಮನಲ್ಲಿ ಸತಿ ನೆರೆದಿರುವ

ಶಿವನನ್ನು ತೋರಿಸುವ ಸದ್ಗುರುವಿನ ಬರುವುವಿಲ್ಲದಾಗಿದೆ ಕೂಡಲಸಂಗಮ ದೇವಾ !

**೧೦೬೦ ಕಾಣಕಾಣುತ್ತ ಕಡೆಗಣಿಸಿ ಅರಸುವ ಮತಿಭ್ರಷ್ಟ**
**ನಾನು, ಲಿಂಗಯ್ಯಾ,**
**ತನು ಲೋಭ, ಮನ ಲೋಭ, ಧನ ಲೋಭ ಮುಂದು**
**ಗೆಡಿಸಿ ಕಾಡಿತ್ತೆನ್ನ**
**ತನು ಮನ ಧನವ ಶಿವಂಗೆ ನಿವೇದಿಸಿದ ಭಕ್ತರ ಮನೆಯ**
**ಮಗ ನಾನಯ್ಯ ಕೂಡಲ ಸಂಗಮ ದೇವಾ.**

ತನು ಮನ ಧನಗಳ ದುರಾಸೆ ಬಲವಾಗಿ ನಿಮ್ಮನ್ನು ನೋಡಿಯೂ ನೋಡದಂತೆ ನಟಿಸಿ ತಿರಸ್ಕರಮಾಡಿ ಆನಂತರ ಹುಡುಕುತ್ತಿರುವ ತಿಳಿಗೇಡಿ ನಾನು ಕೂಡಲ ಸಂಗಮ ದೇವಾ, ನಾನು ನಿಮ್ಮ ಭಕ್ತರ ಮಗನು.

**೧೦೬೧ ಗುಬ್ಬಿ ಹೆರವರ ಮನೆಯ ತನ್ನ ಮನೆಯೆಂಬಂತೆ**
**ಧರೆ ಧನ ವನಿತೆಯರು ಎನ್ನವರು ತನ್ನವರೆಂದು**
**ಹೋರಿ ಹೋರಿ ಸಾವುತ್ತಿದೆ ಜೀವ.**
**ಸರ್ವ ಕರ್ತ, ಕೂಡಲ ಸಂಗಯ್ಯನೊಬ್ಬನೆ ಎಂದರಿಯದೆ**
**ಕೆಟ್ಟರು.**

ಏನೂ ಅರಿಯದ ಜ್ಞಾನ ಶೂನ್ಯವಾದ ಗುಬ್ಬಿಯು ಪರರ ಮನೆಯು ತನ್ನದೆ ಎಂದು ಹೇಳುವ ಹಾಗೆ ಈ ಜಗತ್ತು ಈ ಸಂಪತ್ತು ಸತಿ-ಸುತೆಯರು ನನ್ನವರೆಂದು ನಂಬಿ ನೆಚ್ಚಿಕೊರಗಿ ಸಾಯುತ್ತಲಿದೆ ನನ್ನ ಜೀವ; ಸರ್ವ ಕರ್ತೃ ಕೂಡಲ ಸಂಗಮನೆಂಬುದನ್ನು ನಂಬದೆ ಇರುವ ಕಾರಣ ಲೋಕದ ಜನರು ಕೆಟ್ಟರು.

**೧೦೬೨ ಜಗತ್ತೆಂಬ ಜಂತ್ರದ ಹಾಹೆಗೆ ಅಜ್ಞಾನವೆಂಬ ತುಷವ**
**ತೊಡಿಸಿ**
**ಅಹಂ ಮಮತೆಯೆಂಬ ಸೊಕ್ಕನಿಕ್ಕಿ ಬಾರದ ಬಟ್ಟೆಯಲ್ಲಿ**
**ಬರಿಸಿ**

**ಕಾಣದ ದುಃಖವ ಕಾಣಿಸಿ ಉಣ್ಣದ ಅಪೇಯವನುಣಿಸಿ**
**ಮಾರಾರಿ ವಿರೋಧಿಸಿದೆ, ನೀ ಕೂಡಲ ಸಂಗಮದೇವಾ!**

ಜಗತ್ತೆಂಬ ಯಂತ್ರದ ಅಚ್ಚಿಗೆ ಅಜ್ಞಾನವೆಂಬ ಗಾಲಿಯನ್ನು ಹಾಕಿ ನನಗೆ 'ಅಹಂ' ಎನ್ನುವಂತ ಗರ್ವವನ್ನೂ ಮತ್ತು ಮಾಯಾ ಮಮತೆಯ ಸೊಕ್ಕಿನ ಗಾಳಿ ಬೀಸಿ ನೀಚ ಯೋನಿಗಳಲ್ಲಿ ಹುಟ್ಟಿಸಿದ್ದಲ್ಲದೆ ಅನುಭೋಗಿಸಲು ಕ್ಲಿಷ್ಟವಾದ ದುಃಖಗಳನ್ನು ಕೊಟ್ಟು ಕುಡಿಯಬಾರದಂಥ ಪೇಯಗಳನ್ನು ಕುಡಿಸಿ ದುಷ್ಟ ಶಕ್ತಿಯ ವೈರಿಯಾದ ನೀ, ಕೂಡಲ ಸಂಗಮದೇವಾ, ಹರುಷಗೊಂಡಿಲ್ಲ.

**೧೦೬೩ ತನುಮುಟ್ಟಿ ಮನಮುಟ್ಟದೆ ದೂರವಾದರಯ್ಯಾ ಬೆಲೆವೆಣ್ಣಿನಂತೆ!**
**ಸೂಳೆ ತನು ಮುಟ್ಟಿ ಅಪ್ಪುವಳಲ್ಲದೆ ಮನಮುಟ್ಟಿ ಅಪ್ಪ-ಳಾಗಿ,**
**ಆಚಾರವನರಿಯವ ಅತಿ ಮರುಳುಗಳು ಸುಖವ-ನೆತ್ತಬಲ್ಲರು,**
**ಕೂಡಲ ಸಂಗಮದೇವಾ?**

ಸೂಳೆಯು ದೇಹವನ್ನು ಅಪ್ಪಿಕೊಂಡು ಸುಖವ ಪಡೆವಳು; ಆದರೆ ಮನಸ್ಸನ್ನು ಅವಳು ಮುಟ್ಟುವುದಿಲ್ಲ; ಹಾಗೆ ಆಚಾರವನ್ನು ತಿಳಿಯದ ಹುಚ್ಚ ಭಕ್ತರು ಲಿಂಗಾಕಾರದ ಪ್ರತಿಮೆಯನ್ನು ಕೈಯಲ್ಲಿಟ್ಟುಕೊಂಡು ಪೂಜಿಸುವರು; ಅವರೂ ಆ ಸೂಳೆಯಂತೆ ನಿನ್ನಂತರಂಗವನ್ನರಿಯರಾಗಿ ಅವರಿಗೆ ನಿಜಸುಖವು ಲಭಿಸುವುದಿಲ್ಲ; ಕೂಡಲ ಸಂಗಮದೇವಾ!

**೧೦೬೪ ತೊಂಡಿಲ ಮುಡಿದುಕೊಂಡು ತಮ್ಮ ತಮ್ಮ ಗಂಡರ ಹಿಂದುಗೊಂಡು**
**ನಾಡು ನಿಂಡರ ನೋಡುತ್ತಲಿ ಇಂದು ನಮ್ಮ ಹುಲಿ ಹೋಯಿತ್ತು;**
**ಬನ್ನಿರೇ! ಗಂಡರ ಗಂಡನಪ್ಪ ಕೂಡಲ ಸಂಗ ಕಂಡರೆ ಮೂಗ ಕೊಯ್ವ.**

ಭಕ್ತರು ಪೂಜಾಸಾಮಗ್ರಿಗಳನ್ನು ಹಿಡಿದುಕೊಂಡು ಶರಣರ ಬೆನ್ನ ಹಿಂದೆ ಜಂಬದ ಕೋಳಿಯ ಹಾಗೆ ಹೋದರು; ಆದರೆ ಕಂಡ ಕಂಡ ದೇವರಿಗೆ ಪೂಜೆಮಾಡಿ-ನಮಿಸಿದರು; ನಿಮ್ಮ ಈ ಹುಚ್ಚುತನವನ್ನು ಗಂಡರ ಗಂಡನಾದ ಕೂಡಲ ಸಂಗಮ ದೇವರು ನೋಡಿದರೆ ನಿಮ್ಮ ಮೂಗು ಕೊಯ್ಯುತ್ತಾನೆ.

**೧೦೬೫ ಭಕ್ತನ ಕಾಯುವ ಜಂಗಮ ಧರಿಸಿಪ್ಪ ನೋಡಾ.**
**ಜಂಗಮದ ಪ್ರಾಣವ ಭಕ್ತಧರಿಸಿಪ್ಪ ನೋಡಾ.**
**ಭಕ್ತನಲ್ಲಿ ಭಕ್ತ ಜಂಗಮವೆರಡೂ ಸನ್ನಿಹಿತ.**
**ಜಂಗಮದಲ್ಲಿ ಭಕ್ತಜಂಗಮವೆರಡೂ ಸನ್ನಿಹಿತ;**
**ಜಂಗಮಕ್ಕಾದರೂ ಭಕ್ತಿಯೇ ಬೇಕು.**
**ಭಕ್ತಗಂತೂ ಭಕ್ತಸ್ಥಲ ಬೇಕು.**
**ಆ ಭಕ್ತನ ಅರ್ಥಪ್ರಾಣ ಅಭಿಮಾನಕ್ಕೆ ತಾನೇ ಕರ್ತನೆಂದು ಬಂದ ಜಂಗಮ**
**ಆ ಭಕ್ತನ ಮನೆಗೆ ಕರ್ತನಾಗಿ ಹೊಕ್ಕು**
**ತನು ಮನ ಧನಂಗಳನೆಲ್ಲವನೊಳಕೊಂಡು**
**ಆ ಭಕ್ತನ ಪಾವನ ಮಾಡ ಬಲ್ಲಡೆ ಆತ ಜಂಗಮವೆಂಬೆ**
**ಆ ಜಂಗಮದ ಗಳಗರ್ಜನೆಯ ಸೈರಿಸಿ ಮುಡುಹಿಂಗೆ**
**ಮುನ್ನೂರು ಪಟ್ಟವ ಕಟ್ಟುತಿರ್ದರೆ ಆತ ಭಕ್ತನೆಂಬೆ**
**ತನ್ನ ಮಠಕ್ಕೆ ತಾ ಬಹಡೆ ಮುನಿಸುಂಟೆ ?**
**ಕೂಡಲ ಸಂಗನ ಶರಣರ ಮನೆಯ ಬಾಗಿಲಗಾಹಿಗನಾಗಿ,**
**ಗೃಹದ ಕರ್ತರು ಗೃಹಕ್ಕೆ ಬಹಡೆ ಬೇಕೆನ್ನೆ ಬೇಡೆನ್ನೆ**

ಭಕ್ತನು ಮತ್ತು ಜಂಗಮರ ಬಾಂಧವ್ಯವು ಮಜ್ಜಿಗೆಯೊಳಗಿನ ಬೆಣ್ಣೆ ಇದ್ದ ಹಾಗೆ; ಅವರು ಸತಿ-ಪತಿಯರಿದ್ದ ಹಾಗೆ; ಭಕ್ತಿಯ ಮೂಲರೂಪವೇ ಜಂಗಮನು; ಭಕ್ತನಿಗೆ ಭಕ್ತಿಯೇ ಕಣ್ಣುಗಳು; ಕಾರಣ ಭಕ್ತನ ಪ್ರಗತಿ ಜಂಗಮನ ಪ್ರಗತಿ; ಜಂಗಮನ ಬಿರುನುಡಿಗಳನ್ನು ಸೈರಿಸುವುದೇ ಭಕ್ತನ ಪ್ರಗತಿಯ ಮಾರ್ಗ; ಹೀಗೆ ಭಕ್ತನಿದ್ದಲ್ಲಿ ಜಂಗಮ ಬಂದರೆ ಅದಕ್ಕೇಕೆ

ಸಿಟ್ಟು, ಕೂಡಲ ಸಂಗನ ಶರಣರ ಮನೆಬಾಗಿಲ ಕಾಯುವವನಾದ ನಾನು ಮನೆಯ ಒಡೆಯ ಶರಣ ಬಂದರೆ ಬಾ ಎನ್ನಲಾರೆ, ಹೋಗೆನ್ನಲಾರೆ!

**೧೦೬೬ ಭಕ್ತಿಹೀನನ ದಾಸೋಹವ ಸದ್ಭಕ್ತರು ಸವಿಯರು.**
**ಬೇವಿನ ಹಣ್ಣು ಕಾಗೆಗೆ ಇನಿದಲ್ಲದೆ ಕೋಗಿಲೆಗೆ ಮೆಲ-ಬಾರದು.**

**ಲಿಂಗಸಂಬಂಧವಿಲ್ಲದವರ ನುಡಿ**
**ಕೂಡಲ ಸಂಗನ ಶರಣರಿಗೆ ಸಮನಿಸದು.**

ಡಾಂಭಿಕ ಭಕ್ತರು ಮಾಡಿಸಿದ ದಾಸೋಹಕ್ಕೆ ಸದ್ಭಕ್ತರು ಬರುವುದಿಲ್ಲ; ಆದಕಾರಣ ಬೇವಿನ ಹಣ್ಣು ಕಾಗೆಗೆ ರುಚಿಯಾದೀತೆ ಹೊರತು ಕೋಗಿಲೆಗೆ ಮಧುರವೆನಿಸಲಾರದು;ಅಂತೆಯೆ ಲಿಂಗಧಾರಣೆ ಮಾಡದೇ ಇದ್ದವರ ಮಾತುಗಳು ಸಹಿತ ಕೂಡಲ ಸಂಗನ ಶರಣರಿಗೆ ನಿಷೇಧವಾಗಿವೆ !

**೧೦೬೭ ಭವವಿಲ್ಲದ ಭಕ್ತನ ಪರಿಯ ನೋಡಾ;**
**ಮನಃಪ್ರಾಣಮುಕ್ತ, ಭವವಿರಹಿತ ಒಡಲಿಲ್ಲದ ಜಂಗ-ಮದ ಪರಿಯ ನೋಡಾ.**
**ಸಿಡಿಲು ಮಿಂಚಿನ ಬೆಳಗನೊಂದೆಡೆಯಲ್ಲಿ ಹಿಡಿಯ-ಲುಂಟೆ ?**
**ಉಭಯವೊಂದಾದವರ ಕಂಡಡೆ ನೀನೆಂಬೆ,**
**ಕೂಡಲ ಸಂಗಮದೇವಾ.**

ಭವಸಾಗರ ದಾಟಿದ ಭಕ್ತನು ಇರುವ ರೀತಿಯನ್ನು ನೋಡು; ಜೀವನ್ಮುಕ್ತನಾದ ಜಂಗಮನಿಂತಿರುವ ರೀತಿಯನ್ನು ಪರಿಕಿಸಿನೋಡು; ಸಿಡಿಲನ್ನು ಹಾಗು ಮಿಂಚಿನ ಪ್ರಕಾಶವನ್ನುಎರಡನ್ನೂ ಕೂಡಿಸಿ ಒಂದೇಸ್ಥಳದಲ್ಲಿಡಲು ಆಗುವುದಿಲ್ಲ; ಆದರೆ ಕೂಡಲ ಸಂಗಮ ದೇವಾ, ಅಂತರಂಗ ಮತ್ತು ಬಹಿರಂಗ-ನಡೆ ನುಡಿಗಳು ಒಂದೆಯಾಗಿದ್ದವರನ್ನು ಕಂಡರೆ ಅವರು ನೀನೆ ಎಂದು ನಾನು ನಂಬುವೆ ಕೂಡಲ ಸಂಗಮ ದೇವಾ !

೧೦೭೮ ಭವಿಯ ಸಂಗವ ನೊಲ್ಲೆ ನೊಲ್ಲೆ;
ಆ ಸಂಗದಿಂದೆ ಅನಂತ ಘೋರ ನರಕವನುಣಿಸುವುದಾಗಿ!
ಅನ್ಯ ದೈವ ಭಜನೆಯ ನೊಲ್ಲೆ ನೊಲ್ಲೆ;
ಆ ಭಜನೆಯಿಂದೆ ಅನಂತ ಘೋರ ನರಕವನುಣಿಸುವು-
ದಾಗಿ!
ಉಭಯ ಜಡತೆಯ ಹೊದ್ದದೆ ಹಿಂಗಿನಿಂದ ಕೂಡಲ
ಸಂಗಮದೇವ.

ಭವಿಯ ಸಹವಾಸ-ಮಿತ್ರತ್ವವನ್ನು ನಾನು ಒಲ್ಲೆನು; ಅವರು ಸಹ ವಾಸದ ಫಲವಾಗಿ ಅನಂತ ಕೋಟಿ ಬಲ ಜನ್ಮತಾಳಿ ಸಂಸಾರ ಮಾಡಬೇಕಾಗುತ್ತದೆ, ನಿಮ್ಮನ್ನು ಬಿಟ್ಟು ಬೇರೆ ದೇವರನ್ನು ಭಜಿಸಲು ನನಗೆ ಮನಸಿಲ್ಲ, ಆ ಭಜನೆಯಿಂದಲೇ ನಾನು ಅತಿ ಭಯಾನಕ ನರಕದಲ್ಲಿ ಮುಳುಗಿ ಏಳಬೇಕಾಗುತ್ತದೆ; ಈ ನಾನು ಅನುಭವಿಸುತ್ತಿರುವ ಸಂಕಷ್ಟಗಳು ಪೂರ್ವ ಜನ್ಮದ ಕರ್ಮಫಲವಾಗಿ.

೧೦೭೯ ಮಾಡಿ ಮಾಡಿಸಿಕೊಂಬವೆರಡರ ನಿಲುಕಡೆ ಒಂದೇ;
ಗುರುವೊಂದೇ, ಲಿಂಗವೊಂದೇ, ಜಂಗಮವೊಂದೇ,
ಪ್ರಸಾದವೊಂದೇ!
ಒಂದಾದಲ್ಲಿ ಎರಡಾಗಿ ಮಾಡುವ ಭಕ್ತ ಕೂಡಲ ಸಂಗಮ
ದೇವಾ.

ಉಪಕಾರವನ್ನು ಮಾಡಿ ಪ್ರತ್ತ್ಯುಪಕಾರ ಪಡೆಯುವುದು ಒಂದೇ ಪ್ರಕಾರದ ರೀತಿಗಳು; ನಾವು, ಗುರು, ಲಿಂಗ, ಜಂಗಮ ಮತ್ತು ಪ್ರಸಾದಗಳೆಂಬುವು ಬೇರೆ ಬೇರೆಯಲ್ಲ ಒಂದೇ ಎಂದು ತಿಳಿದರೆ, ಆ ಸಂದರ್ಭದಲ್ಲಿ ಎರಡು ಭಾವವನ್ನು ಕಲ್ಪಿಸಿಕೊಡುವ ಭಕ್ತನು ನೀನೆ ಇರುವಿ ಕೂಡಲ ಸಂಗಮ ದೇವಾ!

೧೦೮೦ ಮರೀಚಿಯೊಳಡಗಿದ ಬಿಸಿಲಿನಂತಿದ್ದಿತ್ತು,
ಕ್ಷೀರದೊಳಗಣ ತುಪ್ಪದಂತೆ ಇದ್ದಿತ್ತು,

**ಚಿತ್ರಕನೊಳಡಗಿದ ಚಿತ್ರಪಟದಂತಿದ್ದಿತ್ತು,**
**ಆಲಿಯೊಳಗಣ ತೇಜದ ಗೋಪ್ಯದಂತಿದ್ದಿತ್ತು,**
**ನುಡಿಯೊಳಡಗಿದ ಅರ್ಥದಂತಿದ್ದಿತ್ತು**
**ಕೂಡಲ ಸಂಗಯ್ಯಾ ನಿಮ್ಮ ನಿಲವು.**

ಕಿರಣಗಳಲ್ಲಿ ಅವಿಭಾಜ್ಯವಾಗಿರುವ ಬಿಸಿಲಿನ ಹಾಗೆ, ಹಾಲಿನೊಳಗೆ ಕೂಡಿಕೊಂಡಿರುವ ತುಪ್ಪದಂತೆ, ಚಿತ್ರಗಾರನ ಹೃದಯದಲ್ಲಿ ಪ್ರತಿಬಿಂಬಿಸಿದ ಚಿತ್ರದಂತೆ, ಕಣ್ಣುಗಳಲ್ಲಿ ಅನುಪಮವಾಗಿ ಬೆರೆತ ಬೆಳಕಿನಂತೆ ಮತ್ತು ಮಾಡಿನಲ್ಲಿ ಗೌಪ್ಯವಾಗಿರುವ ಅರ್ಥದಂತೆಯೂ ಕೂಡಲ ಸಂಗಮದೇವಾ, ನೀವು ಎಲ್ಲಡೆಯಲ್ಲಿಯೂ ಹೊಂದಿಕೊಂಡಿರುವಿರಿ!

**೧೦೭೧ ಶರಣ ಸಂಬಂಧವನರಿದ ಬಳಿಕ ಕೂಡೆ ಭವಿಗಳ ಬೆರಸಲಾಗದು**

**ಬ್ರಹ್ಮೇತಿ, ಭ್ರೂಣಹತಿ, ವೈತರಣೆ, ದುರ್ಗತಿ,**
**ಪಂಚಮಹಾಪಾಪದಿಂದಧಿಕ ನೋಡಾ**
**ಅಳುಪಿ ಭವಿಯೊಡನುಂಡರೆ ಭಕ್ತನಲ್ಲ, ಕೂಡಲ ಸಂಗಮದೇವ**

ಶರಣರ ಅನುಯಾಯಿಗಿದ್ದು ಅವರ ನಿಕಟ ಬಾಂಧವ್ಯ ಬೆಳೆದ ನಂತರ ಪಾಖಂಡಿಗಳ ಸಖ್ಯವನ್ನು ಮಾಡುವುದು ಅತಿ ಹೇಯವಾದದ್ದು; ಬ್ರಾಹ್ಮಣನನ್ನು, ಗರ್ಭವನ್ನು ನಾಶಮಾಡಿದ ಪಾಪದಿಂದಾಗುವ ದುರ್ಗತಿಗಿಂತಲೂ, ಪಂಚಮಹಾಪಾಪಗಳಿಗಿಂತಲೂ ಅದು ಹೀನವಾದದು;ಭವಿಗಂಜಿ ಅವನೊಡನೆ ಊಟವನ್ನು ಮಾಡಿದರೆ ಅವನು ಭಕ್ತನೇ ಅಲ್ಲ; ಕೂಡಲ ಸಂಗಮದೇವಾ !

**೧೦೭೨ ಸಮ ಸುಖ ಸಂಧಾನವಿಲ್ಲದ ಸಂಗ ನೋಡಾ !**
**ತಾಗು ನಿರೋಧವಿಲ್ಲದ ಸಂಗ ನೋಡಾ !**
**ಆವಂಗೆ ಆವಂಗೆ ಅನುಭಾವವಿಲ್ಲದ ಸಂಗ ನೋಡಾ!**
**ಕೂಡಲ ಸಂಗಮದೇವಾ, ಲಿಂಗೈಕ್ಯ ಸಂಗನೋಡಾ !**

ಯಾವದೇ ಪ್ರಕಾರದ ರಾಯಭಾರತ್ವವಿಲ್ಲದೆ ದೊರೆತ ಸದಾಸುಖ ಮಯ ಸಹವಾಸವನ್ನು ನೋಡು; ಅಡೆತಡೆಗಳಿಲ್ಲದೆ, ಪರಿಶ್ರಮಮಾಡದೆ ಲಿಂಗೈಕ್ಯನಾಗುವ ಈ ಸ್ನೇಹ ಯಾರಿಗೆ! ಯಾರಿಗೆ! ಕೂಡಲ ಸಂಗಮ ದೇವಾ!

**೧೦೭೩ ಸಮಸ್ತ ಕತ್ತಲೆಯ ಮುಸಕವ ಕಳೆದಿಪ್ಪ ಇರವ ನೋಡಾ!**

**ಬೆಳಗಿಂಗೆ ಬೆಳಗು ಸಿಂಹಾಸನವಾಗಿ,**
**ಬೆಳಗು ಬೆಳಗನೆ ಕೂಡಿದ ಕೂಟನ ಕೂಡಲ ಸಂಗಯ್ಯ ತಾನೇ ಬಲ್ಲ**

ಎಲ್ಲೆಡೆಗೂ ಹಬ್ಬಿಕೊಂಡಿರುವ ಕತ್ತಲೆಯನ್ನು ಹರಿದು ಹಾಕಿ ಪ್ರಭಾ ಮಣಿಯಾಗಿ ನೆಲೆಸಿರುವ ಪರಿ ನೋಡು !, ಬೆಳಕಿಗೆ ಬೆಳಕೇ ಸಿಂಹಾಸನ ವಾಗಿ ಬೆಳಕಿನೊಡನೆ ಬೆಳಕು ಸೇರಿ ಉಂಟಾದ ಒಕ್ಕೂಟದ ರೂಪಾತ್ಮನು ಕೂಡಲ ಸಂಗಮ ದೇವರೆ ಅಲ್ಲದೆ ಇನ್ನಾರು ?

**೧೦೭೪ ಹರನ ಕೊರಲೊಳಿರ್ದ ಕರೋಟಿ ಮಾಲೆಯ ಶಿರದ ಲಿಖಿತವ ಕಂಡು**

**ಮರುಳ ತಂಡಂಗಳೋದಿ ನೋಡಿ,**
**ಇವನಜ, ಇವ ಹರಿ, ಇವ ಸುರಪತಿ, ಇವ ಧರಣೀಂದ್ರ ಇವನೆಂತಕನೆಂದು**
**ಹರುಷದಿಂದೋದಿ ನೋಡಿ ಸರಸವಾಡುವುದ ಹರ ನೋಡಿ ಕಂಡು,**
**ಮುಗುಳು ನಗೆ ನಗುತಿರ್ದನು ನಮ್ಮ ಕೂಡಲ ಸಂಗಮದೇವ.**

ಕೈಲಾಸಪತಿ ಶಂಕರನ ಕೊರಳಲ್ಲಿ ಶೋಭಿಸುತ್ತಿರುವ ರುಂಡಮಾಲೆ ಯಲ್ಲಿರುವ ಶಿರಗಳನ್ನು ಮತ್ತು ಅವುಗಳ ಹಣೆಯಲ್ಲಿ ಬರೆದ ಬರಹವನ್ನು ಹುಚ್ಚರ ತಂಡವಾದ ಗಣಂಗಳು ಓದಿ ನೋಡಿ, ಇವನು ಅಜನು, ಇವನು

ಹರಿಯು ಎಂದು ಮುಂತಾಗಿ ತಿಳಿದುಕೊಂಡು ಮುದದಿಂದ ಕುಣಿಯುತ್ತಿರು ವದನ್ನು ಶಂಕರನು ಕಂಡು ಮುಗುಳು ನಗೆ ನಗುತ್ತಿದ್ದನು; ಕೂಡಲ ಸಂಗ ಮದೇವಾ !

೧೦೭೫ ಹೆಣವನಿಕ್ಕಿ ನೆಲಗಟ್ಟ ಕಟ್ಟಿದಂತೆ ಆಯಿತ್ತೆನ್ನ ಕಾಯ ಗುಣ !

ಅಹಂಕಾರ ಪ್ರಬೋಧೆಗಳೇಕಯ್ಯಾ?
ಕಾಮ ಕ್ರೋಧ ಮದ ಮತ್ಸರಂಗಳ ನಿಕ್ಕಿ
ಎನ್ನ ಮಾಡಿದಿರಿ ಎನ್ನ ಭಾಧಿಸಲೆಂದು ಲಿಂಗಯ್ಯ ತಂದೆ;
ಆದಿ ವ್ಯಾಧಿಗಳೆಲ್ಲವ ಕಳೆದು ನಿರ್ವಾಣವಪ್ಪ ಪದವ ಕರುಣಿಸಯ್ಯಾ,
ಕೂಡಲ ಸಂಗಮದೇವಾ.

ಹೆಣವನ್ನು ಹುಗಿದು ಅದರ ಮೇಲೆ ಕಟ್ಟೆಯನ್ನು ಕಟ್ಟಿದ ಹಾಗೆ ನನ್ನ ದೇಹದಲ್ಲಿರುವ ಅಂತರಾತ್ಮನ ಸ್ಥಿತಿಯಾಗಿದೆ, ಅಹಂಕಾರ ಮತ್ತು ಸಿಟ್ಟುಗಳು ನನಗೇಕೆ ? ದೇವಾ ಕಾಮ ಕ್ರೋಧಾದಿಗಳನ್ನು ನನ್ನಲ್ಲಿ ತುಂಬಿ ನನ್ನನ್ನು ಕಾಡಲು ಅಪ್ಪಣೆ ಇತ್ತಿರುವಿರಿ; ಹೇ ದಯಾಘನ ಆ ಎಲ್ಲ ರೋಗ ಗಳನ್ನು ಗುಣಪಡಿಸಿ ನಿರ್ವಾಣ ಹೊಂದುವ ಕೃಪೆ ಮಾಡು ಕೂಡಲ ಸಂಗಮ ದೇವಾ !

## ಏಕೋತ್ತರ ಶತಸ್ಥಲ

೧೦೭೬ ಎನಗೆ ಕುಲದೈವ, ಬಲದೈವ, ಛಲದೈವ, ಮನದೈವ, ಮನೆದೈವ

ಜಂಗಮ ಮೂರ್ತಿಯಯ್ಯಾ.
ತನು ಮೀಸಲು, ಮನಮೀಸಲು, ಧನಮೀಸಲು,
ಪ್ರಾಣಮೀಸಲು, ಜ್ಞಾನ ಮೀಸಲು,
ಕೂಡಲ ಸಂಗಮ ದೇವಾ, ನಿಮ್ಮ ಶರಣರಿಗೆ.

ನನ್ನ ಕುಲದೇವರು, ಬಲಸಂವರ್ಧಕ ದೇವರು, ಫಲದ ದೇವರು, ಆರಾಧ್ಯದೇವರು ಮತ್ತು ನನ್ನ ಮನೆಯ ದೇವರು ಜಂಗಮನೇ ಸರಿ; ಆ ನಿಮ್ಮ ಶರಣರ ಸೇವೆಗಾಗಿ, ಕೂಡಲ ಸಂಗಮದೇವಾ, ನನ್ನ ತನು ಮನ· ಧನ ಪ್ರಾಣ, ಜ್ಞಾನಗಳೆಲ್ಲವನ್ನೂ ಮುಡಿಪಾಗಿಟ್ಟಿರುವೆನು.

**೧೦೭೭ ಕುಲವಳಿದು ಫಲವಳಿದು ಮದವಳಿದು ಮತ್ಸರವಳಿದು,**
**ಆತ್ಮತೇಜವಳಿದು, ಸರ್ವ ಅಹಂಕಾರವಳಿದು,**
**ಶ್ರೀ ಮನ್ನಿಜ ಉಳಿದು, ಲಿಂಗ ಜಂಗಮವೆಂಬ**
**ಶಬ್ದವಿಡಿದು,**
**ಸಾಧ್ಯವಾಯಿತ್ತು ನೋಡಾ.**
**ತಾನಳಿದು, ತಾನುಳಿದು ಸಹಜ ಪದವಿಯಲ್ಲಿ**
**ಕೂಡಲ ಸಂಗನಲ್ಲಿ ತಾನು ತಾನಾದ**

ನನ್ನ ಕುಲವು ನಾಶವಾಗಿ, ಹಟ ಮದ ಮತ್ಸರ, ಆತ್ಮತೇಜ ಮತ್ತು ಎಲ್ಲ ದುರಹಂಕಾರವೂ ದೂರವಾಗಿ ಸತ್ಯವೆಂಬುದೊಂದೆ ನನ್ನಲ್ಲಿ ಉಳಿಯಿತು; ಆಗ ಲಿಂಗ–ಜಂಗಮರ ಧ್ಯಾನದಿಂದ ದೇಹವನ್ನು ಕಳೆದು, ಆತ್ಮನು ಚಿರಂಚಿರಂಜೀವಿಯಾಗಿ ಕೂಡಲ ಸಂಗನಲ್ಲಿ ಪರಮಾತ್ಮನಲ್ಲಿ ಪರಮಾತ್ಮನೇ ಆದನು.

## ಶೂನ್ಯ ಸಂಪಾದನೆ

**೧೦೭೮ ಅಂಗದ ಮೇಲೆ ಲಿಂಗ ಆಯುತವಾಗಿ**
**ಲಿಂಗಾರ್ಚನೆಯ ಮಾಡಿದರೆ ಭವ ಹಿಂಗದೆಂದು,**
**ಪ್ರಾಣದ ಮೇಲೆ ಲಿಂಗಸ್ವಾಯತವ ಮಾಡಿ**
**ಎನ್ನಂತರಂಗವ ಶುದ್ಧಮಾಡಿ**
**ಲಿಂಗೈಕ್ಯದ ಹೊಲಬು ತೋರಿದನಯ್ಯಾ ಚೆನ್ನ**
**ಬಸವಣ್ಣನು.**
**ಕಾಯದ ಕಳವಳ ದಾಸೋಹದ ಮುಖದಲ್ಲಲ್ಲದೆ ಹರಿ**
**ಯದೆಂದು**

**ಜಂಗಮ ಮುಖ ಲಿಂಗವಾಗಿ ಬಂದು ಎನ್ನ ರಕ್ಷಿಸಿ ಶಿಕ್ಷಿಸಿ,**
**ಎನ್ನ ಸಂಸಾರದ ಪ್ರಕೃತಿಯ ಹರಿದನಯ್ಯಾ ಪ್ರಭು ದೇವರು.**
**ಕೂಡಲ ಸಂಗಮ ದೇವರಲ್ಲಿ ಚೆನ್ನ ಬಸವಣ್ಣನ ಪ್ರಭುದೇವರ**
**ಕರುಣದಿಂದಲಾನು ಬದುಕಿದೆನು.**

ದೇಹದಲ್ಲಿ ಲಿಂಗಧಾರಣ ಮಾಡಿದರೆ ಮತ್ತು ಲಿಂಗಪೂಜೆಯನ್ನು ಮಾಡುವದರಿಂದ ನಿರ್ವಾಣ ಪದ ಸಿಗಲಾರದೆಂದು ಜೀವಾತ್ಮನಲ್ಲಿ ಲಿಂಗವನ್ನು ಆವ್ಹಾನಿಸಿಕೊಂಡು ನನ್ನಂತರಂಗವನ್ನು ಪರಿಶುದ್ಧ ಮಾಡಿಕೊಂಡೆ; ಅದರ ಫಲವಾಗಿ ಚೆನ್ನಬಸವಣ್ಣನು ಲಿಂಗೈಕ್ಯನಾಗುವ ದಾರಿಯನ್ನು ತೋರಿಸಿದನು; ಜಂಗಮನು ಬಂದು ನನ್ನ ಎಲ್ಲ ದುರಿತಗಳನ್ನು ಮತ್ತು ದೇಹದ ಚಿಂತೆಯನ್ನು ಬಿಡಿಸಿ ಕಾಪಾಡಿದನು ಪ್ರಭುದೇವರು ಮತ್ತು ಕೂಡಲ ಸಂಗಮ ದೇವರ ಕರುಣಾ ದೃಷ್ಟಿಯಿಂದ ನಾನು ಬದುಕಿ ಬಾಳುತ್ತಿರುವೆನು.

**೧೦೭೯ ಅಂಗದಲಳವಟ್ಟ ಲಿಂಗಕ್ಕೆ ಅಂಗವೇ ಭಾಜನ;**
**ಪ್ರಾಣದ ಮೇಲಣ ಲಿಂಗಕ್ಕೆ ಮನವೇ ಭಾಜನ;**
**ಅರಿವಿನ ಮೇಲಣ ಲಿಂಗಕ್ಕೆ ನಿರ್ಭಾವವೇ ಭಾಜನ;**
**ಕೂಡಲ ಸಂಗಮದೇವಯ್ಯಾ, ಪ್ರಭುದೇವರು ಅರೋಗಣೆಯ ಮಾಡುವರೆ**
**ಭಕ್ತಿಪರಿಯಾಣವಲ್ಲದೆ ಬೇರೆ ಮತ್ತೆ ಭಾಜನವ ಕಾಣೆನು !**

ದೇಹದ ಮೇಲಿನ ಲಿಂಗಕ್ಕೆ ದೇಹವೇ ಯೋಗ್ಯಸ್ಥಾನವು; ಜೀವಾತ್ಮನಲ್ಲಿ ಒಡಗೂಡಿರುವ ಲಿಂಗಕ್ಕೆ ಮನವೇ ತಕ್ಕ ಸ್ಥಾನವು; ತಿಳಿವಿನಲ್ಲಿ ಮೂಡಿರುವ ಲಿಂಗಜ್ಞಾನಕ್ಕೆ ಭಾವ ಸಂಸರ್ಗವನ್ನು ಕಳೆದುಕೊಂಡಿರುವುದೇ ಉತ್ತ ಸ್ಥಾನವು; ಕೂಡಲ ಸಂಗಮ ದೇವರೆ, ಪ್ರಭುದೇವರು ಭಕ್ತಿಯ

ಆರೋಗಣೆಯನ್ನು ಮಾಡುವರೇ ವಿನಃ ಬೇರೆ ಪದಾರ್ಥಗಳ ನೈವೇದ್ಯ ಮಾಡುವುದಿಲ್ಲ!

೧೦೪೦ ಅಂಗವಿಕಾರವನಳಿದು ಸತಿಯರ ಸಂಗವನರಿಯೆ
ನೋಡಾ!
ದೇಹಗುಣಂಗಳಿಲ್ಲವಾದಿ ನಿರ್ದೇಹಿ ಪ್ರಸಾದಿ,
ನೋಡಯ್ಯಾ!
ಅಶನ- ವ್ಯಸನಾದಿಗಳಿಲ್ಲವೂ ಬಿಂದುವು ನೋಡಯ್ಯಾ!
ಈ ಎಲ್ಲ ಗುಣಗಳಳಿದು ಕೂಡಲ ಸಂಗಮದೇವರಲ್ಲಿ
ಸಾವಧಾನ ಪ್ರಸಾದಿ ಚೆನ್ನ ಬಸವಣ್ಣನು!

ದೇಹದ ಎಲ್ಲ ಪ್ರಕಾರದ ಕಲ್ಮಿಷಗಳು ಮರೆಯಾದುದರಿಂದ ಸ್ತ್ರೀ ಕೂಟದ ಆಶೆ ಕಳೆದು ಹೋಗಿದೆ; ಶರೀರದ ಮಾಯೆಯು ಬಿಟ್ಟು ನನ್ನ ದೇಹವು ಶುದ್ಧವಾಗಿದೆ; ಆದ ಕಾರಣ ಹಸಿವು – ಚಿಂತೆಗಳೆಂಬುವು ಸುಟ್ಟು ಹೋಗಿವೆ; ಹೀಗೆ ತನ್ನಲ್ಲಿದ್ದ ಆರು ಗುಣಗಳನ್ನು ಆರು ರಸಗಳನ್ನು ಸುಟ್ಟು ಹಾಕಿದ ಕಾರಣ ಚೆನ್ನ ಬಸವಣ್ಣನು ಕೂಡಲ ಸಂಗಮದೇವರಲ್ಲಿ ಹೂಳಿಟ್ಟ ಸಂಪತ್ತಿನಂತೆ ಸೇರಿಕೊಂಡಿದ್ದಾನೆ!

೧೦೪೧ ಅದ್ವೈತವನಂತರಂಗದಲ್ಲಿರಿದು
ಹೊರಗೆ ದಾಸೋಹವ ಮಾಡದಿರ್ದರೆಂತಯ್ಯಾ?
ಉಭಯದ ಸಂದೇಹದಲ್ಲಿ ನಿಜ ಒಪ್ಪದು.
ನಿಮ್ಮ ಶರಣರ ಮನನೊಂದಲ್ಲಿ ನಾನು ಸೈರಿಸಿಕೊಂಡಿನೆಂ
ತಯ್ಯಾ?
ಕೂಡಲ ಸಂಗಮ ದೇವಾ,
ಹಾವು ಸಾಯದಂತೆ ಕೋಲು ನೋಯದಂತೆ ಮಾಡಾ
ನಿಮ್ಮ ಧರ್ಮ.

ಏಕೇಶ್ವರ ಭಾವವನ್ನು ಅಂತರಾತ್ಮನಲ್ಲಿ ತಿಳಿದುಕೊಂಡು ಬಹಿರಂಗ ದಲ್ಲಿ ಜಂಗಮ ದಾಸೋಹವನ್ನು ಮಾಡದೇ ಇದ್ದರೆ ಅದು ಯಾವುದಕ್ಕೂ

ಉಪಯುಕ್ತವಾಗದ ಜ್ಞಾನದಂತಾಗುತ್ತದೆ; ಈ ರೀತಿಯ ಉಭಯ ಸಂಕಟದಲ್ಲಿದ್ದವರಿಗೆ ಮುಕ್ತಿಯು ಸಿಗಲಾರದು; ಕೂಡಲ ಸಂಗಮ ದೇವಾ, ನಿಮ್ಮ ಶರಣರ ಮನಸ್ಸು ತಳಮಳಗೊಂಡರೆ ನಾನು ಅದನ್ನು ಹೇಗೆ ಸಹಿಸಲಿ; ಆದ ಕಾರಣ ನನ್ನ ಅಂತರಂಗ ಮತ್ತು ಬಹಿರಂಗವೆರಡೂ ಶುದ್ಧವಾಗುವ ಹಾಗೆ ಕರುಣಿಸು;- ತೊಂದರೆಯನ್ನು 'ಹಾವು ಸತ್ತಿರಬಾರದು, ಕೋಲು ಮುರಿಯಬಾರದು' ಹಾಗೆ ಹೋಗಲಾಡಿಸು !

೧೧೮೨ ಅಗ್ಗವಣಿಯುವಸರ ದಾಚಾರ ಸತ್ ಕ್ರಿಯೆಯೆಂಬ
ಭೂಮಿಯ ಮೇಲೆ
ಸರ್ವಶುದ್ಧವೆಂಬ ಗೋಮಯವಂ ತಂದು
ವಿನಯಾರ್ಥವೆಂಬುದಕದಿಂದ ಸಮ್ಮಾರ್ಜನೆಯ ಮಾಡಿ
ತನುವಿನ ಗುಣಂಗಳ ಹಿಟ್ಟುಗುಟ್ಟಿ, ಅಂಗವಾಲಿಯನಿಕ್ಕಿ
ಅಕ್ಷಯವೆಂಬ ಬಿಂದುಗೆಯಲ್ಲಿ ಪರಮಾನಂದವೆಂಬ
ಅಗ್ಗವಣಿಯ ತುಂಬಿ
ಸಮರಸದಿಂದೆ ಮಜ್ಜನಕ್ಕೆರೆಯಲು;
ಹೃದಯ ಕಮಲವೆಂಬ ಪುಷ್ಪವಂಸರಿಸಿ
ಸೌಖ್ಯತರ ಶಾಂತಿಯೆಂಬ ಗಂಧವನಿಟ್ಟು
ಅಕ್ಷಯವೆಂಬ ಅಕ್ಷತೆಯ ನಿಟ್ಟು ಅಳವಡಿಸಿ
ಸದ್ಭಾವವೆಂಬ ಧೂಪವಂ ಬೀಸಿ
ಸುಜ್ಞಾನವೆಂಬ ನಿರಾಜನಂ ಬೆಳಗಲು;
ಬ್ರಹ್ಮಾನಂದವೆಂಬ ಗಂಟೆಯು ಬಾಜಿಸಲು;
ನಿತ್ಯಲಿಂಗಾರ್ಚನೆಗೆಡೆ ಮಾಡಲು;
ಇದರ ಮರ್ಮಕರ್ಮಸ್ಥಿತಿಯ ಲಿಂಗಾರ್ಚನೆಯಂ
ಮಾಡಬಲ್ಲರೆ
ನಾನಾರನೂ ಕಾಣೆನು !
ಕೂಡಲ ಸಂಗಮ ದೇವಾ,
ಪ್ರಭು ಲಿಂಗಾರ್ಚನೆಯ ಮಾಡಲು ನಾನೇ
ಪರಿಚಾರಕನು !!

ಸತ್ಯಾತ್ಮಲಿಂಗುವಿನಿಂದ ನಿರ್ಮಿತವಾದ ಈ ಭೂಮಿಯ ಮೇಲೆ ಸದಾಚಾರವೆಂಬ ಆಕಳ ಸಗಣಿಯನ್ನು ತಂದು ವಿನಯವೆಂಬ ಸೀರಿನಿಂದ ಸಾರಿಸಿ ಪವಿತ್ರ ಮಾಡಿ ಸದ್ಗುಣಗಳನ್ನು ಕುಟ್ಟಿ ಪುಡಿಮಾಡಿ ರಂಗಮಾಲೆ ಬರೆದು ದೇವರ ಮನೆ ಸಿಂಗಾರಮಾಡಿದೆ; ಪರಮಾನಂದವೆಂಬ ಗಂಗಾಜಲ ತಂದು ದೇವರಿಗೆರೆದು ಶಾಂತಿಯೆಂಬ ಗಂಧವಿಟ್ಟು ಮೇಲೆ ನಿರಂತರವಾಗಿ ಮಂಗಲಕರವಾದ ಕಸ್ತೂರಿ ತಿಲಕವನ್ನು ಹಣೆಗಿಟ್ಟು ನನ್ನ ಹೃದಯವೆಂಬ ಕಮಲದ ಹೂವನ್ನು ಏರಿಸಿ ಪೂಜೆಮಾಡಿದೆ; ನನ್ನ ಉತ್ತಮ ಭಾವವೆಂಬ ಸುಗಂಧ ಧೂಪಹಾಕಿ, ವಿವೇಕವೆಂಬ ಆರತಿಯನ್ನು ಬೆಳಗಿದೆ; ಆಗ್ಗೆ ಬ್ರಹ್ಮಾನಂದವೆಂಬ ಗಂಟೆಯು ನನ್ನ ಅಂತರಂಗದಲ್ಲಿ ಸ್ಫುರಣಗೊಂಡಿತು. ಹೀಗೆ ಲಿಂಗ ಪೂಜೆ ಮಾಡುವ ವ್ಯಕ್ತಿನಾನು ಯಾರೆಂಬುದು ತಿಳಿಯದಾಗಿದೆ; ಕೂಡಲ ಸಂಗಮ ದೇವಾ, ಪ್ರಭುದೇವರು ಪೂಜೆಮಾಡುತ್ತಿರುವಾಗ್ಗೆ ನಾನು ಅವರ ಪರಿಚಾರಕನಾಗಿ ನಿಲ್ಲುವೆ!

**೧೦೮೩ ಅಯ್ಯಾ! ನಾನು ದಾಸೋಹವ ಮಾಡುವೆನಲ್ಲದೆ**
**ಸಮಯವ ನರಿಯೆನಯ್ಯಾ;**
**ನಾನು ಭಕ್ತಿಯ ಮಾಡುವೆನಲ್ಲದೆ**
**ಭಾವವನರಿಯೆ.**
**ಸ್ಥಳಕುಳ ವಿಚಾರಿಸಿದರೆ ಎನ್ನಲೇನೂ ಹುರುಳಿಲ್ಲ!**
**ನಿಮ್ಮ ಶರಣರ ಸೋಂಕಿನಲ್ಲಿ ಶುದ್ಧನಾದೆನು ಕಾಣಾ!!**
**ಕೂಡಲ ಸಂಗಮ ದೇವರು ಸಾಕ್ಷಿಯಾಗಿ**
**ಮಡಿವಾಳ ಮಾಚಿತಂದೆಗಳ ಶ್ರೀಪಾದಕ್ಕೆ**
**ನಮೋ ನಮಃ ಎಂದು ಬದುಕಿದೆನು**

ತಂದೆಯೇ, ಹೊತ್ತು ಹೊತ್ತುಗಳ ಪರಿಜ್ಞಾನವಿಲ್ಲದೆ ದಾಸೋಹವನ್ನು ಮಾಡುವೆನು, ಭಾವನೆಗಳ ಶುದ್ಧಾಶುದ್ಧತೆಗಳನ್ನು ತಿಳಿಯದಲೆ ಭಕ್ತಿಯನ್ನು ಮಾಡುವೆನು; ಇವೆರಡೂ ಉಪಯೋಗಕ್ಕೆ ಬಾರದವು; ನಾನು ಹುಟ್ಟಿದ ಸ್ಥಳ ಮತ್ತು ನನ್ನ ಕುಲಗಳನ್ನು ವಿಚಾರಿಸಿದರೆ ನನ್ನ ಬಳಿ ಏನೂ ಅರ್ಥವಿಲ್ಲ; ಆದರೆ ನಿಮ್ಮ ಶರಣರ ಸಹವಾಸದಿಂದಲೂ ಅವರ

ಸ್ಪರ್ಶದಿಂದಲೂ ನಾನು ಪವಿತ್ರನಾದೆನು; ಕೂಡಲ ಸಂಗಮ ದೇವಾ, ನಿಮ್ಮ ಸಾಕ್ಷಿಯಾಗಿ ಹೇಳುವೆ ಮಡಿವಾಳ ಮಾಚಿ ತಂದೆಗಳ ಪವಿತ್ರ ಪಾದಗಳಿಗೆ ನಮಸ್ಕಾರಮಾಡಿ ನಾನು ಬದುಕಿರುವೆನು.

**೧೦೮೪ ಅಯ್ಯಾ ನಿಮ್ಮ ಮುಟ್ಟಿದ ಗುಣದಿಂದಲಾನು ಸಂಗನ ಬಸವಣ್ಣನಾಗಿ**
**ಗುಹೇಶ್ವರನ ಶರಣನ ಮಹಾ ಬಸಿರೊಳಗೆ ಕಂದನಾಗಿದಳ**
**ಕಾಣಾ, ಕೂಡಲ ಸಂಗಮ ದೇವಾ.**

ಹೇ ಲಿಂಗ ತಂದೆಯೇ, ನಿಮ್ಮಲ್ಲಿ ತಾದಾತ್ಮ್ಯನಾದುದರಿಂದಲೇ ನಾನು ಶ್ರೀ ಗುಹೇಶ್ವರನ ಶರಣರ ಚಿತ್ತಗರ್ಭದಲ್ಲಿ ಸಂಗನ ಬಸವಣ್ಣನೆಂಬ ಶಿಶುವಾಗಿ ಹುಟ್ಟಿದೆನು; ಕೂಡಲ ಸಂಗಮದೇವಾ !

**೧೦೮೫ ಅಯ್ಯಾ, ನಿಮ್ಮ ಶರಣರ ನಿಲವ**
**ಸ್ವರ್ಗ, ಮರ್ತ್ಯ, ಪಾತಾಳದೊಳಗೆ ಬಲ್ಲವರಿಲ್ಲವಯ್ಯಾ !**
**ಅಘಟಿತ ಘಟಿತರು ಅಖಂಡ ಮಹಿಮರು,**
**ನಿಜದಲ್ಲಿ ನಿರ್ಲೇಪ ಭಾವುಕರು !**
**ಕೂಡಲ ಸಂಗಮ ದೇವಾ,**
**ನಿಮ್ಮ ಶರಣರ ನಿಲವನರಿವಡೆ ನಾನೇತರವನಯ್ಯಾ ?**

ಕೂಡಲ ಸಂಗಮ ದೇವಾ, ಸ್ವರ್ಗಲೋಕದಲ್ಲಿ ಭೂಲೋಕದಲ್ಲಿ ಮತ್ತು ಪಾತಾಳ ಲೋಕದಲ್ಲಿ ಅಯೋನಿಜರು, ಪೂರ್ಣರು ಮತ್ತು ಸತ್ಯದಲ್ಲಿ ಮತ್ತು ಭಾವನೆಗಳಲ್ಲಿ ನಿರ್ವಿಕಾರರೂ ಕಳಂಕರಹಿತರೂ ಆದ ನಿಮ್ಮ ಶರಣರ ಮಹತ್ವವನ್ನು ತಿಳಿದವರೂ ಯಾರೂ ಇಲ್ಲ ! ಅಂದ ಮೇಲೆ ಅಂಥಹ ಮಹಾತ್ಮರ ನಿಜರೂಪ ತಿಳಿಯಲು ನಾನೆಷ್ಟರವನು ?

**೧೦೮೬ ಅಯ್ಯಾ, ನಿಮ್ಮ ಶರಣರ ಸಂಗವೆನಗೆ ಪರಮ ಸುಖವಯ್ಯಾ;**
**ಅಯ್ಯಾ, ನಿಮ್ಮ ಶರಣರ ಅಗಲಿಕೆ ಪ್ರಾಣವಿಯೋಗವಯ್ಯಾ!**

**ಶಿವಶಿವಾ! ಸಂತವಿಡುವೆ ನಿನ್ನೆಂತಯ್ಯಾ? ಎನಗೇನು ಗತಿ?**
**ಕೂಡಲ ಸಂಗಮದೇವಾ, ನಿಮ್ಮ ಶರಣರ ಮುನಿಸು**
**ಎನಗೆ ಬಿಡಿಸಬಾರದ ತೊಡಕು!**

ಕೂಡಲ ಸಂಗಮ ದೇವಾ, ನಿಮ್ಮ ಶರಣರ ಸಹವಾಸವೇ ನನಗೆ ಪರಮ ಸುಖ, ಅವರಿಂದ ದೂರ ಇರುವುದೇ ನನಗೆ ದುಃಖ; ಅವರು ನನ್ನ ಮೇಲೆ ಸಿಟ್ಟಾಗಿರುವುದು ನನಗೆ ಅದೊಂದು ಬಿಡಿಸಲು ಬಾರದ ಗಂಟಾಗಿದೆ; ಏನು ಮಾಡಲಿ ಶಿವ ಶಿವಾ, ನನಗೆ ಸುಖವೆಂದು ಸಿಗುತ್ತದೆ ಏನುಗತಿ?

**೧೦೮೭ ಅಯ್ಯಾ ನಿಮ್ಮ ಶರಣರ ಸಂಗ ಸುಖವನೇನೆಂದು**
**ಪವಿುಸುವೆನಯ್ಯಾ?**
**ನಿಮ್ಮ ಶರಣರ ಕೂಡೆ ಸಮ ಗೋಷ್ಠಿಯ ಮಾಡುವುದನು—**
**ಪವಿುಸಲಮ್ಮೆನಯ್ಯಾ!**
**ಕೂಡಲ ಸಂಗಯ್ಯಾ, ನಿಮ್ಮ ಪ್ರಮಥರೆಲ್ಲರೂ ನೆರೆದ**
**ಗಣ ತಿಂಥಿಣಿಯೊಳಗೆನ್ನನೇನೆಂದನರಿಯದೆ ಅಗಲದಂತಿ**
**ರಿಸಯ್ಯಾ;**
**ನಾ ನಿಮ್ಮ ಧರ್ಮದ ಕವಿಲೆ!**

ಶರಣರೊಡನೆ ಇದ್ದುಕೊಂಡು ಅವರ ಮುತ್ತಿನಂತಹ ಮಾತು ಕೇಳುತ್ತ ಮತ್ತು ಅವರ ಜೊತೆ ಪ್ರಶ್ನೆ ಮಾಡುತ್ತ ಕಾಲಕಳೆಯುವುದು ಎಷ್ಟು ಸುಖ? ಹೇಳಲು ಬಾರದು; ನಿಮ್ಮ ಪ್ರಮಥರು ನೆರೆದ ಸಭೆಯಲ್ಲಿ ನಾನು ಇಂತಹವನೆಂದು ಯಾರಿಗೂ ತಿಳಿಯದಂತಿರಿಸು; ಮತ್ತು ಅಲ್ಲಿಂದ ನನ್ನನ್ನು ಹೊರಗೆ ಹಾಕಿಸಬೇಡಾ; ನಾನು ನಿಮ್ಮ ಧರ್ಮದ ಆಕಳು ಕೂಡಲ ಸಂಗಮ ದೇವಾ!

**೧೦೮೮ ಅಯ್ಯಾ ನಿಮ್ಮ ಶರಣರು ಪರಮ ಸುಖಿಗಳಯ್ಯಾ.**
**ಅಯ್ಯಾ ನಿಮ್ಮ ಶರಣರು ಕಾಯವೆಂಬ ಕರ್ಮಕ್ಕೆ**
**ಹೊದ್ದದನಿಷ್ಕಾಮಿಗಳಯ್ಯಾ.**

**ಅಯ್ಯಾ ನಿಮ್ಮ ಶರಣರು ಮನದಲ್ಲಿ ನಿರ್ಲೇಪಜ್ಞಾನಿಗ ಳಯ್ಯಾ.**
**ಕೂಡಲ ಸಂಗಮ ದೇವಯ್ಯಾ,**
**ನಿಮ್ಮ ಶರಣರ ಘನವೆನಗೆ ಹೇಳಲು ನಾನು ಕೇಳಲಮ್ಮದೆ**
**ನಮೋ ನಮಃ ಎನುತಿರ್ದೆನು, ಕಾಣಾ, ಪ್ರಭುವೇ !**

ತಂದೆ ಕೂಡಲ ಸಂಗಮದೇವಾ, ತಮ್ಮ ಯೋಗಸಾಮರ್ಥ್ಯದಿಂದ ತನುಮನಗಳನ್ನು ಧ್ಯಾನವೆಂಬ ನೀರಿನಿಂದ ತೊಳೆದು ಶುದ್ಧಮಾಡಿಕೊಂಡ ನಿಮ್ಮ ಶರಣರ ಗುಣಕೀರ್ತನೆ ಕೇಳಲು ನಾನು ಹಿಂದೆ ಸರಿಯುವುದಿಲ್ಲ; ಅವರು ಪರಸುಖಿಗಳು; ಅವರಿಗೆ ನಿತ್ಯವೂ ನಾನು ನಮಸ್ಕಾರಮಾಡುವೆನು ಪ್ರಭುದೇವಾ !

**೧೦೪೯ ಅಯ್ಯಾ ನಿಮ್ಮ ಶರಣರು ಬಂದೆನ್ನಂಗಳದೊಳಗೆ ರಕ್ಷಿಸಿಹೆನೆಂದಿರಲು**
**ನಾನು ತೆರಹು ಮರಹು ದಾಸಿದ್ದು ಕೆಟ್ಟೆನಯ್ಯಾ !**
**ನಾನು ಕೆಟ್ಟಕೇಡಿಂಗೆ ಕಡೆಯಿಲ್ಲವಯ್ಯಾ !**
**ಕೂಡಲ ಸಂಗಮದೇವಯ್ಯಾ, ಎನ್ನ ಭಕ್ತಿ**
**ಸಾವಿರ ನೊಂಪಿಯನೊಂತು**
**ಹಾದರದಲ್ಲಿ ಅಳಿದಂತಾಯಿತ್ತಯ್ಯಾ !**

ದೇವಾ, ನಿಮ್ಮ ಶರಣರು ನನ್ನನ್ನು ಕಾಪಾಡುವುದಕ್ಕೋಸ್ಕರ ನನ್ನ ಮನೆಯಂಗಳದಲ್ಲಿ ಬಂದು ನೆರೆದಿರುವಾಗ ನಾನು ಅವರನ್ನು ನಿರ್ಲಕ್ಷಿಸಿ ಹಾಳಾದೆನು; ಸರ್ವನಾಶವಾಯಿತು; ಈಸು ದಿನಗಳ ವರೆಗೆ ನಾನು ಮಾಡಿದ ಭಕ್ತಿ ಹಾದರ ಮಾಡಿದಂತಾಯಿತು. ಕೂಡಲ ಸಂಗಮದೇವಾ !

**೧೦೫೦ ಅಯ್ಯಾ, ನೀವೆನ್ನ ಬಲ್ಲಿರಲ್ಲದೆ ನಾ ನಿಮ್ಮ ಬಲ್ಲೆನೆ?**
**ನಿಮ್ಮ ನಿಲವ ನೋಡಿ ಮಾಡಿಹೆನೆಂದರೆ ನೀ ಘನ—**
**ಎನ್ನ ಮನಕ್ಕೆ ಸಾಧ್ಯವಾಗದ ಕಾರಣ**
**ಅಂತಿಂತೆಂದುಪಮಿಸಲಮ್ಮದೆ ಇದ್ದೆ, ನೋಡಯ್ಯಾ !**

**ನಿತ್ಯತೃಪ್ತ, ಮಹಿಮಾ, ನಿನಗೆಂದಳವಡಿಸಿದ ಪದಾರ್ಥವ**
**ಸುಚಿತ್ತದಿಂದಳವಡಿಸಯ್ಯಾ ಪ್ರಭುವೇ,**
**ಕೂಡಲ ಸಂಗಮ ದೇವಾ !**

ನೀವು ನನ್ನನು ಚೆನ್ನಾಗಿ ಬಲ್ಲಿರಿ; ಆದರೆ ನಾನು ನಿಮ್ಮನ್ನು ತಿಳಿಯ ಲಾರೆ; ನಿಮ್ಮ ಘನತೆಯನ್ನು ಚೆನ್ನಾಗಿ ತಿಳಿದುಕೊಂಡು ಭಕ್ತಿಮಾಡಬೇಕೆಂದರೆ ನಿಮ್ಮ ವಿಶ್ವ ರೂಪವನ್ನು ಚಿಕ್ಕ ಮನಸ್ಸಿಗೆ ತಿಳಿಯಲಸಾಧ್ಯವಾಯಿತು; ಆದುದರಿಂದ ಈ ವರೆಗೆ ಏನನ್ನೂ ಹೇಳದೆ ಇದ್ದೆನು; ನಿತ್ಯಸಂತುಷ್ಟಿಯೂ ಮಹಿಮಾಪೂರ್ಣನೂ ಆದ ಕೂಡಲ ಸಂಗಮದೇವಾ, ನಿಮಗಾಗಿಯೇ ಮಾಡಿದ ಪಂಚ ಪಕ್ವಾನ್ನಗಳಿನ್ನು ಒಳ್ಳೆಯ ಬುದ್ಧಿಯಿಂದ ಆರೋಗಿಸಯ್ಯಾ !

**೧೮೯೧ ಅರಿದರಿದು ಎನಗಿಂದು ಕಣ್ಣೆ ಮಂಗಳವಾಯಿತ್ತು !**
**ಒಂದಹುದು ಒಂದಾಗದೆಂಬ ಭ್ರಮೆಯುವನಲ್ಲ;**
**ಬೇಕು ಬೇಡೆಂಬ ಜಂಜಡದವನಲ್ಲ.**
**ಎಡೆವರಿಯದ ನೋಟ; ನುಡಿಯ ಸಡಗರವರಿತು**
**ಎಡೆಯಾಟ !**
**ಕೋಟಲೆಯ ಕಳೆದು ಬಂದನು!**
**ನೋಡುವರ ಮನದ ಸುಖದ ಸಾಗರನಿಧಿಯನೇನೆಂದು—**
**ಹವಿುಸುವೆನಯ್ಯಾ ?**
**ಎನ್ನುಭಯ ಕರ್ಮವ ಕಳೆದು ತನ್ನೊಳಗೆ ಇಂಬಿಟ್ಟು**
**ಕೊಳ್ಳಬಂದನು,**
**ಕೂಡಲ ಸಂಗಮದೇವ, ಕೃಪಾಮೂರ್ತಿ !**

ನನ್ನ ಭಾವನೆಯಲ್ಲಿದ್ದ ಮೂರ್ತಿಯನ್ನು ಇಂದು ಸುಜ್ಞಾನ ದೃಷ್ಟಿಯಿಂದ ನೋಡಿದೆನಾದುದರಿಂದ ನನ್ನ ಕಣ್ಣುಗಳಿಗಿಂದು ಹಬ್ಬವಾಗಿದೆ; ನನ್ನ ಅಂತರಾತ್ಮನು ಮತ್ತು ಆ ಪರಮಾತ್ಮನೂ ಒಂದೆ; ಅವರಿಬ್ಬರೂ ಬೇರೆ ಬೇರೆ ಎಂಬ ಹುಚ್ಚು ನನಗಿಲ್ಲ; ಪ್ರೇಕ್ಷಕರ ಮನೋನಿಧಿಯಾದ ಪರಲಿಂಗುವು ನನ್ನ ಹೊರ ಮತ್ತು ಒಳಗಿನ ಕರ್ಮಗಳನ್ನು ಹರಿದು ತನ್ನ ಪಾದಾರವಿಂ

ದಗಳಲ್ಲಿ ಐಕ್ಯನಾಗಲು ಸ್ಥಾನ ಕಲ್ಪಿಸಿಕೊಡುತ್ತಾನೆ; ಕೃಪಾಪೂರ್ತಿ ನಮ
ಕೂಡಲ ಸಂಗಮ ದೇವನು !

೧೦೯೨ ಅರಿವನ್ನಕ್ಕರ ಅರ್ಚಿಸಿದೆ, ಅರಿವನ್ನಕ್ಕರ ಪೂಜಿಸಿದೆ;
ಅರಿವನ್ನಕ್ಕರ ಹಾಡಿದೆ ಹೊಗಳಿದೆ !
ಅರಿವುಗೆಟ್ಟು, ಮರಹು ನಷ್ಟವಾಗಿ
ಭಾವ ನಿರ್ಭಾವವಾಗಿ, ನಿಜ ಬಳಸಿಕೊಂಡಿತ್ತಾಗಿ,
ಕೂಡಲ ಸಂಗಯ್ಯನಲ್ಲಿ ಸರ್ವನಿವಾಸಿಯಾದೆ.

ಜ್ಞಾನ ಉದಯಿಸಿತು; ಶ್ರೀ ಲಿಂಗವನ್ನು ಆರಾಧಿಸಿ ಹಾಡಿಕುಣಿದು ನನ್ನ ದುರಿತಗಳನ್ನು ಮತ್ತು ಮರಹನ್ನು ನಾಶಮಾಡಿದೆನು; ಸತ್ಯವನ್ನು ತಿಳಿದುಕೊಂಡು ಸಂಸಾರದ ಭಾವವನ್ನು ಬಿಟ್ಟೆನು; ಆದುದರಿಂದ ಕೂಡಲ ಸಂಗಮ ದೇವರಲ್ಲಿ ನಿರಂತರ ಇರುವ ಭಾಗ್ಯದೊರೆಯಿತು !

೧೦೯೩ ಅರಿವ ಹಿಡಿದು ಅರಿವನರಿದು ಅರಿವೆನೀನೆಂಬ
ಭ್ರಾಂತು ಎನಗಿಲ್ಲವಯ್ಯಾ !
ಮತಹವಿಡಿದು, ಮರಹ ಮರೆದು ಮರಹು ನೀನೆಂಬ
ಮರಹಿನವ ನಾನಲ್ಲವಯ್ಯಾ !
ದೇಹಪ್ರಾಣಂಗಳ ಹಿಂಗಿ ದೇಹಪಿಡಿದು ದೇಹ ನಿಮ್ಮದೆಂಬ
ಭ್ರಾಂತ ಸೂತಕಿ ನಾನಲ್ಲವಯ್ಯಾ !
ನಿಮ್ಮ ಅರಿದ ಅರಿವ ಭಿನ್ನವಿಟ್ಟು ಕಂಡೆನಾದರೆ
ನಿಮ್ಮಾಣೆ, ಕಾಣಾ, ಕೂಡಲ ಸಂಗಮದೇವಾ !

ತಿಳಿವಳಿಕೆಯ ಮಾರ್ಗಹಿಡಿದು ಜ್ಞಾನ ಪಡೆದುಕೊಂಡು ಆ ತಿಳಿವಿನ ದಾರಿಯೇ ನೀನು ಎಂಬ ಹುಚ್ಚುನನಗಿಲ್ಲ; ಜ್ಞಾಪಕ ಶಕ್ತಿಯನ್ನು ಕಳೆದು ಕೊಂಡು ಅವಿವೇಕಿಯಾಗಿರುವೆನು; ಆ ಅವಿವೇಕತನವೇ ನೀನು ಎಂಬ ಹುಚ್ಚು ನನಗಿಲ್ಲ; ದೇಹ ಮತ್ತು ಪ್ರಾಣಗಳನ್ನು ಬಿಟ್ಟು ದೂರಸರಿದು ನಿಂತಿದ್ದರೂ ಈ ದೇಹ ನಿಮ್ಮದೆನ್ನುವ ಪಾಪಿನಾನಲ್ಲ; ಕೂಡಲ ಸಂಗಮ

ದೇವಾ; ನಿಮ್ಮ ನಿಜದಂಗವನ್ನು ತಿಳಿದ ಆ ನನ್ನ ಜ್ಞಾನವನ್ನು ಎರಡು ನೋಟಗಳಿಂದ ನೋಡಿದರೆ ನನಗೆ ನಿಮ್ಮ ಆಣೆ !

**೧೯೪೪ ಅಲ್ಲೆನ್ನಬಾರದು ಅಹುದೆನ್ನಬಾರದು;**
**ಕೂಡಲ ಸಂಗನ ಶರಣರ ಸಂಗ**
**ಕರಗಸದ ಬಾಯಿ ಧಾರೆಯಂತೆ ಅರಿವುದಯ್ಯಾ !**

ಇದು ಸುಳ್ಳು ಇದು ನಿಜ ಎಂದೂ, ಇದು ತಪ್ಪು ಇದು ಒಪ್ಪು ಎಂದೂ ಶರಣರನ್ನು ಆಡಿಕೊಳ್ಳಬಾರದು; ಯಾಕಂದರೆ ಅವರ ಸಹವಾಸ ಕರಗಸದ ಹರಿತವಾದ ಹಲ್ಲುಗಳ ಕೊರೆತದಂತೆ ನಮ್ಮನ್ನು ಕೊಯ್ಯುತ್ತದೆ.

**೧೯೪೫ ಅರಿವಿಂದಲರಿದೆನೆಂದರೆ ಅರಿವಿಂಗಸಾಧ್ಯ;**
**ಅರಿಯದೆ ಅರಿದ ಪರಿ ಎಂತಯ್ಯಾ ?**
**ಭಾವಿಸುವೆನೆಂದರೆ ಭಾವ ನಿರ್ಭಾವವೆಂದುದಾಗಿ**
**ಮತ್ತೆ ಭಾವಿಯಲ್ಲದೆ ಕಾಣಬಾರದಯ್ಯಾ !**
**ವಾಙ್ಮನಕ್ಕಗೋಚರವೆಂದಡೆ ನುಡಿಯಲಿಲ್ಲದೆ**
**ನಡೆ ಸಾಧ್ಯವಹ ಪರಿಯಂತು, ಹೇಳಾ, ಅಯ್ಯಾ ?**
**ಹಲವು ಮಾತಿನ ನಿಲವು ಒಂದೆಂಬ ನುಡಿಗಡಣದ**
**ನಿಜವ ಬಲ್ಲವರಾರು ಹೇಳಯ್ಯಾ ?**
**ನಿಮ್ಮ ಮಾತೆಂಬ ಪರತತ್ವ ಒಂದಲ್ಲದೆ ಎರಡುಂಟೆ ?**
**ಕೂಡಲ ಸಂಗಮ ದೇವಾ,**
**ಕಡೆ ಮುಟ್ಟಿ ನೋಡುವೊಡೆ ನುಡಿಗೆಡೆಯಿಲ್ಲ.**
**ಕೃಪೆಯಿಂದ ಕಾರುಣ್ಯವ ಮಾಡಯ್ಯ ಪ್ರಭುವೆ !**

ಸಾಮಾನ್ಯ ಬುದ್ಧಿಯಿಂದ ತಿಳಿಯುವುದು ಅಸಾಧ್ಯ;ಆದರೆ ಸುಜ್ಞಾನವಿಲ್ಲದೆ ತಿಳಿಯುವುದು ಹೇಗೆ? ಕಲ್ಪನಾತೀತನೆಂದು ಹೇಳುತ್ತಾರೆ, ಆದರೆ ಅಂತರಾತ್ಮನ ಸುಕಲ್ಪನೆಯಿಲ್ಲದೆ ನಿಮ್ಮನ್ನು ತಿಳಿಯುವುದು ಹೇಗೆ ? ವಚನ ಮತ್ತು ಮನಸ್ಸಿಗೆ ನೀವು ತಿಳಿಯದವರೆಂದು ಹೇಳಿದರೆ, ನಾನು ನಿಮ್ಮ ನಾಮಧ್ಯಾನಮಾಡದೆ ನಿಮ್ಮನ್ನು ಕೂಡುವ ಬಗೆ ಎಂತಹದು ?

ಯಾವ ಹೆಸರಿನಿಂದ ಭಜಿಸಿದರೂ ಅದು ನಿಮ್ಮ ಹೆಸರಲ್ಲದೆ ಮತ್ತೆ ಬೇರೇ-ನಾದರೂ ಉಂಟೆ ? ಆದುದರಿಂದ ಕೂಡಲ ಸಂಗಮ ದೇವಾ ನಿಮ್ಮನ್ನು ಕೊನೆಗಳಿಗೆಯಲ್ಲಿ ಬಳಿಸಾರಿ ಬರುವುದೆ ನನ್ನ ಧ್ಯೇಯವಾಗಿದೆ; ಕರುಣಿಸು ದೇವಾ !

**೧೯೯೬ ಅರಿವಿಲ್ಲದ ಕಾಯವುಂಟೆ ? ಅರಿವಿಲ್ಲದ ಪ್ರಾಣವುಂಟೆ ?**
**ಅರಿವಿಲ್ಲದ ನಿಲವು ಉಂಟೆ ? ಭಾವವಿಲ್ಲದ ಭಕ್ತಿಯುಂಟೆ ?**
**ಕೂಡಲ ಸಂಗಮದೇವಾ, ನೀವು ಪರಿಪೂರ್ಣವಾಗಿಪ್ಪಿರಿ;**
**ಅವಗುಣಕ್ಕೆ ತೆರಹಿಲ್ಲ !**

ಸ್ಪರ್ಶ ಜ್ಞಾನವಿಲ್ಲದ ದೇಹವು, ಚೇತನವಿಲ್ಲಗ ಪ್ರಾಣವು, ಚಲನೆಯಿಲ್ಲದ ಓಡಾಟವು ಎಲ್ಲಿಯಾದರೂ ಉಂಟೆ ? ಭಾಭಪರವಶನಾಗದೆ ಭಕ್ತಿಯನ್ನು ಮಾಡುವುದುಂಟೆ ? ಕೂಡಲ ಸಂಗಮ ದೇವಾ ನೀವು ಪೂರ್ಣರೂಪರಾಗಿರುವ ಕಾರಣ ಅಲ್ಲಿ ಅವಗುಣಗಳಿಗೆ ಸ್ಥಾನವಿಲ್ಲ !

**೧೯೯೭ ಅರ್ಪಿತ ಮಾಡುವ ಅವಧಾನವು, ಅನ್ಯವ ಸೋಂಕದ ಅವಧಾನವು.**
**ಅರಿಷಡ್ವರ್ಗಂಗಳ ಮುಟ್ಟಲೀಯದ ಅವಧಾನದ ಪರಿಯ ನೋಡಾ !**
**ಪಂಚ ಭೂತವೆಂಬ ಭವಿಯ ಕಳೆದು**
**ಪ್ರಸಾದಿಯಾಗಿರ್ಪ ಪರಿಯ ನೋಡಾ !**
**ಪಂಚೇಂದ್ರಿಯಂಗಳ ಗುಣವಳಿದು**
**ಷಂಚವಿಂಶತಿ ತತ್ವದಲ್ಲಿ ಪರಿಣಾಮಿ,**
**ಕೂಡಲ ಸಂಗಮ ದೇವರಲ್ಲಿ, ಚೆನ್ನ ಬಸವಣ್ಣನು !**

ನಾನು ಸಮರ್ಪಿಸಲಿರುವ ಭಕ್ತಿಯ ಜ್ಞಾನವು ಯಾವ ಕಲ್ಮಿಷಗಳಿಂದಲೂ ಕೂಡಿಲ್ಲ; ಕಾಮ, ಕ್ರೋಧ ಮದ ಮತ್ಸರ ಮೊದಲಾದ ಆರು ಹಿತಶತ್ರುಗಳಿಂದಲೂ ಕಲುಷಿತಗೊಂಡಿಲ್ಲ; ಪಂಚ ಕಾಮನೆಗಳನ್ನು ತ್ಯಾಗ ಮಾಡಿ ಭೌತಿಕವಾಗಿರುವ ಆಶೆಗಳನ್ನು ತೊರೆದು ಪ್ರಸಾದಿಯಾಗಿರುವೆನು;

ಹೀಗೆ ಮೂವತ್ತೈದು ತತ್ತ್ವಗಳಲ್ಲಿ ಎಡೆಬಿಡದೆ ಕೂಡಿಕೊಂಡಿರುವ ಚೆನ್ನ ಬಸವಣ್ಣನು ಕೂಡಲ ಸಂಗಮ ದೇವರಲ್ಲಿಯೂ ಅಗಲಿಸಲು ಬಾರದ ದೀಪ ಮತ್ತು ಪ್ರಕಾಶದಂತೆ ಕೂಡಿರುವನು.

**೧೮೯೮ ಅಳವಡಿಸಿದ ಪದಾರ್ಥ ಅರ್ಪಿತಕ್ಕೆ ಸರಿಯೆನಾಯಿತ್ತು;**
**ಅಳವಡಿಸಿದ ಮುನ್ನ ಕೈಕೊಳ್ಳುತೈದಾನೆ ಶಿವನು !**
**ಸಂದ ಪದಾರ್ಥ ಸಲ್ಲಲಿ !**
**ಕೂಡಲ ಸಂಗಮ ದೇವರ ಆರೋಗಣೆಯ ಅವಸರಕ್ಕೆ**
**ಸಂಚಿತ ಸುಯಿದಾನವ ತೆಗಿಸಿರೆ, ಸೊಡ್ಡಳ ಬಾಚರಸರೇ!**

ನಾನು ಇಚ್ಛಿಸದೇ ಇದ್ದ ನೈವೇದ್ಯವು ನೀವೇದನೆಗೆ ಶುದ್ಧವಾಗಿದೆ; ನನ್ನ ಮನಸ್ಸಿಗೂ ತಿನ್ನುವ ಆಶೆಯಾಗುವ ಮೊದಲೇ ಶಿವನು ತೆಗೆದುಕೊಂಡನು; ಕೂಡಲ ಸಂಗಮ ದೇವರ ಆರೋಗಣೆಗಾಗಿ ನಿಶ್ಚಿತವಾದ ಒಪ್ಪಿತವಾದ ಪದಾರ್ಥಗಳನ್ನು ತಯಾರಿಸಬೇಕು. ಬಾಚರಸರೇ.

**೧೮೯೯ ಅಳವಿನಲ್ಲಿ ಉಳಿವನಲ್ಲ, ಪ್ರಳಯವೆಂಬುದ ಮುನ್ನರಿಯನು;**
**ಕಳಾಕುಳ ರಹಿತನು, ಉಭಯ ಕುಳ ರಹಿತನು;**
**ಅರಿವ ಬೈಚಿಟ್ಟು, ಮೆರೆವ ಗಮನಿಯಲ್ಲ;**
**ನಿರ್ಗಮನ ಕೂಡಲ ಸಂಗಯ್ಯನೆಂಬ ಶಬ್ದ ಮುಗ್ಧನ**
**ಭಾವದ ಬಳಕೆಯಲ್ಲಿ ಗೆಲಬಹುದೆ? ಹೇಳಾ !**

ಒಬ್ಬರ ಹಿಡಿತದಲ್ಲಿ ಅಂಕಿತದಲ್ಲಿ ಇರುವವನಲ್ಲ; ಸಾವನ್ನು ಮೀರಿದವನು; ದೋಷಾಪವಾದಗಳಿಂದ ದೂರಿದ್ದವನು; ಜ್ಞಾನ ದೀಪವನ್ನು ಮುಚ್ಚಿಟ್ಟುಕೊಂಡು, ಧಾಂಭಿಕರಂತೆ ಮೆರೆಯುವವನು ಅವನಲ್ಲ! ಅವನು ಶಬ್ದಾತೀತನು; ಅಂತಹವನನ್ನು ಕಲ್ಪನೆಯ ಕನಸಿನಿಂದ ಗೆಲ್ಲುವದು ಅಸಾಧ್ಯವಾದುದು !

೧೧೦೦ ಆಕಾಶವ ಮೀರುವ ತರುಗಿರಿಗಳುಂಟೆ?
ಪತಿ ದೃಷ್ಟನಾಗಿ ಮಾಡಬಲ್ಲರೆ ಅದೇ ಮಾಟ,
ಕೂಡಲ ಸಂಗಮ ದೇವರ ಕೂಡುವ ಕೂಟ!

ಮುಗಿಲನ್ನೂ ದಾಟಿ ಬೆಳೆದು ನಿಲ್ಲುವ ಗಿಡಗಳೂ ಮತ್ತು ಪರ್ವತ ಶಿಖರಗಳೂ ಉಂಟೆ? ಗಂಡನಿಗೆ ಮಾಡುವ ಕಾರ್ಯದ ವಿಷಯ ತಿಳಿಸಿದರೆ ಅದೇ ಉತ್ತಮವಾದ ಕಾರ್ಯ; ಆ ಸತ್ಯದಿಂದಲೇ ಕೂಡಲ ಸಂಗಮ ದೇವರಲ್ಲಿ ಕೂಡುವ ಹಾದಿ ಸಿಗುತ್ತದೆ.

೧೧೦೧ ಆತ್ಮನ ಸುಳುಹಿನಿಂದ ಮತ್ತೆ ಕಾಯದ ಅವತಾರವಳಿಯಿತ್ತು!
ನೀನೆಂಬ ಭಾವವರತಲ್ಲಿ ಕೂಡಲ ಸಂಗಮದೇವರ ಭಾವ
ಪ್ರಭುದೇವರಲ್ಲಿ ಐಕ್ಯವಾಯಿತ್ತು!

ಆತ್ಮದ ಜ್ಞಾನ ಮತ್ತೆ ಉದಯಿಸಿ ದೇಹದ ಸೊಡರು ನಾಶವಾಯಿತು; ನೀನೊಬ್ಬ ನರಮನುಷ್ಯನೆಂಬ ಭಾವನೆ ಅಳಿದು ಕೂಡಲ ಸಂಗಮದೇವರು ಪ್ರಭುದೇವರಲ್ಲಿ ಇರುವನೆಂಬ ಭಾವನೆಯು ದಿಟವಾಯಿತು!

೧೧೦೨ ಆದಿ ಅನಾದಿಯಿಂದತ್ತತ್ತ!
ಮುನ್ನ ಲಿಂಗ ಜಂಗಮವೆಂಬುದನಾರು ಬಲ್ಲರಿಲ್ಲೆಂದು
ಇದರ ಸಕೀಲ ಸಂಬಂಧದ ತಿಳುಹಲೆಂದು
ಮರ್ತ್ಯಕ್ಕೆ ಕಳುಹಿದನು ಶಶಿಧರನ!
ಅಂಗದ ಮೇಲೆ ಲಿಂಗವುಳ್ಳುದೆಲ್ಲವೂ
ಸಂಗಮನಾಥನಲ್ಲದೆ ಮತ್ತಾರನೂ ಕಾಣೆ!
ಶಿಷ್ಯಂಗೆ ಗುರು ಉಪದೇಶ ಮಾಡಬೇಕಲ್ಲದೆ
ಗುರುವಿಂಗೆ ಶಿಷ್ಯ ಅನುಗ್ರಹಮಾಡಿದ ಠಾವುಂಟೆ?
ಎನ್ನ ಅರುಹಿನ ಆದಿಗೆ ನೀನೆ ಕರ್ತನೆಂದಾನಿರುತಿರಲು
ನಿನಗೆ ನಾನಿನ್ನು ಅನುಗ್ರಹವ ಮಾಡುವ ಪರಿಯೆಂತಯ್ಯಾ?

**ಕೂಡಲ ಸಂಗನ ಸ್ವರೂಪೆಂದು ನಿನ್ನ ಕಂಡಿಪ್ಪೆ,**
**ಕಾಣಾ ಚೆನ್ನ ಬಸವಣ್ಣ !**

ಸತ್ಯವು ಅಸತ್ಯಕ್ಕಿಂತಲೂ ಮೊದಲಿದ್ದುದು; ಕಾರಣ ಲಿಂಗ ಜಂಗಮದಲ್ಲಿ ಯಾರು ಮೊದಲು ಯಾರು ಕಡೆಗೆ ಎಂಬುದನ್ನು ಯಾರೂ ತಿಳಿದವರಿಲ್ಲೆಂದು, ಚಂದ್ರಮೌಳಿಯು ನನ್ನನ್ನು ಭೂಲೋಕಕ್ಕೆ ಈ ಬಾಂಧವ್ಯವನ್ನು ತಿಳಿಸಿಕೊಡಲು ಕಳಿಸಿದ್ದಾನೆ; ಚೆನ್ನಬಸವಣ್ಣಾ, ನೀನು ಕೂಡಲ ಸಂಗಮ ದೇವರ ಸ್ವರೂಪನೆಂದು ತಿಳಿದ ನಾನು ನಿನಗೆ ಅನುಗ್ರಹಿಸುವುದು ಹೇಗೆ? ಶಿಷ್ಯನು ಗುರುಗಳಿಗೆ ಉಪದೇಶಾನುಗ್ರಹ ಮಾಡಿದ್ದು ಯಾವ ಲೋಕದಲ್ಲಿಯಾದರೂ ಉಂಟೆ? ಕಾರಣ ಲಿಂಗಧರಿಸಿದವರೆಲ್ಲ ಸಂಗಮ ದೇವರೆಂದೇ ಭಾವಿಸುವೆನು !

**೧೧೦೩ ಆನು ನಿಮ್ಮ ಬಂಟರ ಬಂಟನಯ್ಯಾ;**
**ಆನು ನಿಮ್ಮ ಲೆಂಕರ ಲೆಂಕನಯ್ಯಾ;**
**ಆನು ನಿಮ್ಮ ತೊತ್ತಿನ ಪಡಗವ ತೆಗೆವ ಪಡಿದೊತ್ತಯ್ಯಾ!**
**ಕೂಡಲ ಸಂಗನ ಶರಣರಿಗೆಲ್ಲ ಸಂಗನ ಬಸವನ ಬಿನ್ನಪವು**
**ಕವಳಿಗೆ ಸಂದಿತ್ತು; ನಿಮ್ಮ ಜನಪದದಲ್ಲಿ ಬೆರೆಸೆಂದು**
**ಕೃಪೆಮಾಡಿರಯ್ಯಾ !**

ನಾನು ನಿಮ್ಮ ಶೂರರಲ್ಲಿ ಮಹಾಶೂರನು; ನಿಮ್ಮ ದಾಸರಲ್ಲಿ ಶ್ರೇಷ್ಠ ದಾಸನು; ಅಲ್ಲದೆ ನಿಮ್ಮ ಆಳಿನ ಆಳಾಗಿ ದುಡಿಯುವ ಆಳು ನಾನು; ಕಾರಣ ನನಗೆ ನಿಮ್ಮ ನಿಜೈಕ್ಯದ ಭಾಗ್ಯವನ್ನು ದಯಪಾಲಿಸಿರಿ!

**೧೧೦೪ ಆದಿಯನರುಹಿದ, ಅನಾದಿಯ ತೋರಿದ,**
**ಇಹವ ಕೆಡಿಸಿದ, ಪರವ ನಿಲಿಸಿದ;**
**ಘನವ ತೋರಿದ; ಮನವ ಸರಸವಿಟ್ಟು ಅನುವ ತೋರಿದ!**
**ಆಯತ್ತವ ಮಾಡಿ, ತನುವ ಮರಸಿ,**
**ಮಹಾತನುವನರುಹಿದ !**
**ಹಿಂದಣ ಪೂರ್ವಾಶ್ರಯವ ಹಿಂದುಮಾಡಿ ತೋರಿ**

**ಮುಂದಣ ಗತಿಯು ಸಂದೇಹವ ಬಿಡಿಸಿದ !**
**ಕೂಡಲ ಸಂಗಮದೇವರಲ್ಲಿ**
**ಪ್ರಭುವಿನ ಶ್ರೀಪಾದಕ್ಕೆ ನಮೋ ನಮಃ ಎನುತಿರ್ದೆನು !**

ಸೃಷ್ಟಿಯ ವಿವಿಧ ಮುಖಗಳನ್ನು ತಿಳಿಸಿಕೊಟ್ಟ ಅವುಗಳಿಗೆಲ್ಲ ಮೂಲ ಕಾರಣ ಪುರುಷನು 'ಸತ್' ಎಂಬ ಅನಾದಿಯನ್ನು ನನಗೆತೋರಿಸಿ ಜಗತ್ತಿನ ಮಾಯೆಯನ್ನು ಹೊಡೆದೋಡಿಸಿ ನನ್ನಮನಸ್ಸು ಪರಂಜ್ಯೋತಿಯಲ್ಲಿ ದೃಢವಾಗುವಂತೆ ಮಾಡಿದನು; ಕಾರಣ ಹಿಂದಿನ ಜನ್ಮದ ಎಲ್ಲ ಪಾಪಗಳು ನಾಶವಾಗಿ ಸದ್ಗತಿಗೆ ದಾರಿಯಾಯಿತು! ಅಂಥ ಶ್ರೀ ಪ್ರಭುವಿನ ಚರಣಗಳಿಗೆರಗುವೆನು !

**೧೧೦೫ ಆದಿಯಲ್ಲಿ ಸಾಧ್ಯವೆಂಬೆನೆ ?**
**ಅಲ್ಲಿಂದತ್ತತ್ತ "ಸಾಧ್ಯಾಸಾಧ್ಯ" ಸೂತಕ ಶಬ್ದಕ್ಕತೀತ !**
**ಆ ಲಿಂಗವೆ ಆಲಿಂಗನವಾಗಿ ಅವಿರಳ ಸಂಪನ್ನವಾದಲ್ಲಿ**
**ಭೇದ ಭಾವವುಂಟೆಂಬೆನೆ ? ಅದೇ ಭವಕ್ಕೆ ಬೀಜ !**
**ಎನ್ನ ಪ್ರಾಣಲಿಂಗ ನೀವೆಂದಿತ್ತೆನಯ್ಯಾ !**
**ಕೂಡಲ ಸಂಗಮ ದೇವಾ !**

ಆದಿ ಲಿಂಗವು ನನಗೆ ಆಲಿಂಗನ ಮಾಡಿರುವಾಗ ಸಾಧ್ಯ ಮತ್ತು ಅಸಾಧ್ಯವೆಂದು ಭೇದ ಮಾಡಿದರೆ ಆ ಭೇದವೇ ಪುನರ್ಜನ್ಮಕ್ಕೆ ಬೀಜವಾಗುತ್ತದೆ; ಕಾರಣ ನಾನು ಆ ಭೇದಗಳನ್ನು ಎಣಿಸದೆ ನನ್ನ ಪ್ರಾಣವೇ ನೀವೆಂದು ಶಾಶ್ವತವಾಗಿ ನಂಬಿಕೆ ಇಟ್ಟಿರುವೆ ಕೂಡಲ ಸಂಗಮ ದೇವಾ!

**೧೧೦೬ ಆದಿಯ ಲಿಂಗವ ತಂದಾತ ಅಲ್ಲಯ್ಯಾ;**
**ಅನಾದಿಯ ಲಿಂಗವ ತಂಥಾತ ಅಲ್ಲಯ್ಯಾ !**
**ಭಾಪುರೇ ! ಜಂಗಮವೇ, ನಿರ್ಮಲನನುಗ್ರಹಿಸಿದಿರಿ!**
**ನಿಮಗೋಸುಗ ಮಾಡುವ ಮಯಿದಾನವನು ನಡೆಗೆಟ್ಟು**
**ಮಾಡುವೆನು;**
**ಸರ್ವ ಕುಳಕ್ಕೆ ನೀನೆಂದು ಅಲ್ಲಯ್ಯನ ಶ್ರೀಪಾದಕ್ಕೆ**
**ಕೈಯಾನುವೆನು !**

**ನವ ಬ್ರಹ್ಮರ ಕೇರಿಯೊಳಗೆ ಅಲ್ಲಯ್ಯನ ಪ್ರಭೆ;**
**ರುದ್ರಭೂಮಿಯೊಳಗೆ ಅಲ್ಲಯ್ಯನ ಪ್ರಭೆ;**
**ಬಂದು ನಿಂದ ನಿಲವಿಂಗೆ ಅಲ್ಲಯ್ಯನ ಪ್ರಭೆ !**
**ಸುಯಿದಾನವಿಲ್ಲದಿರೆ ಎನ್ನ ನೀಡುವೆನು ಕೂಡಲ ಸಂಗಮ ದೇವಾ !!**

ಅಲ್ಲಮ ಪ್ರಭುಗಳು ಆದಿ ಮತ್ತು ಅನಾದಿಗಳೆರಡನ್ನೂ ತಮ್ಮ ಅಂತ ರಂಗದಲ್ಲಿ ಏಕೀಭಾವದಿಂದ ಕಂಡು ತಾವು ಸ್ವತಃ ಪರಂಜ್ಯೋತಿಗಳಾ ದರು; ಅವರ ಪ್ರತಿಭೆಯು ಬ್ರಾಹ್ಮಣರಲ್ಲಿ, ವೀರಾಗ್ರಣಿಗಳಲ್ಲಿ ಮತ್ತು ಯೋಗಿಗಳಲ್ಲಿಯೂ ಒಂದೇ ಸಮನಾಗಿ ಪಸರಿಸಿದೆ; ಅವರ ಆಶೀರ್ವಾದ ದ ಬಲದಿಂದ ನಾನು ಕೂಡಲ ಸಂಗಮದೇವಾ ನಿಮಗೆ ನನ್ನನ್ನೇ ನಿವೇದಿಸು ವೆನು, ಸ್ವೀಕರಿಸಿರಿ !

**೧೧೦೭ ಇಂದ್ರನ ಬೆಸನ ಉಪೇಂದ್ರನ ಓಲಗ**
**ಚಂದ್ರಮೌಳಿಯುನರಿಯದೆ ಹೋಯಿತ್ತು !**
**ಬಂಧ ಮೋಕ್ಷದ ಭವಬಂಧನ ಬಿಡದನ್ನಕ್ಕ**
**ಮತ್ತೊಂದರ ಮುಖ ಜನಿಸಿತ್ತಲ್ಲಾ !**
**ಕೂಡಲ ಸಂಗಮ ದೇವಾ,**
**ಚೆನ್ನ ಬಸವಣ್ಣನ ಸನ್ನಿಧಿಯಿಂದಲಾನು ಬದುಕಿದೆನು.**

ಇಂದ್ರ ದೇವರ ರಾಜದಂಡವು ಮತ್ತು ಉಪೇಂದ್ರನ ಸಭೆಯು ಶಿವನ ಮಹಿಮೆಯನ್ನು ತಿಳಿಯದೇ ಅಸಮರ್ಥವಾದವು, ಕಾರಣ ಶಿವಜ್ಞಾನವಿ ಲ್ಲದೆ ಸಂಸಾರದ ಬಂಧನ ತಪ್ಪುವುದಿಲ್ಲ. ಆ ಬಂಧನಮುಕ್ತಿಯಾಗದಿರುವು ದರಿಂದ ಪುನರ್ಜನ್ಮ ಸಂಭವಿಸುತ್ತದೆ; ಕೂಡಲ ಸಂಗಮದೇವಾ, ಚೆನ್ನ ಬಸವಣ್ಣನ ಸಂಗದಿಂದ ನಾನು ಬದುಕಿರುವೆನು !

**೧೧೦೮ ಎಡಪಾದದಲೊದ್ದರೆ ಬಲದ ಪಾದವ ಹಿಡಿವೆ;**
**ಬಲದ ಪಾದದಲೊದ್ದರೆ ಎಡದಪಾದವ ಹಿಡಿವೆ !**

**ತ್ರಾಹಿ, ತ್ರಾಹಿ; ತಪ್ಪೆನ್ನದು, ಕ್ಷಮೆ ನಿಮ್ಮದು !**
**ಕೂಡಲ ಸಂಗಮ ದೇವಾ, ನಿಮ್ಮ ಕರುಣದ ಕಂದ ನಾನು!!**

ಕೂಡಲ ಸಂಗಮ ದೇವಾ ನೀವು ಎಡಗಾಲಿನಿಂದ ಒದ್ದರೆ ನಿಮ್ಮ ಬಲಗಾಲಿಗೆ ನಮಿಸುವೆನು; ಬಲಗಾಲಿನಿಂದ ನೀವು ಒದ್ದರೆ ನಿಮ್ಮ ಎಡಗಾಲಿಗೆ ನಮಿಸುವೆನು; ತಪ್ಪುಮಾಡಿದವನು ನಾನೆ;ಆದರೆ ನಾನು ನಿಮ್ಮ ಕರುಣೆಯ ಕಂದನಾಗಿರುವೆನಾದುದರಿಂದ ನನ್ನನ್ನು ಕ್ಷಮಿಸಿ ಕಾಪಾಡಬೇಕು.

**೧೧೦೯ ಎನ್ನ ಕಾಯಕವ ಶುದ್ಧ ಮಾಡಿದಾತ ಮಡಿವಾಳ**
**ಎನ್ನ ಮನವ ನಿರ್ಮಳ ಮಾಡಿದಾತ ಮಡಿವಾಳ**
**ಎನ್ನಂತರಂಗವ ಬೆಳಗಿದಾತ ಮಡಿವಾಳ**
**ಎನ್ನ ಬಹಿರಂಗವ ಬಿಡಿಸಿದಾತ ಮಡಿವಾಳ !**
**ಕೂಡಲ ಸಂಗಮ ದೇವಾ,**
**ಎನ್ನ ನಿಮಗೆ ಯೋಗ್ಯವ ಮಾಡಿದಾತ ಮಡಿವಾಳ !!**

ನನ್ನ ದೇಹ ಮನಸ್ಸುಗಳನ್ನು ತೊಳೆದು ಸ್ವಚ್ಛಮಾಡಿ ನನ್ನ ಅಂತರಂಗದಲ್ಲಿ ಜ್ಞಾನ ದೀಪದ ಬೆಳಕಾಗಿ ನಿಂತವನೂ ಮಡಿವಾಳನೆ; ಕೂಡಲ ಸಂಗಮ ದೇವಾ, ನಿಮ್ಮ ಕರುಣೆಗೆ ಯೋಗ್ಯನನ್ನಾಗಿ ಮಾಡಿದ ತಂದೆಯೂ ಮಡಿವಾಳನೇ ಇರುವನು; ಅವನ ಗುಣಗಾನವನೆಂದು ಹೇಳಲಿ!

**೧೧೧೦ ಎನ್ನ ಗತಿ ಮತಿ ನೀನೇ, ಕಂಡಯ್ಯಾ !**
**ಎನ್ನ ಗುರು ಪರಮ ಗುರು ನೀನೆ, ಕಂಡಯ್ಯಾ !**
**ಎನ್ನಂತರಂಗದ ಜ್ಯೋತಿ ನೀನೆ, ಕಂಡಯ್ಯಾ !**
**ಕೂಡಲ ಸಂಗಮ ದೇವಾ,**
**ನೀನೆ ಎನಗೆ ಗುರು, ನಾನೇ ನಿಮ್ಮ ಶಿಷ್ಯನೆಂಬುದ**
**ನಿಮ್ಮ ಶರಣ ಸಿದ್ಧರಾಮದೇವರು ಬಲ್ಲರು;**
**ಕೃಪೆ ಮಾಡಾ ಪ್ರಭುವೇ.**

ನನಗೆ ಸದ್ಗತಿ ನೀಡುವವನೂ ಮತ್ತು ಒಳ್ಳೆಯ ಬುದ್ಧಿ ಕೊಡುವವನೂ ನೀನೇ ಇರುವಿ; ನನ್ನ ಸದ್ಗುರುವೂ ಸಹಿತ ನೀನೇ; ಅಂತರಂಗದಲ್ಲಿ

ಉರಿಯುತ್ತಿರುವ ಜ್ಯೋತಿಯೂ ನೀನೆ. ಕೂಡಲ ಸಂಗಮ ದೇವಾ, ನಾನು ನಿಮ್ಮ ಶಿಷ್ಯನು. ಈ ಮಾತು ಸಿದ್ಧರಾಮದೇವರಿಗೆ ಗೊತ್ತಿದೆ; ಕಾರಣ ನನ್ನ ಮೇಲೆ ಕೃಪೆ ಮಾಡು.

೧೧೧೧ ಕರ್ತನಟ್ಟಿದರೆ ಮರ್ತ್ಯದಲ್ಲಿ ಮಹಾ ಮನೆಯ ಕಟ್ಟಿದೆ;
ಸತ್ಯ ಶರಣರಿಗೆ ತೊತ್ತು ಭೃತ್ಯನಾಗಿ ಸವೆದು ಬದುಕಿದೆನು.
ಕರ್ತನ ಬೆಸನು ಮತ್ತೆ ಬರಲೆಂದಟ್ಟಿದರೆ
ಕೂಡಲಸಂಗಮದೇವರ ನಿರೂಪಕ್ಕೆ ಮಹಾಪ್ರಸಾದವೆಂದೆನು

ಸೃಷ್ಟಿಕರ್ತನಾದ ಜಗದೀಶ್ವರನು ಜನ್ಮವಿತ್ತರೆ ಈ ಲೋಕದಲ್ಲಿ ಒಂದು ಪುಣ್ಯದ ಮನೆ ಕಟ್ಟಿದೆನು; ಅಲ್ಲದೆ ಸತ್ಯಸಂಧರಾದ ಶರಣರಿಗೆ ಆಳಾಗಿದ್ದು ಕೊಂಡು ಜೀವನ ಸಾಗಿಸಿದೆನು; ಜಗದೊಡೆಯನು ನೀನು ಮತ್ತೆ ಹುಟ್ಟಿ ಬಾ ಎಂದು ಆಜ್ಞೆ ವಿಧಿಸಿದರೆ ಅದು ಮಹಾಪ್ರಸಾದವೆಂದು ತೆಗೆದುಕೊಳ್ಳುವೆನು.

೧೧೧೨ ಕಾಲ ಮುಟ್ಟಲಮ್ಮದ ಸುಯಿಧಾನ, ಕಲ್ಪಿತವಿಲ್ಲದ
ಸುಯಿಧಾನ;
ಅನಂತರತಿಯೆಂಬ ಹೆಂಗೂಸು ಮುಟ್ಟದ ಸುಯಿಧಾನ—
ಭಾಳಲೋಚನನೆಂಬ ಜಂಗಮ ಮುಟ್ಟದ ಸುಯಿಧಾನ-
ಎಲ್ಲೆಲ್ಲಿಯೂ ಮುಟ್ಟದ ಸುಯಿಧಾನವ ನಿಮಗರ್ಪಿಸಿ-
ದೆನು,
ಆರೋಗಿಸಯ್ಯಾ, ಪ್ರಭುವೆ, ಕೂಡಲ ಸಂಗಮದೇವಾ.

ಕಾಲರಾಯನಿಂದಲೂ, ಅನಂತ ರತಿಯೆಂಬ ಸ್ತ್ರೀಯಿಂದಲೂ ಮತ್ತು ಮುಕ್ಕಣ್ಣನಿಂದಲೂ ಕೈಯಿಂದ ಮುಟ್ಟಲೂ ಅಸಾಧ್ಯವಾದ ನೈವೇದ್ಯವನ್ನು ಕೂಡಲ ಸಂಗಮ ದೇವಾ, ನಿಮಗೆ ನೇಮದಿಂದ ನಿವೇದಿಸಿರುವೆನು ಸ್ವೀಕರಿಸಿರಿ ಪ್ರಭುವೆ ?

೧೧೧೩ ಘನವನರಿದ ಘನವ ವೇಧಿಸಿ
ಘನ ಗುರುವ ತನ್ನೊಳಗೆ ಬೈಚಿಟ್ಟ ಪರಿಣಾಮಿಯ
ನೋಡಯ್ಯಾ
ಗುರು ಲಿಂಗಜಂಗಮದಲ್ಲಿ
ತನು ಮನ ಧನವ ವೇಧಿಸುವ ಪರಿಯನೋಡಾ !
ಕಾಯ ಪ್ರಸಾದದಲ್ಲಿ ಸ್ವಾಯತವ ಮಾಡಿಕೊಂಡಿಪ್ಪ
ಪರಿಯ ನೋಡಾ.
ಷಡುಸ್ಥಾನದಲ್ಲಿ ಸ್ವಾಯತವಾದ ಕೂಡಲ ಸಂಗಮ
ದೇವರಲ್ಲಿ
ಚೆನ್ನ ಬಸವಣ್ಣನು

ದೇಹಕ್ಕೆ ಹಿಂಸೆಕೊಟ್ಟು ಜಗದ್ವ್ಯಾಪಕನಾದ ಘನಮಹಿಮನನ್ನು ಜ್ಞಾನದಿಂದ ತಿಳಿದುಕೊಂಡೆನು; ಅಂಥ ಮಹಿಮಾಪುರುಷನಾದ ಗುರುವನ್ನು ತನ್ನಂತರಂಗದಲ್ಲಿ ಅಡಗಿಸಿಟ್ಟುಕೊಂಡ ಶರಣನನ್ನು ನೋಡಯ್ಯಾ ! ಅಂಗ ದಲ್ಲಿ ಲಿಂಗವು ಕೂಡಿಕೊಂಡಿರುವ ರೀತಿಯನ್ನು ನೋಡು; ಹೀಗೆ ಐಕ್ಯಸ್ಥಲ ದಲ್ಲಿ ಬಂದು ನಿಂತನು ಚೆನ್ನ ಬಸವಣ್ಣನು.

೧೧೧೪ ಕಾಲಿಲ್ಲದೆ ನಡೆವನು, ಕೈಯಿಲ್ಲದೆ ಹಿಡಿವನು,
ಕಣ್ಣಿಲ್ಲದೆ ನೋಡುವನು ಸಹಜವಾಗಿ !
ಮೈಯಿಲ್ಲದ ಬಣ್ಣ, ಮಥನವಿಲ್ಲದ ಕೂಟ !
ಅಲ್ಲಿ ಸ್ವೈವೆರಗಾಗಿ ಶಿಲೆಯ ಮೇಲಿಹ ಒಡಲು !
ತನ್ನ ತಾನರಿಯದೆ ಬಿಡದೆ,
ಎನ್ನ ಬೆಂಬತ್ತಿ ಬಂದ ಪರಿಯ ನೋಡಾ !
ಜಡವಿಡಿದ ಎನ್ನ ಕಾಯದ ಕೆಳವಳವ ತಿಳುಹಲೆಂದು
ಅಡಿಗಡಿಗೆ ಅನುಭಾವ ತೋರುತ್ತಿದ್ದಾನೆ !
ಕುಳ್ಳಿಡೆಯಲ್ಲಿ ಕುಂಟನಿದ್ದೆಡೆಯಲ್ಲಿ ಹೆಳವ:
ಎಲ್ಲಿ ನೋಡಿದಡಲ್ಲಿ ಪರಿಪೂರ್ಣನು !
ಮೆಲ್ಲ ಮೆಲ್ಲನೆ ಒಳಗನೊರೆದು ತೋರುತ್ತಿದ್ದಾನೆ

**ಬಲ್ಲವರೆಲ್ಲ ಬದುಕಿ ಎಂದು !**
**ಝಲ್ಲರಿಯ ಮೇಲೊಂದು ಬೆಳುಗೋಡೆಯ ಹಿಡಿದು**
**ಬಲ್ಲಿದದಾನೆಯ ತಡೆದು ನಿಲ್ಲಿಸಬಲ್ಲನು !**
**ಕೂಡಲ ಸಂಗಮ ದೇವರ ಮನೆಯಲ್ಲಿ**
**ಪ್ರಭು ದೇವರ ಮರೆಹೊಕ್ಕು ಬದುಕಿದೆ ನಾನು !**

ಬಿಂದು ಮತ್ತು ಸಿಂಧುವಾಕಾರನಾದ ಲಿಂಗವು ಪ್ರಜ್ಞಾನ ಘನನಾಗಿಯೂ ಚೈತನ್ಯಯುತನಾಗಿಯೂ ಯಾವ ತರಹದ ಘರ್ಷಣೆಯಿಲ್ಲದೆ ತನ್ನ ತಾನು ತಿಳಿದು ಹಬ್ಬಿರುವ ಅಗಾಧವನ್ನು ನೋಡಿರಿ; ಜಡ ಜೀವಿಯಾದ ನನಗೆ ಹೆಜ್ಜೆಹೆಜ್ಜೆಗೆ ತನ್ನ ಪೂರ್ಣತ್ವದ ಸಾಕ್ಷಾತ್ಕಾರವನ್ನು ತೋರಿಸುತ್ತಲಿದ್ದಾನೆ; ಜಾಳಿಗೆಯ ಮೇಲೊಂದು ಬಿಳಿ ವಸ್ತ್ರವನ್ನು ಹಾಸಿ ಅದರ ಮೇಲೆ ಬಲ್ಲವರು ಮುಕ್ತಿಯುಕ್ತರು ಮಹಾ ಬಲವುಳ್ಳ ಆನೆಯಂತಿರುವ ಮಹಾ ಲಿಂಗವನ್ನು ಹಿಡಿದಿಡುತ್ತಾರೆ; ಕೂಡಲ ಸಂಗಮ ದೇವರ ಮನೆಯಲ್ಲಿ ಪ್ರಭುದೇವರ ಬೆನ್ನಿಗೆ ಬಿದ್ದು ನಾನು ಬದುಕಿರುವೆನು.

**೧೧೧೫ ಖಂಡ ಮಂಡಿಗೆ ಬೆಲ್ಲ ದ್ರಾಕ್ಷೆ ಸಕ್ಕರೆ ಸರಿಭಾಗವಾದ**
**ಹೊಸ ಹೆಸರ ಭಕ್ಷ್ಯ ಪನ್ನೆರಡು ಖಂಡುಗ !**
**ಸುಲಿಗಡಲೆಯ ಕಜ್ಜಾಯ ಹದಿನೆಂಟು ಖಂಡುಗ !**
**ಅಕಾಲ ಮಾವಿನ ಹಣ್ಣು ಇಪ್ಪತ್ತು ನಾಲ್ಕು ಲಕ್ಷ !**
**ಕಡೆಯಿಲ್ಲದ ಕದಳಿಯಫಲ ! ಚಾರಬೀಜ ಎಂಭತ್ತು ಖಂಡುಗ !**
**ತವರಾಜ, ಹೆತ್ತುಪ್ಪ, ಹಲಸಿನ ಹಣ್ಣಿಮನ ಮೇರೆ !**
**ಹಾಲ ಕೆನೆ ಹದಿನೆಂಟು ಖಂಡುಗ !**
**ಉತ್ತತ್ತಿ ಚಿಲಪಾಲ ಘಟ್ಟ, ಕಟ್ಟಣೆಯಿಲ್ಲಾ !**
**ಮನವೊಲಿದ ಕಜ್ಜಾಯವನಾರೋಗಣೆಯಮಾಡಾ,**
**ಕೂಡಲ ಸಂಗಮ ದೇವಾ.**

ಕೂಡಲ ಸಂಗಮದೇವಾ, ನಿನ್ನ ನೈವೇದ್ಯಕ್ಕಾಗಿ, ಒಂದು ಖಂಡುಗ ಮಂಡಿಗೆ ಮಾಡಿಸಿರುವೆನು; ಬೆಲ್ಲ, ದ್ರಾಕ್ಷಿ; ಸಕ್ಕರೆಗಳನ್ನು ಸಮಭಾಗಗಳಲ್ಲಿ

ಬೆರಸಿ ಮಾಡಿಸಿದ ಅಡಿಗೆಗಳು ಹನ್ನೆರಡು ಖಂಡುಗಗಳಾಗಿವೆ; ಇವುಗಳಲ್ಲದೆ ನೆಲಗಡಲೆ ಕಾಯಿಯ ಕಜ್ಜಾಯ, ಅಕಾಲ ಮಾವಿನಹಣ್ಣು, ಬಾಳಿಹಣ್ಣು, ಹಲಸಿನ ಹಣ್ಣು ಹೀಗೆ ನಾನಾ ವಿಧದ ಹಣ್ಣುಗಳು ಸಿದ್ಧವಿವೆ; ನಿನ್ನ ಪ್ರೀತಿಯ ವಸ್ತುಗಳಾದ ಈ ಸಪ್ತಕಜ್ಜಾಯಗಳನ್ನು ಸ್ವೀಕರಿಸು ದೇವಾ !

೧೧೧೬ ನೀಲದ ಮಣಿಯೊಂದು ಮಾಣಿಕ್ಯವ ನುಂಗಿದರೆ
ವಜ್ರಬಂದು ಅದ ಬೆಂದುಗಳಿಸಿತ್ತು ನೋಡಾ!
ಅಡಗಿರ್ದ ಮಾಣಿಕ್ಯ ನೀಲದ ತಲೆಯ ಮೆಟ್ಟಿ
ಅನಂದ ನಾಟ್ಯವನಾಡುತ್ತಿದ್ದಿತ್ತು !
ಅಂಬರದೊಗಣ ಮುಗ್ಧೆ ಕಂಗಳ ಮುತ್ತಿನ ಮಣಿಯ
ಮಥನವಿಲ್ಲದೆ ನುಂಗಿ ಉಗುಳುತ್ತಿದ್ದಳು!
ಲಿಂಗ ಜಂಗಮವೆಂಬುದ ಇಂದರಿದು ಸುಖಿಯಾದೆನು!
ಕೂಡಲ ಸಂಗಮ ದೇವರಲ್ಲಿ ಪ್ರಭುವಿನ ಕೃಪೆಯಿಂದಾನು
ಬದುಕಿದೆನು.

ನೀಲ ಮಣಿಯು ತನ್ನ ನೀಲಿಯ ಛಾಯೆಯನ್ನು ಮಾಣಿಕ್ಯದ ಮೇಲೆ ಹಾಕಿ ತನ್ನ ಹಾಗೆ ಮಾಡಿಕೊಂಡಾಗ ವಜ್ರವು ತನ್ನ ಕಠೋರತೆಯಿಂದಲೂ ಪ್ರಕಾಶದಿಂದಲೂ ನೀಲಮಣಿಯನ್ನು ಕಳೆಗುಂದಿಸಿ ಮಾಣಿಕ್ಯದ ಶಕ್ತಿಯನ್ನು ಹೆಚ್ಚಿಸಿತು,ಮಾಣಿಕ್ಯವು ಆ ನೀಲಮಣಿಯ ತಲೆಯ ಮೇಲೆ ನಿಂತು ಆನಂದದಿಂದ ನಾಟ್ಯವನ್ನಾಡತೊಡಗಿತು; ಆಕಾಶದಲ್ಲಿ ಮಿಂಚಿ ಮಾಯವಾಗುವ 'ಮಿಂಚು' ಕಣ್ಣಿನ ಬೆಳಕನ್ನು ಕೆಡಿಸಿತ್ತು;ಈ ಪೀಡೆಗಳನ್ನು ಪರಿ-ಹರಿಸಿಕೊಂಡು ಇಂದು ಜಂಗಮ ಲಿಂಗವೆರಡೂ ಒಂದೇ ಎಂಬುದನ್ನು ತಿಳಿದು ಸುಖಿಯಾಗಿ ಬದುಕಿರುವೆನು !

೧೧೧೭ ಕೃತಯುಗ ತ್ರೇತಾಯುಗ ದ್ವಾಪರಯುಗ ಕಲಿಯುಗಂಗಳು
ಭವರಾಟಳದಲ್ಲಿ ತಿರುಗುತ್ತಿಪ್ಪಲ್ಲಿ,

ಅನಂತ ಕೋಟಾನುಕೋಟಿ ಯುಗಂಗಳು ಮಡಿದು ಹೋದವು;
ಅನಂತ ಜಲಪ್ರಳಯಂಗಳು ಸರಿಸರಿದು ಹೋದವು;
ಹದಿನಾಲ್ಕು ಲೋಕಂಗಳೆಂಬ ಅನಂತಕೋಟಿ ಬ್ರಹ್ಮಾಂಡ ಗಳೆಲ್ಲಾ
ಲಯವಾಗಿ ಹೋದವು !
ಇದರೊಳಗೆ ಆವ ಲೋಕದಲ್ಲಿ ಆವ ಯುಗದಲ್ಲಿ
ಪ್ರಾಣಲಿಂಗ, ಲಿಂಗಪ್ರಾಣವೆಂಬ ಭೇದವನರುಹಿದವ- ರಾರು ಹೇಳಾ ?
ಗಂಗೆ ಗೌರಿವಲ್ಲಭರು ಮೊದಲಾದ ಅನಂತಕೋಟಿ ರುದ್ರಾ ದಿಗಳೆಲ್ಲರೂ
ಪ್ರಾಣಲಿಂಗ ಸಂಬಂಧದ ಹೊಲಬನರಿಯದೆ
ಅಣಿಮಾದಿ ಚತುರ್ವಿಧ ಫಲಪ್ರಾಪ್ತಿಗೆ ಒಳಗಾದರು.
ಶಿವಾಚಾರದ ವಿಚಾರವನರಿಯದೆ ಜಗವು ಕೆಟ್ಟಹುದೆಂದು
ಪರಮ ಪುರುಷಾರ್ಥ ಕಾರಣವಾಗಿ
ಮರ್ತ್ಯಲೋಕದಲ್ಲಿ ಅವತರಿಸಿ,
ಗುರುಲಿಂಗ ಜಂಗಮ ಪಾದೋದಕ ಪ್ರಸಾದವೆಂಬ
ಪಂಚಾಚಾರವ ನೆಲೆಗೊಳಿಸಿ,
ಷಟ್‌ಸ್ಥಳವೆಂಬ ಮಹಾನುಭಾವವಂ
ಕರತಳಾಮಳಕವಾಗಿ ಸ್ಥಲಗೊಳಿಸಿ,
ಪ್ರಾಣಲಿಂಗ, ಲಿಂಗಪ್ರಾಣವೆಂಬ ಭೇದವನೆನಗೆ ತಿಳುಹಿ,
ಎನ್ನ ಭ್ರಾಂತಿ ಸೂತಕವ ಬಿಡಿಸಿ,
ಲಿಂಗೈಕ್ಯವೆಂಬುದನೆನಗೆ ತೋರಿದೆಯಾಗಿ
ನಿನ್ನಿಂದಲಾನು ಸಂಗನ ಬಸವಣ್ಣನೆಂಬ ಹೆಸರು ಪಡೆ ದೆನು !
ಕೂಡಲ ಸಂಗಮ ದೇವರ ಸಾಕ್ಷಿಯಾಗಿ
ಎನಗೆ ನೀನು ಪರಮಾರಾಧ್ಯ, ಕಾಣಾ ಚೆನ್ನ ಬಸವಣ್ಣಾ !

ಈ ನಾಲ್ಕು ಯುಗಗಳು ಸಂಸಾರ ಚಕ್ರದಲ್ಲಿ ತಿರುಗುತ್ತಲಿವೆ; ಪರಿಭ್ರಮಣದಲ್ಲಿ ಎಷ್ಟೋ ಕೋಟಿ ಯುಗಗಳೂ ಎಷ್ಟೋ ಕೋಟಿ ಪ್ರಳಯಗಳೂ ಸಾಗಿಹೋಗಿವೆ; ಎಷ್ಟೋ ಸಲ ಹದಿನಾಲ್ಕು ಲೋಕಗಳೂ ಮತ್ತು ಅನಂತ ಕೋಟಿ ಬ್ರಹ್ಮಾಂಡಗಳೂ ನಾಶವಾಗಿ ಮತ್ತೆ ಹುಟ್ಟವೆ; ಇಂತಿರುವ ಈ ಯುಗದಲ್ಲಿ ಲಿಂಗವು ಬೇರೆ, ಪ್ರಾಣಲಿಂಗವು ಬೇರೆಯೆಂದು ಹೇಳಿದವರಾರು? ದೇವತೆಗಳೆಲ್ಲಾ ಮತ್ತು ದೇವಾಧಿದೇವರುಗಳೆಲ್ಲಾ ಪ್ರಾಣಲಿಂಗದ ಬಂಧುತ್ವವನ್ನು ತಿಳಿಯದಲೇ ನಾಲ್ಕು ಪ್ರಕಾರದ ಫಲಗಳಿಗೆ ಗುರಿಯಾದರು; ನಾನು ಈ ಭೂಲೋಕದಲ್ಲಿ ಲಿಂಗ ಪ್ರಾಣಲಿಂಗಗಳ ಏಕರೂಪತೆಯನ್ನು ತಿಳಿದುಕೊಂಡಿರುವೆನಾದುದರಿಂದ, ಪಂಚಾಚಾರ ಜ್ಞಾನವಾಗಿ ನನ್ನ ಹುಚ್ಚು ಅಳಿದು ಮುಕ್ತಿಯ ದಾರಿ ಸಿಕ್ಕಿತು. ಚೆನ್ನಬಸವಣ್ಣಾ ನೀವು ನನ್ನ ಆರಾಧ್ಯ ದೇವರು!

೧೧೧೮ ನೀರ ಒರಳ ಮಾಡಿ ನೆಳಲನೊನಕೆಯ ಮಾಡಿ
ಆಕಾರವಿಲ್ಲದಕ್ಕಿಯ ತಳಿಸುತ್ತಿರಲು
ಮೇಲುಗಿರಿಯಾಕಳು ಕರೆದ ಕ್ಷೀರದಲ್ಲಿ ಅಡುಗೆಯಮಾಡಿ
ನಾರಿಯು ಬಸುರೊಳಗೆ ಗಂಡ ಬಂದು ಕುಳ್ಳಿರಲು
ಮಾಡಿದಡಿಗೆಯ ಮಗ ಉಂಡು ಹೋಗಲು
ಮೇಲು ಕಯ್ಯ ತೆರೆದು ಸಂತೋಷದಿಂದ ಪ್ರಾಣಸಖಿ
ತನ್ನ ಗಂಡಂಗೆ ನೀಡುತ್ತಿರಲು
ಅರಳ ಹುಟ್ಟುಗೆಯಲ್ಲಿ ಹೊರಳಿ ಮಾಡುವ ಭೇದ
ಮರಳಿ ಕೂಡಲಿಕೆತೆಂತೊ ಋಣವಿಲ್ಲ!
ಕೆರಳಿ ಮುನಿದು ಗುಡಿಗುಡಿಸಿ ಗರ್ಜಿಸಲೊಡನೆ
ತೆರಳಲಮ್ಮದೆ ಅಂಜಿ ಒಳಗಡಗಿದ
ಶರಣ ಸತಿ, ಲಿಂಗ ಪತಿ, ಎಂಬ ಭಾಷೆ!
ನೀವು ಹರನ ಬಟ್ಟೆಯ ನೋಡಸುಯ್ಯ ಬೇಡಾ!
ಜನನ ಮರಣ ವಿರಹಿತ ಕೂಡಲ ಸಂಗನನುಭಾವ!
ಪ್ರಭುವಿನ ಶ್ರೀಪಾದದೊಳಗಿರ್ದು ಸುಖಿಯಾದೆನು.

ನೀರಿನಿಂದ ರಚಿತವಾದ ಒರಳಿನಲ್ಲಿ ನಿರಾಕಾರ ಲಿಂಗವೆಂಬ ಅಕ್ಕಿಯನ್ನು ಹಾಕಿ ನೆರಳಿನ ಒನಕೆಯಿಂದ ತಳಿಸುತ್ತಿರುವಾಗ ಮೇಲುಗಿರಿಯು ಆಕಳು ಕೊಟ್ಟ ಹಾಲಿನಿಂದ ಅಡುಗೆ ಮಾಡಿ ಇಟ್ಟಿರಲು, ಹೆಂಡತಿಯ ಗರ್ಭದಲ್ಲಿ ಗಂಡನು ಸ್ವತಃ ಪ್ರವೇಶ ಮಾಡಿ ಕುಳಿತಿರುವ ಸಮಯದಲ್ಲಿ, ಮಗನು ಮಾಡಿದ ಅಡುಗೆಯನ್ನು ಉಂಡು ಹೋದನು; ಆದರೆ ಸತಿಯು ತನ್ನ ಮುಕ್ತ ಹಸ್ತದಿಂದ ಸಂತೋಷಭರಿತಳಾಗಿ ತನ್ನ ಗಂಡನಿಗೆ ಉಣಬಡಿಸುತ್ತಿರುವಾಗ ಅವಳು ಕೂಸು ಹುಟ್ಟುವ ಕಾಲಕ್ಕೆ ಅಸಂತುಷ್ಟಿಯಾಗಿ ತೋರಿಸಿದ ಮುಖಭಾವ ಭೇದ ಪುನಃ ಒಂದಾಗಲು ಬರುವುದಿಲ್ಲ; ಆ ಋಣ ತೀರಿದಂತೆಯೇ ಸರಿ ! ಗಂಡಹೆಂಡಿರ ಜಗಳದ ಪರಿಣಾಮವಾಗಿ ಅಂತರಂಗದಲ್ಲಿ ಶರಣ ಸತಿ, ಲಿಂಗ ಪತಿ, ಎಂಬ ಕಲ್ಪನೆ ಮಾಡಿ ನಿಜವ ತಿಳಿದೆನು; ಜನನ ಮರಣ ವಿರಹಿತ ಕೂಡಲ ಸಂಗಮ ದೇವರ ಸಾಕ್ಷಾತ್ಕಾರ ಪಡೆದು ನಾನು ಸುಖಿಯಾಗಿರುವೆನು !

೧೧೧೯ ಪುಣ್ಯಗಳಹ ಕಾಲಕ್ಕೆ ಹಗೆಗಳು ತನ್ನವರಹರು
ಪುಣ್ಯಗಳಹ ಕಾಲಕ್ಕೆ ಮಣ್ಣು ಹೊನ್ನಹುದು
ಪುಣ್ಯಗಳಹ ಕಾಲಕ್ಕೆ ಹಾವು ನೇವಾಳಹುದು.
ಪುಣ್ಯಗಳಹ ಕಾಲಕ್ಕೆ ಅನ್ಯರು ತನ್ನವರಹರು.
ಇಂತಪ್ಪ ಪುಣ್ಯಗಳೆಲ್ಲವೂ ಭಕ್ತಿಯಿಂದಲಹುದು.
ಭಕ್ತಿ ಕೆಟ್ಟರೆ ಪುಣ್ಯವೂ ಕೆಡುವುದು.
ಇಂತಪ್ಪ ಭಕ್ತಿಯ ಪುಣ್ಯವು ಚೆನ್ನ ಬಸವಣ್ಣನಿಗೆ ಉಂಟಾಗಿ
ನಾನು ಬದುಕಿದೆನಯ್ಯಾ; ಕೂಡಲ ಸಂಗಮದೇವಾ.

ಪುಣ್ಯವಿದ್ದ ಕಾಲಕ್ಕೆ ವೈರಿಗಳೂ ಮಿತ್ರರಾಗುತ್ತಾರೆ; ಮಣ್ಣು ಬಂಗಾರವಾಗುತ್ತದೆ, ಹಾವು ಅರಿವೆಯ ಸಿಂಬಿಯಾಗುತ್ತದೆ; ಪರರು ಆಪ್ತಬಂಧುಗಳಾಗುತ್ತಾರೆ; ಇವೆಲ್ಲವುಗಳೂ ಲಭಿಸಬೇಕಾದರೆ ಭಕ್ತಿ ಬೇಕು; ಭಕ್ತಿ ಕೆಟ್ಟರೆ ಪುಣ್ಯವೂ ಕೆಟ್ಟುಹೋಗುತ್ತದೆ: ಇಂತಹ ಭಾಗ್ಯ ಚೆನ್ನಬಸವಣ್ಣನಿಗೆ ದೊರೆಯಿತು; ಅವನ ಕಾರುಣ್ಯದಿಂದ ನಾನೂ ಬದುಕಿದೆನು ಕೂಡಲ ಸಂಗಮದೇವಾ !

೧೧೨೦ ಬಸುರೇ ಬಾಯಾಗಿ ಬಾಯೇ ಬಸುರಾಗಿರಿಸಿದ;
ತೊಡೆದ ಕಣ್ಣೇ ತಲೆಯಾಗಿ ತಲೆಯೇ ಕಣ್ಣಾಗಿರಿಸಿದ;
ಕಾಲೇ ಕೈಯಾಗಿ ಕೈಯೇ ಕಾಲಾಗಿರಿಸಿದ;
ನೆಳಲ ಸುಟ್ಟು ಸೀರೆಯನುಡುಗೊರೆಯ ಕೊಟ್ಟನು;
ಮಥನವಿಲ್ಲದ ಸಂಗಸುಖವನೆನಗೆ ತೋರಿದನು—
ಕೂಡಲ ಸಂಗಮ ದೇವಾ,
ಪ್ರಭುವಿನ ಶ್ರೀಪಾದಕ್ಕೆ ನಮೋ ನಮಃ ಎನುತಿರ್ದೆನು.

ಮಾತನಾಡದ ಗರ್ಭಕ್ಕೆ ಬಾಯಿಕೊಟ್ಟನು; ಮಾತನಾಡುವ ಬಾಯಿಯನ್ನು ಬಂದುಮಾಡಿದನು; ಕಣ್ಣುಗಳನ್ನು ಕಳೆದು ಬುರುಡೆಯನ್ನಾಗಿ ಮಾಡಿ ತಲೆಬುರುಡೆಯನ್ನು ಕಣ್ಣಾಗಿ ಮಾಡಿದನು; ಕೈಗಳು ಕಾಲುಗಳಾದವು, ಕಾಲುಗಳು ಕೈಗಳಾದುವು– ಈ ಪ್ರಕಾರ ಅಂಗಾಂಗ ವ್ಯತ್ಯಾಸಮಾಡಿ ಶರೀರ ಛಾಯೆಯನ್ನು ಸುಟ್ಟು ಸೀರೆಯನ್ನು ಉಡುಗರೆಯಾಗಿ ಕೊಟ್ಟನು; ಘರ್ಷಣೆಯಿಲ್ಲದೆ ಸಂಗಸುಖವನ್ನು ನನಗೆ ದಯಪಾಲಿಸಿದನು; ಹೀಗೆ ಕೂಡಲ ಸಂಗಮ ದೇವರ ಕೃಪೆಪಡೆದು ಪ್ರಭುವಿನ ಪಾದಕ್ಕೆ ನಮಸ್ಕಾರ ಮಾಡಿ ನಾನು ಸುಖಿಯಾದೆನು.

೧೧೨೧ ಬಿತ್ತದೆ ಬೆಳೆಯದೆ ಬೆಳೆದ ಹೆಬ್ಬಲಸಿನ ರಾಶಿಯ ನೋಡಾ;
ಸುಗಂಧ ಬಂಧ ಬಂಧುರದಂತೆ ಹುಟ್ಟುತ್ತಿದೆ ಪರಿಮಳ !
ಆದಿ ಅನಾದಿಯಿಲ್ಲದೆ ಮುನ್ನವೆ ತನ್ನಂದವೆ ತಾನಾಗಿರ್ದ ಕಾರಣ
ಮುಟ್ಟದೆ ತಟ್ಟದೆ ಗುರು ಕಾರುಣ್ಯವ ಪಡೆದು,
ಲಿಂಗ ಸ್ವಯವಾಗಿ ಎನಗೆ ಗತಿ ಪಥವ ತೋರಿಸಬೇಕೆಂದು ಹಾಗಾದನು
ಕೂಡಲ ಸಂಗಮ ದೇವರಲ್ಲಿ ಚೆನ್ನ ಬಸವಣ್ಣನು !

ಬೀಜವನ್ನು ಹಾಕಿ ಬೆಳಸದೆ ತಾನೇ ಬೆಳೆದು ರಾಶಿಯಾಗಿರುವ ಹಲಸನ್ನು ನೋಡು; ಅದರಿಂದ ಸುಗಂಧವು ಮಧುರ ಭಾಂಧವ್ಯದಂತೆ ಹಬ್ಬು

ತ್ತಲಿದೆ; ಆದಿ ಅನಾದಿಗಳಿಗಿಂತ ಪೂರ್ವದಲ್ಲಿಯೇ ತನ್ನ ನಿಜರೂಪದಲ್ಲಿಯೇ ತಾನು ಹುಟ್ಟಿದ ಕಾರಣ ಯಾವ ಸಂಸ್ಕಾರಗಳನ್ನು ಬಯಸದೆ ಗುರುವಿನ ಕೃಪೆಪಡೆದು ಲಿಂಗಸಾಮೀಪ್ಯವನ್ನು ಹೊಂದಿ ಎಲ್ಲರಿಗೂ ಮುಕ್ತಿಯ ಮಾರ್ಗ ತೋರಿಸಲು ಚೆನ್ನಬಸವಣ್ಣನು ಕೂಡಲ ಸಂಗಮ ದೇವರಲ್ಲಿ ಐಕ್ಯ ಹೊಂದಿದನು!

**೧೧೨೨ ಭೂಮಿಯ ಸಾರಾಯದಲೊಂದು ತರು ಬೆಳೆದಿತ್ತು,**
**ನವರಸ ಫಲವನಿತ್ತಿತ್ತು ನೋಡಾ !**
**ಏನೆಂದರಿಯದೆ, ಏತೆಂದರಿಯದೆ ಮರುಳಾದೆನು ನಾನು !**
**ಮಾರಾರಿಯ ಬಲೆಯಲ್ಲಿ ಸಿಲುಕಿದೆನು;**
**ಕೂಡಲ ಸಂಗಮ ದೇವಯ್ಯಾ,**
**ಚೆನ್ನ ಬಸವಣ್ಣನಿಂದಲಾನು ಬದುಕಿದೆನು.**

ಸಾರವತ್ತಾದ ಈ ಭೂಮಿಯ ಮೇಲೆ ಒಂದು ಮರವು ಬೆಳೆದಿತ್ತು; ಅದು ಒಂಬತ್ತು ರಸಗಳಿಂದ ಕೂಡಿದ ಹಣ್ಣನ್ನು ಕೊಟ್ಟಿತು; ಆ ಹಣ್ಣು ಹೇಗೆ, ಎಂತು ಎಂಬುದನ್ನು ಪೂರ್ವಾಪೂರ್ವ ವಿಚಾರಮಾಡದೆ ನಾನು ಮರುಳಾದೆನು; ಕಾಲನ ಪಾಶದಲ್ಲಿ ಸಿಕ್ಕುಬಿದ್ದೆನು; ಕೂಡಲ ಸಂಗಮ ದೇವಾ, ಚೆನ್ನಬಸವಣ್ಣನು ನನ್ನನ್ನು ಬದುಕಿಸಿದನು.

**೧೧೨೩ ಮಾರಹಾರ ನೀಡಿದರೆ ತೆರಹಾರ ಕೈಕೊಳ್ಳುತೈದಾನೆ !**
**ಅಹುದಹುದು ದೇವರೆ, ಹಸಿವು ನಮಗೆ ಹೊಸತು !**
**ದೆಸೆದಿಕ್ಕೆಲ್ಲ ವಿಶ್ವತೋಮುಖದ ಕೂಡಲ ಸಂಗಮ ದೇವಂಗೆ**
**ದೆಸೆದೆಸೆಯಲ್ಲಿ ನೀಡಿ.**

ಬಂಡಿ ಆಹಾರವನ್ನಿಕ್ಕಿದರೆ ತುಸು ತುಸು ಉಂಡು ಹೋದನು ಶಿವನು; ದೇವರ ಹಸಿವೆಯು ನಮಗೆ ಹೊಸದು ಮತ್ತು ತಿಳಿಯದ್ದು; ವಿಶ್ವವೇ ಮುಖವಾಗಿರುವ ಕೂಡಲ ಸಂಗಮದೇವರಿಗೆ ಎಲ್ಲ ದಿಕ್ಪಾಲಕರೂ ಅಷ್ಟದಿಕ್ಕುಗಳಲ್ಲಿಯೂ ಉಣಬಡಿಸಬೇಕು.

೧೧೨೪ ಶಿಶುವೆನ್ನಬಹುದೆ ನಂಬಿಯಣ್ಣನ ?
ಸೂಕ್ಷ್ಮವೆನ್ನಬಹುದೆ ರವಿಯು ?
ಜಗವ ಬೆಳಗುವ ದೃಷ್ಟಿ ಕಿರಿದೆನ್ನಬಹುದೆ ?
ಸೃಷ್ಟಿಯು ಕಾಣ್ಬ ಭಾವಕಿರಿದೆನ್ನಬಹುದೆ ?
ಬಳ್ಳಿ ಲಿಂಗವಾದುದನು ಕೂಡಲ ಸಂಗಮದೇವ
ಕೇಳಯ್ಯಾ;
ಯುಗ ಜಗವೆಲ್ಲವನು ಮೀರಿದ ಶರಣನ ಕಿರಿದೆನ್ನ
ಬಹುದೆ ?
ಚೆನ್ನ ಬಸವಣ್ಣನ ಪಾದಕ್ಕೆ ನಮೋನಮಃ ಎಂಬೆನು.

ಕಾಯಕವೇ ಕೈಲಾಸವೆಂದರಿತ ನಂಬಿಯಣ್ಣನು ಸಣ್ಣ ಕೂಸಾಗ ಬಲ್ಲನೆ? ಸೂರ್ಯದೇವನು ಎಂದಾದರೂ ಸಣ್ಣದಾಗಬಹುದೆ? ಸೃಷ್ಟಿಯ ಅನಂತತೆಯನ್ನು ಏಕರೂಪತೆಯಲ್ಲಿ ಕಂಡುಕೊಳ್ಳುವ ಕಲ್ಪನೆಯು ಅಲ್ಪ ವಾಗಬಲ್ಲುದೆ? ಯುಗಗಳನ್ನೂ ಜಗವೆಲ್ಲವನ್ನೂ ಮೀರಿ ಕೀರ್ತಿಶಾಲಿಗಳಾದ ಶರಣರ ಪ್ರತಿಭೆ ಚಿಕ್ಕದೆ? ಎಂದಿಗೂ ಇಲ್ಲ. ಕರ್ಮಜ್ಞನಾದ ಚನ್ನಬಸವ-ಣ್ಣನ ಪಾದಕ್ಕೆ ಶಿರಬಾಗುವೆನು.

೧೧೨೫ ಶ್ರೋತ್ರದಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು;
ತ್ವಕ್ಕಿನಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು;
ನಾಸಿಕದಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು;
ನೇತ್ರದಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು;
ಜಿಹ್ವೆಯಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು;
ಇಂತೀ ಪಂಚೇಂದ್ರಿಯಂಗಳಲ್ಲಿ ಬ್ರಹ್ಮಚಾರಿಯಾಗಿ
ಕೂಡಲ ಸಂಗಮ ದೇವರಲ್ಲಿ ಎನ್ನನಾಗುಮಾಡಲಿಕೆ
ಬ್ರಹ್ಮಚಾರಿಯಾದನು ಪ್ರಭುದೇವರು.

ಶರಣರು ಪಂಚೇಂದ್ರಿಯಗಳಾದ, ಕಿವಿ, ಮೂಗು, ಚರ್ಮ, ನಾಲಿಗೆ, ಕಣ್ಣು ಮೊದಲಾದವುಗಳ ಕರ್ಮಗಳಲ್ಲಿ ಬ್ರಹ್ಮಚರ್ಯವನ್ನು ಆಚರಿಸ

ಬೇಕು; ಅವುಗಳನ್ನು ನಿಗ್ರಹಿಸಿ ತಮ್ಮ ಅಂಕಿತದಲ್ಲಿಟ್ಟುಕೊಳ್ಳಬೇಕು; ನನಗೆ ಮುಕ್ತಿಯ ಹಾದಿ ತೋರಿಸಬೇಕೆಂದು ಪ್ರಭುದೇವರು ಬ್ರಹ್ಮಚಾರಿಗಳಾದರು.

**೧೧೨೬ ಹೊನ್ನಿನ ಆಪ್ಯಾಯನಕ್ಕೆ ಬೋಳಾದವನಲ್ಲ;**
**ಹೆಣ್ಣಿನ ಆಪ್ಯಾಯನಕ್ಕೆ ಬೋಳಾದವನಲ್ಲ;**
**ಮಣ್ಣಿನ ಆಪ್ಯಾಯನಕ್ಕೆ ಬೋಳಾದವನಲ್ಲ !**
**ಕೂಡಲ ಸಂಗಮ ದೇವರಲ್ಲಿ**
**ಎನಗಾರೂ ಇಲ್ಲವೆಂದು ಬೋಳಾದ ಎನ್ನ ಪ್ರಭುದೇವರು.**

ಬಂಗಾರದ ತೃಪ್ತಿಗಾಗಿ ಸ್ವಾಮಿಯಾದವನಲ್ಲ; ಹೆಣ್ಣಿನ ರತಿಸುಖ ತೃಪ್ತಿಗಾಗಿ ಸನ್ಯಾಸಹೊಂದಿಲ್ಲ; ಮಣ್ಣಿನ ಆಸೆಗಾಗಿ ಸ್ವಾಮಿಯಾಗಿಲ್ಲ. ನಮ್ಮ ಪ್ರಭುದೇವರು ನನಗೆ ಸಂಬಂಧಿಕರು. ಕೂಡಲ ಸಂಗಮ ದೇವರ ಮಹಾಮನೆಯಲ್ಲಿ ಯಾರೂ ಇಲ್ಲವೆಂದು ತಿಳಿದು ನನಗೋಸ್ಕರ ಸನ್ಯಾಸ ತಳೆದರು ನಮ್ಮ ಪ್ರಭುದೇವರು.

**೧೧೨೭ ಬಡಗವಾಗಿಲ ಪೌಳಿಯು ರಭಸದಿಂಪೊಕ್ಕು**
**ಪಶ್ಚಿಮ ದ್ವಾರದ ಧವಳಾರಮಂ ಪಶ್ಚಿಮದಿ ಪೊಕ್ಕು**
**ತ್ರಿವಿಧಗತಿಯು ಶೂನ್ಯಸಿಂಹಾಸನದ ಮೇಲೆ**
**ತಸಹರವಾದಡೆ ನಂಬುವುದೆನ್ನಮನವು**
**ಕೂಡಲ ಸಂಗಮ ದೇವರು ಸಾಕ್ಷಿಯಾಗಿ**
**ನೀನು ನಮ್ಮ ಕೋಪಿಸಿದರೆ ಕೋಪಿಸು**
**ಚೆನ್ನ ಬಸವಣ್ಣಾ !**

ದಕ್ಷಿಣದ ಬಾಗಿಲ ಪೌಳಿಯನ್ನು ಅತಿ ವೇಗದಿಂದ ಹೊಕ್ಕು ಪಶ್ಚಿಮ ಬಾಗಿಲ ಬಳಿ ಇರುವ ಧವಲ ಮಂಟಪದಲ್ಲಿ ಪಶ್ಚಿಮದಲ್ಲಿಯೇ ಹೊಕ್ಕು ತ್ರಿಗುಣಗಳು ಶೂನ್ಯ ಸಿಂಹಾಸನದ ಮೇಲೆ ನಿಂತಾಗ ಆಳಲಿ ಬಳಲಿದರೆ ನನ್ನ ಮನಸ್ಸಿಗೆ ನೆಮ್ಮದಿ ಸಿಗುತ್ತದೆ; ಮತ್ತು ಸತ್ಯದಲ್ಲಿ ಮನಸ್ಸು ನಂಬಿಕೆಯನ್ನು

ಇಡುತ್ತದೆ; ಚೆನ್ನಬಸವಣ್ಣಾ, ನೀವು ಈ ಮಾತಿಗಾಗಿ ಕೋಪಿಸಬಹುದು; ನಾನು: ಅಂಜುವುದಿಲ್ಲ.

೧೧೨೮ **ಮುಗಿಲ ಮರೆಯು ಮಿಂಚಿನಂತೆ, ಒಡಲ ಮರೆಯು ಆತ್ಮನಂತೆ,**
**ನೆಲದ ಮರೆಯು ನಿಧಾನದಂತೆ**
**ಇಪ್ಪ ನಿಮ್ಮ ನಿಲವನಾರು ಬಲ್ಲರು !**
**ದೇವ ನಿಮ್ಮ ನಿಲವ ಹಲವು ಕಾಲದಿಂದ ಕಂಡು, ಕಂಡು,**
**ಕಡೆಗಾಣಿಸಿ ಮರೆದು ಮತಿಗೆಟ್ಟು ಮರುಳಾದೆನು !**
**ಎನ್ನ ತಪ್ಪಿಂಗೆ ತಡೆಯಿಲ್ಲ ಕಾಣಾ,**
**ತ್ರಾಹಿ, ತ್ರಾಹಿ, ಕಾಯುಯ್ಯಾ ಕೂಡಲ ಸಂಗಮದೇವಾ!**

ಮೋಡಗಳ ಮುಸುಕಿನಲ್ಲಿರುವ ಮಿಂಚಿನ ಹಾಗೆ, ದೇಹದಲ್ಲಡಗಿರುವ ಆತ್ಮನ ಹಾಗೆ ಮತ್ತು ನೆಲದಲ್ಲಿರುವ ದ್ರವ್ಯದಂತೆ ಇರುವ ನಿಮ್ಮನ್ನು ಯಾರು ತಿಳಿಯಬಲ್ಲರು ! ದೇವರೆ, ನಿಮ್ಮನ್ನು ತಿಳಿದೂ ತಿಳಿದೂ ನನ್ನ ಮರುವಿನಿಂದ ನಿಮ್ಮನ್ನು ಅಲಕ್ಷಿಸಿದ ಕಾರಣ ಬುದ್ಧಿಕೆಟ್ಟು ಹುಚ್ಚನಾಗಿರುವೆನು. ನನ್ನ ತಪ್ಪುಗಳಿಗೆ ನೆಲೆಯಿಲ್ಲ; ಕೂಡಲ ಸಂಗಮದೇವಾ, ದೊಡ್ಡಮನದಿಂದ ನನ್ನನ್ನು ಕಾಪಾಡಬೇಕು.

೧೧೨೯ **ಅಯ್ಯಾ ನಿಮ್ಮ ಮಹಾನುಭಾವಿಗಳ ಸಂಗದಿಂದೆನ್ನ ತನು ಶುದ್ಧವಾಯಿತ್ತು;**
**ಎನ್ನ ಸರ್ವಾಂಗ ಶುದ್ಧವಾಯಿತ್ತು;**
**ಆಲಿಕಲ್ಲ ಪುತ್ಥಳಿಯುನಪ್ಪಿಕೊಂಡಂತಾಯಿತ್ತು;**
**ಕೂಡಲ ಸಂಗಮದೇವಾ, ನಿಮ್ಮ ಶರಣ**
**ಪ್ರಭುದೇವರ ಕೃಪೆಯಿಂದ ಎನಗೊದವಿದ ಘನವ-ನೇನೆಂದು ಹೇಳಲಿ ?**

ತಂದೆಯೇ, ನಿಮ್ಮ ಶರಣರ ಸಮೀಪದಲ್ಲಿರುವ ಕಾರಣ ನನ್ನ ದೇಹವು ಪವಿತ್ರವಾಯಿತು; ಎಲ್ಲ ಅಂಗಾಂಗಳೂ ನಿರ್ಮಲಗೊಂಡವು;

ನನ್ನ ಹೃದಯವು ಅತಿ ಶುದ್ಧ ಮತ್ತು ಶುಭ್ರವಾದ ಪಾಷಾಣದಲ್ಲಿ ಕೊರೆದ ಮೂರ್ತಿಯಂತೆ ರೂಪತಳೆದು ನನಗೆ ಆನಂದವನ್ನುಂಟು ಮಾಡಿತು. ನಿಮ್ಮ ಶರಣ ಪ್ರಭುದೇವರ ಕರುಣೆಯನ್ನು ಎಷ್ಟೆಂದು ಹೇಳಲಿ ಕೂಡಲ ಸಂಗಮದೇವಾ ?

**೧೧೩೦ ಅಯ್ಯಾ ನಿಮ್ಮ ಶರಣರೆನ್ನ ಪಾವನವ ಮಾಡಿ**
**ತಿಳುಹಿ ತಮ್ಮಂತೆ ಎನ್ನ ಮಾಡಿದ ಬಳಿಕ;**
**ನಾನವರು ಮಾಡಿದಂತೆ ಆದೆನಯ್ಯಾ;**
**ನಾನೊಬ್ಬನು ನಿಮ್ಮ ಶರಣರ ಬಳಿಯವನು;**
**ಕೂಡಲ ಸಂಗನ ಶರಣರು ಮೆಚ್ಚಿ ಎನಗೊಲಿದರೆ**
**ನಾನು ಬದುಕಿದೆನಲ್ಲದೆ,**
**ಸಮ ಸಂಗ ಸುಖಕ್ಕೆ ಸರಿಯೆ ಹೇಳಾ, ಚೆನ್ನ ಬಸವಣ್ಣ.**

ನಿಮ್ಮ ಶರಣರ ಹತ್ತಿರದಸಾದ ನನ್ನನ್ನು ಶುದ್ಧಾತ್ಮನನ್ನಾಗಿ ಮಾಡಿ ಜ್ಞಾನಬೋಧೆಮಾಡಿ ತಮ್ಮಂತೆ ನನ್ನನ್ನು ಮಾಡಿದ ಕೂಡಲ ಸಂಗಮ ದೇವಾ, ನಿಮ್ಮ ಶರಣರು ಅಕ್ಕರತೆಯಿಂದ ನನಗೆ ತಮ್ಮ ಪ್ರೀತಿಯನ್ನು ದಯಪಾಲಿಸಿದರೆ ನಾನವರ ಸರಿಸಮಾನನೆಂದು ಹೇಳಿಕೊಳ್ಳಲು ಸಾಧ್ಯವೆ ಚೆನ್ನಬಸವಣ್ಣ ?

**೧೧೩೧ ಅಯ್ಯಾ ನಿಮ್ಮ ಶರಣರ ಕಂಡ ಸುಖವನೇನೆಂಬೆ-ನಯ್ಯಾ !**
**ಅದು ಸಾಲೋಕ್ಯದಂತುಟಲ್ಲ;**
**ಅದು ಸಾಮೀಪ್ಯದಂತುಟಲ್ಲ;**
**ಅದು ಸಾರೂಪ್ಯದಂತುಟಲ್ಲ;**
**ಅದು ಸಾಯುಜ್ಯದಂತುಟಲ್ಲ !**
**ಕೂಡಲ ಸಂಗನ ಶರಣರ ಪಾದದರುಶನ ಕಂಡು ಧನ್ಯ-ನಾದೆನು.**

ತಂದೆಯಾದ ಕೂಡಲ ಸಂಗಮ ದೇವಾ! ನಿಮ್ಮ ಶರಣರ ಪಾದ ಕಮಲಗಳ ಸೌಂದರ್ಯ ರಾಸಾನುಭವ ಹೊಂದಿ ನಾನು ಧನ್ಯನಾದೆನು; ಆ ರಸಾನುಭವದ ಸುಖವನ್ನು ಹೇಳಲು ಶಬ್ದಗಳು ಸಾಲವು; ಕಣ್ಣು ತುಂಬ ನೋಡಿದ ನೋಟವಂತೆ ಅಲ್ಲ; ಅತಿಸಮೀಪದಲ್ಲಿ ನಿಂತು ಪೂರ್ಣ ಮೂರ್ತಿಯ ಬಿಂಬವನ್ನು ಕಣ್ಣಾಲೆಗಳಲ್ಲಿ ಕಟ್ಟಿಕೊಂಡಂತಲ್ಲ; ಕೇವಲ ಬೆಡಗಿನ ರೂಪದ ನೋಟವಲ್ಲ; ಸಾಯುಜ್ಯ ಪದವಿಯನ್ನು ಪಡೆದ ಸುಖಕ್ಕಿಂತಲೂ ಮಿಗಿಲಾದುದು. ಹೇಳಲು ಅಶಕ್ಯವಾದುದು-ಆ ರಸ ಸುಖ!

**೧೧೩೨ ಕೂಡಿಹೆನೆಂದೊಡೆ ಕಣ್ಣ ಮರೆ ಮಾಡಿದ;**
**ಕೇಳಿಹೆನೆಂದು ಕಿವಿಗೆ ಮರೆ ಮಾಡಿದ;**
**ಮುಟ್ಟಿಹನೆಂದೆನ್ನ ಮನಕ್ಕೆ ಮರೆಮಾಡಿದ;**
**ಅರಸಿಹನೆಂದೆನ್ನ ಕ್ರಿಯೆಗಳಿಗೆ ಮರೆಮಾಡಿದ!**
**ಕೂಡಲ ಸಂಗಮದೇವರೊಡನೆ**
**ಅಹಂಕಾರವ ಮಾಡಿ ಕೆಟ್ಟ ಕೇಡನೇನೆಂದುಪಮಿಸುವೆ?**

ಕೂಡಲ ಸಂಗಮದೇವರಲ್ಲಿ ಅಹಂಕಾರಮಾಡಿ ನಾನು ಈ ದುಷ್ಪರಿ-ಣಾಮಕ್ಕೊಳಗಾದೆನು; ಕೂಡಲ ಸಂಗಮ ದೇವಾ, ನಿಮ್ಮನ್ನು ನೋಡ ಬೇಕೆಂದರೆ ನನ್ನ ಕಣ್ಣುಗಳನ್ನು ಕಳೆದಿರುವಿರಿ; ನಿಮ್ಮ ನಾಮಾಮೃತವನ್ನು ಕೇಳಬೇಕೆಂದರೆ ಕಿವುಡನನ್ನಾಗಿ ಮಾಡಿರುವಿರಿ; ಮನಸ್ಸಿನಿಂದ ನಿಮ್ಮನ್ನು ಮುಟ್ಟಿ ಮುದಗೊಳ್ಳಬೇಕೆಂದರೆ ನನ್ನ ಬುದ್ಧಿಯನ್ನು ಕೆಡಿಸಿರುವಿರಿ; ಕಾಯ ಕರ್ಮಗಳಿಂದಲಾದರೂ ನಿಮ್ಮ ಪಾದ ಸೇರಬೇಕೆಂದರೆ ಕ್ರಿಯಾಹೀನನ-ನ್ನಾಗಿ ಮಾಡಿರುವಿರಿ; ಇದನ್ನು ಹೇಗೆ ಸಹಿಸಲಿ?

**೧೧೩೩ ಅಯ್ಯಾ! ಹಿಂದೆ ನಾನು ಮಾಡಿದ ಮರಹಿಂದೆ ಬಂದೆನೀ ಭವದಲ್ಲಿ;**
**ನಿಮ್ಮ ಲೀಲೆ ನಿಮ್ಮ ವಿನೋದ ಸೂತ್ರದಿಂದ**
**ಲಕ್ಷದ ಮೇಲೆ ತೊಂಬತ್ತಾರು ಸಾವಿರ ಗೀತಂಗಳ ಆಡಿಹಾಡಿ**

ಆ ದಾಸೋಹವೆಂಬ ಮಹಾಗಣಂಗಳ ಸಂಕುಳದೊಳೆನ್ನ-
ನಿರಿಸಿ,
ನಿಮ್ಮ ಭಕ್ತಿಯ ಘನವನೇ ಮೆರೆಯಲೆಂದು
ಪರವಾದಿ ಬಿಜ್ಜಳನ ತಂದೊಡ್ಡಿ,
ಎನ್ನನು ಅವನೊಡನೆ ಹರಸಿ;
ಮುನ್ನೂರರವತ್ತು ಸತ್ತಪ್ರಾಣಿಗಳನೆತ್ತಿಸಿ,
ಮೂವತ್ತಾರು ಕೊಂಡೆಯರ ಗೆಲಿಸಿ,
ಎಂಬತ್ತೆಂಟು ಪವಾಡಂಗಳಂ ಕೊಂಡಾಡಿ,
ಮರ್ತ್ಯಲೋಕದ ಮಹಾಗಣಂಗಳನೊಕ್ಕುದ ನಿಕ್ಕಿ ಎನ್ನ
ಸಲಹಿದಿರಿ.
ನಿಮ್ಮ ಮಹಾಗಣಂಗಳು ಮೆಚ್ಚಿ ಎನ್ನ ಸೂತಕವ ತೊಡೆದ
ಪ್ರಭುದೇವರ ಕರುಣದಿಂದ ಪ್ರಾಣಲಿಂಗ ಸಂಬಂಧ
ಸಮಯವಾಗಿತ್ತು.
ನೀವು ಕಳುಹಿದ ಬೆಸನು ಸಂದಿತ್ತು.
ಇನ್ನು ಕೂಡಿಕೊಳ್ಳಾ ! ಕೂಡಲ ಸಂಗನು ದೇವಾ !

ಹಿಂದಿನ ಜನ್ಮಗಳಲ್ಲಿ ನಾನು ಮಾಡಿದ ಪಾಪ ಕರ್ಮಗಳ ಫಲದಿಂದ ಮತ್ತೆ ನಾನು ಈ ಸಂಸಾರದಲ್ಲಿ ಹುಟ್ಟಿ ಬಂದಿರುವೆನು; ಆದರೆ ದಯಾಮಯ ತಂದೆಯೆ, ನಿಮ್ಮ ಲೀಲಾ ವಿನೋದ ಸೂತ್ರಗಳ ಸಹಾಯದಿಂದ ಅನೇಕ ಸಾವಿರ ನಿಮ್ಮ ನಾಮಾಮೃತ ವಚನಗಳನ್ನು ಹಾಡಿ ಕುಣಿದು ನಿಮ್ಮ ಶರಣರ ಸಂಗ ಮಾಡಿ ನಿಮ್ಮ ಭಕ್ತಿಯ ಬೆಳಕನ್ನು ಜಗತ್ತಿನಲ್ಲಿ ಮೆರೆ-ಸುವದಕ್ಕಾಗಿ ಬಿಜ್ಜಳನೆಂಬ ಭವಿಯ ಸೇವೆ ಮಾಡಲು ನನಗೆ ಅಪ್ಪಣೆ ಮಾಡಿದ ನಂತರ ನನ್ನನ್ನು ಆಶೀರ್ವದಿಸಿ ಕಾಪಾಡಿದಿರಿ; ಅನಂತರ ಪ್ರಭುದೇವರ ಮಧುರ ಬಂಧುತ್ವದಿಂದ ನಿಮ್ಮ ಆಜ್ಞೆಯಾನುಸಾರವಾಗಿ ನನಗೆ ಜ್ಞಾನೋದಯವಾಗಿ ಐಕ್ಯಸ್ಥಲದಲ್ಲಿ ಬಂದು ನಿಂತೆ. ಇನ್ನಾದರೂ ನನ್ನೊ-ಡನೆ ಕೂಡಿಕೊಳ್ಳು ಕೂಡಲ ಸಂಗಮದೇವಾ !

೧೧೩೪ ಅರಸುವ ಬಳ್ಳಿ ಕಾಲ ತೊಡರಿದಂತಾಯಿತ್ತಯ್ಯಾ-
ಬಯಸುವ ಬಯಕೆ ಕೈಸಾರಿದಂತಾಯಿತ್ತು.
ಹಲವು ದೆಸೆಯ ನೆಂಟರು ತಾ ಕಂಡಂತಾಯಿತ್ತು.
ಅರಿದೊಮ್ಮೆ ಅನಿಮಿಷಂಗೆ ಕೊಳುವ್ನೋದ ಲಿಂಗವೆಂದು
ಉನ್ನತದಿಂದ ಮಂಗಳಾರತಿಯ ಬೆಳಗಿ
ಮುತ್ತುಮಾಣಿಕ ನವರತ್ನಹಾರ ತೋರಣವ ಕಟ್ಟಿ
ಸಂತೋಷದಿಂದೆನ್ನ ಮನವು ತೊಟ್ಟನೆ ತೊಳಲಿ
ತಿಟ್ಟನೆ ತಿರುಗಿ ದೃಷ್ಟವ ಕಂಡೆನಯ್ಯಾ !
ಬಿಟ್ಟು ಹಿಂಗವಯ್ಯಾ ಎನ್ನ ಭವದ ಮಾಲೆಗಳು !
ಗುಹೇಶ್ವರನ ಶರಣ ಎನ್ನ ಕರಸ್ಥಳದೊಳಗೆ
ಕೂಡಲ ಸಂಗಮನೆಂಬ ಲಿಂಗವ ಕಂಡೆನಾಗಿ.

ಹುಡುಕುತ್ತಿರುವಂಥ ಬಳ್ಳಿಯು ಕಾಲಿಗೆ ಸುತ್ತು ಹಾಕಿದಂತೆ, ಬಯಸುವ ಬಯಕೆ ಕೈಗೂಡಿದಂತೆ, ನಾನಾ ದಿಕ್ಕುಗಳಲ್ಲಿರುವ ಬಂಧು ಬಳಗವನ್ನು ಒಂದೆಡೆ ಕಲೆ ಹಾಕಿ ಆ ಸುಂದರ ಸೊಬಗು ಸವಿದಂತೆ ಆ ಜಗತ್ಪಾವನ ಲಿಂಗವನ್ನು ಜ್ಞಾನದಿಂದ ತಿಳಿದು ನೋಡಿ ನನಗೆ ತುಂಬ ಸಂತೋಷವಾಯಿತು; ಆದರೂ ಸಂಸಾರದ ಕರ್ಮಗಳ ಮಾಲೆಯು ಹರಿದು ಬೀಳಲೊಲ್ಲದು; ಗುಹೇಶ್ವರನ ಶರಣನಾದ ಕೂಡಲ ಸಂಗಮ ದೇವರು ನನ್ನ ಪ್ರಾಣಲಿಂಗವೆಂದು ನಾನು ತಿಳಿದು ಪೂಜೆ ಮಾಡುತ್ತಿರುವೆನು !

೧೧೩೫ ಎನ್ನ ಮನವು ನಿಮ್ಮ ಚರಣವ ಕಂಡಬಳಿಕ
ಬೆರಸಿ ಬೇರಿಲ್ಲದೆ ಅಗಲಿ ಸೈರಿಸಲಾರೆನಯ್ಯಾ !
ತ್ರಾಹಿ ತ್ರಾಹಿ ಘನಮಹಿಮ
ನಿಮ್ಮ ಪಾದಾರ್ಚನೆಗೆ ಪರಮಾನಂದ ಜಲವ
ತುಂಬುವೆನಯ್ಯಾ.
ಪೂಜೆಯ ಮಾಡುವರೆ ಎನ್ನ ಹೃದಯ ಕಮಳವ
ರಚಿಸುವೆ;
ಆರತಿಯಿಂದ ಆರತಿಯನೆತ್ತುವೆ;

ಎನ್ನ ಮಹಾಪ್ರಕಾಶದ ಧೂಪವ ಬೀಸುವೆ;
ಎನ್ನ ಸ್ವಾನುಭಾವದ ಗಂಧ ಈ ತೆರನಲ್ಲದೆ
ಅಷ್ಟವಿಧಾರ್ಚನೆ ಷೋಡಶೋಪಚಾರವೆಂಬುವುದಕ್ಕೆ
ತೆರಹ ಕಾಣೆನಯ್ಯಾ, ಕೂಡಲ ಸಂಗಮದೇವಾ!
ಪ್ರಭುವೆನ್ನ ಪ್ರಾಣಲಿಂಗವೆಂಬುದ ಎನಗಿಂದು ಕಾಣ ಬಂದಿತ್ತು
ನೋಡಾ, ಅಯ್ಯಾ.

ನನ್ನ ಮನಸ್ಸು ನಿಮ್ಮ ಧ್ಯಾನ ಪೂಜೆಗಳಲ್ಲಿ ಮಗ್ನವಾಗಿ ತಾದಾತ್ಮ್ಯ ತಳೆದಾಗ ದರ್ಶನ ಲಾಭ ಪಡೆಯದೆ ನಾನು ಧ್ಯಾನ ಯೋಗದಿಂದ ಹೇಗೆ ಹೊರಬರಲಿ? ನಿಮ್ಮ ಪೂಜೆಗಾಗಿ ಪರಮಾನಂದವೆಂಬ ನೀರು ತಂದು, ನನ್ನ ಹೃದಯವನ್ನೇ ಕಮಲದ ಪುಷ್ಪವನ್ನಾಗಿರಿಸಿ ನಿಮ್ಮ ಪಾದಗಳಿಗೆ ಪ್ರೇಮ ವೆಂಬ-ಭಕ್ತಿಯೆಂಬ ಆರತಿಯನ್ನು ಬೆಳಗುವೆನು; ಈ ರೀತಿಯಾದ ಪೂಜೆಯು ನನಗೆ ಗೊತ್ತಿದೆ; ದುಡ್ಡು ದ್ರವ್ಯಗಳನ್ನು ವ್ಯಯ ಮಾಡಿ ಪೂಜಿಸು ವುದು ನನಗೆ ತಿಳಿಯದು; ಕೂಡಲ ಸಂಗಮದೇವಾ, ಆದುದರಿಂದಲೇ ಅಲ್ಲಮ ಪ್ರಭುಗಳೇ ನನ್ನ ಪ್ರಾಣಲಿಂಗವೆಂಬುದನ್ನು ನಾನು ಗುರುತಿಸಿ ಕೊಂಡೆನು!

೧೧೩೬ ಅಂತರಂಗದೊಳಗೆ ಅರಿವಾಗಿ
ಎನ್ನ ಬಹಿರಂಗದೊಳಗೆ ಆಚಾರವಾಗಿ ನೀನೆಡೆಗೊಂಡು,
ಎನ್ನ ಮನದೊಳಗೆ ಘನನೆನಹಾಗಿ ಮೂರ್ತಿಗೊಂಡು,
ಗುರುಸ್ಥಳ, ಲಿಂಗಸ್ಥಳ, ಜಂಗಮಸ್ಥಳ, ಪ್ರಸಾದಿಸ್ಥಳವೆಂಬ
ಚತುರ್ವಿಧವನು ಎನಗೆ ಸ್ವಾಯತವಮಾಡಿ ತೋರಿಸಿ
ಪ್ರಾಣಲಿಂಗವೆಂಬ ಹಾದಿಯ ತೋರಿಸಿ,
ಎಲ್ಲ ಅಸಂಖ್ಯಾತರು ಪಾವನವ ಮಾಡಿದಿರಾಗಿ
ಕೂಡಲ ಸಂಗಮ ದೇವಾ,
ನಿಮ್ಮಿಂದ ಸಕಲ ಸನುಮತವ ನಾನರಿದೆನಲ್ಲದೆ

ಎನ್ನಿಂದ ನೀವಾದೆವೆಂಬುದ
ನಿಮ್ಮ ಪ್ರಮಥರು ಮೆಚ್ಚುವರೆ ನೋಡಯ್ಯಾ !

ಅಂತರಂಗದಲ್ಲಿ ತಿಳಿವಳಿಕೆಯ ತಿಳಿಬೆಳಕು ಬೆಳಗಿದ್ದ ಕಾರಣ ನನ್ನ ಬಾಹ್ಯದ ಆಚರಣೆಗಳಲ್ಲಿ ನಿಮ್ಮ ಶುದ್ಧಾಂಗಗಳ ಚಿಹ್ನಗಳು ನೆಲೆಗೊಂಡವು. ಮನದಲ್ಲಿ ನಿಮ್ಮ ಸುಗುಣ ಮೂರ್ತಿ ಕಾಣಿಸಿತು; ಗುರುಸ್ಥಳ ಮೊದಲಾದ ನಾಲ್ಕು ವಿಧ ಸ್ಥಳಗಳು ನನ್ನಲ್ಲಿ ಬೆರೆದ ಬಳಿಕ ನನಗೆ ಸನ್ಮಾರ್ಗ ಸಿಕ್ಕಿತು; ನಿಮ್ಮ ಎಲ್ಲ ಶರಣರು ನನ್ನನ್ನು ಪಾವನಗೊಳಿಸಿದರು; ಕೂಡಲ ಸಂಗಮ ದೇವಾ, ನಿಮ್ಮ ಕೃಪೆಯಿಂದ ನಾನು ಜ್ಞಾನ ಸಂಪಾದಿಸಿದೆನೇ ಹೊರತು ನನ್ನಿಂದಲೇ ನಿಮ್ಮ ಬೆಳಕು ಎಂದು ನುಡಿದರೆ ಪ್ರಮಥರು ಒಪ್ಪುವುದಿಲ್ಲ!

೧೧೩೭ ಕಂಡಡೆ ಕೆಡು ಸುಖವಯ್ಯಾ ನನಗೆ
ಕಾಣದಿರ್ದಡೆ ಅಸ್ತಿಯಯ್ಯಾ.
ತವಕದ ಸ್ನೇಹ ದರುಶನದಲ್ಲಿ ತರಹರವಾಯಿತ್ತು.
ಕೂಡಲ ಸಂಗಮದೇವಾ, ನಿಮ್ಮ ಶ್ರೀಪಾದವ ಕಂಡು
ಧನ್ಯನಾದೆನು.

ಕೂಡಲ ಸಂಗಮ ದೇವರೆ, ನಿಮ್ಮನ್ನು ನೋಡಿದ ಕೂಡಲೆ ನನಗೆ ಬಹಳ ಸುಖವುಂಟಾಗುತ್ತದೆ; ಕಾಣದಿದ್ದರೆ ಮಾತ್ರ ನನ್ನ ದುಃಖಕ್ಕೆ ಪಾರವೆ ಇಲ್ಲ; ಆತುರತೆಯ ಸ್ನೇಹವು ನಿಮ್ಮ ದರುಶನಕ್ಕೆ ಬರುವಾಗ್ಗೆ ದುಃಖ ವನ್ನುಂಟು ಮಾಡುತ್ತದೆ; ಕಾರಣ ಸಮಾಧಾನಚಿತ್ತದಿಂದ ನಿಮ್ಮ ಶ್ರೀಪಾದ-ಗಳನ್ನು ಕಂಡು ನಾನು ಪಾವನನಾದೆನು !

೧೧೩೮ ಚಂದ್ರಮನ ಮೃತಕರನಾದಡೇನಯ್ಯಾ
ಒಳಗೆ ಕಳಂಕ ಬಿಡದನ್ನಕ್ಕರ ?
ಸೂರ್ಯ ಮಹಾ ಪ್ರಕಾಶವಾದಡೇನಯ್ಯಾ
ಅಸ್ತಮಾನಕ್ಕೆ ಅಸ್ತಂಗತನೆಂಬ ಹೀನ ಬಿಡದನ್ನಕ್ಕರ ?
ಆನು ನಿಮ್ಮ ಕೃಪೆಯ ಪಡೆದು ಫಲವೇನಯ್ಯಾ

**ನಿಮ್ಮ ಶರಣರು ಎನ್ನ ಮೇಲೆ ಮುನಿದು ಹೋದಬಳಿಕ ?**
**ಕೂಡಲ ಸಂಗಮ ದೇವಯ್ಯಾ, ನಿಮ್ಮ ಶರಣರ ಮನದಲ್ಲಿ**
**ಎನ್ನ ಮೇಲಿ ಕರುಣ ಬರುವಂತೆ ಮಾಡಯ್ಯಾ.**

ಚಂದ್ರಬಿಂಬದಲ್ಲಿ ಕಪ್ಪುಕಲೆ ಇದ್ದುದರಿಂದ ಅವನಲ್ಲಿ ಅಮೃತಕಿರಣ-ಗಳು ಇದ್ದೂ ವ್ಯರ್ಥ; ಸೂರ್ಯನಿಗೆ ಅಸ್ತಂಗತನೆಂಬ ಹೀನ ಅಪವಾದ ವಿರುವ ಕಾರಣ ಅವನು ಮಹಾ ಪ್ರಖರನಾಗಿದ್ದೂ ನಿರರ್ಥಕ; ಹಾಗೆಯೇ ನಿಮ್ಮ ಶರಣರು ನನ್ನ ಮೇಲೆ ಕೋಪಿಸಿದ ಕಾರಣ ನಾನು ನಿಮ್ಮ ಕೃಪಾ ಛತ್ರದಲ್ಲಿದ್ದರೂ ಉಪಯೋಗವಾಗಲಾರದು; ಕೂಡಲ ಸಂಗಮದೇವಾ ನಿಮ್ಮ ಶರಣರು ನನ್ನಲ್ಲಿ ಪ್ರೇಮವಿಡುವಂತೆ ಅವರ ಮನದಲ್ಲಿ ನಿನ್ನ ಕರುಣ ರಸದ ತೊರೆ ಹರಿಯುವಂತೆ ಮಾಡು !

**೧೧೩೯ ತಪ್ಪನೆಣಿಸಿಹೆನೆಂದೊಡೆ ಗಣನೆಯಿಲ್ಲ—**
**ನಡೆದು ತಪ್ಪುವೆ, ನುಡಿದು ತಪ್ಪುವೆ,**
**ಮಾಡಿ ತಪ್ಪುವೆ, ನೀಡಿ ತಪ್ಪುವೆ,**
**ಅರಿದು ತಪ್ಪುವೆ, ಮರೆದು ತಪ್ಪುವೆ,**
**ಎನ್ನ ತಪ್ಪನೊಪ್ಪವ ಮಾಡಿಕೊಂಬುದಲ್ಲದೆ ಚಿತ್ತಕ್ಕೆ ತರಲಾಗದು**
**ಕೂಡಲ ಸಂಗಯ್ಯನೆಂಬ ಗಂಡನ ಬೆರಸಬೇಕೆಂದು ಕರೆಯಟ್ಟಿದನು.**
**ಶಿವಶರಣರೆಲ್ಲರಿಗೆ ಶರಣೆಂದು ಬೀಳ್ಕೊಂಬ ತವಕದಲ್ಲಿದ್ದೆನು.**

ನನ್ನ ತಪ್ಪುಗಳಿಗೆ ಲೆಕ್ಕವೇ ಇಲ್ಲ; ನನ್ನ ಆಚರಣೆಯಲ್ಲಿ, ಮಾತಿನಲ್ಲಿ, ಕೃತಿಗಳಲ್ಲಿ ಜಂಗಮನಿಗೆ ದಾಸೋಹವ ಮಾಡುವಲ್ಲಿ ತಪ್ಪುಗಳೇ ತಪ್ಪುಗಳು; ಕೆಲವುಗಳು ತಿಳಿದು ಮಾಡಿದವು; ಕೆಲವುಗಳು ಮರೆತು ಮಾಡಿದವು; ಈ ಎಲ್ಲ ನನ್ನ ತಪ್ಪುಗಳನ್ನು ಸರಿಪಡಿಸಿಕೊಂಡು ತಾವು ನನ್ನನ್ನು ಉದ್ಧರಿಸ ಬೇಕು. ನಾನು ಕೂಡಲ ಸಂಗನೆಂಬ ಗಂಡನಲ್ಲಿ ಅನುರಕ್ತನಾಗಬೇಕೆಂದು ಶಿವಶರಣರು ನನ್ನನ್ನು ಕರೆಯಲು ಬಂದರು; ಆ ಶರಣರಿಗೆ ನಮಸ್ಕರಿಸುವ ರಭಸದಲ್ಲಿದ್ದೇನೆ !

೧೧೪೦ ಪಾಪ ಕೂಪದಲ್ಲಿ ಬಿದ್ದವನೆಬ್ಬಿಸಿ,
ಕೂಡಲ ಸಂಗನ ಶರಣರ ತೋರಿಸಿ,
ಎನ್ನನುಳುಹಿದನು.
ಹೋದ ಜೀವಕ್ಕೆ ತನ್ನ ಕರುಣವೆಂಬ ಮರುಜೀವಣಿಯ
ಹಿಂಡಿಎತ್ತಿದನು
ಚೆನ್ನ ಬಸವಣ್ಣನಿಂದ ಎಂತಕ್ಕೆ ಬದುಕಿದೆನು.

ಪಾಪಗಳ ಮಡುವಿನಲ್ಲಿ ಜಾರಿ ಬಿದ್ದು ಕಳೆದು ಹೋದ ನನ್ನ ಜೀವನಕ್ಕೆ ಕರುಣೆಯೆಂಬ ಸಂಜೀವನಿ ರಸ ಹಿಂಡಿ ನನ್ನನ್ನು ಬದುಕಿಸಿ ಗುಂಡಿಯಿಂದ ಎಬ್ಬಿಸಿ ಶರಣರನ್ನು ತೋರಿಸಿ ನನ್ನನ್ನು ಕಾಪಾಡಿದನು; ಇದೆಲ್ಲವೂ ಚೆನ್ನಬಸವಣ್ಣನ ಪ್ರಯತ್ನವು.

೧೧೪೧ ತಿಂಬದ ಗಂದೆಯು ಮೇವು ಗುರಿಬಿದಂತಾಯಿತ್ತು.
ಎನ್ನ ಹಿಂದನೆಚ್ಚರಿಸಿ ಮುಂದಣ ಸ್ಥಿತಿಯನರುಹಿ
ಸಂದೇಹ ಬಿಡಿಸಿದೆ.
ಎನ್ನ ಕಂಡು ಕಲೆಯು ಕಳವಳದಂತೆ ನೀನಿರುತ್ತಿರಲು
ಎನಗಿನ್ನಾವ ದಂದುಗವಿಲ್ಲ ನೋಡಾ.
ಒಂದು ಕಾರ್ಯದ ಹದನು ಇನ್ನೊಂದು ಸಮವಪ್ಪುದು?
ಕೂಡಲ ಸಂಗಮ ದೇವರು
'ಎನ್ನನಿತ್ತಬಾ' ಎಂಬ ಕಾಲವ ತಿಳುಹಾ ಚೆನ್ನಬಸವಣ್ಣ.

ಯಾವ ಪ್ರಾಣಿಯೂ ತಿನ್ನದಂಥ ಮೇವು ನನ್ನ ಮೇಲೆ ಮುನಿಸಿಕೊಂಡಿತು; ಆದ್ದರಿಂದ ನೀವು ನನ್ನ ಹಿಂದೆ ಬಂದು ನನಗೆ ತಿಳಿಹೇಳಿ ನನ್ನ ಸ್ಥಿತಿಗತಿಗಳ ಮತ್ತು ಭವಿಷ್ಯದ ವಿಚಾರಗಳನ್ನು ಸರಿಯಾಗಿ ಹೇಳಿ ನನ್ನ ಮನವಲ್ಲಿಯ ಸಂಶಯವನ್ನು ದೂರಮಾಡಿದಿರಿ; ನನ್ನ ಹಿತಚಿಂತನೆಯೇ ನಿಮಗೆ ಸೇರಿರುವಾಗ ನನಗೇತರ ಚಿಂತೆ! ಕಾಲಜ್ಞಾನಿಗಳಾದ ಚೆನ್ನಬಸ-ವಣ್ಣನವರೆ, ನನ್ನನ್ನು ಕೂಡಲ ಸಂಗಮದೇವನು ತನ್ನಲ್ಲಿಗೆ ಎಂದು ಬರಮಾಡಿಕೊಳ್ಳುತ್ತಾನೆಂಬುದನ್ನು ಹೇಳಿರಿ.

೧೧೪೩ ಭವರೋಗ ವೈದ್ಯನೆಂದು ನಂಬಿದೆ ನಾನು
ಒಮ್ಮಿಂಗೆ ಕರುಣಿಸಯ್ಯಾ ಭಕ್ತಿ ಫಲಪ್ರದಾಯಕಾ !
ನೀನು ಒಮ್ಮಿಂಗೆ ಕರುಣಿಸಯ್ಯಾ
"ಜಯಜಯ ಶ್ರೀಮಹಾದೇವ" ಎನುತಿರ್ದೆನು,
ಕೂಡಲ ಸಂಗಮ ದೇವಯ್ಯಾ
ನಿಮ್ಮ ಶ್ರೀಪಾದಕ್ಕೆ 'ನಮೋ ನಮಃ' ಎನುತಿರ್ದೆನು.

ಕೂಡಲ ಸಂಗಮದೇವಾ, ನೀವು ಸಂಸಾರವೆಂಬ ರೋಗ ಕಳೆಯುವ ಉತ್ತಮ ವೈದ್ಯರೆಂದು ನಾನು ನಂಬಿರುವೆ; ಕಾರಣ ನನಗೆ ಕರುಣೆ ತೋರಿ ಕಾಪಾಡಬೇಕು; ಜಯ ಜಯ ಮಹಾದೇವ ಎಂದು ನಿಮ್ಮ ಸಂಪದ ಚರಣಕಮಲಗಳಿಗೆರಗುತ್ತಲಿದ್ದೇನೆ !

೧೧೪೪ ಮನವು ಮಹದೊಳಗೆ ಲೀಯವಾಗಿ
ಪುಟವಿಡಿದು ಸುಳಿದಾಡುವ ಮಹಾಮಹಿಮಂಗೆ
ಅಹುದಾಗದೆಂಬ ಭ್ರಾಂತಿಯೇಕೋ ?
ತಹುದು ಬಾರದೊಡೆ ಶಿರವನರಿದು ತಹುದು.
ಕೂಡಲ ಸಂಗಮದೇವರು ಬಲ್ಲಂತೆ ಆಗಲಿ!

ಮನಸ್ಸಿನ ಬಲದಿಂದಲೂ ವಿಶ್ವವನ್ನೆ ತನ್ನದಾಗಿರಿಸಿಕೊಂಡ ಮಹಾ ಪುರುಷನಿಗೆ ಸತ್ಯಾಸತ್ಯತೆಗಳ ಹುಚ್ಚು ಏತಕ್ಕೆ ? ಆ ಹುಚ್ಚು ಹೋಗದಿದ್ದರೆ, ತಲೆ ಒಡೆದು ಹೋಗಲಿ; ಎಲ್ಲವೂ ಕೂಡಲ ಸಂಗಮ ದೇವರ ಇಚ್ಛೆಯಿದ್ದಂತಾಗಲಿ!

೧೧೪೫ ಮರುಳು ಹಿಡಿದೆವೆಂಬರು,
ಮರುಳಾಗಿ ಹಿಡಿಯ ಬೇಕು ಕೇಳಿರೇ !
ಬಹು ಬುದ್ಧಿಯ ಜಡರಿಂಗೆ ಹಿಡಿಯಬಾರದ
ನಿರವಯದ ಬಯಲ ಹಿಡಿಯ ಬಹುದೆ?
ಕೂಡಲ ಸಂಗಮ ದೇವರ ಭಾವ
ಶಸ್ತ್ರದಿಂದ ಗೆಲಿದು ಕೊಂಡು ಬನ್ನಿ.

ಶುಭ್ರವಾದ, ಶುದ್ಧವಾದ ಮಳಲ ಲಿಂಗವನ್ನು ಹಿಡಿದುಕೊಂಡಿರುವೆವೆಂದು ಹೇಳುತ್ತಾರೆ; ಹಾಗೆ ಮಾಡಬೇಕಾದರೆ ನಾವು ಹುಚ್ಚರಾಗಿ ಆ ಲಿಂಗ ಮೆಚ್ಚಬೇಕು; ತಾಸಿಗೆ ಆರನತ್ತು ವಿಚಾರಗಳನ್ನು ಮಾಡುವ ಮಂದ ಮತಿಗಳಿಗೆ ಮುಕ್ತಿಯು ಹುಚ್ಚು ಹಿಡಿಯಲು ಸಾಧ್ಯವೇ ಇಲ್ಲ; ಕೂಡಲ ಸಂಗಮ ದೇವರ ಭಾವದ ಪರಿಯನ್ನು ಶಸ್ತ್ರಾಸ್ತ್ರಗಳಿಂದ ಗೆದ್ದು ತರುವುದು ಹುಚ್ಚುತನದ ಮಾತು.

೧೧೪೫ ಭವವಿಲ್ಲದಡೇನು? ಬಂಧನವಿಲ್ಲದಡೇನು?
ಶಿವಗಣಂಗಳೆಲ್ಲರು ಮನೆಗೆ ಬರದಂದು ಭವಬಂಧನ
ನೋಡಾ.
ಪರಹಿತಾರ್ಥವಾಗಬೇಕೆಂದು ಲಿಂಗವ ಕೊಟ್ಟರೆ
ನಿಮ್ಮ ಪ್ರಮಥರ ಮುಂದೆ ಶಿವ ಮುನಿದು
ಮರ್ತ್ಯಲೋಕಕ್ಕೆ ಕಳುಹಿದನು.
'ಅಂಗದ ಮೇಲೆ ಲಿಂಗವುಳ್ಳದೆಲ್ಲವು ಸಂಗಮನಾಥ'
ಎಂದು ನಂಬಿಚಲ್ಲಿ
ನಿಮ್ಮ ಪ್ರಮಥರೆನ್ನ ಬಳಸಿಟ್ಟುಕೊಂಡರು.
'ಜಂಗಮ ಮುಖದಲ್ಲಿ ಲಿಂಗವತನರಿಕೋ'ಎಂದರೆ
ದಾಸೋಹವೆಂಬ ಪಸರವನಿಕ್ಕಿದೆನು
ಕೂಡಲ ಸಂಗಮದೇವರ ಮುಂದೆ.
ಜಂಗಮ ಮುಖದಲ್ಲಿ ಎಂದು ಸುಖಿಯಪ್ಪೆನು ಹೇಳಾ
ಚೆನ್ನಬಸವಣ್ಣಾ ?

ಸಂಸಾರ ಚಕ್ರದಿಂದ ನಾವು ಪಾರಾಗಿದ್ದೇವೆಂದು ಹೆಮ್ಮೆ ಪಡುವದು ಏಕೆ ? ಯಾವ ದಿನ ಶಿವ ಶರಣರ ನಮ್ಮ ಮನೆಗೆ ಬರುವುದಿಲ್ಲವೋ ಆ ದಿನವೇ ಮತ್ತೆ ನನಗೆ ಸಂಸಾರ ಬಂಧನವಾಗುತ್ತದೆ; ಎರಡನೇಯವರ ಬಾಳ್ವೆಯೂ ಸುಖಮಯವಾಗಲೆಂದು ಅವರಂಗದ ಮೇಲೆ ಲಿಂಗವನ್ನು ಕಟ್ಟಿಕೊಳ್ಳಲು ಲಿಂಗವನ್ನು ನಾನು ಕೊಟ್ಟೆ; ಆ ಕಾರಣದಿಂದ ಶಿವ ದೇವನು ನನ್ನ ಮೇಲೆ ಅವಕೃಪೆಮಾಡಿ ಭೂಲೋಕಕ್ಕೆ ಅಟ್ಟಿದನು; ಇಲ್ಲಿ ಲಿಂಗವುಳ್ಳ ಎಲ್ಲ

ವಸ್ತುಗಳೂ ಕೂಡಲ ಸಂಗಮ ದೇವರೆಂದು ಭದ್ರವಾಗಿ ನಂಬಿದುದರಿಂದ ನಿಮ್ಮ ಪ್ರಮಥರು ನನ್ನನ್ನು ರಕ್ಷಿಸಿದರು; ಜಂಗಮ ದಾಸೋಹವನ್ನು ಗೈದು ಸಂಗಮ ದೇವರ ಪ್ರೇಮ ಸಂಪಾದಿಸಿದೆನು; ಇನ್ನು ನನಗೆ ಮುಕ್ತಿ ಎಂದು ಎಂಬುದನ್ನು ನೀನೇ ಹೇಳು ಚೆನ್ನ ಬಸವಣ್ಣಾ ?

**೧೧೪೬ ಲಿಂಗದಲ್ಲಿ ಹೊಳೆದು ಹೋಹ ಜಂಗಮವ ಕಂಡು**
**ಕಡೆಗಣಿಸಿದರೆ ಭವಹೊಂದಿತ್ತಯ್ಯಾ.**
**ಎನ್ನ ಭಕ್ತಿ ಹಿಂದೆಯಾದ ಕಾರಣ ಬಂದೆನೀ ಜನ್ಮಕ್ಕೆ**
**ಕೂಡಲ ಸಂಗಮ ದೇವಾ, ತಪ್ಪಿಹೋಗದ ಮುನ್ನ**
**ಹಿಡಿತನ್ನಿ.**

ನಾನು ಮಾಡುತ್ತಿರುವ ಭಕ್ತಿಯಲ್ಲಿ ಕಿಂಚಿತ್ ಲೋಪ ದೋಷಗಳು ಕಂಡುದುದರಿಂದಲೂ, ಪ್ರಾಣಲಿಂಗದಲ್ಲಿ ಜಂಗಮನು ಮಿಂಚಿ ಮಾಯ-ನಾದುದನ್ನು ಅಲಕ್ಷಿಸಿದುದರಿಂದಲೂ ನಾನು ಮತ್ತೆ ಹುಟ್ಟಿಬಂದು ಈ ಬಾಳಿನ ಮಾಯಾಜಾಲದಲ್ಲಿ ಸಿಕ್ಕಿರುವೆನು; ನಾನು ಮುಕ್ತಿ ಪಥದಿಂದ ಜಾರಿ ಹೋಗುವ ಮೊದಲೇ ನನ್ನನ್ನು, ಜಾರದಂತೆ ಹಿಡಿದು ತಾ ಕೂಡಲ ಸಂಗಮದೇವಾ.

**೧೧೪೭ ಮಾಯದ ವಾಯದಲ್ಲಿ ಹುಟ್ಟಿ ಕರಕಷ್ಟದಳವನೆ ಬಿಟ್ಟು**
**ನಿಷ್ಠೆಯಿಂದಲಿನ್ನು ಶ್ರೀ ಚರಣಕ್ಕೆರಗಿದೆನು.**
**ಪ್ರಸಾದ ಕಾರುಣ್ಯವ ಮಾಡು ಗುರುವೆ !**
**ಓಹೋ ! ನಾನೊಬ್ಬರಿಗೆ ಉಪದೇಶ ಮಾಡಲನ್ಮನು:**
**ಮುನ್ನಲಾದವರು ತಮ್ಮಿಂದ ತಾವಾದರು.**
**ಅವರೆಲ್ಲರು ನಿಜಲಿಂಗೈಕ್ಯರು.**
**ನಾನೆ ಮಾಡಿತಲ್ಲ ಕಿಂಕಲನಾಗಿ ಅರಸುವಂದು**
**ಕಾಲಾಗ್ನಿರುದ್ರನ ಆಜ್ಞೆಯಿಂದ ಭೃತ್ಯನಾಗಿ ಬಂದಿರ್ದು,**
**ಕರ್ತೃವಾದೆನೆಂದರೆ ಆ ಕರ್ತ ನನ್ನ ನಗುವನು.**
**'ತತ್ತ್ವವ ಹಿಡಿದವರಿಗೆ ತೊತ್ತಾಗಿ ನಡೆವನು'**

**ಅಮರ ಗಣಂಗಳ ಸಾಕ್ಷಿಯಾಗಿ, ಕೂಡಲ ಸಂಗಮ**
**ದೇವರ ಮುಂದೆ**
**ಭಾಷೆಪ್ರಸಾದವನಿಕ್ಕಲಮ್ಮೆನಯ್ಯಾ ಚೆನ್ನಬಸವಣ್ಣ.**

ಮಾಯೆಯ ಗರ್ಭದಿಂದ ಹುಟ್ಟಿಬಂದಿದ್ದರೂ ಇಂದು ಆ ಮಾಯಾ ಜಾಲವನ್ನು ಹರಿದು ಕಷ್ಟಕಾರ್ಪಣ್ಯಗಳ ಹಿಡಿತದಿಂದ ತಪ್ಪಿಸಿಕೊಂಡು ಅತಿ ಶ್ರದ್ಧೆಯಿಂದ ನಿಮ್ಮ ಪಾದಕಮಲಗಳಿಗೆ ಬಾಗುತ್ತಿರುವೆನು; ನನಗೆ ಆಶೀರ್ವಾದ ಮಾಡು ಗುರುವೆ ! ನನಗಿಂತ ಪೂರ್ವದಲ್ಲಿ ಐಕ್ಯ ಹೊಂದಿದ-ವರು ತಮ್ಮ ಜ್ಞಾನಾನುಭವದಿಂದ-ಕಡು ನಿಷ್ಠೆಯಿಂದ ನಿಮ್ಮನ್ನು ನಂಬಿದ ಶರಣ ಶ್ರೇಷ್ಠರು. ನಾನು ಮಾತ್ರ ಉಪದೇಶಕೊಡಲು ಅಂಜುವುದಿಲ್ಲ! ಆದರೆ ನಾನು ಕರ್ತೃವಾಗಲು ಸಾಧ್ಯವಿಲ್ಲ, ನಾನು ನಿಮ್ಮ ಮನೆಯ ಆಳು; ಕೂಡಲ ಸಂಗಮದೇವರು ಭಕ್ತಿಯಿಂದ ಭಜಿಸಿದವರ ಮನೆಯಾಳಾಗಿ ದುಡಿಯುತ್ತಾನೆ; ಕಾರಣ ಅಂಥ ಪ್ರಭುವಿನ ಮುಂದೆ ಆಣೆ ಇಟ್ಟುಕೊ ಳ್ಳಲು ಹಿಂಜರಿಯುವದಿಲ್ಲ ಚೆನ್ನಬಸವಣ್ಣಾ !

**೧೧೪೮ ಶಾಂತಿಯ ಮಾಡಹೋದರೆ ಭೇತಾಳವಾಯಿತ್ತಯ್ಯಾ**
**ಸೀತಾಳದ ಆಪ್ಯಾಯನವಾಯಿತ್ತೆಂದೆ**
**ಪರಹಿತಾರ್ಥವಾಗಬೇಕೆಂದು ತೋರಿದೆನೆನ್ನ ಲಿಂಗವನು**
**ನೇಮವ ಮಾಡಬೇಕೆಂದು ಕೊಟ್ಟಡೆ ಕೊಂಡೋಡಿ**
**ಹೋದವರುಂಟೆ ?**
**ಅನಿಮಿಷಯ್ಯನ ಮಹಮನೆ ಹೊಕ್ಕಡೆ,**
**ಎನಗೆ ಹಸ್ತವನೊಡ್ಡಿ ಅರಸೆಂದು ಕಳುಹಿದನು**
**ಸ್ವತಂತ್ರನು.**
**ಅಳಲಿ ಬಳಲಿ ಆಡಿಹಾಡಿ ಅನಂತ ಅವಸ್ಥೆಯಿಂದ**
**ಲಕ್ಷದ ಮೇಲೆ ತೊಂಬತ್ತಾರು ಸಾವಿರ ವಚನ ಮಾಡಿ**
**ಆಚಾರ ವಿಚಾರದಿಂದ ಬ್ರಹ್ಮವಕೊಟ್ಟು ಕಳುಹಿದನಯ್ಯಾ.**
**ಗುಹೇಶ್ವರ ಶರಣರ ತೋರಿದಡರಿದೆನಯ್ಯಾ**
**ಎನ್ನ ಕೂಡಲ ಸಂಗಯ್ಯನೆಂಬ ಲಿಂಗವ.**

ನನ್ನ ಪಾಪಗಳನ್ನು ಕಳೆಯಲು 'ಶಾಂತಿ'ಯನ್ನು ಮಾಡಿದರೆ ಅದು ಪುನಃ ನನಗೆ ಭೂತವಾಗಿ ಕಾಡತೊಡಗಿದೆ; ಲೋಕದ ಕಲ್ಯಾಣಕ್ಕಾಗಿ ವ್ರತ ನಿಯಮಗಳನ್ನು ಮಾಡಬೇಕೆಂದು ನನ್ನ ಲಿಂಗವನ್ನು ಕೊಟ್ಟರೆ ಅದನ್ನು ತೆಗೆದುಕೊಂಡು ಹೋಗುವವರು ಯಾರೂ ಇಲ್ಲ! ಎಲ್ಲೆಡೆಗೂ ಶಿವನು ತುಂಬಿಕೊಂಡಿದ್ದಾನೆ; ಅವನನ್ನು ಹುಡುಕುವುದು ಬಲು ಕಷ್ಟ! ಆ ಶರಣನನ್ನು ಗುಹೇಶ್ವರನು ತೋರಿಸಿದಾಗ ಇವನೇ ನನ್ನ ಇಷ್ಟದೇವನಾದ ಕೂಡಲ ಸಂಗಮನೆಂದು ಅರಿತುಕೊಂಡೆನು!

೧೧೪೯ ಹನ್ನೆರಡು ಸಂವತ್ಸರ ಹಿಂದಾಯ್ತು
ಏನಮಾಡಿದಡೇನಯ್ಯಾ ಎನ್ನಲ್ಲಿ ದಿಟವಿಲ್ಲನಕ್ಕರ?
ಎನ್ನ ಪುಣ್ಯದ ಫಲ: ಕೂಡಲ ಸಂಗಮದೇವ ಬಾ!
ಎನ್ನ ಮುಂಡೆಗೆ ತೋಯನಟ್ಟಂತಾಯಿತ್ತು.

ದುರಭಿಮಾನ, ದುರಹಂಕಾರ, ದುರ್ವಿಕಾರಗಳಿಂದ ಕೂಡಿದ ನನ್ನ ವಚನ-ಆಚಾರಗಳಿಂದ ನನಗೆ ಮುಕ್ತಿ ಇಂದು ಸಿಗಬೇಕಾದದ್ದು ಮತ್ತೆ ಹನ್ನೆರಡು ವರುಷಗಳವರೆಗೆ ದಾರಿ ಕಾಯಬೇಕಾಗಿದೆ. ಈಗ ಯಾವ ವ್ರತ ಮಾಡಿ ಏನು ಫಲ? ನನ್ನ ಭಾಗ್ಯನಿಧಿ ಕೂಡಲ ಸಂಗಮ ದೇವಾ, ಬಾ, ನನ್ನ ಮೊಳಕಾಲಿನಲ್ಲಿ ಚೂಪಾದಚೂರಿ ನಟ್ಟಿದೆ!

೧೧೫೦ ಸಕಳದಲ್ಲಿ ಸನ್ನಿಹಿತನಲ್ಲದವನು
ನಿಷ್ಕಳದಲ್ಲಿ ನಿಜವನೈದುವ ಪರಿಯಂತಯ್ಯ?
ಲಿಂಗ ಹೋಗಾಡಿದನೆಂಬ ನಿಂದೆಯು ಪ್ರಮಥರು
ನುಡಿಯುತ್ತಿರಲು
ಲಿಂಗೈಕ್ಯವೆಂತಪ್ಪುದು ಹೇಳಾ?
ನಿಮ್ಮ ಪ್ರಮಥರು ಮೆಚ್ಚಿ ಅಹುದೆಂದು ಒಡಂಬಟ್ಟು
ಎನ್ನ ಮನಮನ ತಾರ್ಕಣೆಯಪ್ಪಂತೆ
ನಿಮ್ಮಲ್ಲಿ ಐಕ್ಯನ ಮಾಡಿಕೊಳ್ಳಾ ಕೂಡಲ ಸಂಗಮದೇವಾ

ನಿಮ್ಮ ಸೇವೆಯನ್ನು ಈ ಭೂಮಿಯಲ್ಲಿ ಮಾಡದೆ ಇರುವಾಗ ಮತ್ತು ಲಿಂಗವನ್ನು ಅಂಗದಲ್ಲಿರಿಸಿಕೊಂಡು ಪೂಜಿಸದೆ ಭವಿಯೆಂಬ ನಿಂದೆಗೆ ಗುರಿಯಾಗಿರುವಾಗ ನಾನು ಸತ್ಯಸ್ವರೂಪದ ನಿಜವಾದ ಜ್ಞಾನ ಪಡೆಯುವುದು ಹೇಗೆ? ಆದರೆ ನಿಮ್ಮ ಪ್ರಮಥರು ನನ್ನ ಮೇಲೆ ದಯದೋರಿ ನನ್ನ ಮನ ಬುದ್ಧಿಗಳನ್ನು ನಿರ್ಮಲಗೊಳಿಸಿದರೆ ಕೂಡಲ ಸಂಗಮದೇವಾ, ನನ್ನನ್ನು ನಿಮ್ಮ ಪಾದಗಳಲ್ಲಿಟ್ಟುಕೊಂಡು ಕಾಯಬೇಕು.

೧೧೫೧ ಸುಯಿದಾನ ಸವೆಯಿತ್ತೆಂದು ಬೆದರಿದೆನಾದಡೆ
ನಿಮ್ಮಾಣೆ ನಿಮ್ಮ ಪ್ರಮಥರಾಣೆ
ಪಡಿಪದಾರ್ಥಗಳು ಅವಸರಕ್ಕೆ ಒದಗದಿದ್ದಲ್ಲಿ
ಮನವಳುಕಿ ಬೆದರಿದೊಡೆ ನಿಮ್ಮ ಭಕ್ತರಿಗೆ ಸಲ್ಲೆನು.
ಒಡವೆ ಸವಿದರೆ ಒಡನೆ ಸವೆವೆನು,
ಕಡೆ ಮುಟ್ಟ ಪೂರೈಸದಿದ್ದನಾದೊಡೆ,
ಮಡಿವಾಳ ಮಾಚಿತಂದೆಗಳ ಪಾದವೇ ಸಾಕ್ಷಿಯಾಗಿ
ಕೂಡಲ ಸಂಗಮದೇವರಿಗೆ ದೂರವಹೆನು.

ನಾನು ಮಾಡತಕ್ಕ ಕರ್ತವ್ಯಗಳಲ್ಲಿ ಎಚ್ಚರಿಕೆ ಕಡಿಮೆಯಾಗಿ ನಿಮ್ಮ ಪೂಜೆಗೆ ಬಾಧೆಯಾಗುತ್ತದೆಂದು ಅಂಜಿದರೆ ನಿಮ್ಮ ಪ್ರಮಥರ ಆಣೆ; ನೈವೇದ್ಯಕ್ಕೆ ಎಲ್ಲ ವಸ್ತುಗಳು ಸರಿಯಾಗಿ ದೊರೆಯಲಿಲ್ಲವೆಂದು ನನ್ನ ಮನಸ್ಸು ಕಿಂಕರಗೊಂಡರೆ ನಾನು ನಿಮ್ಮ ಭಕ್ತನೇ ಅಲ್ಲ! ಎಲ್ಲ ಕಾರ್ಯ-ಗಳಲ್ಲಿ ದಕ್ಷತೆ ವಹಿಸದಿದ್ದರೆ ಮಡಿವಾಳ ಮಾಚಿದೇವರ ಪಾದಗಳ ಆಣೆ; ಕೂಡಲ ಸಂಗಮದೇವಾ ನಿಮ್ಮಿಂದ ನಾನು ದೂರಾಗುವೆನು!

೧೧೫೨ ತನು ದೊರಕೊಂಡಡೆ ಮನ ದೊರಕೊಳ್ಳದು.
ಮನ ದೊರಕೊಂಡು ತನು ದೊರಕೊಳ್ಳದು.
ತನು ಮನ ದೊರಕೊಂಡಡೆ ಧನ ದೊರಕೊಳ್ಳದು.
ತನು ಮನ ಧನ ದೊರಕೊಂಡಡೆ ಸತಿ ಸುತರೆಡೆಯಾಟ
ದೊರಕೊಳ್ಳದು.

**ಸತಿ ಸುತರೆಡೆಯಾಟ ದೊರಕೊಂಡಡೆ**
**ನಿಜ ಜಂಗಮ ದೊರಕೊಳ್ಳನಯ್ಯಾ ಕೂಡಲ**
**ಸಂಗಮದೇವಾ.**

ದೇಹವಿದ್ದು ಮನಸ್ಸಿಲ್ಲದಿದ್ದರೆ ಅದು ನಿರುಪಯುಕ್ತವಾದುದು; ಮನಸ್ಸು ಹಿಡಿತದಲ್ಲಿದ್ದು ದೇಹವು ಅಂಕಿತದಲ್ಲಿರದಿದ್ದರೆ ಅದು ವ್ಯರ್ಥ; ತನು ಮನಗಳೆರಡೂ ಇದ್ದು ಸಂಪತ್ತು ಇಲ್ಲದಿದ್ದರೆ ಭಕ್ತಿ ಮಾಡುವಲ್ಲಿ ಅದು ದುಃಖಕ್ಕೆ ಕಾರಣವಾಗುತ್ತದೆ; ತನು ಮನ ಧನಗಳೆಲ್ಲವೂ ನಮ್ಮ ಸ್ವಾಧೀನವಾಗಿರುವಾಗ ಮನೆಯಲ್ಲಿ ಭೂಪರಾಗಿರುವ ಸತಿಸುತರು ಇಲ್ಲದಿದ್ದರೆ ಜೀವನವು ನಿರರ್ಥಕವಾಗುತ್ತದೆ; ಆದರೆ ಸತಿ ಸುತರ ವ್ಯಾಮೋಹದಲ್ಲಿ ತೊಡಗಿದರೆ ಭಕ್ತಿಗೆ ಭಂಗವಾಗಿ ಸತ್ವರೂಪಿ ಜಂಗಮನು ದರ್ಶನ ಕೊಡುವುದಿಲ್ಲ; ಅವರ ಸೇವೆ ನನಗೆ ಲಭಿಸುವದಿಲ್ಲ, ಕೂಡಲ ಸಂಗಮದೇವಾ.

**೧೧೫೩ ಕಾಲಲಿ ಕಟ್ಟಿದ ಗುಂಡು, ಕೊರಳಲಿ ಕಟ್ಟಿದ ಬೆಂಡು;**
**ತೇಲಲೀಯದು ಗುಂಡು, ಮುಳುಗಲೀಯದು ಬೆಂಡು;**
**ಇಂತಪ್ಪ ಸಂಸಾರ ಶರಧಿಯ ದಾಂಟಿಸಿ**
**ಕಲಾಂತಕನ ಕಾಯೋ, ಕೂಡಲ ಸಂಗಮದೇವಾ.**

ಕಾಲಲ್ಲಿ ಕಟ್ಟಿಕೊಂಡಂಥ ಸಂಸಾರವೆಂಬ ಅತಿ ಭಾರವಾದ ಗುಂಡು ಮತ್ತು ಎದೆಯ ಮೇಲೆ ಕಟ್ಟಿಕೊಂಡಂಥ ಮುಕ್ತಿದಾಯಕ ಲಿಂಗವು, ನನ್ನನ್ನು ಮುಳುಗಲೂ ಮತ್ತು ತೇಲಲೂ ಬಿಡದವಾಗಿವೆ; ಕಾರಣ ಕೂಡಲ ಸಂಗಮದೇವಾ, ಈ ಎರಡರ ಆಪತ್ತಿನಿಂದ ರಕ್ಷಿಸಿ ನನ್ನನ್ನು ಸಲಹು !

**೧೧೫೪ ಅಸ್ತಿ ಭಾತಿಯೆಂಬ ಭಿತ್ತಿಯ ಮೇಲೆ ಕ್ರಿಯ ನಾಮ**
**ರೂಪೆಂಬ**
**ಚಿತ್ರ ಬರೆಯಿತ್ತಿಲ್ಲದ ಭಿತ್ತಿಯ ಮೇಲೆ**
**ಉಂಟೆಂಬ ಚಿತ್ರದಂತಿತ್ತು.**
**ಎನಗಿದೇ ಮಾಯೆಯಾಗಿ ಕಾಡಿತ್ತು ಕೂಡಲ ಸಂಗಮ**
**ದೇವಾ.**

ಚಿತ್ತವೆಂಬ ಫಲಕದ ಮೇಲೆ ಕ್ರಿಯಾ, ನಾಮ, ರೂಪಗಳೆಂಬ ರೇಖಾ ಚಿತ್ರವು ಮುದ್ರಿತವಾಗಿದ್ದರೂ ಸ್ಪಷ್ಟವಾಗಿ ಕಾಣದಂತಿರುವ ಈ ಮನಃಪರದೆಯಲ್ಲಿ ನಿನ್ನ ಅಸ್ತಿತ್ವವು ಇದೇ ಎಂದು ಮಾತ್ರ ಅನಿಸುವಂತಿದೆ; ಈ ಸಂಶಯವೇ ಮಾಯೆಯಾಗಿ ಕಾಡುತ್ತಲಿದೆ ಕೂಡಲ ಸಂಗಮದೇವಾ !

೧೧೫೫ ರಂಗವಾಲೆ ಎಂದರಂದ ವಿಸದಯ್ಯಾ ಎನ್ನ ಮನವು.
ಷಡು ಸಮ್ಮಾರ್ಜನೆ ಎಂದರೆ ನೊಗಸದಯ್ಯಾ ಎನ್ನ
ಮನಕ್ಕೆ.

ಅದೇನು ಕಾರಣವೆಂದೊಡೆ,
ಭಕ್ತರಂಗಳ ವಾರಣಾಸಿ ಎಂದುದಾಗಿ !
ತಾ ಹುಟ್ಟಿಯೂ ತಮ್ಮ ವ್ವೆಯ ಬಂಜೆಯೆನಬಹುದೆ
ಕೂಡಲ ಸಂಗಮದೇವಾ?

ರಂಗೋಲೆ ಬರೆದು ಆರು ವಿಧಗಳಿಂದ ಪೂಜಿಸುವುದು ನನ್ನ ಮನಸ್ಸಿಗೆ ಹಿಡಿಸದು; ಕಾರಣವಿಷ್ಟೇ, ಭಕ್ತನಿರುವ ಜಾಗವೇ ಅವನಿಗೆ ವಾರಣಾಸಿ, ಹಾಗೂ ತಾನು ನಂಬಿ ಭಕ್ತಿ ಪೂರ್ವಕವಾಗಿ ಧ್ಯಾನಮಾಡುವ ದೇವರು ತನ್ನ ದೈವದ ದೇವರಲ್ಲವೆಂಬವುದು ತನ್ನನ್ನು ಹಡೆದ ತಾಯಿಗೆ ಬಂಜೆಯೆಂದವನ ವಿಚಾರದಂತಿದೆ, ಕೂಡಲ ಸಂಗಮದೇವಾ!

೧೧೫೬ ಪಂಚ ಮುಖವ ಪೂಜಿಸುವಯ್ಯಗಳಿರಾ ನೀವು ಕೇಳಿ-
ರಯ್ಯಾ.

ಪಂಚ ಲಿಂಗವಾವುದೆಂಬುದ ನೀವು ಪೇಳಿರೆ !
ಪೃಥ್ವಿ ಅಪ್ ತೇಜ ವಾಯುವಾಕಾಶವೆಂಬ
ಈ ಐದ್ಯರಲ್ಲಿ ನೊಂದು ಬೆಂದಯ್ಯಗಳು ನೀವು ಕೇಳಿರೆ !
ನಾನವನೊಲ್ಲೆ ನಾನವನಂಗವಿಸುವನಲ್ಲಿ, ನಾನವ
ಹಿಡಿವವನಲ್ಲ !
ಸನ್ಯಾಸದೊಳಗಾಡಿ ಸಮೀಪಕ್ಕೆ ಬಾಹಾತನಲ್ಲ;
ಕ್ಷಪಣರೊಳಗಾಡಿ ಲಜ್ಜೆದೊರೆವವನಲ್ಲ;

**ಲಿಂಗದೊಳಗಾಡಿ ಅಂಗವ ಬಿಡುವವನಲ್ಲ;**
**ಸರ್ವದೊಳಗಾಡಿ ಅಧೋಗತಿಗಿಳಿವವನಲ್ಲ !**
**ನಾನು ಜಂಗಮ ದಾಸೋಹದೊಳಗಾಡಿ ನಿಮ್ಮ ಕಂಡೆ**
**ಕೂಡಲ ಸಂಗಮದೇವಾ.**

ಶಿವನ ಪಂಚಮುಖಗಳೆನ್ನು ಪೂಜಿಸುವ ಅಯ್ಯನವರೆ ಆ ಪಂಚಲಿಂಗ ವೆಂಬುದು ಯಾವುದು ಹೇಳಿರಿ? ನೀವು, ಪೃಥ್ವಿ, ನೀರು, ಅಗ್ನಿ, ವಾಯು ಮತ್ತು ಆಕಾಶಗಳೆಂಬ ಪಂಚಕಗಳಲ್ಲಿ ತಳಮಳಗೊಂಡು ದುಃಖಿಸುವ ಅಯ್ಯನವರು; ನಾನು ಇವಾವುಗಳನ್ನೂ ಒಲ್ಲೆ! ಸನ್ಯಾಸಿಯಾಗಿ ಸ್ತ್ರೀಸಂಗ ಮಾಡುವವನಲ್ಲ; ಕ್ಷುದ್ರ ಜೀವಿಗಳ ಸಂಗ ಮಾಡಿದರೂ ನಾಚಿಕೆಯೆಂಬು ದನ್ನು ಬಿಡುವವನಲ್ಲ; ಸರ್ವ ಕರ್ಮಗಳನ್ನೆಸಗಿದರೂ ವಿನಾಶದ ಮಾರ್ಗ ಹಿಡಿಯಲಾರೆ; ಕೂಡಲ ಸಂಗಮದೇವಾ, ನಾನು ಜಂಗಮ ದಾಸೋಹವ ಮಾಡಿಸಿ ಅವರ ಸಂತೋಷದಲ್ಲಿ ನಿಮ್ಮ ಆನಂದ ಮೂರ್ತಿಯನ್ನು ಕಂಡೆನು!

**೧೧೫೭ ಜಂಗಮಕ್ಕೆ ಮಾಡಿ ಗತಿಯ ಪಡೆದಿಹೆನೆಂಬ**
**ಬೆವಹಾರದ ಭಕ್ತರು ನೀವು ಕೇಳಿರಯ್ಯಾ;**
**ಜಂಗಮಕ್ಕೆ ಮಾಡಿ ಗತಿ ಪಡೆದಿಹೆನೆಂಬ**
**ಭಕ್ತಿ ವ್ಯರ್ಥರು ನೀವು ಕೇಳಿರಣ್ಣಾ—**
**ಅಗ್ನಿ ಮುಖದಲ್ಲಿ ಪಾಕವಾದ ಸಸಿ ತೆನೆಯಪ್ಪುದೇ?**
**ಶಶಿಧರಂಗೆ ಮಾಡಿದಡೆ ಫಲವಪ್ಪುದಾ ಫಲದಾಯಕನೆ**
**ಮರಳಿ ಭವಕ್ಕೆ ಬಹನು !**
**ಜಂಗಮಕ್ಕೆ ಮಾಡಿದಡೆ ಫಲವಿಲ್ಲ, ಮರಳಿ ಭವವಿಲ್ಲ.**
**ಕಿಚ್ಚಿನ ಕಣಜದಲ್ಲಿ ಬೀಜವ ತುಂಬಿ ಬಿತ್ತುವ**
**ದಿನಕ್ಕರಸಿದುರುಂಟೇ ?**
**ಕೂಡಲ ಸಂಗಮದೇವಾ,**

ಜಂಗಮರ ಪೂಜೆ ಮಾಡಿ–ದಾಸೋಹವ ಮಾಡಿ ನಾವು ನಿರ್ವಾಣ ಹೊಂದಿರುವೆವೆನ್ನುವ ಡಂಭದ ಭಕ್ತರೆ–ಅಗ್ನಿಯಲ್ಲಿ ಸುಟ್ಟ ಕಾಳು

ಎಂದಾದರೂ ಬಿತ್ತಲು ಬರುವುದೆ? ನಿಜ ಭಕ್ತಿಯೆನ್ನು ಮಾಡಿದ ಭಕ್ತರಿಗೆ ಸಂಸಾರದ ಭಯವಿಲ್ಲ! ಈ ಡಂಭದ ಭಕ್ತಿ ನಿರರ್ಥಕವಾದುದು.

**೧೧೫೮ ಆದಿ ಲಿಂಗವನಾದಿ ಶರಣನೆಂಬುದು**
**ತನ್ನಿಂದ ತಾ ಮಾಡಲಾಯಿತ್ತು ಕೇಳಿರಣ್ಣಾ.**
**ಆದಿ ಕಾಯುವನಾದಿ ಪ್ರಣವೀ ಉಭಯ ಭೇದವ**
**ತಿಳಿದು ವಿಚಾರಿಸಿ ನೋಡಿರಣ್ಣಾ.**
**ಅಂತು ಅನಾದಿ ಪ್ರಸಾದವು ಆದಿಗೆ ಸಲುವುದು.**
**ಪ್ರಾಣ ಪ್ರಸಾದ ವಿರೋಧವಾಗಿ ಪಿಂಡ ಪ್ರಸಾದವ**
**ಕೊಂಡರೆ,**
**ಕೊಂಡುದು ಕಿಲ್ಬಿಷ, ಕೂಡಲ ಸಂಗಮದೇವಾ.**

ಮೂಲವು ಲಿಂಗವಾದರೆ, ಅದಕ್ಕೂ ಪೂರ್ವದಲ್ಲಿ ಶರಣನಿದ್ದನು ಎಂಬುದು ನಮ್ಮ ಕಲ್ಪನೆಯಲ್ಲ; ಅದು ಸ್ವಯಂ ನಿರ್ಮಾಣವಾಗಿದ್ದು; ಇದೇ ರೀತಿಯಾಗಿ ಪ್ರಾಣವು ಅನಾದಿಯಾಗಿದ್ದು ದೇಹವು ಆದಿಯಾಗಿದೆ; ಇವೆರಡರ ಬಾಂಧವ್ಯದಲ್ಲಿರುವ ತಾರತಮ್ಯವನ್ನು ತಿಳಿದುಕೊಳ್ಳಬೇಕು. ಕಾರಣ ಅತಿ ಪೂರ್ವಿಯಾದ ಪ್ರಸಾದವು ಸೃಷ್ಟಿಯನ್ನು ಕಾಪಾಡುತ್ತದೆ; ಪ್ರಾಣಲಿಂಗಕ್ಕೆ ಸೇರದ್ದನ್ನು ಸೇವಿಸಿದರೆ ಅದು ವಿಷವಾಗಿ ನನ್ನನ್ನು ನಾಶ ಮಾಡಲಿ, ಕೂಡಲ ಸಂಗಮದೇವ.

**೧೧೫೯ ಇಹದ ಪೂರ್ವವ ಜರೆದು ಪರದ ಪೂರ್ವವನರಿದು**
**ಗುರು ಕಾರುಣ್ಯವ ಪಡೆದು ಅಂತರ್ಬಾಹ್ಯದ ಭವಿಯ**
**ತೊರೆದು**
**ಭಕ್ತಪರಾಯಣರಾಗಿ ನಿಂದುದೇ ಲಿಂಗದ ನಿಜದಂಗ.**
**ಎಂದು ಅಂತರಂಗದ ಭವಿಯುನು ಹಿಂಗಿ,**
**ಎಂದೀ ಮಾನವರಂಗದ ಭವಿಯುನು ಕಳೆದು,**
**ಎಂದೀ ಬಹಿರಂಗದ ಭವಿಯುನು ತೊಲಗಿಸಿ,**
**ಇಂತೀ ತ್ರಿವಿಧ ಭವಿಯುನು ದೂರಮಾಡಿ**

ಶಿವಭಕ್ತಿಯೇ ಅಂಗನಾದ ಲಿಂಗೈಕ್ಯ ಲಿಂಗಪೂಜಕರಿಗೆ
ಪೂರ್ವವರ್ಣಾಶ್ರಮಾದಿ ಸೂತಕವಿಲ್ಲ ಕೂಡಲ
ಸಂಗಯ್ಯಾ.

ಜಗತ್ತಿನ ನಿರ್ಮಾಣ ಎಂದಾಯಿತು, ಅದರ ಕಾರಣವೇನೆಂಬು ದನ್ನು ತಿಳಿಯಲು ಹೆಣಗುವದಕ್ಕಿಂತಲೂ ಸೃಷ್ಟಿಕರ್ತನಾದ ಪರಮೇಶ್ವರನ ಪಾದಗಳಲ್ಲಿ ಹೊಂದಿಕೊಳ್ಳುವ ದಾರಿಯನ್ನು ತಿಳಿದುಕೊಂಡು,ಅಂತರಂಗ- ದಲ್ಲಿರುವ ಮಾಯೆಯನ್ನು, ಈ ಮನುಷ್ಯ ದೇಹವನ್ನು ಮತ್ತು ಹೊರಗೆ ಮಾಯಾರೂಪದಲ್ಲಿರುವ ಧನ, ಸತಿಸುತೆಯರನ್ನು ಎಲ್ಲವನ್ನು ತ್ಯಾಗಮಾಡಿ ಶಿವ ಭಕ್ತಿಯನ್ನು ಮಾಡಿದರೆ ಎಲ್ಲ ಜನ್ಮಗಳ ಪಾಪವೂ ನಾಶವಾಗುತ್ತದೆ, ಕೂಡಲ ಸಂಗಮದೇವಾ!

೧೧೬೦ ಲಿಂಗ ಜಂಗಮದ ಪ್ರಸಾದವಲ್ಲದೆ ಭೂತದ್ರವ್ಯವ
ಮುಟ್ಟಬಾರದು;
ಶಿಷ್ಟೋದನವಲ್ಲದುದ ಕೊಳ್ಳಬಾರದು.
ಉಪದೇಶವಿಲ್ಲದವರಲ್ಲಿ ಮಾಡಿದುದು ಶೂದ್ರಾನ್ನವು,
ಹೊಲೆಗಳೆವುದಕ್ಕೆ ಮಾಡಿದುದು ಸೂತಕಾನ್ನವು,
ಸ್ಥಾವರ ನಿಮಿತ್ಯವಾದುದು ನೈವೇದ್ಯಾನ್ನವು,
ಪಿತೃ ಕಾರ್ಯಕ್ಕಾದುದು ಸ್ರಾದ್ಧಾನ್ನವು,
ಬಲಿಗೆ ಹಾಕಿದುದು ಪತಿತಾನ್ನವು,
ವರ್ಷಕ್ಕೆ ಮಾಡಿದುದು ಸಮೂಹಾನ್ನವು,
ಆವುದೊಂದು ಸಿರಿಗರ ಹೊಡೆದಲ್ಲಿ ಪಾಕಭೇದವಾಗಿ
ತೊಂಬಾರಕ್ಕೆ ಬೇರೆ ಮಾಡಿದುದು ರಾಜಾನ್ನವು,
ಇಂತೀ ಸಪ್ತವಿಧದನ್ನವ ಬಿಟ್ಟು,
ಜಾತಿ ಭೇದವ ಮರೆದು
ಶಿವಭಕ್ತರ ಮನೆಯ ಪ್ರಸಾದವ
ಶೈವಾದಿಗಳು ಜಂಗಮ ಪ್ರಸಾದವ ಕೊಂಡು
ಮುಕ್ತರಾದರಲ್ಲದೆ

**ಜಂಗಮರಲ್ಲಿ ವಿಶ್ವಾಸ ಹೀನರನೇನೆಂಬೆನಯ್ಯಾ**
**ಕೂಡಲ ಸಂಗಮದೇವಾ!**

ಗುರುಪದೇಶವನ್ನು ಪಡೆಯದೆ, ಹೊಲೆತನವನ್ನು ಕಳೆದುಕೊಳ್ಳಲು ಹಬ್ಬ ಹುಣ್ಣಿವೆಗಳಿಗಾಗಿ, ಪಿತೃಗಳ ಆತ್ಮ ತೃಪ್ತಿಗಾಗಿ, ಭೂತಪಿಶಾಚಿಗಳಿಗೆ ಬಲಿ ಆಹಾರಕ್ಕಾಗಿ, ಹುಟ್ಟುಹಬ್ಬದ ಸವಿನೆನಪಿಗೆ ಮಾಡಿದ ಈ ಎಲ್ಲ ಏಳು ಪ್ರಕಾರದ ಅಡಿಗೆಯು ಜಂಗಮ ಮತ್ತು ಜಂಗಮ ಭಕ್ತರಿಗೆ ಸೂತಕಾನ್ನವಿದ್ದಂತೆ; ಕಾರಣ ಶಿವ ಭಕ್ತರ ಮನೆಯ ಪ್ರಸಾದವನ್ನು ಲಿಂಗ ಜಂಗಮರುಂಡು ಬಿಟ್ಟುದನ್ನು, ಜಾತಿ ಭೇದವನ್ನು ಮಾಡದೆ ಉಂಡು ಮುಕ್ತಿ ಸಂಪದ ಹೊಂದಿದರು; ಇಂಥ ಜಂಗಮರಲ್ಲಿ ನಂಬಿಗೆಯಿಲ್ಲದೆ ವರ್ತಿಸುವ ಮಾನವರಿಗೆ ಏನೆಂದು ಹೇಳಲಿ ಕೂಡಲ ಸಂಗಮದೇವಾ!

ಸಂಪೂರ್ಣ

---

# ಶಬ್ದ ಕೋಶ

**ಅಕ್ಕವೆ** ಜೀರ್ಣವಾಗುವಿಕೆ,ಪ್ರಯೋಜನ(೨) ಅಜೀರ್ಣ

**ಅಕ್ಕು** (ಹಃ ಅಳ್ಕು) ಅರಗು, ಜೀರ್ಣವಾಗು

**ಅಕ್ಕೆ** (ಹ: ಅಳ್ಕೆ) ದುಃಖ

**ಅಗವ್ಯ** ತಿಳಿಯಲಿಕ್ಕೆ ಬಾರದ

**ಅಲಗ** ತಳಿಗೆ, ವಿಸ್ತಾರ

**ಅಗ್ಘವಣಿ** (ಸಃ ಅರ್ಘ್ಯಪಾನಿಯ) ಪೂಜೆ–ಅಭೀಷೇಕಕ್ಕಾಗಿ ಉಪ-ಯೋಗಿಸುವ ನೀರು

**ಅಘಟಿತ** ಇನ್ನು ಸಂಭವಿಸದೆ ಇದ್ದ, ಭವಿಷ್ಯ

**ಅಘಟಿತ ಘಟಿತ** ಎಂದೂ ಉಂಟಾಗದೆ ಇದ್ದನ್ನು ಉಂಟುಮಾಡುವವನು

**ಅಘೋರ** ಘೋರ, ನಿಷ್ಠುರ, ಭಯಂಕರ

**ಅಂಕ** ಸೈನಿಕ, ಭಟ, ಯುದ್ಧ, ಕಾಳಗ

**ಅಂಕಕಾರ** ವೀರ, ಭಟ

**ಅಂಕೆ** ಅಧಿಕಾರ, ಅಪ್ಪಣೆ

**ಅಂಗ** ದೇಹ (ವೀರಶೈವ ಭಾಷೆ-ಯಲ್ಲಿ, ಭಕ್ತ

**ಅಂಗತ** (ಸಃ ಅಂಗತಃ) ವೈಗೂಡಿದ, ಅಳವಟ್ಟ

**ಅಂಗೈಸು** ಕೈಕೊಳ್ಳು, ಪೂರೈಸು

**ಅಂಗವಣಿ** ಧೈರ್ಯ, ಪರಾಕ್ರಮ

**ಅಚ್ಚಿಗ** ವಿಹ್ವಲತೆ, ಕಳವಳ

**ಅಚ್ಚುಗ** ಪ್ರೀತಿ ವ್ಯಾಮೋಹ

**ಅಜಪೆ** ಹಂಸವೆಂಬ ಮಂತ್ರ (ಇದು ಸಾಮಾನ್ಯವಾಗಿ ಮನುಷ್ಯನು ಉಸರಾಡಿಸುವುದರಿಂದಲೆ ಹುಟ್ಟುತ್ತದೆ, ಅಂತೆಯೆ ಈ ಹೆಸರು)

**ಅಜಾತ** ಹುಟ್ಟು ಇಲ್ಲದ,ಭವವಳಿದ, ಶರಣ

**ಅಂಜನ** ದೋಷ, ಅಂಟಿಕೊಳ್ಳುವದು.

**ಅಟ್ಟಾಟಿಕೆ** ಜಂಬ, ಪೌರುಷದ ಮಾತು, ಅತಿಶಯೋಕ್ತಿ

**ಅಟ್ಟೆ** ತಲೆಯಿಲ್ಲ, ದೇಹ, ಮುಂಡ

**ಅಡಕು** ಕೂಡಿಕೊಳ್ಳು.

**ಅಡಗು** ಮಾಂಸ, ಬಾಡ

**ಅಡಸು** ಬಲತ್ಕಾರಮಾಡು

**ಅಡಾಯುಧ** ಮಂಡಲಾಕಾರದ ತುದಿಯುಳ್ಳ ಕತ್ತಿ

**ಅಡಿಯ** ದಾಸ, ಸೇವಕ, ಶರಣ

**ಅಡೆ** ಗೊಬ್ಬರ

**ಅಣಕ** ಅಣಕಿಸುವದು, ತೆಗಳುವದು.

**ಅಣಬೆ** ತಾಳಿ(?)

**ಅಣಲು** (ಬಾಯಿ) ಅಂಗಳು

**ಅಣೆ** ಹೊಡೆ, ಅಪ್ಪಳಿಸು

**ಅಂಡಲೆ** ಪೀಡಿಸು, ತೊಂದರೆಯುಂಟುಮಾಡು

**ಅತಿಗಳೆ** ಪೂರ್ಣವಾಗಿ ಕಳೆ, ದಾಂಟು

**ಅದ್ದಗಾಣೆ** ಕಾಣಿಯ ಅರ್ಧ

**ಅದ್ದು** ಎದ್ದು, ಮುಳಿಗಿಸು

**ಅನಂಗಸಂಗಿ** ಕಾಮವಿಕಾರವುಳ್ಳವ

**ಅನವರತ** ಯಾವಾಗಲೂ

**ಅನಾಮಿಕ** ಹೆಸರಿಲ್ಲದ, ಉಂಗುರ ಧರಿಸುವ ಬೆರಳು

**ಅನಾಯತ** ಅಕ್ರಮ ಕೃತ್ಯ, ತಪ್ಪು ಕೆಲಸ

**ಅನಿಮಿಷ** (೧) ಯಾವಾಗಲೂ, ಕಣ್ಣು ತೆರದಿರುವವ, ದೇವತೆ (೨) ಒಬ್ಬ ಶಿವಶರಣ

**ಅನು** ಲೇಸು, ಯೋಗ್ಯತೆ, ಒಳ್ಳೆಯ ರೀತಿ, ಸಿದ್ಧತೆ

**ಅನುಭಾವ** ನಿಜದ ಅಥವಾ ಪರಮಾತ್ಮನ ಅನುಭವ ಆಥವಾ ಸಾಕ್ಷಾತ್ಕಾರ

**ಅನುವಾಗು** ಯೋಗ್ಯವಾಗಿ ಉಪಯೋಗವಾಗು

**ಅನುಶ್ರುತ** (೧) ಪ್ರಖ್ಯಾತ (೨) ನಿರಾತರ

**ಅಂತರಬೆಂತರ** ಒಂದು ಬಗೆಯ ಪಿಶಾಚಿ

**ಅಂತರಾಳ** ಒಳಗಿನ ಸ್ಥಾನ

**ಅಂತರಿಸು** ಬಿಡು, ತ್ಯಾಗಮಾಡು

**ಅಂತು** (ಸಃ ಅಂತ, ಅಂತಸ್) ಒಳಗಣದು, ಗುಟ್ಟು, ರಹಸ್ಯ, ಪಾರ, ಕೊನೆ, ಸಾಮೀಪ್ಯ, ಸಾನ್ನಿಧ್ಯ.

**ಅಂದ** ತೆರೆ, ರೀತಿ, ಪ್ರಕಾರ, ಚೆಲವು,

**ಅಂದಣ** ಪಲ್ಲಕ್ಕಿ, ದಂಡಿಗೆ

**ಅಂದಣಗಿತ್ತಿ** ಬೋಯತಿ, ತನ್ನ ಶೃಂಗಾರವನ್ನೆ ಲಕ್ಷಿಸುವಳು, ಅಂದಗಾರ್ತಿ (?)

**ಅನ್ನಕ** ತನಕ, ವರೆಗೆ,

**ಅನ್ನಬರ** ತನಕ, ವರೆಗೆ,

**ಅಪಾತ್ರ** ಅಯೋಗ್ಯ

**ಅಪ್ಯಯ** ಜೀರ್ಣವಾಗುವಿಕೆ, ಬೆರೆಯುವಿಕೆ

**ಅಭಿಮಾನ** ಹೆಂಡಿರು-ಮಕ್ಕಳಲ್ಲಿ ಇರುವ ಮಮತೆ

**ಅಭಿಮಾನಿ** ಆತ್ಮಗೌರವವುಳ್ಳ

**ಅಮೃತಗಣ** ಛಂದಸ್ಸಿನಲ್ಲಿಯ ಒಂದು ಭೇದ
**ಅಮ್ಮು** (ಹಃ ಅಣ್ಮು) ಶಕ್ತನಾಗು
**ಅಂಬರ** ಆಕಾಶ
**ಅಯಿದೆ** ಗಂಡನುಳ್ಳಾಕೆ
**ಅಯ್ಯ** ತಂದೆ, ಅಜ್ಜ
**ಅಯ್ಯತನ** ತಾನು ಶ್ರೇಷ್ಠನೆಂಬ ಭಾವನೆ, ಅಹಂಕಾರ
**ಅರಸು** ರಾಜ್ಯ, ಅರಸೊತ್ತಿಗೆ
**ಅರಳಂಬು** ಹೂವಿನ ಬಾಣ, ಕಾಮನ ಬಾಣ
**ಅರಳೆ** (ಗಾಣದ ನಡುವಿನ ಕಂಬು ಸ್ಥಾಣು
**ಅರಿದು** ಕಠಿಣ, ಅಸಾಧ್ಯ
**ಅರುಹ** ಬುದ್ಧ, ಜಿನ
**ಅರ್** ಒಣಗು, ಬತ್ತು
**ಅರಸು** ಹುಡುಕು
**ಅರ್ಥಿ** ಬೇಡುವವ
**ಅರ್ಪಣೆ** ನಿವೇದನೆ ಮಾಡಿದ, ನೀಡಿದ
**ಅಲಸು** ದಣಿ, ಆಲಸ್ಯ ಹೊಂದು
**ಅಲೆ** ಅಲುಗಾಡಿಸು, ನಡುಗಿಸು, ಕಾಡು
**ಅವಧರಿಸು** ಲಕ್ಷ್ಯಕೊಡು .
**ಅವಧಾನಿ** ಎಚ್ಚರಿಕೆಯುಳ್ಳ
**ಅವಧಾರು** ಲಕ್ಷ್ಯಕೊಡು

**ಅವಲೋಹ** (ಬಂಗಾರಕ್ಕಿಂತ) ಕೀಳು ತರಹದ ಲೋಹ
**ಅವಸರ** ಸಮಯ, ತವಕ.
**ಅವಸಾನ** ಕಡೆ, ಕೊನೆ, ಮರಣ
**ಅವಸ್ಥೆ** ದುಃಖ, ಸಂಕಟ
**ಅವಿಮುಕ್ತಕ್ಷೇತ್ರ** ಕಾಶಿಯ ನೆರೆಯಲ್ಲಿರುವ ಒಂದು ಕ್ಷೇತ್ರದ ಹೆಸರು
**ಅವುಟು** ಮೂರುವರೆ
**ಅವುಡು** ಮೆಲುಕು, ದವಡೆ
**ಅಸ** ಪರಾಕ್ರಮ ಶಕ್ತಿ (ಶಕ್ತಿ)
**ಅಸುಗತಿ** ಕೆಟ್ಟಗತಿ, ದುರ್ಗತಿ
**ಅಳಲು** ದುಃಖ ಸಂಕಟ
**ಅಶ್ವಮೇಧಯಾಗ** ಕುದುರೆಯನ್ನು ಆಹುತಿ ಕೊಡುವ ಯಜ್ಞ (ಈ ಯಾಗವನ್ನು ಸಮ್ರಾಟರಾದ ಅರಸರು ಮಾಡುತ್ತಿದ್ದರು)
**ಅಳವಡು** ಹೊಂದಿಕೊಳ್ಳು, ಸರಿಯಾಗು
**ಅಳವು** ಸಾಮರ್ಥ್ಯ
**ಅಳಿ** ಕೆಟ್ಟ
**ಅಳುಕು** ಅಂಜು, ಹೆದರು,
**ಅಳುಪು** ಲೋಲನಾಗು, ಆಶೆಮಾಡು, ನಾಚಿಸು,
**ಅಹಮ್ಮು** ನಾನು ಎಂಬ ಮದ
**ಆ** ನಾನು, ಆನು.

**ಆಗಡ** ಅಲ್ಲದ ಅಥವಾ ಹೊಲ್ಲದ ಕೆಲಸ
**ಆಗಮ** ತಂತ್ರ ಶಾಸ್ತ್ರ, ವೇದ
**ಆಗಳೂ** ಯಾವಾಗಲೂ
**ಆಗು** ಆಗುವಿಕೆ, ಪರಿಣಾಮ
**ಆಚಮನ** ಬಾಯಿ ತೊಳೆದು ಕೊಳ್ಳುವದು
**ಆಣಕ** ಅಣಕ, ಅಣಕಿಸುವಿಕೆ
**ಆದ್ಯರು** ಮುಂಚಿನ ಶರಣರು, ಪುರಾತನರು
**ಆಧಿ** ಚಿಂತೆ, ವ್ಯಾಕುಲತೆ
**ಆನು** ಚಾಚು, ಒಡ್ಡು
**ಆಪೋಷಣ** ಬೊಗಸೆಯಲ್ಲಿ ನೀರು ಕುಡಿಯುವದು
**ಆಪ್ಯಾಯನ** ತೃಪ್ತಿ, ಸಂತುಷ್ಟಿ
**ಆಮಿಷ** ಮದ್ಯ-ಮಾಂಸ ಮುಂತಾದ ಮನಸೆಳೆಯುವ ಪದಾರ್ಥ, ಮೋಹ, ಲಂಚ
**ಆಯ** ಉತ್ಪನ್ನ, ಪಾಲು
**ಆಯತ** ಯೋಗ್ಯವಾದುದು, ಕ್ರಮವಾದುದು, ಸರಿಯಾದುದು, ವೀರಶೈವರಲ್ಲಿ ಗುರುವು ಭಕ್ತನಿಗೆ ಇಷ್ಟಲಿಂಗವನ್ನು ಕೊಡುವ ದೀಕ್ಷೆ
**ಆರಲ್** (ಸಂ; ಆರ್ತ?) ಆಶ, ತೃಷ್ಣೆ
**ಆರ್‌ಯ್** ಎಚ್ಚರದಿಂದ ಇರು, ರಕ್ಷಿಸು
**ಆರಂಭ** ಒಕ್ಕಲತನ
**ಆರಾಧ್ಯ** ಸನ್ಮಾನ್ಯ, ಪೂಜ್ಯ
**ಆರೂಢ** ಎಲ್ಲವನ್ನು ಮೀರಿದ, ವಿರಕ್ತ
**ಆರೋಗಣೆ** ಊಟ
**ಆರಡು** ಬೊಬಡು, ಒದರು
**ಆಲಿಕಲ್ಲು** ಮಂಜಿನಗಡ್ಡೆ, ಅಣೆಕಲ್ಲು
**ಆಲು** ಕೂಗು, ಗರ್ಜಿಸು
**ಆವಹ** ಕರೆಯುವದು, ದೂತನಾಗುವದು
**ಆಸರು** ಬೇಸರಪಡು, ದಣಿ
**ಆಸುರ** ಸೊಕ್ಕು, ಪರಾಕ್ರಮ, ಆವೇಶ, ಕಂಟಕ
**ಆಳವರಿ** ಆಳವನ್ನು ತಿಳಿ, ತನ್ನ ಶಕ್ತಿಯನ್ನು ಕಂಡುಕೊಳ್ಳು
**ಆಳನಾಡು** ತನ್ನ ಬಗೆಗೆ ಕೀಳು ನುಡಿಗಳನಾಡು
**ಆಳಿ** (೧) ಸೇವಕ, ದಾಸಿ. (೨) (ಸಃ ಆಲಿ) ವಂಶ, ಮನೆತನ
**ಆಳಿಕಾರ** ಮೋಸಗಾರ, ನಿಂದಕ
**ಆಳಿಗೊಳ್** ತಿರಸ್ಕರಿಸು, ಧಿಕ್ಕರಿಸು
**ಆಳ್ದ** ಒಡೆಯ
**ಇಟ್ಬೆ** ಕಾಸರಕನ ಮರ (ಇದರ ಹಣ್ಣು .ಅತ್ಯಂತ ವಿಷವಾದುದು)
**ಇದಿರು** ಎರಡನೆಯ, ಇತರ, ಪರ, ಮುಂದಿನದು, ಎದುರಿನ

**ಇನಿದು** ರುಚಿಕರ, ಸಿಹಿ.
**ಇಮ್ಮಾನ** (೧) ಎರಡು, 'ಮಾನ' ಅಥವಾ ಅಳತೆ, ಎರಡು ಮನಸ್ಸು ಸಂದೇಹ
**ಇಮ್ಮೆಯ್** ಎರಡೂ ಮಗ್ಗಲು, ಒಳಗೂ ಹೊರಗೂ
**ಇಂಬು** ಅವಕಾಶ, ದೂರ
**ಇಲ್ಲವೆ** ಇಲ್ಲದಿರುವಿಕೆ, ಅಭಾವ
**ಈಂಟು** ಕೂಡಿ,ಪಾನಮಾಡು,
**ಈಸು** ಕೊಡಿಸು
**ಉಡುಹ** (ಉಡುಪ?) ಬಟ್ಟೆ, ಬಟ್ಟೆ ಬರೆಗಳನ್ನೂ ಉಡುವುದರಲ್ಲಿ ಪ್ರೀತಿಯುಳ್ಳವ, ವೇಷಧಾರಿ
**ಉಂಡಲಿಗೆ** (ಅಕ್ಕಿಯ) ಕಡಬು
**ಉಂಡಿಗೆ** ಮುದ್ರೆ
**ಉತ್ತು** (ಹಃ ಉರ್ತು) ಹೊಲ ಹಸನ ಮಾಡಿ
**ಉದರಪೋಷಕ** ಹೇಗಾದರೂ ಮಾಡಿ ಹೊಟ್ಟೆ ಹೊರೆದು ಕೊಳ್ಳುವವ
**ಉದರೆ** (ಸಂಃ ಉದ್ಧಾರ) ಉದ್ಧರಿ
**ಉದಾಸೀನ** ಬೇಸರ, ಅಲಕ್ಷ
**ಎಂತಕ್ಕೆ** ಏತಕ್ಕಾಗಿ; ಹೇಗೆ
**ಎರೆ** ಬೋರೆಯ ಗಿಡ
**ಎರಗು** (೧) ಬಾಗು, ನಮಸ್ಕರಿಸು (೨) ಒಲಿ
**ಎರೆಸು** ಸುರಿಸು, ಎರೆಯುವಂತೆ ಮಾಡು
**ಎಲವ** ಬೂರಲ ಮರ
**ಎಲುದೋ** (ರ) ರೆ, ಎಲಬು ಕಾಣುವವರಿಗೆ
**ಎಳಸು** ಬಯಸು, ಆಶಿಸು
**ಎಳೆಯ** ಚಿಕ್ಕದ, ತರುಣ,ನೂತನ, ಹೊಸಬ
**ಎಸವೋದ** ಶಕ್ತಿಯಿಲ್ಲದ, ದುರ್ಬಲ
**ಏಗುವದು** ಏನುಮಾಡಬೇಕು.
**ಏಡಿಸು** ಅಣಗಿಸು, ನಿಂದಿಸು
**ಏತ** ಬಾವಿಯಿಂದ ನೀರೆತ್ತುವಗಳ
**ಏಬೆಸನ** ಏನಪ್ಪಣೆ
**ಏರಿ** ಕೆರೆಯ ದಂಡಿ, ಒಡ್ಡು
**ಏವುದು** ಏನ ಮಾಡಬಲ್ಲದು
**ಏವೆ** ಏನು ಮಾಡಬಲ್ಲೆನು
**ಐದಾರೆ** ಇರುವರು
**ಐದೆ** ಅಣಚಿ,ಮುತ್ತೈದೆಯ ಲಕ್ಷಣ, ತಾಳಿಯಸರ (?)
**ಐಸು** ಅಷ್ಟು
**ಒಕ್ಕಲಿತಿ** ಶೂದ್ರ ಸ್ತ್ರೀ
**ಒಕ್ಕುದು** ಭೋಗಿಸಿದುದು, ಜಂಗಮರಿಗೆ ಕೊಟ್ಟುದು
**ಒ** (ಗ) ಕತನ, ಗಂಡನ ಕೂಡ ಮಾಡುವ ಬಾಳುವೆ
**ಒಟ್ಟಿಲು** ಒಟ್ಟಿದ ರಾಶಿ

**ಒಡೆತಣ** ಒಡೆತನ, ಅಧಿಕಾರ, ಒಡನಾಟ
**ಒಡನೆ** ತನ್ನಕೂಡ, ಜನ್ಮತಃ
**ಒಡ್ಡ** ಜೂಜಿನಲ್ಲಿ ಹಚ್ಚುವ 'ಪಣ'
**ಒಡ್ಡು** ಅಧೀನಮಾಡು.
**ಒತ್ತೆ** ಸೂಳೆತನಕ್ಕಾಗಿ ವಿಟರಿಂದ ಸ್ವೀಕರಿಸುವ ಧನ
**ಒತ್ತೊತ್ತೆ** ಒಂದೊಂದೆ (?)
**ಒದವು** ಒದಗು, ಉಂಟಾಗು
**ಒಪ್ಪ** ಕಾಂತಿ, ಚೆಲುವು, ಸರಿಯಾದ ಒಪ್ಪುವಂತಹ ಮಾತು
**ಒಪ್ಪಚ್ಚಿ** (ಚಿ) ಒಮ್ಮೆಯಾದರೂ
**ಒಮ್ಮನ** (೧) ಒಂದೇ ಅಳತೆ (೨) ಒಂದೇ ಮನಸ್ಸು
**ಒಯ್ವರೆ** ಒಯ್ಯುದಾಗ
**ಒರೆ** (ಬಂಗಾರದ) ಕಾಂತಿ, ಬಣ್ಣ (ಒರೆಗಲ್ಲಿಗೆ) ಒಮ್ಮೆ ತಿಕ್ಕಿದರೆ ಬರುವಷ್ಟು (ಚಿನ್ನ)
**ಒರಲು** ಆಕ್ರಂದಿಸು,ಮೊರೆಯಿಡು
**ಒರೆ** (ಯು) ಕಟ್ಟು, ಕತ್ತಿಯ ಒರೆಯನ್ನು ಟೊಂಕಕ್ಕೆ ಕಟ್ಟು, ಯುದ್ಧಕ್ಕೆ ಸನ್ನದ್ಧನಾಗು
**ಒಲ್** ಪ್ರೀತಿಮಾಡು,ಒಲಿ
**ಒಳಕೊಳ್** ಒಳಗೆ ಹಾಕಿಕೊಳ್ಳು, ಸಹಿಸು
**ಒಳಬೊಳ್ಳೆತನ** ಒಳಗೆ ಹಾಕಿಕೊಳ್ಳು, ಒಳಗೆ ಪೊಳ್ಳಾಗಿರುವಿಕೆ, ಮೋಸಗಾರಿಕೆ
**ಒಳರೆ** ಇರುವರೆ,. ಉಂಟೆ
**ಒಳಲೊಟ್ಟೆ** ಒಳಗೆ ಪೊಳ್ಳಾಗಿರುವದು, ನಿರರ್ಥಕವಾದುದು,
**ಒಳ್ಳಿದ** ಒಳ್ಳೆಯವ
**ಒಳ್ಳೆ** ನೀರ ಹಾವು
**ಓಗರ** ಅನ್ನ, ಬೋನ
**ಓಜಕಟ್ಟಿಗೆ** ಓಜ ಉಪಾಧ್ಯಾಯರು ಕೈಯೊಳಗಿನ ಬೆತ್ತ, ಶಿಕ್ಷಣದ ಚಿಹ್ನೆ
**ಓ(ಜೆ)ಜ** ರೀತಿ,ಕ್ರಮ, ಆಧಾರಓಡು (ಹರಿಯುವು)
**ಓಡುಬಲು** ಬಡೆದ
**ಹೋತೆ** ಓಡುಬಲ್ಲ
**ಓತ** ಒಲಿದ
**ಓತು** ಒಲಿದು ಪ್ರೀತಿಸಿ
**ಓರೆ** ಅಡ್ಡದಾರಿ ಹೋಗುವ ಎಡನಟ್ಟು, ವಾಳಿ
**ಓಲಾಡು** ತೇಲಾಡ್ಯ
**ಓಲಿಸು** ಅವಲಂಬಿಸು
**ಓಲು** ತಳೆ, ಹೊಂದು, ಆಶ್ರಯಿಸು
**ಓಲೆ** ಸ್ತ್ರೀಯರಕಿವಿಯಲ್ಲಿಯ ಒಂದು ಆಭರಣ (ಮಾಂಗಲ್ಯದ ಲಕ್ಷಣ)
**ಓಲೆ(ಯು)** ಸಶಸ್ತ್ರ ಸೇವಕ
**ಓಲೈಸು** ಸೇವೆಮಾಡು
**ಓಸರಿಸು** ಹಿಂಜರಿ, ಹಿಂದೆಗೆ
**ಕಕ್ಕುಲತೆ** ಪ್ರೀತಿ
**ಕಚ್ಚುಟ** ಕಾಪೀನ

**ಕಂಚು** ಕಂಚಿನ ತಾಬಂಡಿ
**ಕಟ್ಟಾಳ** ಕೇವಲ ಸೇವಕ
**ಕಟ್ಟೆದರ** ಕಣ್ಣೆ ದುರಿಗೆ
**ಕಟ್ಟುಗ್ರ** ಅತ್ಯಂತ ನಿಷ್ಠೆ
**ಕಟ್ಟುವಡೆ** ಕಟ್ಟುಬೀಳು, ಬಂಧಿತ ನಾಗು
**ಕಡವರ** ನಿಧಿ, ಹೂಳಿಟ್ಟ ದ್ರವ್ಯ
**ಕಡಿಹ** ಕಡಿತ, ಚೂರು ಮಾಡುವಿಕೆ
**ಕಡೆಗಳ** ರಣರಂಗದ, ಕಡೆಯಮೂಲೆ
**ಕಡುಗೂರ್ಪ** (ಕಡು+ಕೂರ್ಪ) ಬಹಳ ಪ್ರೀತಿಸುವ
**ಕಡೆಗಣಿಸು** ತಿರಸ್ಕರಿಸು
**ಕಡೆಗೋಡಿವರಿ** ತುಂಬಿಹೊರಸೂಸು
**ಕಡೆಯಾಣಿ** ಶ್ರೇಷ್ಠವಾದ ಕಾಂತಿ: ಎಲ್ಲಕ್ಕೂ ಹೆಚ್ಚಿನ ಒರೆ ಅಥವಾ ಬಣ್ಣ; ಚೊಕ್ಕ (ಹೋ: ಕಟ್ಟಾಣಿ)
**ಕಂಡೆಯ** (ಸಂ: ಖಂಡೇಯ) ಕಡಿಯುವ ಆಯುಧ, ಕತ್ತಿ
**ಕನ್ನಡ** (=ಕಣ್ಣಡ) ಕಣ್ಣು ಕಟ್ಟು, ಭ್ರಮೆ, ಮಾಯೆ
**ಕನ್ನೆ** ಕುಮಾರಿಯಾಗಿರುವ ಸ್ಥಿತಿ
**ಕಂತೆ** ಸನ್ಯಾಸಿಯ ಬಟ್ಟೆ, ಜೋಳಿಗೆ, ಕವುದಿ
**ಕಂದಲು** ಸಣ್ಣ ಮಡಕೆ, ಚಟಿಗೆ
**ಕಪಾಲ** ಶಿವನ ಕೈಯೊಳಗಿನ ತಲೆ ಬುರುಡೆ

**ಕಪಿಲೆ** (ಕಂದಿ ಬಣ್ಣದ) ಆಕಳು
**ಕಪ್ಪಡಿ** ಹರಕುಬಟ್ಟೆ, ಕಾವಿಯ ಬಟ್ಟೆ
**ಕಂಪಣ** ಕೂಲಿ, ಸೇವೆ(?)
**ಕಂಪಣಿಗ** ಸೇವಕ(?)
**ಕಂಬಿ** ಕಬ್ಬಿಣದ ಸಳಿ
**ಕಬ್ಬಿಲ** ಬೇಡರವ ಬೋಯಿ
**ಕಮ್ಮಟ** ನಾಣ್ಯ ಮಾಡುವ ಸ್ಥಾನ, ಟಂಕ ಸಾಲೆ
**ಕಮ್ಮನೆ** ಕಂಪುಳ್ಳದು
**ಕರ (ಡ)ಡಿಗೆ** (ಸಂ ಕರಂಡಕ) ಚಿಕ್ಕ ಬುಟ್ಟಿ, ಸಣ್ಣ ಸಂದುಕ
**ಕರಣವೃತ್ತಿ** ಇಂದ್ರಿಯಗಳ ಎಳೆತ
**ಕರಲೇಸು** ಅತಿ ಸುಂದರ
**ಕರಿಕ** ಕಪ್ಪು ವರ್ಣದವ, ಇಲಿ (ವಿಷ್ಣು)
**ಕರೋಟಿ** ತಲೆ ಬುರುಡೆ
**ಕರ್ಕಟ** ಅತ್ಯುಗ್ರವಾಗಿ
**ಕರಲು** ಊಷರ ಭೂಮಿ, ಸವುಳ ನೆಲ
**ಕರ್ಣಿಕಾ** ಕಮಲದ ಬೀಜಕೋಶ
**ಕರ್ತ** ಕರ್ತಾರ, ಕರ್ತೃ, ದೇವರು, ಸೃಷ್ಟಿ
**ಕಲಕೇತ** ಬಂದು ಬಗೆಯ(ಗಂಡು) ಪಿಶಾಚಿ.
**ಕಲಿ** ವೀರ, ಶೂರ
**ಕಲ್ಪಿತ** ಕೃತ್ರಿಮ; ಅಸ್ವಾಭಾವಿಕ

**ಕಲ್ಮಷ** ಕುಂದು, ದೋಷ
**ಕಲ್ಯಾಣ** ಮದುವೆ
**ಕವಳಿಗೆ** (ಸಂ: ಕಪಾಲಿಗಾ) ಶಿವನ ಕೈಯೊಳಗಿನ ತಲೆ ಬುರುಡೆ
**ಕವಿಲೆ** (ಸಂ ಕಪಿಲಾ) ಆಕಳು.
**ಕಳ** ಕಣ, ರಣರಂಗ
**ಕಳೆ** ಶುಕ್ಲ ಪಕ್ಷದಲ್ಲಿ ಚಂದ್ರನು ಪ್ರತಿದಿನ ಬೆಳೆಯುವ ಅಂಶ; ಕಾಂತಿ, ಚೆಲ್ವು; ರತಿಕಳೆ
**ಕಳೆ** (ಒರೆಯಿಂದ ಕತ್ತಿಯನ್ನು) ಹೊರಗೆಳೆ
**ಕಳಿದಮ್ಮ** ಅಧರ್ಮ ( ? )
**ಕಳ್ಳನಾಣ್ಯ** ಕಳವಿನಿಂದ ಮಾಡಿದ ನಾಣ್ಯ
**ಕಾಟುಗ** ಕಾಟ ಕೊಡುವವ, ಕಾಡುವವ
**ಕಾಣಿ** ಒಂದು ( ಅಲ್ಪ ಬೆಲೆಯ ) ನಾಣ್ಯ
**ಕಾಯಕ** ಶರೀರ ಶ್ರಮದಿಂದ ಮಾಡುವ ಗಳಿಕೆ
**ಕಾಳಕೂಟ** ತೀವ್ರವಾದ ವಿಷ
**ಕಾಳಿಕೆ** ಕಪ್ಪು, ಕುಂದು, ದೋಷ
**ಕಿಗ್ಗಡಲು** ( ಕಿಳ್+ಕಡಲು ) ಚಿಕ್ಕ ಸಮುದ್ರ
**ಕಿಂಕಿಲ** (೧)ಸಂಕೀರ್ಣತೆ, ಸಮೂಹ, ಸಂದಣಿ (೨)ಕಿಂಕರತೆ,
**ಕಿನ್ನರ** ದೇವತೆಗಳಲ್ಲಿಯ ಭೇದ
**ಕಿಂಪುರುಷ** ದೇವತೆಗಳಲ್ಲಿಯ ಒಂದು ಭೇದ
**ಕಿರುಕುಣಿಕೆ** ಕಿರುಬೆರಳು
**ಕಿಲ್ಬಿಷ** ಕುಂದು, ದೋಷ, ಪಾಪ
**ಕೀಸು** ಬಗಟು, ಉಜ್ಜಿ ಅಗಲ ಮಾಡು
**ಕೀಳ್** (೧) ಕೀಳಾದ, ಹೀನ, (೨) ಬಗ್ಗಿ ಕಳಿತ(೩) ಆಕಳ ಕರು
**ಕುಕ್ಷಿ** ಹೊಟ್ಟೆ
**ಕುಚಿತ್ತಾಚಾರ** ಕೆಟ್ಟ ಆಚಾರ, ಅನಾಚಾರ
**ಕುಚ್ಚಿತ** (ಸಂ ಕುತ್ಸಿತ) ಕೆಟ್ಟ, ಹೀನ
**ಕುಟಿಲ** ಕೊಂಕುತನ,ಮೋಸ
**ಕುಟುಕು** ಗುಟುಕು, ತುತ್ತು
**ಕುಂಟಿಣಿ** ( ಸ : ಕುಟ್ಟನಿ ) ಕುಂಟಲಗಿತ್ತಿ
**ಕುಂಡಲಿಗ** ಪಾತರಗಿತ್ತಿ ( ? )
**ಕುತ್ತು** ಕೆಳಗೆ ಮಾಡು, ಬಗ್ಗಿಸು
**ಕುದುರು** ಗೋಡೆ
**ಕುಪ್ಪಳಿಸು** ಹೊರಬೀಳು
**ಕುಭಾಷೆ** ಕೆಟ್ಟಮಾತು; ಮುರಿದ ವಚನ
**ಕುಂಭಿ (ಯು) ಪಾತಕ** (ಸಂಕಂಭಿ ಪಾಕ) ಒಂದು ನರಕ

**ಕುರುಕು** ಕುರು ಕುರ ತಿನ್ನುವ ಪದಾರ್ಥ
**ಕುರುಹು** ಚಿಹ್ನ, ಲಾಂಛನ, ಗುರುತು
**ಕುಲಿಶ** ಇಂದ್ರನ ವಜ್ರಾಯುಧ
**ಕುಳ** ಕುಳ
**ಕುಳಿ** ತಗ್ಗು
**ಕುಳಿ ಹೋಹು** ತಗ್ಗು ಬೀಳು
**ಕುಹಕ** ಟಕ್ಕು, ಮೋಸ
**ಕೂಟ** ಕೂಡುವಿಕೆ; (೧) ಯೋಗ (೨) ರತಿ(ಜೋತಿಷ್ಯದಲ್ಲಿ) ಮದು ಮಕ್ಕಳ ಬಗೆಗೆ ನೋಡತಕ್ಕ ಶುಭಾಂಶಗಳು
**ಕೂಡೆ** ಕೂಡಲೆ, ಒಮ್ಮೆಲೆ
**ಕೂಪ** (ಹಃ ಕೂರ್ಪ) ಪ್ರೀತಿಸುವ
**ಕೂರದ** ಸೇರದವ, ಆಗದವ, ವೈರಿ
**ಕೂರಂಬು** ಹದನವಾದ ಬಾಣ
**ಕೂರು** ಹದನ, ಹರಿತ
**ಕೂರ್ಪ** ಪ್ರೀತಿಸುವ
**ಕೂಸು** ಹೆಣ್ಣು, ಕನ್ನೆ
**ಕೃತಕ** ಕೃತ್ರಿಮತೆ, ಮೋಸ,
**ಕೆಚ್ಚು** ಮದ, ಸೊಕ್ಕು, ಸಾರ, ಕಟ್ಟಿಗೆಯಲ್ಲಿನ ಒಳಗಿನ ಗಟ್ಟಿಭಾಗ
**ಕೆಂಚ** ಕೆಂಪು ಬಣ್ಣದವ, ( ಇಲ್ಲಿ ) ಬ್ರಹ್ಮ
**ಕೆಂಚನೆ** ಕೆಂಪಗೆ
**ಕೆಡೆ** ಬೀಳು
**ಕೆಣಕು** ಮೂದಲಿಸು
**ಕೆತ್ತು** ಸ್ಫುರಿಸು, ಹಾರು
**ಕೆತ್ತುಗ** ಕೆತ್ತುವವ, ನಾಶಮಾಡುವವ
**ಕೆಮ್ಮನೆ** ಸುಮ್ಮನೆ
**ಕೆಯ್** (೧) ಗದ್ದೆ (೨) ಕೈ
**ಕೆಲ** ಪಕ್ಕ, ಬೇರೆ ಕಡೆ, ಹೊರಗಡೆ, ತೋರಿಕೆ; ನೆರೆಹೊರೆ
**ಕೆಲೆ** ಮನ ಬಂದಂತೆ ಮಾತನಾಡು, ಬಯ್ಯು
**ಕೆಳೆ** ಸ್ನೇಹ
**ಕೈಮರೆ** ಕೈಯೊಳಗಿನ ಆಯುಧ ಉಪಯೋಗಿಸುವದನ್ನು ಮರೆ
**ಕೈವಾರ** (ಕೈಯಾರ ? ) ಕೈವಶ
**ಕೊಂಡಮಾರು** ( ? )
**ಕೊಡಗ** ಬಡತನ ( ? )
**ಕೊಂತ** ( ಸಂ ಕುಂತ ) ಒಂದು ಆಯುಧ, ಸಬಳ
**ಕೊಂಬ** ಕೊಲ್ಲುವ
**ಕೊಂಬು** ಟೊಂಗೆ, ಶಾಖೆ (೨)ಸಂಕೇತ ಸ್ಥಾನ, ಕೋಡು, ತಲೆ, ಚಂಡು
**ಕೊಂಬೆ** ಶಾಖೆ, ಟೊಂಗೆ

**ಕೊಯಿಲೆ** (೧) ಕೊಯ್ಯುವ ಆಯುಧ (೨) ಕತ್ತರಿಸಿದ ವಸ್ತು (ಇಲ್ಲಿ ರಾಹು)

**ಕೊಂಗುಳ** ಕಾಳಗ

**ಕೋಟಲೆ** ಕಷ್ಟ, ಪ್ರಯಾಸ

**ಕೋಡಂಗಿ** ಆಟ, ನಾಟಕಗಳಲ್ಲಿ ಒಮ್ಮೊಮ್ಮೆ ಬರುವ ಹಾಸ್ಯದ ಒಂದು ಪಾತ್ರ

**ಕೋಡು** ಕೊಡಿಗೆ, ದಾನ

**ಕೋಲು** ಕೊಲ್ಲುವ ಸಾಧನ, ಆಯುಧ, ಬಾಣ

**ಕೋಶ** ಯಾವ ಪಕ್ಷಕ್ಕೆ ನ್ಯಾಯವಿದೆ ಎಂಬುದನ್ನು ನಿರ್ಣಯಿಸುವದಕ್ಕೆ ಹಿಂದಣ ಕಾಲದಲ್ಲಿ ಕೈಕೊಳ್ಳುತ್ತಿದ್ದ ಪರೀಕ್ಷೆ— ಇದಕ್ಕೆ "ದಿವ" ವೆಂಬ ಹೆಸರು. ಹತ್ತು ಬಗೆಯಾಗಿದ್ದಿತು, ಅದರಲ್ಲಿ ಇದು ಒಂದು ವಿಧ

**ಕೋಶಪಾನ** ನ್ಯಾಯ ನಿರ್ಣಯದ ಈ ವಿಧಾನದಲ್ಲಿ ವಾದಿ (ಅಥವಾ ಪ್ರತಿವಾದಿ) ಯು ದೇವರ ಪ್ರತಿಮೆಯನ್ನು ಮಜ್ಜನ ಮಾಡಿಸಿದ ನೀರನ್ನು ಮೂರು ಸಾರೆ ಕುಡಿಯಬೇಕಾಗುತ್ತಿದ್ದಿತು.

**ಕೋಳಾಟ** ಬಲಾತ್ಕಾರ

**ಕೋಳಾಹಳ** ಗದ್ದಲ, ಗೊಂದಲ

**ಕೌಂಡಿಲ್ಯ** ಕೌಂಡನ್ಯನೆಂಬ ಋಷಿ

**ಕೌಳುಕೋಲು** ಸೀಳಿದ ತುದಿಯುಳ್ಳ ಬಾಣ ಅಥವಾ ಆಯುಧ

**ಖಚರ** ಆಕಾಶದಲ್ಲಿ ಓಡಾಡುವವ; ಯಕ್ಷ ಮೊದಲಾದ ದೇವತೆಗಳಲ್ಲಿ ಒಂದು ಭೇದ

**ಖಂಡೆ(?)ಯ** ಖಡ್ಗ, ಆಯುಧ

**ಖಟ್ವಾಂಗ** ಶಿವನ ಕೈಯಲ್ಲಿಯ ಎಲುವಿನ ಆಯುಧ

**ಗಂಗೆವಾಳುಕಸಮ** ಗಂಗಾನದಿಯ ಮಳಲ ಕಣಗಳ ಸಮಾನ; ಅಸಂಖ್ಯಾತ

**ಗಂಜಳ** ಪಶುಗಳ ಮೂತ್ರ

**ಗಡಣ** ಸಮೂಹ

**ಗಡಣೆ** ಗಣನೆ, ಎಣಿಕೆ, ಲಕ್ಷ್ಯ, ಚಿಂತೆ

**ಗಡಹ** ಬಾಗಿಲ ಕೆಳಭಾಗ, ಹೊಸ-ತಿಲ (ಹೋ: ತೆ: ಗಡಪ)

**ಗಣ** ಶಿವನ ಸಂಗಡಿಗರು, ಜಂಗ-ಮರು, ಶರಣರು

**ಗಣಾಡಂಬರ** ಗಣಗಳ ಸಮೂಹ

**ಗಂಡ** ಶೂರ, ಅಂಜದವ

**ಗಂಡುಗೆದರು** ಶೌರ್ಯವನ್ನು ಪ್ರದ—ರ್ಶಿಸು

**ಗರ** (ಸಂಗ್ರಹ) ಭೂತ, ದೆವ್ವ "ಗಾಳಿ"

**ಗರಳ** ವಿಷ
**ಗರುವ** ದೊಡ್ಡ, ಮಾನ್ಯ
**ಗರು** ಬಾಣ
**ಗಳಗಜನೆ** ಗಂಟಲಿನಿಂದ ಬರುವ ನಾದ
**ಗಳಹಂಸೆ** ಕಳಹಂಸ
**ಗಳಹು** ಮನ ಬಂದಂತೆ ಮಾತಾಡು
**ಗಳೆ** ಕಣೆ, ಬಾಣ, ಆಯುಧ
**ಗಾಡಿಗ** ಮಾಟಗಾರ, ಮಾಂತ್ರಿ (?)
**ಗಾತ್ರ** ಶರೀರ, ಆಕಾರ
**ಗಾರುಡ** ಹಾವಿನ ಮಂತ್ರ
**ಗಾವಿಲ** (ಸಂ : ಗ್ರಾಮೀಣ) ಹಳ್ಳಿಯವ, ತಿಳಿಗೇಡಿ; ಅಜ್ಞಾನಿ
**ಗಿಣ್ಣಿಲು** ಗಿಂಡಿ
**ಗೀತ** (೧) ಹಾಡು (೨) ಭಗವದ್ ಗೀತೆ ಮುಂತಾದವುಗಳು
**ಗೀತವಾತು** ಗೀತೆಗಳ ವಚನ, ಅಥವಾ ಹೇಳಿಕೆ
**ಗುಡಿ** ಧ್ವಜ
**ಗುಡಿಗಟ್ಟು** ಧ್ವಜವನ್ನೇರಿಸು; ಸಂತೋಷ ಸೂಚಿಸು
**ಗುಡಿಲು** ಗುಡಿಸಲು
**ಗುಂಡ** ದೇವರೆಂದು ಪೂಜಿಸಿಕೊಳ್ಳುವ ಗುಂಡಕಲ್ಲು
**ಗುಮ್ಮಡಿ** (ಸಂ "ಮುಹ") ಧಾತುವಿನಿಂದ ಭ್ರಮೆ ಗೊಳಿಸುವ ಒಂದು ಬಗೆಯ (ಹೆಣ್ಣು) ಪಿಶಾಚಿ
**ಗುಳಿ** ಕುಳಿ, ತಗ್ಗು
**ಗುಳ್ಳೆ** (ಗುಡ್ಡ) ರಾಶಿ, ದಿಬ್ಬ
**ಗುಹ್ಯ** ಜನನೇಂದ್ರಿಯ
**ಗೂಡು** ಶರೀರ ದೊಳಗಿನ ಅಸ್ಥಿ ಪಂಜರ
**ಗೂಡುವೋಗು** ಒಣಗಿ ದೇಹದೊಳಗಿನ ಎಲುಬುಗಳು ಕಾಣುವಂತಾಗು
**ಗೊರಜೆ** ಗಿಡಗಂಟೆ
**ಗೋಟು** ಮೂಲೆ, ದಿಕ್ಕು
**ಗೋ(ಪ)ವ** ಗೋಪಾಲ, ದನಗಳನ್ನು ಕಾಯುವವ
**ಗೋರಿ** ಬೇಟೆಯನ್ನು ಹಿಡಿಯುವ ಒಂದು ಸಾಧನ (ದೀಹದ ಮೃಗ ಅಥವಾ ಬಲೆ)
**ಗೋವ(ಳ)** (ಗೋಪಾಲ) ದನಗಳನ್ನು ಕಾಯುವವ
**ಗೋವೇಧೆ** ಗೋವಿನಿಂದಾದ ಹಿಂಸೆ
**ಗೋಸುಂಬೆ** "ಊಸರವಳ್ಳಿ"
**ಘಟಿತ** ಆದುದು, ಭೂತಕಾಲ
**ಚಮ್ಮಾವುಗೆ** ಚರ್ಮದ ಆವುಗೆ, ಕೆರಹು
**ಚಲ್ಲವಾಡು** ಸರಸವಾಡು
**ಚಾ(ಂ)ಗು** ಕೊಂಡಾಟದನುಡಿ
**ಚಿತ್ತರಟ್ಟೆ** ಒಳಗೆ ಹುರುಳಿಲ್ಲದ ಒಂದು ಕಾಯಿ
**ಚಿನ್ನಗೆಯ್ಕ** ಭಂಗಾರದ ಆಭರಣ-ಗಳ

ಮಾಡುವವ

**ಚುಳುಕು** (೧) (ಸಂ ಚುಲುಕ) ಕೈಸೆರೆ; (೨) (ಸಂ, ಕ್ಷುಲ್ಲಕ) ಚಿಕ್ಕದು

**ಚೆನ್ನಿಗ** ಸುಂದರ, ಚೆಲುವ

**ಚೇಗು** ಕೆಚ್ಚು, ಸಾರ, ಹಿತ(ಹೋ, ತೆ; ಚೇಗ)

**ಚೋಹಚೋಧ** (ಚೋಹ) ಸೋಗು.

**ಚೌಪಥ** ನಾಲ್ಕು ಹಾದಿಗಳು ಕೂಡುವ ಸ್ಥಳ, "ಕೂಟು"

**ಛಲದಾಳಿ** ತನ್ನ ಛಲವನ್ನು ಸಾಧಿಸುವವ

**ಛಿದ್ರಿಸು** ಕುಂದು ಕೊರತೆಗಳನ್ನು ಎತ್ತಿ ತೋರಿಸು

**ಜಂಗಮ** ಓಡಾಡುವ, ಚಲಿಸುವ

**ಜಂಗುಳಿ** ದನಗಳ ಹಿಂಡು

**ಜಂಘೆ** ಕಣಕಾಲು, ಕಿರುದೊಡೆ

**ಜಠರ** ಹೊಟ್ಟೆ, ಗರ್ಭ

**ಜನಿತ** ಜನ್ಮಸಂಬಂಧ

**ಜನ್ನ** ಯಜ್ಞ, ಯಾಗ

**ಜನ್ನಿಗೆಯ** ಯಜ್ಞಮಾಡುವವ, ವಿಪ್ರ

**ಜಲಗು** ಮರಳಲ್ಲಿ ಬಹು ಪ್ರಯಾಸದಿಂದ ಶೋಧಿಸಿ ತೆಗೆದ ಬಂಗಾರದ ಕಣ

**ಜವ** (ಸಂ:) ಯಮ

**ಜವೆ** ಒಂದು ಜವೆ ಗೋದಿಯ ಕಾಳಿನ ತೂಕ

**ಜಾಗ್ರ** (ತ್) ಎಚ್ಚರ

**ಜಾತಿಸಂಕರ** ಬೇರೆ ಬೇರೆ ಜಾತಿಗಳು ಕಲೆಬೆರಿಕೆಯಾಗುವಿಕೆ

**ಜುಗ** (ಸಂ:) ಯುಗ

**ಜೂಬು** ಭಯಂಕರವಾದ ಒಂದು ವಸ್ತು

**ಜೋಗೈಸು** ಜೋಕೆ ಮಾಡು; ಸಿದ್ಧಮಾಡು

**ಜೋಡೆ** ಹಾದರದವಳು

**ಜೋಳವಾಳಿ** ಅನ್ನದ ಹಂಗು, ಸ್ವಾಮಿ-ಭಕ್ತಿ

**ಝುಂಕೆ** ಬೆದರಿಕೆ

**ಟೇವಕ ಟಿಂಬಕ** ತಂಬೂರಿಯ ತಂತಿಯನ್ನು ಮೀಂಟಿದಾಗ (ಹೊರಡುವ) ಧ್ವನಿಗಳು; ಇವುಗಳಿಗೆ ನೃತ್ಯಕಾರನು ಸರಿಯಾಗಿ ಹೆಜ್ಜೆಯನ್ನು ಹಾಕಬೇಕಾಗುವದು

**ಟೊಣೆ** ತೋಡು, ನುಸುಳು, ಮೋಸಮಾಡು

**ಡಂಬು** ತೋರಿಕೆಯ ನೋಟ; ಹೊರಗಣ ವೈಭವ, ಒಣ ಹೆಮ್ಮೆ

**ಡವಿಗೆ** ತಲೆಬುರುಡೆ

**ಡಳುಹು** ಹೆಮ್ಮೆ

**ಡಿಂಗರಿಗ** ಸೇವಕ, ದಾಸ
**ಡಿಂಬು** ಉರಿಯುವ ದೀಪ(?)
**ಡೊಂಕು** ಕೊರತೆ, ಅವಗುಣ, ಕೊಂಕು
**ಡೊ(ೞ)ವಿಗೆ** (೧) ದೊಡ್ಡ ಬಿದಿರು (೨) ತಲೆ ಬುರುಡೆ
**ತಕ್ಕೈಸು** (ಹ: ತರ್ಕೈಸು) ಅಪ್ಪಿಕೊಳ್ಳು
**ತಗರು** ಟಗರು
**ತಗಹು** (೧) ಪ್ರತಿಬಂಧ (೨) ಪರಿವಿಡಿ
**ತಡಪಡಿ** ಚಿಂತೆ, ಕಾತರತೆ
**ತಡಿ** ದಂಡೆ
**ತಡೆಗೆಡಹು** ತಡೆ ನಿಲ್ಲಿಸು, ಪ್ರತಿಬಂಧಿಸು
**ತಣಿ** ತೃಪ್ತನಾಗು
**ತದ್ಗತ** ತಲ್ಲೀನ; ಬೆರೆತ
**ತಂತ್ರ** ಆಗಮ ಶಾಸ್ತ್ರ
**ತರು** ಸಸಿ, ಸಣ್ಣಗಿಡು
**ತರಗೆಲೆ** ಒಣಗಿ ಕೆಳಗುದುರಿದ ಎಲೆ
**ತರಿಸಲುವೋಗು** ವಶವರ್ತಿಯಾಗು
**ತರಿಸಿಕೊಳ್ಳು** ತಲೆ ಕೊಯಿಸಿಕೊಳ್ಳು
**ತಲಹು** ಗುರಿ ಮುಟ್ಟುವ ಶಕ್ತಿ
**ತವನಿಧಿ** ಕಡಿಮೆಯಾಗದ ಭಂಡಾರ
**ತವರಾಜ** (ಒಂದು ವಿಧದ) ಸಕ್ಕರೆ
**ತಳಿ** ಚೆಲ್ಲು, ಹರವು
**ತಳಿಗೆ** ಊಟದ ಪಾತ್ರೆ, ತಾಬಂಡಿ
**ತಾಗು** ಮುಟ್ಟುವದು
**ತಾಮಸ** ಕತ್ತಲೆ; ಅಜ್ಞಾನ
**ತಾಳೆ** ತಾಳೆಯ ಮರ
**ತಾಪತ್ರಯ** ಮೂರು ಬಗೆಯ ತಾಪ; ಕಾಯ, ಮನ, ವಾಕ್ಕಿನಲ್ಲಿ ಉಂಟಾಗುವ ತಾಪ.
**ತಾರ** [ವ] ಒಂದು ತಾಮ್ರದ ನಾಣ್ಯ.
**ತಾಳ** ಅಂಗೈ, ಹಾಡಿನಲ್ಲಿಯ ತಾಳ
**ತಿಗುರು** ಮೈಗೆ ಪೂಜಿಸಿಕೊಳ್ಳುವ ದ್ರವ್ಯ
**ತಿಟ್ಟನೆ** ದುಂಡಗೆ, ಬಟ್ಟನೆ; ತಿರ್ರನೆ
**ತಿನ್ನು** ಕಚ್ಚು, ತಿನಿಸು ಬಿಡು
**ತಿಂತಿಣಿ** ಸಮೂಹ
**ತೀವು** ತುಂಬು
**ತುಡುಕು** ಹಿಡಿದುಕೊಳ್ಳು
**ತುಯ್ಯಲು** ಪಾಯಸ
**ತುರೀಯ** (ತುರ್ಯ) (ವೇದಾಂತ ಪರಿಭಾಷೆಯಲ್ಲಿ) ಜೀವಾತ್ಮನು ಪರಮಾತ್ಮನೊಡನೆ ಬೆರೆತು ಒಂದಾಗುವ ಸ್ಥಿತಿ
**ತೆತ್ತಿಗ** ಹೊಣೆ ಹೊತ್ತವ
**ತೆರು** ಕರ ಇಲ್ಲವೆ ದಂಡವನ್ನು ಕೊಡು
**ತೆರೆ** ತೊಗಲು ಮಡಿಕೆಯಾಗುವದು; ಸುಕ್ಕು; ನಿರಿಗೆ
**ತೆರ (ಪು) ಹು** ಬಿಡುವು, ಅವಕಾಶ; ಎಡೆ, ಸ್ಥಳ

**ತೊಡಹ** ಆಭರಣ, ಒಡವೆ
**ತೊಡಕು** ಸಮಸ್ಯೆ; ಒಗಟ.
**ತೊಡರು** (ನಾ) ಆಭರಣ (ಕ್ರಿ) ಎದುರಿಸು ಮಾರ್ಕೊಳ್ಳು,
**ತೊ (ಡ)ಡಿಗೆ** ಆಭರಣ, ಅಲಂಕಾರ
**ತೊಡೆ** ಧರಿಸು, ಹಚ್ಚಿಕೊಳ್ಳು ಮಸುಳು, ಮಸುಳಿಸು, ಒರಸು
**ತೊತ್ತುತನ** ಊಳಿಗ, ಸೇವೆ
**ತೊರೆ** (೧) (ನಾ) ಹೊಳೆ (೨) (ಕ್ರಿ) ಬಿಡು, ವಿಸರ್ಜಿಸು
**ತೊಲಗು** ಬಿಟ್ಟು ಹೋಗು
**ತ್ಯಜತೆ** ತ್ಯಾಗ, ಬಿಟ್ಟುಕೊಡುವಿಕೆ
**ತ್ರಿಪುಂಡ್ರ** ಹಣೆಯ ಮೇಲಿನ ವಿಭೂತಿಯ (ಮೂರು ಬೆರಳಿನ) ಅಡ್ಡ ರೇಖೆಗಳು
**ತ್ರಿವಿಧ** ಮೂರು ರೀತಿಯಲ್ಲಿ
**ದಕ್ಕು** (೧) ಆಸ್ತಿ (೨) ದಸಿ, ಹದನವಾದ ತುದಿಯುಳ್ಳ ಕಬ್ಬಿಣದ ಅಥವಾ ಕಟ್ಟಿಗೆಯ ತುಂಡು, ಬೇಟೆಯ ಒಂದು ಸಾಧನ
**ದಡಿ** ಬಡಿಗೆ, ಗದೆ
**ದಂಡಿಗೆ** ವೀಣೆ
**ದಂಡೆ** (೧) ಸೈನ್ಯದ ಸಾಲು (೨) ಮೊಣಕಾಲು ಊರಿ ಬಿಲ್ಲು ಹೊಡೆಯುವ ರೀತಿ
**ದಂದುಗ** ದುಃಖ, ಸಂಕಟ
**ದರದುರ** (ಧರಧುರ) ಶ್ರೇಷ್ಠ ನಿಸ್ಸೀಮ
**ದಮ್ಮ** ಧರ್ಮ
**ದಾಸೋಹ** (೧) (ಸಂ: ದಾಸಃ ಅಹಮ್) ನಾನು ದಾಸನು ಎಂಬ ಭಾವನೆ, ದಾಸನಾಗಿ ನಡೆಯುವದು, ಸೇವಾ ವೃತ್ತಿಯನ್ನು ಕೈಕೊಳ್ಳುವದು.
**ದಿಟ** (ಸಂ: ದೃಷ್ಟ) ಕಂಡದ್ದು; ನಿಜ, ಸತ್ಯ
**ದಿ(ಬ್ಯ)ವ್ಯ** ಕಾಸಿದ ಕಬ್ಬಿಣ ಕುಳವನ್ನು ಹಿಡಿಸಿಯಾಗಲಿ, ಮರಳುವ ಕಾಯ್ದೆಣ್ಣೆಯಲ್ಲಿ ಕೈಯದ್ದಿಸಿಯಾಗಲಿ ಅಪರಾಧಿಗಳೆಂದು ಆಪಾದಿತರಾದವರ ನಿಜವನ್ನು ನಿಶ್ಚಯಿಸುವ ಪುರಾತನ ಕಾಲದ ಒಂದು ಕ್ರಮ
**ದಿಷ್ಟ** (ಸಂ: ದೃಷ್ಟ) ಆಧಾರ, ದೃಷ್ಟಾಂತ.
**ದುಂಡೆ** ದಿಂಡಿಗಿತ್ತಿ, ಮನ ಬಂದಂತೆ ವರ್ತಿಸುವಳು
**ದುರಿತ** ಪಾಪ, ಕೆಟ್ಟ ಕೃತಿ
**ದೃಷ್ಟಿಯಾರೆ** ಕಣ್ಣು ತುಂಬ, ಕಣ್ಣಾರೆ
**ದೇಗುಲ** ದೇವರ ಗುಡಿ
**ದೇವಗಣ** ಛಂದಸ್ಸಿನ (ಅಥವಾ ಹಾಡಿನ) ಗಣಗಳಲ್ಲಿಯ ಒಂದು ಭೇದ

**ದೇವಾನ್ನ** ದೇವತೆಗಳಿಗೆ ಯೋಗ್ಯವಾದ ಅನ್ನ; ದಿವ್ಯಾನ್ನ
**ದೇವಾಭಕ್ತ** ದೇವರ ನಿಜ ಭಕ್ತ(?) ದೇವುಲಾಳು....?
**ದೇಸಿವಡೆ** ಯೋಗ್ಯನಾಗು, ಸೊಬಗುವಡೆ
**ದೇಹಾರ** 'ದೇವರ ಆಹಾರ' (ವೆಂದು ಕೆಲವರ ಅರ್ಥ) ಆದರೆ ಇದು 'ದೇವಾರ' ವೆಂದಿತ್ತು ಸ್ತೋತ್ರ ಅಥವಾ ಪ್ರಾರ್ಥನೆ ಎಂದು ಅರ್ಥವಿರಬಹುದೇನೋ (?)
**ದೇಹಿ** 'ಕೊಡು' ಎಂದು ಬೇಡುವಾತ
**ಧವಳಿತ** ಬಿಳಿಯ ಬಣ್ಣದವ (ಇಲ್ಲಿ) ಶಿವ
**ಧರಧುರ** ಶ್ರೇಷ್ಠ, ಹೆಚ್ಚಿನ
**ಧಾತು** ಬಲ, ಶಕ್ತಿ
**ಧಾರೆ** ಕತ್ತಿಯ ಮೊನೆ
**ಧಾರೆವಟ್ಟಲು** ಶಿವಾಲಯಗಳಲ್ಲಿ ಲಿಂಗದ ಮೇಲೆ ಕಟ್ಟಿದ ಅಭಿಷೇಕದ ಪಾತ್ರೆ ತೂತುಳ್ಳ; ಎಂದರೆ ಸೋರುವ ಪಾತ್ರೆ
**ಧಾವತಿ** ಶ್ರಮ
**ಧೃತಿ** ಧೈರ್ಯ
**ನಚ್ಚು** ನಂಬು
**ನಂಜು** ವಿಷ
**ನಟ್ಟುವಿಗ** ನಾಟಕಕಾರ, ಪಾತ್ರಧಾರಿ
**ನಡೆವೆಣ** ನಡೆದಾಡುತ್ತಿದ್ದರೂ ಹೆಣದಂತೆ ನಿರ್ವಿಣ್ಣವಾಗಿರುವವ
**ನಂಟ** ಬಂಧು ಬಳಗದವ
**ನಡೆಲಿಂಗ** ನಡೆಯುವ ಲಿಂಗ; (ಇಲ್ಲಿ) ಜಂಗಮ
**ನಂದನ** ದೇವೇಂದ್ರನ ತೋಟ
**ನಂಬಿ** (೧) ನಂಬಿಗೆಯಿಂದ (೨) ಸೌಂದರ ನಂಬಿ ಎಂಬೊಬ್ಬ ಪುರಾತನ ಶರಣ
**ನರ** ಅರ್ಜುನ
**ನರವಿಂಧ್ಯ** (ಪಶುಗಳಂತಹ) ಜನರು ವಾಸಿಸುವ (ಗುಡ್ಡಗಾಡಿನಂತಹ ವಾಸಕ್ಕೆ ಕಷ್ಟಕರವಾದ) ಸ್ಥಾನ
**ನಲ್ಲ** ಪ್ರಿಯ
**ನಾಕಡಿ** ನಾಲ್ಕು ಅಡಿ
**ನಾಡು** ಲೋಕ; ಸಾಮಾನ್ಯ ಜನರು
**ನಾಣು** ಲಜ್ಜೆ ನಾಚಿಗೆ, ಹೇವ.
**ನಾಯಕ ನರಕ** ಘೋರ ನರಕ
**ನಾಯತೇಜ** ಹೇಯವಾದ ದರ್ಪ ಅಥವಾ ಕೀರ್ತಿ
**ನಾಯಿತನ** (ನಾಯಿಯಂತಹ) ಹೀನ ಸ್ವಭಾವದವ
**ನಾ (ಯಿ) ವಿದ** (ಸಂ: ನಾಪಿತ) ಕ್ಷೌರಿಕ
**ನಾರಿವಾ (ಣ)ಳ** ತೆಂಗು
**ನಾರುಳಿ** ತೆಂಗು (?)

**ನಾಳಿದ್ದು** ನಾಡದು (ನಾಳೆಯ ಮರು ದಿನ)
**ನಿಕ್ಷೇಪಿಸು** ಹೂಳಿಡು, ನಿಧಿಯಾಗಿರಿಸು
**ನಿಕ್ಷೇತ್ರ** ಕ್ಷೇತ್ರವಲ್ಲದಂತಾಗುವದು, ನಾಶ (?)
**ನಿಚ್ಚನಿಚ್ಚ** (ಕೆ) ಯಾವಾಗಲೂ, ಸದಾ
**ನಿಟ್ಟೈದೆ** ಬಹುಕಾಲ ಐದೆಯಾಗಿ ಬಾಳುವವಳು
**ನಿಧಾನ** ಕೂಡಿಟ್ಟ (ಹೂಳಿಟ್ಟ) ಧನ
**ನಿಧಿ** ಕೂಡಿಟ್ಟ ಧನ, ಸಂಪತ್ತು
**ನಿಮಿರು** ನಿಗುರು, ವಿಕಾಸವಾಗು
**ನಿರತ** (೧) ಮಗ್ನ, ಆಸಕ್ತ, (೨) ಬಟ್ಟ, ತ್ಯಾಗ ಮಾಡಿದ್ದು
**ನಿ(ರ) ರ್‌ವಯಲು** ನಿಬ್ಬಯಲು, ಶೂನ್ಯ
**ನಿರಂಜನ** ಯಾವುದರ ಸೋಂಕು. ಇಲ್ಲದ, ಪವಿತ್ರ
**ನಿರವಯ** ಅವಯವವಿಲ್ಲದ, ಪರಿಪೂರ್ಣ
**ನಿರಾಳ** ಶಾಂತ, ಸಂದೇಹವಿಲ್ಲದ
**ನಿರೂಪು** ರೂಪವಿಲ್ಲದ
**ನಿರಿ** ಸೀರೆಯ ಮಡಿಕೆ, ನಿರಿಗೆ
**ನಿಲವು** ಇರುವಿಕೆ, ನಿಜಸ್ಥಿತಿ, ಸ್ಥಾಪನೆ
**ನಿಲಸಾಲೆ** ನಿಲ್ಲಲಾರೆ
**ನಿವಾಟ** ನಿರ್ಮೂಲನ (?)
**ನಿವಾಡಿಸು** ಗುರುತುಹಿಡಿ, ಆರಿಸು
**ನಿವೇದಿಸು** ನೀಡು, ಕೊಡು
**ನಿಷ್ಪತ್ತಿ** ಕೊನೆಯ ಪರಿಣಾಮ, ಮುಗಿತಾಯ; ಪರಿಪಾಕ.
**ನಿಸ್ಸಂಗ** ಯಾವುದರ ಹಂಗೂ ಇಲ್ಲದ
[ನಿ] **ಕರಿಸು** ಇಲ್ಲದಂತೆ ಮಾಡು (?)
**ನುಡಿನೆಣ** ಮಾತಾಡುತ್ತಿದ್ದರೂ ಹೆಣದಂತೆ ಇರುವವ
**ನುಸುಳು** ತಪ್ಪಿಸುವಿಕೆ, ಮೋಸ
**ನೂಂಕು** ಮುಂದೆ ಸಾಗಿಸು
**ನೂರನೋದು** ನೂರು ಸಾರೆ ಮಂತ್ರ ಜಪಿಸು
**ನೆನೆ** (೧) ತೊಯ್ಯು (೨) ನೆನೆಸು; ಸ್ಮರಿಸು
**ನೆಟ್ಟೆಲುವು** ನೆಟ್ಟನೆಯ ಎಲಬು; ಬೆನ್ನೆಲಬು
**ನೆಮ್ಮು** ನಂಬು, ಆಧಾರ ಮಾಡಿಕೊಳ್ಳು, ಅವಲಂಬಿಸು
**ನೆರಹು** ಜನರನ್ನು ಕೂಡಿಸು
**ನೆರವಿ** ಕೂಟ
**ನೆರೆ** (ರತಿಕೇಳಿಯಲ್ಲಿ) ಕೂಡು, ಅಕ್ಕಪಕ್ಕ, ಹೊರೆ, ಕೈಗೂಡು, ಸಿದ್ಧಿಸು
**ನೆಲನಾಳ್ದ** ಅರಸು
**ನೆವ** (೧) ನೇಮ (೨) ನೆಪ
**ನೇಣು** ಹಗ್ಗ, ಹುರಿ, ಉರಿಲು

**ನೇಮ** ನಿಯಮ, ವ್ರತ
**ನೇಹ** (ಸಂ:ಸ್ನೇಹ) ನಂಟು, ಮಿತ್ರತ್ವ; ಪ್ರೀತಿ
**ನೋನು** ವ್ರತಮಾಡು
**ನೋಂಪಿ** ವ್ರತ, ನೇಮ
**ಪಂಗುಳ** ಹೆಳವ; ದಾಸ
**ಪಚಾರಿಸು** ನಿಂದಿಸು, ಹೀಯಾಳಿಸು
**ಪಟ್ಟಿಯ** ಖಡ್ಗ
**ಪಡಿ** (ಸಂ:ಪ್ರತಿ) ಸಮಾನ, ಸಾಟಿ
**ಪಡಿದೊತ್ತು** ತೊತ್ತಿನ ತೊತ್ತು.
**ಪತಂಗ** ದೀಪದಹುಳು.
**ಪಥ** ಹಾದಿ; ಪದ, ಸ್ಥಿತಿ.
**ಪಂಥ** ದಾರಿ, ಬಟ್ಟೆ
**ಪದವಿ** ಮನ್ನಣೆ, ಮರ್ಯಾದೆ
**ಪದವಾದಿ** ಬೇರೆ ಧರ್ಮದ ಪರವಾಗಿ ವಾದಿಸುವವ
**ಪರಿ** ರೀತಿ, ಸ್ಥಿತಿ
**ಪರಿಭವ** ಸೋಲು, ಅವಮಾನ
**ಪರಿಣಾಮಿಸು** ಸಮಾಧಾನದಿಂದಿರು, ಸಮಾಧಾನಪಡಿಸು.
**ಪರಿಣಾಮ** ತೃಪ್ತಿ, ಶಾಂತಿ
**ಪರಿ (ಯ)ಯಾಣ** ತಳಿಗೆ, ತಾಟು
**ಪರುಷ** (ಸಂ: ಸ್ಪರ್ಶ) ಸ್ಪರ್ಶದಿಂದ ಕಬ್ಬಿಣವನ್ನು ಭಂಗಾರ ಮಾಡುವ ಮಣಿ
**ಪರುಷವೇದಿ** (೧) ಪರುಷದ ಜ್ಞಾನವುಳ್ಳ (೨) ಪರುಷದ ಕಟ್ಟಿಯನ್ನು ಏರಿದ.
**ಪವನಭೇದ** (ಇಡಾ, ಪಿಂಗಳಾ ಎಂಬ) ಉಸಿರಿನ ಭೇದ
**ಪಲ್ಲಟ** ಮಾರ್ಪಾಡು, ಅದಲು ಬದಲು.
**ಪಲ್ಲವಿಸು** ಚಿಗುರು, ಎಲೆಬಿಡು.
**ಪವಾಡ** ಅಮಾನುಷಕೃತ್ಯ
**ಪಾಡು** ಹಾಡು, ಹೊಗಳಿಕೆ
**ಪಾತ್ರ** ಯೋಗ್ಯ
**ಪಾಶ** ಕೊರಳಿಕೆ ಕಟ್ಟುವ ಕಣ್ಣಿ, ಉರುಲು.
**ಪಸಾರ** (ಸಂ : ಪ್ರಸಾರ) ಬೆಳಿಸುವುದು; ನಾಳೆಗೆ ತಮ್ಮವರಿಗೆ ಬೇಕೆಂದು ಹಿಂದಿಟ್ಟುಕೊಳ್ಳುವ ವೃತ್ತಿ
**ಪಾಣ (ರು)** ಹಾಡು ಮತ್ತು ಕುಣಿತವನ್ನು ಬಲ್ಲವರು; ಲಾವಣಿಕಾರರು. ಹೋ; ತಿರುನೀಲಕಂಠ ಪಾಣರ್
**ಪಾಪಿಯ ಕೂಸು** ಶ್ರೀಶೈಲದಲ್ಲಿ ಕೆಲವರಿಗೆ ಕಣ್ಣಿಗೆ ಬೀಳುವ ಒಂದು ಕೂಸು (ಇದು ಎತ್ತಿಕೊಂಡವರನ್ನೆ ನಾಶಮಾಡುವುದಂತೆ)
**ಪಾರದ್ವಾರ** (ಸಂ: ಪಾರದಾರ್ಯ) ಪರನಾರಿಯರ ಸಂಗ
**ಪಾವಕ** ಬೆಂಕಿ
**ಪುಟ** ಭರಣೆ, ಪೊಟ್ಟಣ (?)
**ಪುಟವಿಕ್ಕು** ಕರಗಿಸಿ ಅವಲೋಹಗ-

ಳನ್ನು ತೆಗೆದು ಶುದ್ಧಮಾಡು.
**ಪು(ತ್ತ್ರ) ತ್ಥಳಿ** (ಸಂ. ಪುತ್ರಿಕೆ) ಬೊಂಬೆ, ಮೂರ್ತಿ
**ಪುನರ್ಜಾತ** ಸಂಸ್ಕಾರ ಹೊಂದಿ ಎರಡನೆಯ ಜನ್ಮವನ್ನು ತಾಳಿದ
**ಪುರಾತ** (ಸಂ: ಪುರಾತನ) ಹಿಂದಿನ ಕಾಲದ ಸುಪ್ರಸಿದ್ಧ ಭಕ್ತ(ರು)
**ಪುರಾತವಳಿ** ಪುರಾತನರ ಪರಂಪರೆ
**ಪುಳಕ** ಕೂದಲು ನೆಟ್ಟಗಾಗುವದು, ರೋಮಾಂಚ, (ಹರ್ಷ ಅಥವಾ ವಿಸ್ಮಯದ ಲಕ್ಷಣ)
**ಪೂರಾಯ** ಪೂರ್ಣ
**ಪೂರಾಯಘಾಯ** ದೊಡ್ಡ ಗಾಯ
**ಪೂರ್ವಕ್ರಿ** ಹಿಂದೆ ನಡೆದ(ಇತಿಹಾಸದ) ಸಂಗತಿ
**ಪೂರ್ವಲಿಖಿತ** ಮೊದಲು ಹಣೆಯಲ್ಲಿ ಬರೆದುದು
**ಪೂರ್ವಾಶ್ರಯ** ಹಿಂದಣ ಸ್ಥಿತಿ ಹಿಂದಣ ಜನ್ಮ
**ಪೆ[ಯು]ಯ್ಯ** (ಆಕಳ) ಕರು,ವತ್ಸ.
**ಪೋಲುಗ** (ಪೊಲ್ಲುಗ) ಹಾಳು ಮಾಡುವವ,ಕೆಡಕುಮಾಡುವವ
**ಪ್ರತಿ** ಇದಿರು, ಸರಿ, ಸಾಟಿ
**ಪ್ರತಿ(ಪಾ)ಪಾದಿಸು** ಉಪದೇಶ ಮಾಡು; ಕಲಿಸು
**ಪ್ರಪಂಚಿ** (") ಸಂಸಾರದಲ್ಲಿ ಆಸಕ್ತಿ (೨) ಮೋಸಗಾರ
**ಪ್ರಪಂಚು** (ಸಂ: ಪ್ರಪಂಚ) ಸಂಸಾರ,ಜಗತ್ತು, ವಿಶ್ವ ವಂಚನೆ, ಮೋಸ
**ಪ್ರಮಾಣು** (ಸಂ: ಪ್ರಮಾಣ) ಸಾಕ್ಷಿ, ಆಧಾರ
**ಪ್ರಸಂಗ** ಸಂಭಾಷಣೆ (ಯ ವಿಷಯ)
**ಪ್ರಸಾದ** (ವೀರಶೈವರ ಅಷ್ಟಾವರಣದಲ್ಲಿ ಒಂದು) ಗುರುಲಿಂಗ ಜಂಗಮಕ್ಕೆ ಎಡೆಮಾಡಿ-ಅವರಿಂದ ಒಕ್ಕಿಬಂದುದೆಂದು ಸ್ವೀಕರಿಸತಕ್ಕ ಭೋಜ್ಯ ಪಧಾರ್ಥ
**ಪ್ರಾರಬ್ಧಕರ್ಮ** ಹಿಂದಿನ ಜನ್ಮದಲ್ಲಿ ಆರಂಭವಾಗಿ ಇನ್ನೂ ಮುಗಿಯದೆ ಇದ್ದ ಕರ್ಮ(ಫಲ)
**ಬಗಿ** ಸೀಳು,ಇಬ್ಭಾಗ ಮಾಡು
**ಬಗೆ** ಮನಸ್ಸು
**ಬಚ್ಚ** ಬರಿಯ
**ಬಚ್ಚಣೆ** ಮುಸುಕು, ಮುಚ್ಚಣಿಕೆ
**ಬಜಾವಣೆ** ಬಾರಿಸುವಿಕೆ
**ಬಟ್ಟೆ** ಮಾರ್ಗ, ದಾರಿ, ಹಾದಿ
**ಬಂಟ** ಸೇವಕ, ದಾಸ
**ಬಡಿಹ** ಬಡಿತ, (ಸುತ್ತಿಗೆಯಿಂದ) ಬಡಿಯುವದು
**ಬಂಡು** ಹೂಪಿನಲ್ಲಿಯ ಮಕರಂದ
**ಬಂದಿವಿಡಿ** ಜನರನ್ನು ಸೆರೆಹಿಡಿದು ಸುಲಿ.
**ಬಂದಿಕಾರ** ಸುಲಿದುಕೊಳ್ಳುವವ,

ಹಾದಿಯ ಕಳ್ಳ.
**ಬಯಸು** ಆಸೆಮಾಡು
**ಬಯಿಸು** ಬಚ್ಚಿಡು
**ಬಯಕೆ** ಬಚ್ಚಿಟ್ಟ ನಿಧಿ
**ಬಯ್ಕೆ** ಬಚ್ಚಿಟ್ಟ ನಿಧಿ.
**ಬಲ್ಲಹ** ಒಡೆಯ, ದೇವರು
**ಬಲ್ಲಿದ** ಬಲಿಷ್ಠ; ಬಲ್ಲವ
**ಬಳಸು** ಸುತ್ತು, ತಿರುಗು
**ಬಳವೆ** (ಬಾಳುವೆ) ವೃದ್ಧಿ
**ಬರಬರ** ಬರಬರುತ್ತ, ಕ್ರಮೇಣ
**ಬವರ** ಕಾಳಗ
**ಬಳಿ** ಕ್ರಮ, ಪರಂಪರೆ, ವಂಶ, ಮನೆತನ, ಹಿಂಡು, ಗುಂಪು.
**ಬಳಿನೀರು** ಕ್ರಮ, ಸಂಪ್ರದಾಯ, ಸ್ಥಾನ ಮುಂತಾದುದನ್ನು ಬಿಡದಂತೆ ಇರಬೇಕೆಂದು (ವೈಮೇಲೆ) ಎರೆಯುವ ನೀರು.
**ಬಳಿದೊತ್ತು** ವಂಶ ಪರಂಪರವಾಗಿ ಬಂದು ಮನೆಗೆ ಹೊಂದಿಕೊಂಡ ತೊತ್ತು.
**ಬಯ್ಚಿಡು** ಬಚ್ಚಿಡು, ನಿಧಿಯಾಗಿರಿಸು.
**ಬ(ಸಿ)ಸುರ** ಹೊಟ್ಟೆ
**ಬಸು(ರ್)ಗುತ್ತ** ಹೊಟ್ಟೆ ಬೇನೆ, ಅತಿಸಾರ
**ಬಳ್ಳ** ಒಂದು ಅಳತೆ (ಯ ಪಾತ್ರೆ)
**ಬಳ್ಳು** ನರಿ
**ಬಾತೆ** (ಹಃ ಬಾಳ್ತೆ) ಪ್ರಯೋಜನ
**ಬಾದುಮ, ಬಾದುಂಬೆ** ಗೊಂಬೆ, ಪ್ರತಿಮೆ
**ಬಾಬಿಸಲೆ** ಭಾವಿಸಲೆ (?)
**ಬಾರನೆತ್ತು** ಬಾಸಳಿಗಳೇವಂತೆ ಹೊಡೆ.
**ಬಾಲಿ** ವಾಲಿ (ಸುಗ್ರೀವನ ಅಣ್ಣ)
**ಬಾವುಲು** ತೊಗಲ ಬಾವಲಿ
**ಬಾ(ಳ್)ಳು** ಕತ್ತಿ.
**ಬಾಳು** (ಪತಿಯ ಕೂಡ) ಸಂಸಾರ
**ಬಾಳುವೆ**(ಬಳವೆ) ವೃದ್ಧಿ, ಹೆಚ್ಚಳ
**ಬಾಳುವೆಣ** ಜೀವಿಸುತ್ತಿದ್ದರೂ ಸತ್ತಂತೆ ಇರುವವ, ಅರೆ ಸತ್ತವ
**ಬಿಟ್ಟಿ** (ಸಃವಿಷ್ಟಿ) ಸಂಬಳವಿಲ್ಲದ ಅಥವಾ ಬಲತ್ಕಾರದ ಊಳಿಗ
**ಬಿಡು** ಬಿಡಾರಮಾಡು
**ಬಿದಿರು** (೧) (ನಾ) ವೇಣು (೨) (ಕ್ರಿ) ನಿನಮ್ರನಾಗು ೩ ಚೆದುರು, ಚಲ್ಲಾವಿಲ್ಲಿಯಾಗು
**ಬಿದ್ದು** ಊಟ, ಆಹಾರ
**ಬಿನ್ನಾಣ** (ಸಂಃ ವಿಜ್ಞಾನ) ತಿಳಿವಳಿಕೆ, ವಿಶಿಷ್ಟಜ್ಞಾನ; ನೈಪುಣ್ಯ ಹೊರಗಣ ನಯ
**ಬಿನ್ನಾಣಿ** (ಸಂ ವಿಜ್ಞಾನಿ) ತಿಳಿದವ, ಚತುರ, ಜಾಣ ಟಕ್ಕ
**ಬಿಂದು** ಶುಕ್ರ, ವೀರ್ಯ

**ಬಿಮ್ಮು** ಬಿಗಿಯಾಗುವಿಕೆ, ಸೊಕ್ಕು, ಗರ್ವ.
**ಬಿರಿ** ಬಿಚ್ಚು, ಅರಳು
**ಬಿಲಿ** ಕ್ರಯ ಮಾಡಿಕೊಳ್ಳು
**ಬೀಗು** ಪುಷ್ಟವಾಗು, ಕೊಬ್ಬು
**ಬೀಯ** ಅನ್ನ, ಆಹಾರ
**ಬೀಯ** (ಸಂ: ವ್ಯಯ) ವೆಚ್ಚ, ಲೀನ
**ಬೀಸರ** ನಾಶ, ಹಾಳು
**ಬೀಳುಡಿಗೆ** ನಿರುಪಯೋಗವೆಂದು ತೆಗೆದೊಗೆದ ಉಡಿಗೆ
**ಬೀಳುವೆಣ** ಹೆಣದಂತೆ ಬಿದ್ದಿರುವವ
**ಬೆಜ್ಜು** ಬೆವರು
**ಬೆಡಗು** ವಿಲಾಸ, ಮನೋಹರತೆ
**ಬೆದಕು** ಹುಡುಕಾಡು, ಶೋಧಿಸು
**ಬೆದಱಟ್ಟು** ಬೆದರಿಸಿ ಬೆನ್ನು ಹತ್ತು
**ಬೆನಕ** (೧) ದುಂಡನೆಯ ಬೆಣಚು ಗಲ್ಲು, (೨) ವಿನಾಯಕ, ಗಣೇಶ
**ಬೆಂತರ** (ಸಂ: ವ್ಯಂತರ) ಒಂದು ಬಗೆಯ ಪಿಶಾಚಿ, ಭೂತ
**ಬೆಂದ** ಸುಟ್ಟ, ಕೆಟ್ಟ, ಹಾಳಾದ
**ಬೆರಣೆ** ಸಗಣಿಯ ಕುರುಳು
**ಬೆರೆ** ಸೆಟೆ, ಅಹಂಕಾರದಿಂದ ವರ್ತಿಸು
**ಬೆರಸು** (ರತಿಯಲ್ಲಿ) ಕೂಡು, ನೆರೆ
**ಬೆಸನ** (ಸಂ: ವ್ಯಸನ) ಉತ್ಕಟ ಆಶೆ
**ಬೆಸನ** (ಸಂ: ವಿಧಾನ?) ಅಪ್ಪಣೆ, ಆಜ್ಞೆ.
**ಬೆಂಬೀಳು** ಬೆಂದು ಬೀಳು
**ಬೆಳುಗಾರ** "ಬಳೆಗಾರ", ಟಂಕಣ.
**ಬೆಳ್ಳಾರ** (ಬೆಳ್ಳಾವರ) ಮೃಗಗಳನ್ನು ಹಿಡಿಯುವ ಬಲೆ
**ಬೆಳ್ಪ** ಮೋಸ, ಕೃತ್ರಿಮ (ಆಕಳಕರ?)
**ಬೆ(ಳ್ಪು)ಳುಕ** ಬೆಳ್ಳಗಿರುವುದು
**ಬೇಗೆ** ಕಾಳ್ಗಿಚ್ಚು
**ಬೇಟ** ಬೇಡಿಕೆ, ಬಯಕೆ, ಪ್ರೇಮ ವಿಲಾಸ, ಶೃಂಗಾರ ಚೇಷ್ಟೆ
**ಬೇ[ಳ್]ಳು** ಯಜ್ಞದಲ್ಲಿ ಆಹುತಿ ಕೊಡು.
**ಬೊಜಗ** (ಸಂ: ಭುಜಂಗ) ವಿಟ ಪುರುಷ
**ಬೊಂತೆ** ಕವುದಿ
**ಬೊಪ್ಪ** ತಂದೆ
**ಬೊಬ್ಬುಳಿಕೆ** ನೀರಗುಳ್ಳೆ
**ಬೊಲ್ಲ** ಭಲರೇ (ಕೊಂಡಾಟದನುಡಿ)
**ಬೊಳ್ಳೆತನ** ಮೋಸ
**ಬೊಳ್ಳೆಗ** ಮೋಸಗಾರ
**ಬೋ** (ಸಂ: ಭೋ) ಎಲವೋ.
**ಬೋನ** ಅನ್ನ, ಆಹಾರ
**ಬೋಯಿತಿ** ಮೀನಗಾರಿತಿ
**ಬೊ** (೧) **ಹರಿಗೆ** ಕಸಬರಿಗೆ, ಪೊರಿತೆ
**ಬೋಳ** ಬೋಳುದಲೆಯವ
ಬ್ರಹ್ಮವಿತ್ತು ಬ್ರಹ್ಮವನ್ನು ತಿಳಿದವ

**ಬ್ರಹ್ಮೇತಿ** ಬ್ರಹ್ಮಹತ್ಯೆ
**ಬ್ರತ** ವ್ರತ, ನೇಮ, ಆಚಾರ
**ಭಂಗ** ಅಪಜಯ, ಅಪಮಾನ
**ಭಂಡಿ** ನಾಚಿಕೆಯಿಲ್ಲದವ
**ಭಂಡಾರಿ** ಬೊಕ್ಕಸವನ್ನು ರಕ್ಷಿಸುವವ.
**ಭರ** ಸಂಭ್ರಮ, ತವಕ, ಪ್ರಾಬಲ್ಯ, ಒತ್ತಡ, ಪರವಶತೆ,
**ಭವ** ಜನ್ಮ ಜನ್ಮಾಂತರವನ್ನು ಹೊಂದುವದು, ಸತ್ತು ಸತ್ತು ಹುಟ್ಟುವದು.
**ಭವಭಾರಿ** ಜನ್ಮ ಜನ್ಮಗಳಲ್ಲಿ ಸುತ್ತುವವ
**ಭವರಟ್ಟಾಳ** ಭವಚಕ್ರ ಭವದಲ್ಲಿ ಮತ್ತೆ ಮತ್ತೆ ಸತ್ತು ಹುಟ್ಟುವದು
**ಭಾಜನ** ಅಡಿಗೆ ಮಾಡುವ ಪಾತ್ರೆ, ಪಾತ್ರ, ಯೋಗ್ಯ
**ಭಾಂಡ** ಸರಕು, ಪಾತ್ರೆ
**ಭಾರಿ** ಒತ್ತಡ, ಪ್ರಾಬಲ್ಯ
**ಭಾವ** (೧) ನಿಜದ, ನಿಜಸ್ಥಿತಿ, ಅಕ್ಕನ ಗಂಡ
**ಭಾಷಾಪತ್ರ** ಕೊಟ್ಟ ಮಾತನ್ನು ನಡೆಸುವೆನೆಂದು ಬರೆದು ಕೊಟ್ಟ ಪತ್ರ
**ಭಿನ್ನ** ಕೊರತೆ, ಕುಂದು
**ಭುಕ್ತಿ** ಭೋಗ
**ಭೂತಿಗ** ಭೂತಹಿಡಿದವ
**ಭೃತ್ಯಾಚಾರ** ಸೇವಾಭಾವ (ವೀರಶೈವರ ಪಂಚ ಆಚಾರಗಳಲ್ಲಿ ಒಂದು)
**ಮಚ್ಚರ** (ಸಃ ಮತ್ಸರ) ಹೊಟ್ಟೆಕಿಚ್ಚು
**ಮಚ್ಚು** ಮೆಚ್ಚು, ಒಪ್ಪು
**ಮಂಜರ** (ಸಂಃ ಮಾರ್ಜಾರ) ಬೆಕ್ಕು
**ಮಟ್ಟಿ** ಬ್ರಾಹ್ಮಣರು ನಾಮ ಹಚ್ಚಿಕೊಳ್ಳುವ ಒಂದು ಬಗೆಯ ಮಣ್ಣು
**ಮಡಗು** ಇರಿಸು, ಇಡು
**ಮಡಿಲು** ಉಡಿ
**ಮಡುಹು** ಕೊಲ್ಲು
**ಮಣಿ** ರುದ್ರಾಕ್ಷಿ, ಜಪಮಣಿ
**ಮಣಿಹ** ಮಾಡಬೇಕಾದ ಕಾರ್ಯ
**ಮಂಡೆ** ತಲೆ
**ಮತ್ತರ** ಭೂಮಿಯನ್ನು ಅಳೆಯುವ ಒಂದು ಅಳತೆ
**ಮದವಳಿಗೆ** (೧) ಮದುವಣಗಿತ್ತಿ, (೨) ಮದವಳಿಯಲಿ
**ಮದ್ದು** ಔಷಧ
**ಮನ** (೧) ಮನಸ್ಸು (೨) (ಮಾನ) ಅಳತೆ
**ಮನೆವಾ (ಳ್ತಿ) ರ್ತೆ** ಕುಟುಂಬವನ್ನು ನಡೆಸಿಕೊಂಡು ಹೋಗುವ ರೀತಿ
**ಮಂದಿ** (೧) ಜನಸಮೂಹ (೨) ಸಮೂಹ ಸೇರುವ ಸ್ಥಳ
**ಮರುಳು** ಹುಚ್ಚ, ತಿಳಿಗೇಡಿ, ದೆವ್ವ, ಭೂತ

**ಮೆರೆ** ಆಶ್ರಯ:
**ಮಸಕು** ಲೇಪ, ಕಪ್ಪು ಬಣ್ಣ
**ಮಸಣಿ** ದುರ್ಗಾದೇವಿಯ ಒಂದು ರೂಪ
**ಮಹಾನುಭಾವ** (೧) ಸದ್ಗುಣವುಳ್ಳವ (೨) ಶ್ರೇಷ್ಠ ಆತ್ಮಾನುಭಾವವುಳ್ಳವ
**ಮಾಗುಡ** (ಮಹಾಕೂಟ?) ದೊಡ್ಡ ತೀರ್ಥ
**ಮಾಟ** ಕರ್ಮ; ಸೇವೆ, ದಾನ
**ಮಾಡು** ದಾಸೋಹ, ಇಲ್ಲವೆ ದಾನ ಅಥವಾ ಕರ್ಮವನ್ನು ಮಾಡು
**ಮಾಣದೆ** ಬಿಡದೆ, ಒಂದೇಸವನೆ
**ಮಾಣಿ(ಂ)** ಬಿಡಿರಿ
**ಮಾತಂಗಿ** ಚಾಂಡಾಲಿತಿ
**ಮಾತು** (೧) ನುಡಿ, ವಚನ, ಹೇಳಿಕೆ (೨) ವೇದಾದಿ ಶ್ರುತಿಗಳು
**ಮಾತಿನ ಮಾತು** ವೇದ ವಚನ
**ಮಾನ** ಅಳತೆ, ಪ್ರಮಾಣ, ಸಿಟ್ಟು, ಮದ (ಇತ್ಯಾದಿ)
**ಮಾನಿಸ** ಮನುಷ್ಯ
**ಮಾನಿಸಗಳ್ಳೆ** ಪುರುಷರನ್ನು ವಂಚಿಸುವವಳು
**ಮಾರಂಕ** ಪ್ರತಿಭಟ, ವೈರಿ, ಇದಿರಾಳು
**ಮಾರು** ಇದಿರು, ಪ್ರತಿಯಾಗಿ
**ಮಾರುಗೋಲು** ವೈರಿಯ ಬಾಣಕ್ಕೆ ಪ್ರತಿಯಾಗಿ ಬಿಡುವ ಬಾಣ
**ಮಾಳ** (ಮಹಳ) ಶ್ರಾದ್ಧ
**ಮಿಂಟೆ** (ಮಿಟ್ಟೆ) ರಾಶಿ, ಗುಡ್ಡೆ, ಮರಡಿ
**ಮಿಡಿ** ಹಿಮ್ಮಡ
**ಮಿಡುಕು** ಅಲುಗಿಸು, ಬಿಚ್ಚು
**ಮಿಡುಕುರು** ಬೆಂಕಿಯ ಕಿಡಿ
**ಮಿತ್ಯ** (ಮಿಥ್ಯೆ) ಸುಳ್ಳು
**ಮಿಹಿಲಾಳು** ಕರಿಯ, ಕ್ಷುಲ್ಲಕ
**ಮೀ[ಯು]** ಸ್ನಾನಮಾಡು
**ಮೀಂಬುಲಿಗ** ಮೀನಗಳನ್ನು ತಿನ್ನುವ ಹಕ್ಕಿ
**ಮೀಸಲು** ವಿಶಿಷ್ಟ ಉದ್ದೇಶಕ್ಕಾಗಿ ಕಾಯ್ದಿರಿಸಿದ, ಶುದ್ಧತೆಯನ್ನು ಕೆಡಿಸದೇ ಇದ್ದ
**ಮುಕುಳಿತ** (ಕಟ್ಟು ಇಲ್ಲವೆ ಕೈಗಳನ್ನು) ಅರೆ ಮುಚ್ಚಿದ,
**ಮುಕ್ಕು** ಊನವಾದುದು, ಒಡೆದುದು
**ಮುಟ್ಟಲಿಕೆ** ಮುಟ್ಟಲಾಗಿ
**ಮುಟ್ಟು** (ರತಿ ಕ್ರಿಯೆಯಲ್ಲಿ) ಕೂಡು
**ಮುಡುಹು** ಹೆಗಲು
**ಮುಡುಹಿಕ್ಕು** (ಮುಡಿಗಿಕ್ಕು) ಮೂದಲಿಸು, ಕೆಣಕು
**ಮುಂಡಿಗೆ** ವಿಚಾರ ಮಾಡತಕ್ಕ ವಿಷಯ, ಸಮಸ್ಯೆ, ಒಗಟು

**ಮುಂದುಗೆಡು** ಮುಂದೇನು ಮಾಡಬೇಕೆಂದು ತಿಳಿಯದೆ ಮೂಢನಾಗು.
**ಮುಂಬಲ್ಲು** ಮುಂದಿನ ಹಲ್ಲು
**ಮು(ಯ್)ಯಿ** (೧) ಆನಂದದ ಸಮಾರಂಭದಲ್ಲಿ ಕೊಡುವ ಪಾರಿತೋಷಕ (೨) ಕಡ
**ಮುಯ್ಯಾನು** ಭುಜಕ್ಕೆಭುಜಹಚ್ಚು, ಸರಿಗಟ್ಟು, ಸಲುಗೆ ತೋರಿಸು
**ಮುರುಟು** ಮುದುಡು, ಬಾಡು
**ಮುಳಿಸು** ಸಿಟ್ಟು, ಮುನಿಸು
**ಮೂಕೊರೆಯ** ಮೂಗಿಲ್ಲದವ, ಮೂಗು ಕೊಯಿಸಿಕೊಂಡವ.
**ಮೂಕೊರತಿ** ಮೂಗಿಲ್ಲದವಳು
**ಮೂಗ** (ಸಂ:)ಮೂಕ
**ಮೂಗುವಡು** ಮೂಕನಾಗು, ಮಾತನಾಡದಂತಾಗು.
**ಮೂದಲಿಸು** ಕೆಣಕು, ಹೀಯಾಳಿಸು, ಸ್ಪರ್ಧಿಸು, ಜಗಳಕ್ಕೆ ಕರೆ
**ಮೂದಲೆ** ಸ್ಪರ್ಧೆಯ ಮಾತು
**ಮೂಲಿಗ** (ಮನೆತನದ) ಮೂಲಪುರುಷ
**ಮೆರೆ** ಮೆರೆಸು, ಬಣ್ಣಿಸು
**ಮೆಲು** ತಿನ್ನು
**ಮೇದಿನಿ** ಪೃಥ್ವಿ, ಜಗತ್ತು
**ಮೇರೆ** ಸೀಮೆ, ಎಲ್ಲೆ
**ಮೇಳ** ಸಂದಣಿ, ಸಮೂಹ.
**ಮೇಳಾಪ** ಸಂದಣಿ, ನೆರವಿ, ಸಭೆ.
**ಮೈದೆಗೆ** ಒಳಮೈಕಾಣು;ಬರಿದಾಗು
**ಮೈಲಾರ** ಒಳಗೆ, ಸಣಬು, ಮೇಲೆ ಬಣ್ಣವಿದ್ದ, ಮೈಲಾರ ದೇವರ ಮೂರ್ತಿ.
**ಮೊನೆ** ತುದಿ, ಕೊನೆ, ಯುದ್ಧ
**ಮೊರೆ** ಆಶ್ರಯ, ಆಧಾರ, ಮರೆ
**ಮೊರೆಯಿಡು** ಹೆರವರಲ್ಲಿ ದುಃಖವನ್ನು ತೋಡಿಕೊಳ್ಳು.
**ಮೋಟ** ಕೈಕಾಲಿಲ್ಲದವ
**ಮೋಹಿಸು** ಬಡಿದಾಡು, ತಾಕಲಾಡು
**ಮೌಳಿ** ತಲೆ, ಕಿರೀಟ, ತಲೆಯ ಶೃಂಗಾರ
**ಯುಕ್ತಿ** ಕ್ರಮ, ಒಳ್ಳೆಯ ಮಾರ್ಗ, ಯೋಗ್ಯತೆ
**ಯೋನಿ** ಜನ್ಮಸ್ಥಾನ
**ರಚ್ಚೆ** ಪ್ರಕಟಿತವಾದುದು, ಗುಟ್ಟು
**ರಜ** ಧೂಳು, ಹುಡಿ
**ರಂಜಕ** ಮನರಂಜನೆ ಮಾಡುವವ
**ರಂಜನೆ** ಅಲಂಕಾರ
**ರಸ** (೧) ಅಮೃತ, (೨) ಸಸ್ಯಾದಿಗಳಲ್ಲಿರುವ ಇರ್ಪು.೧; (೩) ಭಂಗಾರ
**ರಾಗರಂಜನೆ** ಪ್ರೀತಿಯ ವ್ಯಾಮೋಹ ಅಥವಾ ಬಂಧನ.
**ರಾಟಳ** ರಾಟೆ

**ರಾವಣಶಾಖ** ಅಡಸೋಗೆ ಎಲೆ
**ರಾವುತ** ಕುದುರೆಯ ಸೈನಿಕ
**ರುಚಿ** (೧) ಕಿರಣ (೨) ಲವಣಾದಿ ಷಡ್ ರುಚಿಗಳು
**ರೂಹು** (ಸಂ: ರೂಪ) ಆಕಾರ, ಮೂರ್ತಿ
**ಲಗ್ನ** ಒಳ್ಳೆಯ ಕಾಲ; ಶುಭ ಮುಹೂರ್ತ
**ಲಂಪಟತನ** ವ್ಯಾಮೋಹ ಗುಣ.
**ಲಾಂಛನ** ಚಿಹ್ನ (ಇಲ್ಲಿ ಜಂಗಮ) ಲಕ್ಷಣ
**ಲಿಂಗವೇದಿ** ಲಿಂಗದ ಮರ್ಮವನ್ನು ತಿಳಿದವ
**ಲಿಂಗಸಾರಾಯ** ಲಿಂಗದ ಸಾರ ವನ್ನು ತಿಳಿದುಕೊಂಡವ.
**ಲೀಯ** ಸೇರಿದ, ಬೆರೆತ; ಕೂಡಿ ಹೋದ.
**ಲೆಂಕ** ದಾಸ, ಸೇವಕ.
**ಲೆಂಗಿ** ದಾಸ, ದಾಸಿ, (ಹೋ:ಲೆಂಕ)
**ಲೇಸು** ಒಳ್ಳೆಯದು, ಹೆಚ್ಚಿನದು, ಶ್ರೇಷ್ಠವಾದುದು
**ಲೋಗರು** ಲೋಕದ ಜನರು, ಸಾಮಾನ್ಯ ಜನರು.
**ಲೌಕಿಕ** ಧಾರ್ಮಿಕಭಾವನೆಇಲ್ಲದವ, ಸಾಮಾನ್ಯ, ಕ್ಷುಲ್ಲಕ
**ವಚನಪಾತಕ** ಮಾತಿನ ದೋಷ, ಮಾತಿನಲ್ಲಿ ಕಾಣುವ ಪಾತಕ.
**ವಜ್ರ** ಇಂದ್ರನ ಆಯುಧ.
**ವರ** (೧) ಅನುಗ್ರಹ, ಅಭೀಷ್ಟ ವನ್ನು ಕೊಡುವ ಶಕ್ತಿ [೨)ಶ್ರೇಷ್ಠ
**ವರ್ತಮಾನ** ಈಗಿನ ಕಾಲ, ನಡೆ ಯುವ ಕಾಲ.
**ವರ್ತಿಸು** ತೊಡಗಿಸು, ಅಂಟಿಕೊಳ್ಳು
**ವರ್ಮ** (ಸಂ:ಮರ್ಮ) ಗುಟ್ಟು
**ವಶ್ಯ** ಜನರನ್ನು ವಶ ಮಾಡಿಕೊ ಳ್ಳುವ ವಿದ್ಯೆ
**ವಾಮ** ಕೇಡು, ಹಾನಿ
**ವಾಯ** (ಸಂ:ಮಾಯ) ಮಾಯೆ, ಮೋಸ, ಸುಳ್ಳು.
**ವಾರಿಕಲ್ಲು** ಆಣೆಕಲ್ಲು, ಮಂಜುಗಡ್ಡೆ
**ವಾರುಧಿ** (ಸ:ವಾರ್ಧಿ) ಸಮುದ್ರ
**ವಾಸಿಸು** ವಾಸನೆಯನ್ನು ಅರ್ಪಿಸು.
**ವಿಕಲ್ಪ** ಸಂದೇಹ, ತಪ್ಪು ತಿಳುವಳಿಕೆ
**ವಿಕಳ** ಕಳೆಗುಂದಿದ, ಜರ್ಜರಿತವಾದ
**ವಿಕಳತೆ** ವ್ಯಾಕುಳತೆ, ದುಃಖ
**ವಿಕಾರ** ಅಕ್ರಮ ಅಥವಾ ಅಯೋಗ್ಯ ಕೃತ್ಯ
**ವಿಕಾರಿ** ಹುಚ್ಚ, ಮೋಹ ಹಿಡಿದವ,
**ವಿಗುರ್ಬಣೆ** ಬೆದರಿಕೆ
**ವಿಧಾನಿಸು** ಶಾಸ್ತ್ರೋಕ್ತವಾಗಿ ಕರ್ಮ ಮಾಡು.
**ವಿನಿಯೋಗ** ಬಳಕೆ, ಉಪಯೋಗ.
**ವಿಭವ** ವೈಭವ, ಸಂಪತ್ತು.

**ವಿಭೋಗ** ಸುಖಾನುಭವ.
**ವಿಯತ್** ಆಕಾಶ
**ವಿರಂಚಿ** ಬ್ರಹ್ಮ
**ವಿರಸ** ರಸವಿಲ್ಲದ್ದು, ಕೆಡಕು ಪರಿಣಾಮವನ್ನು ಉಂಟು ಮಾಡುವಂತಹದು
**ವಿರಹಿತ** ಇಲ್ಲದೆ
**ವಿಷಯ** ಇಂದ್ರಿಯಸುಖದ ವ್ಯಸನ, ಸಂಸಾರದ ಆಶೆ.
**ವಿಷ್ಟಿಸು** ಮಲ ವಿಸರ್ಜನೆ ಮಾಡು
**ವೃಥಾ (ಯ)**ವ್ಯರ್ಥವಾಗಿ, ನಿರರ್ಥಕವಾಗಿ.
**ವೆಗ್ಗಳ** ಅಧಿಕ, ಶ್ರೇಷ್ಠ.
**ವೇದ್ಯ** ಬಲ್ಲವ
**ವೇದ್ಯವಾಗು** ಗೊತ್ತಾಗು, ತಿಳಿದು ಬರು.
**ವೇಧೆ** (ಸಂ: ವೇಧ) ಹಿಂಸೆ, ನೋವು
**ವೇಸರ** ಹೇಸರಗತ್ತೆ
**ವೇಳೆ ವಾಳಿಯುವ** ಸಮಯ ಪಾಲನೆ ಮಾಡುವವ.
**ವೈತರಣಿ** ನರಕದಲ್ಲಿಯ ನದಿ
**ವೈಶಿಕ** ವೇಶ್ಯೆಯ ಬೆಡಗು, ಆಕರ್ಷಣೆ, ಸನ್ಮೋಹನ ಶಕ್ತಿ
**ವೈತೀಪಾತ** ಸೂರ್ಯಚಂದ್ರರ ದುಷ್ಟಯೋಗ
**ವ್ಯಾಧ** ಬೇಡರವ
**ವ್ಯಾಪ್ತಿ** ಉದ್ಯೋಗ
**ವ್ಯಾಳೇಶ** ಸರ್ಪಗಳ ಒಡೆಯ
**ವ್ಯೋಮ** ಆಕಾಶ
**ಶಕುನ** ಶುಭ ಅಶುಭಗಳನ್ನು ಸೂಚಿಸುವಂಥಹದು
**ಶಬ್ದಕ್ರಿ** (೧) ಮಾತಿನಲ್ಲಿಯೇ ಉಳಿಯುವ ಕ್ರಿಯೆ, (೨) ವೇದಗಳಲ್ಲಿ ಹೇಳಿದ ಕರ್ಮ.
**ಶಿಖಿ** ತಲೆ, ಜುಟ್ಟು, ಮುಕಟ.
**ಶಿವಕಳೆ** ವಿಭೂತಿ
**ಶಿವದಾನ** ಮಜ್ಜಿಗೆ (ಶಿವನ ಹೆಸರಿನಲ್ಲಿ ನೀಡುವ ದಾನ)
**ಶಿವರಸ** ಮಜ್ಜಿಗೆ
**ಶಿವಧೋ** ಶಿವನ ಹೆಸರಿನಲ್ಲಿ ಮೊರೆಯಿಡುವದು, 'ಶಿವದಿಡುವುದು.'
**ಶು (ಕ್ಲ) ಕ್ರ** ವೀರ್ಯ, ರೇತಸ್ಸು.
**ಶೋಣಿತ** ರಕ್ತ
**ಶ್ರವ** (ಸಂ: ಶ್ರಮ) (ಗರುಡಿಯ) ಸಾಧನ.
**ಶ್ರೋತ್ರಸುಖ** ಬರಿಯ ಕಿವಿಯಿಂದ ಕೇಳಿ ಉಂಟಾಗುವ ಆನಂದ
**ಶ್ವಪಚ** ಚಾಂಡಾಲ
**ಷಡುದರುಶನ** ಹಿಂದುಗಳ ತತ್ವಜ್ಞಾನದ ಆರು ಶಾಖೆಗಳು.
**ಷಡುಸಮ್ಮಾರ್ಜನೆ** (ಉತ್ಸವಾದಿಗಳಲ್ಲಿ ಕೈಕೊಳ್ಳುವ) ಆರು ಬಗೆಯ ಸಾರಣೆ

**ಷೋಡಶೋಪಚಾರ** ಅತಿಥಿ ಅಭ್ಯಾಗತರನ್ನು ಆಸನ, ಪಾದ್ಯ, ಸ್ವಾಗತ ಇತ್ಯಾದಿ ವಿಧವಾಗಿ ಉಪಚಾರ ಮಾಡುವದು.

**ಸಕಲ** ಭಾಗಗಳನ್ನು ಒಳಕೊಂಡುದು, ಪೂರ್ಣವಾದುದು, ಇಡೀಯದು

**ಸಕೃತು** ಸದ್ಯಕ್ಕೆ, ಕೂಡಲೆ

**ಸಗಣ** ಸಗಣಿ, ಗೋಮಯ

**ಸಂಚ** ಸಂದು, ಹಿಡಿತ

**ಸಂಚು** ಕಪಟ, ಮೋಸ

**ಸಂಕಲ್ಪ** ಮನಸ್ಸಿನಲ್ಲಿಯ ಉದ್ದೇಶ, ಆಸೆ

**ಸಜ್ಜನ** ಒಳ್ಳೆಯತನ

**ಸಜ್ಜನೆ** ಪತಿವ್ರತೆ

**ಸಜ್ಜನಿಕೆ** ಒಳ್ಳೆಯತನ

**ಸಂಚಿತಕರ್ಮ** ಹಿಂದಣ ಜನ್ಮದಲ್ಲಿ ಕೂಡಿದ ಕರ್ಮಫಲ

**ಸಟೆ** (ಸಂ: ಶಠ) ಸುಳ್ಳು

**ಸಟ್ಟುಗ** ಸವುಟು

**ಸಡಗರ** ಸಂಭ್ರಮ, ವೈಭವ

**ಸದಾಚಾರ** ಒಳ್ಳೆಯ ನಡತೆ (ವೀರಶೈವರ ಪಂಚ ಆಚಾರಗಳಲ್ಲಿ ಒಂದು)

**ಸದಾಶಿವ** ಯಾವಾಗಲು ಒಳ್ಳೆಯದನ್ನು ಮಾಡುವವನು (೨) ಶಿವ, ಪರಮಾತ್ಮ

**ಸಂತ** ಶಾಂತ

**ಸನ್ನಿ** (ಸಲ್ಲಿರಿ) ಸರಿಯಿರಿ

**ಸನ್ನಿಹಿತ** ಸಮೀಪದಲ್ಲಿ ಇರುವವನು, ಹೊಂದಿಕೊಂಡಿರುವವನು, ನೆಲಸಿರುವವನು

**ಸಮಗ್ರಾಹಕ** ಹಿರಿದು-ಕಿರಿದುಗಳನ್ನು ಸಮನೆಂದು ಭಾವಿಸುವವ.

**ಸಮಚಿತ್ತ** ವಿಕಾರವಿಲ್ಲದ ಮನಸ್ಸು

**ಸಮನಿಸು** ಸರಿಕಾಣು, ಸರಿಹೋಗು, ಒಪ್ಪು, ಅಳವಡು

**ಸಮಯ** ಧರ್ಮ, ಪಂಥ, ಮತ

**ಸಮಯಾಚಾರ** ಒಂದು ಧರ್ಮ ಅಥವಾ ಮತಕ್ಕೆ ತಕ್ಕ ಆಚಾರ

**ಸಮಯಾಚಾರಿ** ಒಂದು ಧರ್ಮದ ಆಚಾರ ಮುಂತಾದ ಕಟ್ಟಳೆಗಳನ್ನು ವಿಧಿಸುವ ಆಚಾರ ಪುರುಷ

**ಸಪ್ತಧಾತು** ರಕ್ತ, ಮಾಂಸ, ರೇತಸ್ಸು ಇತ್ಯಾದಿ ಏಳು ಬಗೆಯ ಧಾತುಗಳು; (ಇಲ್ಲಿ) ದೇಹವಿಕಾರ

**ಸಮವೇದಿಸು** ಸರಿಯಾಗಿ ತಿಳಿ.

**ಸಮೀರಣ** ವಾಯು, ಗಾಳಿ

**ಸಂಪಾದಿಸು** ಸರಿಹಚ್ಚು

**ಸಂಪುಟ** ಕರಡಿಗೆ, ಸಂದುಕ

**ಸಂಭೋಳಿ** ಎಚ್ಚರಿಕೆಯಿಂದಿರು, ಸಂಭಾಳಿಸು

**ಸಯ** (ಸಂ: ಸ್ವಯ) ತನ್ನದು

**ಸರವಿ** ಹಗ್ಗ; ರಜ್ಜು

**ಸರಸ** ವಿನೋದ ಚಲ್ಲಾಟ

**ಸರಿಸ** ಸಮಾನತೆ, ಸರಳತೆ, ಸರಿಯಾದ ಲೆಕ್ಕ

**ಸಲಿಸು** ನೀವೇದಿಸು, ಕೊಡು

**ಸಲು** (ನಾಣ್ಯದಂತೆ) ನಡೆ, ಪ್ರಚಾರವಾಗು

**ಸಲೆ** ಚನ್ನಾಗಿ, ಪೂರ್ಣವಾಗಿ

**ಸಲ್ಲು** ಯೋಗ್ಯವಾಗು, ಸಮ್ಮತವಾಗು

**ಸವಣ** (ಸಂ:ಶ್ರವಣ)ಬೌದ್ಧ ಅಥವಾ ಜೈನ ಭಿಕ್ಷುಕ, ಸನ್ಯಾಸಿ

**ಸವತಿ** (೧) ಸವತೀಕಾಯಿ. (೨) ಸಪತ್ನಿ

**ಸವಿಸು** ಉಣಿಸು

**ಸವೆ** ಆರೆಯಾಗು, ವೆಚ್ಚವಾಗು

**ಸವೆಸ** ವೆಚ್ಚಮಾಡು

**ಸಸಿ** (ಸಂ: ಶಶಿನ್) (೧) ಚಂದ್ರ (೨) (ಸಂ: ಸಸ್ಯ) ಕಾಯಿಪಲ್ಲೆಯಗಿಡು

**ಸಸಿನ** ಯೋಗ್ಯ, ಸರಿ

**ಸಾಮೀಪ್ಯ** ದೇವರ ಸಮೀಪದಲ್ಲಿರುವುದು

**ಸಾಯುಜ್ಯ** ದೇವರಲ್ಲಿ ಕೂಡಿಕೊಳ್ಳುವುದು.

**ಸಾರ** ಸಮೀಪಕ್ಕೆ ಹೋಗು.

**ಸಾ(ರ್)ರು** ಹೊಂದು, ಸೇರು

**ಸಾರಾಯ** ನಿಜತತ್ವ, ಸಾರ

**ಸಾರಿದ್ದ** ಹತ್ತಿರದಲ್ಲಿದ್ದ

**ಸಾಲಿಗ** ನೇಕಾರ

**ಸಾಹಿತ್ಯ** ಸಹಿತವಾಗಿರುವಿಕೆ, ಕೂಡಿಕೊಂಡಿರುವಿಕೆ

**ಸಿಕ್ಕು** (ಹಃ ಸಿಲ್ಕು) ಕೂದಲು ಗಂಟಾಗುವದು; ತೊಡಕು

**ಸಿಂಗಿ** (ಸಂ: ಶೃಂಗಿ) ಒಂದು ಬಗೆಯ ಘೋರ ವಿಷ

**ಸಿತಗ** ಕೆಡುಕ, ಮೋಸಗಾರ

**ಸಿದ್ದಿಗೆ** ಶವವನ್ನು ಒಯ್ಯುವ ಸಿದಿಗೆ

**ಸಿನೆ** (ಸಂ: ಶೂನ್ಯ) ಹಾಳಾದ, ಕೆಟ್ಟ

**ಸಿಂಬಕ** ತೊತ್ತು (?)

**ಸಿಂಬೆ** ಭಾರವನ್ನು ಹೊರುವಾಗ ತಲೆಯ ಮೇಲೆ ಇಟ್ಟುಕೊಳ್ಳುವ ಬಟ್ಟೆಯಸುರುಳಿ

**ಸಿರಿಗರ** ಶ್ರೀ ಮಂತಿಗೆ ಎಂಬ ಭೂತ

**ಸೀಮೆ** ಮೇರೆ, ಗಡಿ

**ಸೀ (ಯು)** ಸುಡು

**ಸೀರೆ** (ಸಂ: ಚೀರ) ಉಡುವ ಬಟ್ಟೆ

**ಸುಂಕ** ಸರಕುಗಳಮೇಲೆ ಸರಕಾರಕ್ಕೆ ಕೊಡುವ ತೆರಿಗೆ

**ಸುಚಿತ್ತ** ಸಂಪನ್ನವಾದ ಮನಸ್ಸಿನ ಸ್ಥಿತಿ
**ಸುಪಥ** ಒಳ್ಳೆಯ ಮಾರ್ಗ
**ಸುಮ್ಮಾನ** ಸುಮ್ಮನಿರುವಿಕೆ
**[ಸು] ಸಯಿ [ದಾ] ಧಾನ** ವ್ಯವಸ್ಥೆ, ಯೋಜನೆ, ಸಜ್ಜುಮಾಡುವಿಕೆ, ಎಚ್ಚರಿಕೆ,
**ಸುಯಿಧಾನಿ** ಎಚ್ಚರಿಕೆಯುಳ್ಳವ
**ಸುರಗಿ** ಕಣ್ಣಕತ್ತಿ
**ಸುರಿಗೆ** (ಸಂಃ ಛುರಿಕಾ) ಕಿರುಗತ್ತಿ, ಕಠಾರಿ
**ಸುರೆ** ಮದ್ಯ, ಹೆಂಡ, ಸೆರೆ
**ಸುಲಿ** ತೆಗೆದುಕೊಳ್ಳು; ಕಿತ್ತಿಕೊಳ್ಳು
**ಸುಷುಪ್ತಿ** ಪೂರ್ಣ ನಿದ್ರಾವಸ್ಥೆ
**ಸುಳಿ** (೧) ಸಮೀಪಕ್ಕೆ ಬರು, ಆವರಿಸು, (೨) ಸುತ್ತಾಡು
**ಸುಳಿದೆಗೆ** ಬೆಳೆ, ಎಲೆಗಳನ್ನು ಪಸರಿಸು
**ಸುಳುವು** ದುಂಡಗೆ ತಿರುಗುವ ತೆರೆ
**ಸೂಕರ** ಹಂದಿ
**ಸೂತಕ** ಜಾತಿ, ಜನನ, ಮರಣ, ರಜಸ್ಸು, ಉಚ್ಛಿಷ್ಟ ಎಂಬ ಪಂಚ ಸೂತಕಗಳು, ಹೊಲೆ, ಮುಟ್ಟು,
**ಸೂನೆಗಾರ** ಪ್ರಾಣಿಗಳನ್ನು ಕೊಲ್ಲುವವ, ಕಟಕ.
**ಸೂಲ** (ಸಂಃ ಶೂಲ) ಹದನವಾದ ಮೊನೆಯುಳ್ಳ ಕಬ್ಬಿಣದ ಸಲಾಕೆ.
**ಸೆರಗೊಡ್ಡು** ಭಿಕ್ಷೆಹಾಕೆಂದು ಸೆರಗ ಒಡ್ಡು
**ಸೆಳೆಮಂಚ** ತೂಗುಮಂಚ
**ಸೊಡರು** ದೀಪ
**ಸೊಣ (ಗ) ಕ** (ಸಂಃ ಶುನಕ) ನಾಯಿ
**ಸೊಬಗು** (ಸಂಃ ಸುಭಗ) ಅಂದ; ಅಲಂಕಾರ
**ಸೊಮ್ಮು** ಸ್ವಂತದಆಸ್ತಿ; ಸೊತ್ತು
**ಸೊಲ್ಲು** ಮಾತು
**ಸೊ(ೕ)ಂಕು** ತಾಗು, ಮುಟ್ಟು, ಹಿಡಿ
**ಸೋಜಿಗ** ಅಶ್ಚರ್ಯ, ಅರಿದು
**ಸೊ (ೕ)ರೆ** ಹಾಲುಗುಂಬಳ (ಕಾಯಿ)
**ಸೋಹ(ಂ)** ನಾನೇ (ಆತನು ಎಂದರೆ) ದೇವರು ಎಂಬ ಭಾವ
**ಸೋಹೆ** ಗುರುತು, ಚಿಹ್ನ, ಲಾಂಛನ.
**ಸ್ಥಾನನಿಧಿ** .......?
**ಸ್ಥಾವರ** ಒಂದೇ ಕಡೆ ಇರುವಂತಹದು, ಚಲಿಸದಿರುವದು
**ಸ್ವಯಂಭು** ತನ್ನಿಂದ ತಾನೇ ಹುಟ್ಟಿದ, ಜನಕ ಅಥವಾ ಕರ್ತೃಯಿಲ್ಲದ

**ಸ್ವಾಯತ** (೧) ಸ್ವಾಯತ್ತವಾದ, ತನ್ನಲ್ಲಿ ಅಳವಟ್ಟ (೨) ವೀರಶೈವರಲ್ಲಿ ಗುರುವು ಭಕ್ತನಿಗೆ ಪ್ರಾಣಲಿಂಗವನ್ನು ಅರುಹಿ ಕೊಡುವ ದೀಕ್ಷೆ

**ಹಗರಣ** (ಸಂಃ ಪ್ರಕರಣ) ನಾಟಕ, ನಟನೆ

**ಹಗರಣಿಗ** ನಾಟಕಕಾರ, ಪಾತ್ರಧರಿಸುವವ

**ಹಗಹ** ಹಗೆ

**ಹಂಗು** ಪರವೆ; ಕೃತಜ್ಞತೆ,ಆಶ್ರಯ; ಆಶೆ

**ಹಂಚುಹರಿ** ಒಡೆದ ಹಂಚಿನಂತೆ ಚೂರು ಚೂರು

**ಹಂಜರ** ಪಂಜರ

**ಹಡಿಕೆ** ದುರ್ವಾಸನೆ

**ಹಣಿದ** ಹೊಡೆದಾಟ

**ಹತ್ತೆ** ಸಮೀಪಕ್ಕೆ

**ಹದುಳವಿರು** ಸುಖದಿಂದಿರು

**ಹದುಳಿಗ** ತೃಪ್ತಿಯುಳ್ಳವ

**ಹಂದೆ** ಹೇಡಿ

**ಹನ್ನಿಬ್ಬರು** ಹನ್ನೆರಡು ಜನರು

**ಹಮ್ಮು** (ಸಂಃ ಅಹಂ) ಸೊಕ್ಕು, ಗರ್ವ,ಅಹಂಕಾರ

**ಹರಕೆ** ಶುಭವನ್ನು ಕೋರುವುದು, ದೇವರಲ್ಲಿ ಪ್ರಾರ್ಥನೆ

**ಹರಗಣ** ಶಿವನ ಗಣಗಳು, ಶಿವಶರಣರು

**ಹರದ** ವರ್ತಕ, ವ್ಯಾಪಾರಿ

**ಹರಬೀಜ** ಶಿವನ ಸಂತಾನ, ಶಿವನ ಭಕ್ತ

**ಹರಿ** ಎಳಸು, ಆಶಿಸು

**ಹರಿ** ಬಳಗ; ಪರವೆ

**ಹರುಷಿತಿಕೆ** (ಹರುಷಿತ+ಇಕೆ) ಆನಂದ

**ಹರೆ** ಹಲಗೆ, ನಗಾರಿ

**ಹಲಗೆ** ''ಢಾಲು''

**ಹವಣಿಸು** ತೂಗು; ಉಪಮಿಸು

**ಹವಿ** ಯಜ್ಞದ ಬೆಂಕಿಯಲ್ಲಿ ಹಾಕುವ ತುಪ್ಪ ಹಾಲು ಮೊದಲಾದ ಪದಾರ್ಥಗಳು

**ಹಳಚು** ಒಂದಕ್ಕೊಂದು ತಾಕಲಾಡು

**ಹಳೆಯ** ಹಿರಿಯ, ಪುರಾತನ

**ಹಾಗ** ಒಂದು ನಾಣ್ಯ

**ಹಾರು** ಎದುರು ನೋಡು,ಆಶಿಸು.

**ಹಾರುವ** (೧) (ಹಃ ಪಾರ್ವ) ಬ್ರಾಹ್ಮಣ (೨) ಹಾರೈಸುವವ

**ಹಾವ(ವಾ)ಡಿಗ** ಹಾವಾಡಿಸುವವ

**ಹಾಸು** ನೂಲು ತೋಡುವ ಕೆಚ್ಚುವ ಯಂತ್ರ

**ಹಿಂಗು** ಕಾಣದಾಗು, ಶಾಂತನಾಗು ಬಿಡು, ತ್ಯಾಗ ಮಾಡು, ಹಿಂದಿರುಗು, ತೊಲಗು
**ಹಿಡಿಕಂಡ** ಸಣ್ಣ ಸಣ್ಣ ತುಣುಕು
**ಹಿದಿರೆ** ಬಣವೆ (?)
**ಹಿರಣ್ಯ** ಭಂಗಾರ (ದನಾಣ್ಯ)
**ಹಿಳಿ** ಹಿಂಡು; ಹಿಂಡಿ ಹಿಪ್ಪೆಮಾಡು
**ಹುದುವಾಳು** ಕೂಡಿಕೊಂಡು ಬಾಳುವುದು
**ಹುಯ್ಯಲು** ಮೊರೆ, ದುಃಖದಧ್ವನಿ, ಆರ್ತನಾದ
**ಹುರಳು** ಸತ್ಯ, ತಿರುಳು
**ಹುಲು** ಹುಲ್ಲಿನಂತೆ ಕ್ಷುದ್ರ, ಅಲ್ಪ
**ಹುಲ್ಲೆ** ಚಿಗರಿ, ಜಿಂಕೆ
**ಹುಳ್ಳೆ** ಉರುವಲ ಕಟ್ಟಿಗೆ
**ಹೂಸು** ಲೇಪಿಸು, ತೊಡೆದುಕೊಳ್ಳು
**ಹೆಗ್ಗುರಿ** ದೊಡ್ಡಕುರಿ; ಅತಿಮೂರ್ಖ
**ಹೆಡಗುಡಿ** ಹೆಡಮುರಿಗೆ
**ಹೆಣಗಾಟ** ಬಡಿದಾಟ
**ಹೆದ್ದೊರೆ** ದೊಡ್ಡನದಿ
**ಹೆಂಪು** (ಪೆಂಪು) ವಿಲಾಸ, ವೈಭವ
**ಹೆರತೊಲಗು** ಹಿಂದಕ್ಕೆ ಸರಿ; ಓರೆಯಾಗು.
**ಹೆರಹಿಂಗು** ಹಿಂದಕ್ಕೆ ಸರಿ, ಕಡಿಮೆಯಾಗು, ಆರೆಯಾಗು
**ಹೆರು** ಹಡೆ, ಹೊಂದು
**ಹೇಗತನ** ಹುಚ್ಚು, ಮೂರ್ಖತನ
**ಹೇಯಿಸು** ತಿರಸ್ಕರಿಸತಕ್ಕ
**ಹೇರು** ಭಾರ
**ಹೇವ** ಲಜ್ಜೆ, ನಾಚಿಕೆ
**ಹೇ(ವ)ಮ** ಭಂಗಾರ
**ಹೇಳಿಗೆ** ಹಾವನ್ನು ಇಡುವ ಹಾವು-ಗಾರನ ಬುಟ್ಟಿ
**ಹೊಗಳತೆ** ಹೊಗಳಿಕೆ ಪ್ರಶಂಸೆ
**ಹೊಟ್ಟೆ** 'ಒಟ್ಟಿ', ಬಾವು
**ಹೊತ್ತಾರೆ** ನಸುಕಿನಲ್ಲಿ
**ಹೊದ್ದು** ಹೊಂದು, ಕೂಡು, ಸೇರು
**ಹೊನಲು** ಪ್ರವಾಹ (ನದಿಯು) ನೀರಿನ ಸೆಳೆತ
**ಹೊಂದಿಕೆ** ಕೂಟ
**ಹೊಂದು** ಸಾಯು
**ಹೊರೆ** ಹೊದಿಕೆ, ಪರೆ
**ಹೊರೆ** ಪೋಷಿಸು
**ಹೊರೆ** ಸಾನ್ನಿಧ್ಯ, ಸಾಮೀಪ್ಯ, ನೆರೆ
**ಹೊರವಡು** ಹೊರಗಿನಿಂದಲೆ ಪೋಗು, ಹೊರಗೆ ಹೋಗು
**ಹೊರಸು** ಪಾರಿವಾಳ, ಕಪೋತ (ಅಶುಭ ಶೂಚಿಕ ಪಕ್ಷಿ)
**ಹೊಲತಿ** ಹೊಲೆಯುಳ್ಳವಳು, ರಜ-ಸ್ವಲೆಯಾದವಳು
**ಹೊಲಬಿಗ** ಸರಿಯಾದುದನ್ನು ತಿಳಿದವ.

**ಹೊಲಬು** ಸರಿಯಾದ ಕ್ರಮ, ದಾರಿ
**ಹೊಲಬುಗೊಳ್** ಕ್ರಮವಿಡಿ, ದಾರಿಹಿಡಿ
**ಹೊಲೆ** ಸ್ತ್ರೀಯರ ಮುಟ್ಟು, ರಜಸ್ಸು
**ಹೊರಹಂಚೆ** ಹೊರಗಿನ ಬಣ್ಣದ ಮೆರುಗು
**ಹೊಸತು** ಹೊಸ ಅಥವಾ ಮೀಸಲು ಪದಾರ್ಥ (ಪೂಜೆಯ ಕಾಲಕ್ಕೆ ದೇವರ ಮುಂದೆ ಇಡುವ ಪದಾರ್ಥಗಳ
**ಹೊಲ್ಲ** ಕೆಟ್ಟದ್ದು, ಸರಿಯಲ್ಲದ್ದು
**ಹೊಳ್ಳು** ಪೊಳ್ಳು, ಬರಿದಾಗಿರುವ
**ಹೊಳ್ಳುಹಾಯಿ** ವ್ಯರ್ಥವಾಗಿ ಹೋಗ
**ಹೋರು** ಬಡಿದಾಡು

॥ ಸಮಾಪ್ತ ॥

